# ಗೋಗ್ರಹಣ: ಒಂದು ಅಧ್ಯಯನ

## ಕನ್ನಡ ಸಾಹಿತ್ಯ ಕೃತಿಗಳು ಮತ್ತು ಶಾಸನಗಳನ್ನಾಧರಿಸಿ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಗುರುಪ್ರಸಾದ್ ಟಿ. ಆರ್.



ಮಾರ್ಗದರ್ಶಕರು

ಡಾ. ಡಿ.ವಿ. ಪರಮಶಿವಮೂರ್ತಿ

ಪ್ರಾಧ್ಯಾಪಕರು

ತುಮಕೂರು ವಿಶ್ವವಿದ್ಯಾನಿಲಯ



ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೭

# ಗೋಗ್ರಹಣ: ಒಂದು ಅಧ್ಯಯನ

ಕನ್ನಡ ಸಾಹಿತ್ಯ ಕೃತಿಗಳು ಮತ್ತು ಶಾಸನಗಳನ್ನಾಧರಿಸಿ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

**ಗುರುಪ್ರಸಾದ್ ಟಿ. ಆರ್.**



ಮಾರ್ಗದರ್ಶಕರು

**ಡಾ. ಡಿ.ವಿ. ಪರಮಶಿವಮೂರ್ತಿ**

ಪ್ರಾಧ್ಯಾಪಕರು

ತುಮಕೂರು ವಿಶ್ವವಿದ್ಯಾನಿಲಯ



**ಶಾಸನಶಾಸ್ತ್ರ ವಿಭಾಗ**

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೭

## ಮಾರ್ಗದರ್ಶಕರ ದೃಢೀಕರಣ ಪತ್ರ

**ಗುರುಪ್ರಸಾದ್ ಟಿ.ಆರ್.** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಗೋಗ್ರಹಣ: ಒಂದು ಅಧ್ಯಯನ** ಕನ್ನಡ ಸಾಹಿತ್ಯ ಕೃತಿಗಳು ಮತ್ತು ಶಾಸನಗಳನ್ನಾಧರಿಸಿ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಶಾಸನಶಾಸ್ತ್ರ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ.ಡಿ.ವಿ.ಪರಮಶಿವಮೂರ್ತಿ**
ಪ್ರಾಧ್ಯಾಪಕರು
ತುಮಕೂರು ವಿಶ್ವವಿದ್ಯಾನಿಲಯ
**ತುಮಕೂರು**

**ಸ್ಥಳ:** ತುಮಕೂರು
**ದಿನಾಂಕ:** 20/08/2017

# ಸಂಶೋಧಕರ ಘೋಷಣಾ ಪತ್ರ

**ಗೋಗ್ರಹಣ: ಒಂದು ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ.
ಕನ್ನಡ ಸಾಹಿತ್ಯ ಕೃತಿಗಳು ಮತ್ತು ಶಾಸನಗಳನ್ನಾಧರಿಸಿ
ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, **ಶಾಸನಶಾಸ್ತ್ರ** ವಿಭಾಗದ, ಪ್ರಾಧ್ಯಾಪಕರಾದ **ಡಾ.ಡಿ.ವಿ.ಪರಮಶಿವಮೂರ್ತಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು


**ಗುರುಪ್ರಸಾದ್ ಟಿ.ಆರ್.**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ
**ಶಾಸನಶಾಸ್ತ್ರ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**


**ಸ್ಥಳ** : ವಿದ್ಯಾರಣ್ಯ
**ದಿನಾಂಕ** : 23/08/2017

# ಪರಿವಿಡಿ

ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಆಕರಗಳು ಮತ್ತು ಅಧ್ಯಯನದ ಸಮೀಕ್ಷೆ

ಕನ್ನಡ ನಾಡಿನ ವೀರ ಪರಂಪರೆಯನ್ನು ಆಧರಿಸಿರುವ ಶಾಸನಗಳ ಸಾಲಿನಲ್ಲಿ ವೀರಗಲ್ಲುಗಳು ಮಹತ್ವದವು. ಅವುಗಳ ಅನೇಕ ಪ್ರಕಾರಗಳಲ್ಲಿ ಒಂದಾಗಿರುವ ತುರುಗೊಳ್ ಶಾಸನಗಳು ಕನ್ನಡ ನಾಡಿನ ವೀರಪರಂಪರೆಯ ದ್ಯೋತಕವಾಗಿವೆ. ಈವರೆಗಿನ ಅಧ್ಯಯನಗಳಲ್ಲಿ ತುರುಗೊಳ್ ಯುದ್ಧ ವಿಧಾನ ಒಂದು ಆಕಸ್ಮಿಕ ಘಟನೆ ಎಂಬಂತೆ ಬಿಂಬಿತವಾಗಿದ್ದು, ಇವುಗಳನ್ನೇ ವಿಭಿನ್ನವಾಗಿ ನೋಡಿರುವ ಅಧ್ಯಯನ ಆಗಿಲ್ಲ. ಈ ಸಂಶೋಧನಾ ಮಹಾಪ್ರಬಂಧ ತುರುಗೊಳ್ ಶಾಸನಗಳ ಸಾಹಿತ್ಯಕ ಮತ್ತು ಶಿಲ್ಪಗಳನ್ನು ಪ್ರಧಾನವಾಗಿ ಗಮನಿಸಿದ ಅಧ್ಯಯನವಾಗಿದೆ.

## ಅಧ್ಯಯನದ ಉದ್ದೇಶ

ಶಿಕಾರಿಪುರ ತಾಲ್ಲೂಕಿನಲ್ಲಿ ಹುಟ್ಟಿ ಬೆಳೆದ ನನಗೆ ತಾಲ್ಲೂಕಿನ ನೂರಾರು ಶಾಸನಗಳು, ದೇವಾಲಯಗಳು ಹಾಗೂ ಬಹಳ ಪ್ರಸಿದ್ಧವಾದ ಬಳ್ಳಿಗಾವೆಯ ದೇವಾಲಯ ಆಕರ್ಷಣೀಯ ಕೇಂದ್ರವಾಗಿತ್ತು. ನಮ್ಮ ತಾಲ್ಲೂಕಿನ ಇತಿಹಾಸದ ಬಗ್ಗೆ ಅನೇಕ ಮಹನೀಯರು ತಮ್ಮ ಸಂಶೋಧನೆಯಲ್ಲಿ ನಮ್ಮ ತಾಲ್ಲೂಕಿನ ನೂರಾರು ಶಾಸನಗಳನ್ನ ಉಲ್ಲೇಖಿಸಿದ್ದಾರೆ. ಇವನ್ನು ಓದುವಾಗಲೆಲ್ಲ ನನಗೆ ನಮ್ಮ ತಾಲ್ಲೂಕಿನ ಬಗ್ಗೆ ಹೆಮ್ಮೆ ಅನಿಸುತ್ತಿತ್ತು. ನಾನು ರೈತರ ಕುಟುಂಬದಿಂದ ಬಂದವನಾದ್ದರಿಂದ ದನಕರುಗಳು ನನ್ನ ಜೊತೆಯಲ್ಲಿಯೇ ಬೆಳೆದವು. ಅಥವಾ ನಾನು ಅವುಗಳ ಜೊತೆ ಬೆಳೆದೆನು. ಶಾಸನಗಳಲ್ಲಿ ದನಗಳ ಚಿತ್ರಗಳನ್ನು ಕಂಡಾಗಲೆಲ್ಲ ನನಗೆ ಆಶ್ಚರ್ಯವಾಗುತ್ತಿತ್ತು. ಅದರ ಬಗ್ಗೆ ತಿಳಿಯುವ ಕುತೂಹಲದಿಂದ ಕಾಲೇಜು ಹಂತದಲ್ಲಿ ಅವುಗಳ ಬಗ್ಗೆ ಅಧ್ಯಯನಕ್ಕೆ ತೊಡಗಿದೆ. ಆ ಶಾಸನಗಳು ದನಗಳ ರಕ್ಷಣೆಗೆ ಪ್ರಾಣ ಬಿಟ್ಟವರ ವೀರಗಲ್ಲುಗಳೆಂದು ತಿಳಿದು, ಅವುಗಳ ಹೆಚ್ಚಿನ ಅಧ್ಯಯನಕ್ಕೆ ತೊಡಗಿದೆ. ಆ ಎಲ್ಲ ಹಿನ್ನೆಲೆಗಳು ನನ್ನ ಸಂಶೋಧನೆಯಲ್ಲಿ

ತುರುಗೊಳ್ ಶಾಸನಗಳ ವಿಷಯವಾದ ಗೋಗ್ರಹಣ ಕದನಗಳ ಬಗ್ಗೆ ಆಸಕ್ತಿ ತಾಳಲು ಕಾರಣವಾಗಿವೆ. ನಮ್ಮ ತಾಲ್ಲೂಕಿನಲ್ಲಿ ನನ್ನ ಬಾಲ್ಯದ ದಿನಗಳಲ್ಲಿ ಸಹಸ್ರಾರು ಗೋವುಗಳಿದ್ದದ್ದನ್ನು ನಾನು ಕಂಡಿದ್ದೇನೆ. ಆದರೆ ಇಂದು ಅವು ಕಾಣೆಯಾಗಿವೆ. ನಮ್ಮೂರಿನ ಅನೇಕ ಮನೆತನಗಳು ಕೃಷಿಯಿಂದ ವ್ಯಾಪಾರ ವೃತ್ತಿಯ ಕಡೆಗೆ ಮುಖಮಾಡಿದ್ದು ಹಾಗೂ ಆಧುನಿಕ ಕಾಲದ ಗೋಸಂಬಂಧಿ ಧಾರ್ಮಿಕ ತಲ್ಲಣಗಳನ್ನು ಸಮೀಪದಿಂದ ಕಂಡಿದ್ದೇನೆ. ಈ ಎಲ್ಲ ಅಂಶಗಳು ನನ್ನ ಆಸಕ್ತಿಯ ಸಂಶೋಧನೆಯ ಕಾರ್ಯದಲ್ಲಿ ತುರುಗೊಳ್ ಶಾಸನಗಳನ್ನು ಅಧ್ಯಯನ ಮಾಡಲು ಕಾರಣವಾಗಿವೆ.

ಕರ್ನಾಟಕದ ಇತಿಹಾಸವನ್ನು ರಚಿಸಲು ಮುಖ್ಯ ಆಕರಗಳೆಂದರೆ ಶಾಸನಗಳು. ಈ ಶಾಸನಗಳನ್ನು ಪ್ರಮುಖವಾಗಿ ದಾನ ಶಾಸನ, ವೀರಗಲ್ಲುಗಳು, ಮಾಸ್ತಿಗಲ್ಲುಗಳು, ನಿಸಿದಿಗಲ್ಲುಗಳು ಎಂದು ಸ್ಥೂಲವಾಗಿ ವಿಭಾಗಿಸಬಹುದು. ಆದರೆ ವೀರಗಲ್ಲುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅದರಲ್ಲಿ ಅನೇಕ ವಿಧಾನಗಳಿದ್ದು ಅವುಗಳಲ್ಲಿ ಯುದ್ಧ ವಿಧಾನಗಳನ್ನು, ವಿಭಿನ್ನ ಸಾಹಿತ್ಯಕ ಅಂಶಗಳನ್ನು, ವಿಭಿನ್ನ ವಿಷಯಗಳನ್ನು ಗುರುತಿಸಬಹುದು. ವೀರಗಲ್ಲುಗಳ ವಿಧಗಳಲ್ಲಿ ತುರುಗೊಳ್ ವೀರಗಲ್ಲುಗಳು ಮುಖ್ಯ ಪ್ರಬೇಧವಾಗಿವೆ. ಇವು ಯುದ್ಧದ ಚಿತ್ರಣವನ್ನೇ ಹೊಂದಿರುವುದನ್ನು ಗಮನಿಸಿ ವೀರಗಲ್ಲು ಎಂದು ಪರಿಗಣಿಸಿಬಿಡುತ್ತಾರೆ. ಆದರೆ ಸೂಕ್ಷ್ಮವಾಗಿ ಆ ಶಾಸನಶಿಲ್ಪವನ್ನು ಗಮನಿಸಿದಾಗ ಶಾಸನದ ಕೆಳಭಾಗದ ಯುದ್ಧದ ಚಿತ್ರಣವಿರುವ ಚೌಕದ ಯಾವುದಾದರೂ ಮೂಲೆಯಲ್ಲೋ, ಅಥವಾ ಅಂಚಿನಲ್ಲೋ, ಗುಂಪಾಗಿ ಅಥವಾ ಸಾಲಾಗಿ ನಿಂತಿರುವ ದನಗಳ ಹಿಂಡನ್ನು ಗಮನಿಸಿದರೆ ಮಾತ್ರ ಇದು ಗೋವುಗಳನ್ನು ಅಥವಾ ಗೋವುಗಳೊಂದಿಗೆ ಊರಿನ ಹೆಣ್ಣುಮಕ್ಕಳನ್ನೂ ಶತ್ರುಗಳಿಂದ ರಕ್ಷಣೆ ಮಾಡಲು ಹೋರಾಡಿ ಮಡಿದ ವೀರನ ವೀರತ್ವದ ಸಾಕ್ಷಿಯಾಗಿರುವ ವೀರಗಲ್ಲು ಎಂಬುದು ನಮಗೆ ಅರಿವಿಗೆ ಬರುತ್ತದೆ. ಮಲೆನಾಡಿನ ಸೆರಗಿನಿಂದ ಆರಂಭವಾಗಿ ಬಯಲು ಪ್ರದೇಶಗಳಲ್ಲಿ ಕ್ರಿ.ಶ.೬ನೇ ಶತಮಾನದಿಂದ ೧೨ನೇ ಶತಮಾನದ ಕೊನೆಯವರೆಗೆ ನಡೆದ ಅನೇಕ ತುರುಗೊಳ್ ಶಾಸನಗಳು ನಾಡಿನೆಲ್ಲೆಡೆ ದೊರೆಯುತ್ತವೆ.

ತುರುಗೊಳ್ ಶಾಸನಗಳನ್ನು ಕುರಿತಂತೆ ಕೆಲವರು ಲೇಖನಗಳನ್ನು ಮತ್ತು ಕೆಲವರು ತಮ್ಮ ಸಂಶೋಧನೆಯಲ್ಲಿ ಪ್ರಾಸಂಗಿಕವಾಗಿ ಅಧ್ಯಯನ ನಡೆಸಿದ್ದಾರೆ. ತುರುಗೊಳ್ ವೀರಗಲ್ಲುಗಳನ್ನೇ ಪ್ರಧಾನವಾಗಿಟ್ಟುಕೊಂಡು ಈವರೆಗೆ ಮುಖ್ಯ ಅಧ್ಯಯನ ನಡೆದಿಲ್ಲ. ತುರುಗೊಳ್ ಶಾಸನಗಳ ಅಧ್ಯಯನದಿಂದ ನಮ್ಮ ಪೂರ್ವಿಕರ ಪಶುಗಳ ಪ್ರೀತಿ, ಅವುಗಳ ಬಗೆಗಿದ್ದ ಕಾಳಜಿ, ಅದಕ್ಕಾಗಿ ಅವರು ಪ್ರಾಣತೆತ್ತ, ತ್ಯಾಗ, ಬಲಿದಾನಗಳನ್ನು ಅರಿಯಬಹುದಾಗಿದೆ. ಇಂತಹ ಅಧ್ಯಯನದ ಕೊರತೆಯನ್ನು ಮನಗಂಡು ನಾನು ಇದೇ ವಿಷಯವನ್ನು ಪ್ರಧಾನವಾಗಿ ತೆಗೆದುಕೊಂಡು ಅಧ್ಯಯನ ನಡೆಸಿದ್ದೇನೆ.

ಮಾನವ ಶಿಲಾಯುಗದ ಕಾಲದಲ್ಲಿ ಬೆತ್ತಲೆಯಾಗಿ ತಿರುಗುತ್ತಾ ಆನಂತರ ತನ್ನ ಆಹಾರಕ್ಕಾಗಿ ಪ್ರಾಣಿಗಳ ಬೇಟೆಯಾಡಿ ತಿನ್ನುತ್ತಿದ್ದ. ಅವುಗಳ ಚರ್ಮವನ್ನೇ ಉಡಲು ಕಲಿತ. ಲೋಹದ ಪರಿಚಯ ಮಾನವನ ಜೀವನದಲ್ಲಿ ಅನೇಕ ಕ್ರಾಂತಿಕಾರಕ ಬದಲಾವಣೆಗೆ ಕಾರಣವಾಯಿತು. ಕಾಲಾನಂತರ ಆಹಾರಕ್ಕಾಗಿ ಕಾಡಿನಿಂದ ಹಿಡಿದು ತಂದ ಅನೇಕ ಪ್ರಾಣಿಗಳನ್ನು ಪಳಗಿಸಿ ತನ್ನ ಸಂಗಾತಿಗಳನ್ನಾಗಿ ಮಾಡಿಕೊಂಡ. ಮಾನವ ಕೃಷಿ ಚಟುವಟಿಕೆಗಳನ್ನು ಕಂಡುಕೊಂಡು ಒಂದೆಡೆ ನೆಲೆ ನಿಂತು ಬೆಳೆ ಬೆಳೆಯತೊಡಗಿದಾಗಿನಿಂದ ಇಂದಿನವರೆಗೂ ಕೃಷಿಚಟುವಟಿಕೆಗಳ ಬೆನ್ನೆಲುಬು ಗೋವುಗಳೇ ಆಗಿವೆ. ಮಾನವನ ಜೀವನವನ್ನು ವಿಕಾಸದ ಹಾದಿಯಲ್ಲಿ ದನಗಳನ್ನು ಬದಿಗಿರಿಸಿ ಅಭ್ಯಾಸಿಸಲು ಸಾಧ್ಯವೇ ಇಲ್ಲ. ಸರ್ವ ರೀತಿಯಲ್ಲೂ ಉಪಯುಕ್ತವಾದ ದನಗಳು ಕಾಲಾನಂತರ ವಿನಿಮಯದ ಕಾರಣಕ್ಕೆ ಹಾಗೂ ತನ್ನ ಉತ್ಪಾದನೆಯ ಕಾರಣಕ್ಕಾಗಿ ಜೀವಧನದ ಪ್ರಾಮುಖ್ಯತೆ ಗಳಿಸಿದವು. ಈ ದನಗಳ ಸಂಖ್ಯೆಯೇ ಮಾನವನ ಸಿರಿತನವನ್ನು ಅಳೆಯುವ ಮಾನದಂಡಗಳಾದವು. ಇದರಿಂದಾಗಿ ಈ ದನಗಳನ್ನು ಅಪಹರಿಸಿ ತಮ್ಮ ದನಗಳ ಗುಂಪನ್ನು ಹೆಚ್ಚಿಸಿಕೊಳ್ಳಲು, ಶ್ರೀಮಂತರಾಗಲು ಪ್ರಯತ್ನಗಳು ನಡೆದಿವೆ. ಅರಸೊತ್ತಿಗೆಯ ಆರಂಭದ ಗಡಿಗಳನ್ನು ಗುರುತಿಸುವ ಹಂತಗಳಲ್ಲೂ ಅನೇಕ ಕದನಗಳು ನಡೆದು ಒಂದೊಂದು ನಿರ್ದಿಷ್ಟ ಭೂ ಪ್ರದೇಶ ಒಂದೊಂದು ಗುಂಪುಗಳು ಆಕ್ರಮಿಸಿಕೊಂಡು ವಾಸಮಾಡತೊಡಗಿದರು. ಒಂದು ಸ್ಪಷ್ಟವಾದ ಚಿತ್ರಣ, ಆಡಳಿತದ ವಿಭಿನ್ನ ಕಾನೂನುಗಳು ರೂಪಗೊಂಡು ಒಂದು ವ್ಯವಸ್ಥೆ ರೂಪಗೊಂಡಿತು. ಮುಂದೆ ಅರಸೊತ್ತಿಗೆಗಳ ಕಾಲದಲ್ಲಿ ಪ್ರಾಂತ್ಯ-ಪ್ರಾಂತ್ಯಗಳ, ರಾಜ್ಯ-ರಾಜ್ಯಗಳ, ಗ್ರಾಮ-ಗ್ರಾಮಗಳ ಅಸ್ತಿತ್ವದ ಕಾರಣಕ್ಕಾಗಿ, ಪ್ರಭುತ್ವಕ್ಕಾಗಿ, ಅನೇಕ ತುರುಗೊಳ್ ಕದನಗಳು ನಡೆಯಲು ಕಾರಣವಾಗಿವೆ. ಗೋವುಗಳನ್ನು, ಊರನ್ನು, ಸ್ತ್ರೀಯರನ್ನು, ರಕ್ಷಿಸಿಕೊಳ್ಳದವರು ಪುರುಷತ್ವ ಇಲ್ಲದವರು ಎಂಬ ಮಾತುಗಳನ್ನು ಸಮಾಜವು ಗೌರವಿಸಿದಂತೆ ಒಂದು ವೀರಮೌಲ್ಯ ಜನಮಾನಸದಲ್ಲಿ ಸ್ಥಾನ ಪಡೆಯಿತು. ಹೇಡಿ ಎಂಬ ಪದವನ್ನು ಒಬ್ಬ ವೀರ, ಸೈನಿಕ ಅಷ್ಟೇ ಅಲ್ಲ ಒಬ್ಬ ಸಾಮಾನ್ಯ ಪ್ರಜೆಯೂ ಕೇಳಲು ಬಯಸುವುದಿಲ್ಲ. ಆದ್ದರಿಂದಲೇ ಪ್ರಾಣ ಕೊಟ್ಟರೂ ತಮ್ಮೂರಿನ ತಿಲಕ ಪ್ರಾಯವಾದ, ಮರ್ಯಾದೆಯ, ಶ್ರೀಮಂತಿಕೆಯ ಮತ್ತು ದೈವತ್ವದ ಗುರುತಾಗಿರುವ ಗೋವುಗಳನ್ನು ಪ್ರಾಣದ ಹಂಗುತೊರೆದು ರಕ್ಷಿಸುವಲ್ಲಿ ಅನೇಕ ಸಹಸ್ರ ಸೈನಿಕರು, ನಾಗರಿಕರು, ಗೋವಳಿಗರು ಹುತಾತ್ಮರಾಗಿದ್ದಾರೆ.

ಅಲ್ಲದೆ ಈ ಗೋಗ್ರಹಣ ಕದನದಲ್ಲಿ ಹೋರಾಡಿ ಮಡಿದ ವೀರರಲ್ಲಿ ಹೆಚ್ಚಿನವರು ತರಬೇತಿ ಹೊಂದಿದವರಲ್ಲ. ಒಬ್ಬ ಗೋಪಾಲಕ, ಗೋವಳಿಗ, ಹುಯ್ಯಲನ್ನು ಕೇಳಿದ ಒಬ್ಬ ನಾಗರಿಕನೂ ಊರಿನ ಮರ್ಯಾದೆಗಾಗಿ, ಗೋವುಗಳ ಮತ್ತು ಸ್ತ್ರೀಯರ ರಕ್ಷಣೆಗಾಗಿ ತಮ್ಮ ಪ್ರಾಣವನ್ನು ಲೆಕ್ಕಿಸದೆ ಶಸ್ತ್ರಸಜ್ಜಿತ ಸೈನಿಕರ ವಿರುದ್ಧ ಹೋರಾಡಿ ಮಡಿದಿದ್ದಾರೆ. ಇಂಥಹ ಪ್ರತಿಯೊಬ್ಬ ವೀರನ ಕೆಚ್ಚು, ದೈರ್ಯವೇ ಅವನಿಗೊಂದು ಶಾಶ್ವತ ಶಿಲಾಶಾಸನ ಹಾಕಿಸುವ

ಮೂಲಕ ಅಂದಿನ ಸಮಾಜ ಆ ವೀರನನ್ನು ಗೌರವಿಸಿದೆ. ಅವರೆಲ್ಲರ ತ್ಯಾಗ ಬಲಿದಾನಗಳಿಗೆ ಸಾಕ್ಷಿಯಾಗಿರುವ ಈ ತುರುಗೊಳ್ ಶಾಸನಗಳ ರಚನೆ, ವೀರನ ಹೋರಾಟ, ಗ್ರಾಮ, ವ್ಯಕ್ತಿ ಮತ್ತು ಕದನ ವಿವರಗಳನ್ನು ವರ್ಗೀಕರಿಸಿ ನೋಡುವುದು ಈ ಸಂಶೋಧನೆಯಲ್ಲಿ ಸಾಧ್ಯವಾಗಿದೆ.

ಈ ಅಧ್ಯಯನದಲ್ಲಿ ಒಂದು ನಿರ್ದಿಷ್ಟ ಭೂ ಪ್ರದೇಶವನ್ನು ಆಯ್ಕೆ ಮಾಡಿಕೊಂಡು, ಆ ಭೌಗೋಳಿಕ ವ್ಯಾಪ್ತಿಯ ಶಾಸನಗಳನ್ನು ಕೂಲಂಕಶವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಈ ಸಂಶೋಧನೆ ಹೊಂದಿದೆ. ತುರುಗೊಳ್ ಸಾಹಿತ್ಯ ರಚನಾ ಕ್ರಮ ಭಿನ್ನವಾಗಿಲ್ಲದಿದ್ದರೂ ಶಾಸನ ಶಿಲ್ಪದ ದೃಷ್ಟಿಯಿಂದ ಅನೇಕ ವೈವಿಧ್ಯತೆಗಳನ್ನು ಕಾಣಬಹುದು. ಅಂದಿನ ಸಾಮಾಜಿಕ ಮೌಲ್ಯಗಳಾಗಿ ತಮ್ಮ ಪ್ರಾಣವನ್ನೇ ತೃಣವಾಗಿಸಿ ಮಡಿದ ವೀರರ ಸ್ಮಾರಕಗಳಲ್ಲೇ ಸೇರಿ ಹೋಗಿದ್ದ ತುರುಗೊಳ್ ಕದನಗಳ ವೀರರನ್ನು ಪರಿಚಯಿಸುವ, ಅವರ ತ್ಯಾಗ, ಬಲಿದಾನಗಳ ಹಿಂದಿನ ಕತೆಗಳನ್ನು ತೆರೆ ಸರಿಸಿ ನೋಡುವ ಅಗತ್ಯತೆ ಇಂದಿನ ಅನಿವಾರ್ಯತೆಯಾಗಿದೆ. ಆ ವೇಳೆಗೆ ಗೋವುಗಳು ಆಹಾರ ಸಂಸ್ಕೃತಿಯಿಂದ ಜೀವನ ಸಂಸ್ಕೃತಿಯಲ್ಲಿ ಬೆರೆತು ಮಾನವನ ಸಂಗಾತಿಗಳಾಗಿದ್ದವು. ಗೋವುಗಳಿಗೆ ಅವುಗಳ ಉಪಯುಕ್ತತೆಯ ಕಾರಣಕ್ಕೆ ಎಂದು ಧಾರ್ಮಿಕ ಮಹತ್ವವನ್ನು ಕೊಟ್ಟರೋ ಅಂದಿನಿಂದ ದನಗಳು ಧಾರ್ಮಿಕ ಸಂಕೇತವಾಗಿ ಗುರುತಿಸಿಕೊಂಡವು.

ಪ್ರಾಚೀನ ಭಾರತದಲ್ಲಿ ಗೋವುಗಳ ರಕ್ಷಣೆಗಾಗಿಯೇ ಅನೇಕ ಹೋರಾಟಗಳು ಮತ್ತು ಯುದ್ಧಗಳು ನಡೆದಿವೆ. ಈ ವಿಚಾರಗಳು ಆಧುನಿಕ ಕಾಲದ ಅನೇಕ ಜನರಿಗೆ ಅರಿವಿಲ್ಲದೆ ಗೋವುಗಳ ಬಗ್ಗೆ ಹಗುರವಾಗಿ ಮಾತನಾಡುತ್ತಿದ್ದಾರೆ. ಸ್ವಾತಂತ್ರಾನಂತರ ಭಾರತದಲ್ಲಿ ಜರುಗಿದ ಕೈಗಾರಿಕಾ ಕ್ರಾಂತಿ ಗೋವುಗಳ ಬಗೆಗಿದ್ದ ಪೂಜ್ಯ ಮತ್ತು ಭಾವನಾತ್ಮಕ ಸಂಬಂಧಗಳನ್ನು ನಾಶಮಾಡಲು ಕಾರಣವಾಯಿತು. ಇತ್ತೀಚೆಗೆ ಗೋವು ರಾಜಕೀಯ ಉದ್ದೇಶದಿಂದ ಧಾರ್ಮಿಕ ಸಂಘರ್ಷ ಮತ್ತು ಆಹಾರ ಸಂಸ್ಕೃತಿಯ ಕಾರಣಕ್ಕೂ ಸಂಘರ್ಷದ ಕಾರಣವಾಗಿ ಪರಿವರ್ತನೆಯಾಯಿತು. ಗೋಮಾಂಸ ರಫ್ತುವಿನಲ್ಲಿ ಭಾರತ ಹೆಚ್ಚು ಹೆಸರುಗಳಿಸುತ್ತಿರುವ ಈ ಹೊತ್ತಿನಲ್ಲಿ ಗೋವುಗಳ ರಕ್ಷಣೆಗೆ ಪ್ರಾಣ ನೀಡಿದವರ, ಇತಿಹಾಸದ ಸತ್ಯ ಘಟನೆಗಳ ಸಾಕ್ಷಿಯಾಗಿರುವ ಗೋಗ್ರಹಣ ಶಾಸನಗಳಲ್ಲಿ ಅಡಕವಾಗಿರುವ ಅಂದಿನ ಮೌಲ್ಯಗಳು ಮತ್ತು ಸಾಮಾಜಿಕ ಕಾಳಜಿಗಳನ್ನು ಇಂದಿನ ಪೀಳಿಗೆಗೆ ತಲುಪಿಸುವ ಜರೂರು ತುರ್ತಾಗಿ ಆಗಬೇಕಿದೆ. ಈ ಉದ್ದೇಶದಿಂದ ನನ್ನ ಸಂಶೋಧನೆ ಮುಂದುವರೆದಿದೆ.

## ಅಧ್ಯಯನದ ವ್ಯಾಪ್ತಿ

ಈ ಸಂಶೋಧನ ವಿಷಯದ ಪ್ರಮುಖ ಆಕರಗಳಾಗಿರುವ ತುರುಗೊಳ್ ಶಾಸನಗಳು ಕರ್ನಾಟಕದ ಅನೇಕ ಭಾಗಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ದೊರೆಯುತ್ತವೆ. ಆದರೆ ಈವರೆಗೆ

ಶಾಸನದ ಪಾಠಗಳು ಪ್ರಕಟವಾಗಿದೆಯೇ ವಿನಃ ಅದರ ಶಿಲ್ಪಗಳು ಪ್ರಕಟವಾಗಿಲ್ಲ. ಈ ಕಾರಣದಿಂದ ನನ್ನ ಸಂಶೋಧನೆ ಬಹುತೇಕವಾಗಿ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಕಾಲ ಮತ್ತು ಭೌಗೋಳಿಕ ವ್ಯಾಪ್ತಿಯನ್ನು ಗಮನದಲ್ಲಿರಿಸಿಕೊಂಡು ಒಂದು ಭೂ ಭಾಗದ ಸಮಗ್ರ ತುರುಗೊಳ್ ಶಾಸನಗಳ ಸಮಗ್ರ ಅಧ್ಯಯನ ಕೈಗೊಳ್ಳಬೇಕು ಎಂಬ ಉದ್ದೇಶದಿಂದ ಇಂದಿನ ಶಿವಮೊಗ್ಗ ಜಿಲ್ಲೆಯ ಶಾಸನಗಳನ್ನು ಆಧರಿಸಿ ಅಧ್ಯಯನ ನಡೆಸಲಾಗಿದೆ.

ನನ್ನ ಅಧ್ಯಯನದ ವ್ಯಾಪ್ತಿಗೆ ಶಿವಮೊಗ್ಗ, ಭದ್ರಾವತಿ, ಹೊಸನಗರ, ತೀರ್ಥಹಳ್ಳಿ, ಸಾಗರ, ಸೊರಬ, ಶಿಕಾರಿಪುರ ಎಂಬ ಏಳು ತಾಲ್ಲೂಕುಗಳನ್ನು ಒಳಪಡಿಸಲಾಗಿದೆ. ಅರಣ್ಯ ಪ್ರದೇಶ ಹಾಗೂ ಸರ್ವಕಾಲದಲ್ಲೂ ತುಂಬಿ ಹರಿಯುವ ಅಪಾಯಕಾರಿಯಾದ ನದಿಗಳ ಕಾರಣಕ್ಕಾಗಿ ಕೆಲವು ಪ್ರದೇಶಗಳು ಪಶುಪಾಲನೆಗೆ ಸೂಕ್ತವಾಗಲಿಲ್ಲ. ಆದ್ದರಿಂದಲೇ ತೀರ್ಥಹಳ್ಳಿ, ಹೊಸನಗರ ಭಾಗಗಳಲ್ಲಿ ಈ ತುರುಗಾಳಗ ಶಾಸನಗಳು ಹೆಚ್ಚು ಕಂಡುಬರುವುದಿಲ್ಲ. ಮೇವು ಹೆಚ್ಚಿರುವ ಭದ್ರಾವತಿ ಹಾಗೂ ಶಿವಮೊಗ್ಗ ತಾಲ್ಲೂಕಿನ ಕೆಲವು ಕಡೆ ಈ ತುರುಗೊಳ್ ಶಾಸನಗಳು ಸ್ವಲ್ಪ ದೊರೆಯುತ್ತವೆ. ಸಾಗರ ತಾಲ್ಲೂಕಿನಲ್ಲೂ ಉಲ್ಲೇಖಿಸಬಹುದಾದ ಪ್ರಮುಖ ಶಾಸನಗಳು ದೊರೆತಿವೆ. ಆದರೆ ಸೊರಬ ಹಾಗೂ ಶಿಕಾರಿಪುರ ತಾಲ್ಲೂಕಿನಲ್ಲಿ ಅತೀ ಹೆಚ್ಚು ಶಾಸನಗಳು ದೊರೆಯುತ್ತವೆ. ಇಲ್ಲಿನ ಹುಲ್ಲುಗಾವಲು, ನೀರಿನ ಮೂಲಗಳಾಗಿರುವ ಅಪಾಯವಲ್ಲದ ಅತೀ ಹೆಚ್ಚು ಕೆರೆಗಳು, ಹಾಗೂ ಇಲ್ಲಿನ ಕಾಡುಗಳು ಅತೀ ಹೆಚ್ಚು ಅಪಾಯಕಾರಿಯಲ್ಲದ್ದರಿಂದ ಪಶುಪಾಲನೆಗೆ ಸೂಕ್ತ ವಾತಾವರಣವು ಗೋಸಂಪತ್ತು ಅತೀ ಹೆಚ್ಚು ಇರುವುದಕ್ಕೆ ಕಾರಣವಾಗಿದೆ. ಹಾಗಾಗಿಯೇ ಗೋಗ್ರಹಣ ಕದನಗಳೂ ಅತೀ ಹೆಚ್ಚಿನ ಸಂಖ್ಯೆಯಲ್ಲಿ ನಡೆದಿವೆ. ಹಾಗೂ ರಾಷ್ಟ್ರಕೂಟರ, ಕಲ್ಯಾಣ ಚಾಲುಕ್ಯರ, ಹೊಯ್ಸಳರ ಆಡಳಿತ ವ್ಯಾಪ್ತಿಯನ್ನೂ ಈ ಕ್ಷೇತ್ರ ಹೊಂದಿದ್ದರಿಂದ ಶಾಸನಶಿಲ್ಪದ ದೃಷ್ಟಿಯಿಂದಲೂ ವೈವಿಧ್ಯಮಯವಾಗಿವೆ. ಈ ಕ್ಷೇತ್ರದ ಪ್ರಮುಖ ಗ್ರಾಮಗಳಾಗಿರುವ ಹಿರೇಜಂಬೂರು, ಮಳವಳ್ಳಿ, ಮಲ್ಲೇನಹಳ್ಳಿ, ಬಂದಳಿಕೆ, ಮುತ್ತಿಗೆ, ಬಳ್ಳಿಗಾವಿ, ಹಾಯ, ಹಿರೇಕಸವಿ, ಮಾವಲಿ, ಮುಂತಾದ ಕಡೆ ದೊರೆತಿರುವ ಅನೇಕ ಗೋಸಾಸ ಶಿಲ್ಪಗಳು ಇಲ್ಲಿ ಅಪಾರ ಪ್ರಮಾಣದ ಪಶು ಸಂಪತ್ತು ಇತ್ತು ಎಂಬುದಕ್ಕೆ ಸಾಕ್ಷಿಯನ್ನೊದಗಿಸಿವೆ. ಈ ಎಲ್ಲಾ ಅಂಶಗಳನ್ನು ಅನುಲಕ್ಷಿಸಿ ಶಿವಮೊಗ್ಗ ಜಿಲ್ಲೆಯ ತುರುಗೊಳ್ ಶಾಸನಗಳ ವಿವರವಾದ ಅಧ್ಯಯನ ನಡೆಸಿದ್ದು ಅದರ ಪ್ರಯತ್ನವೇ ಈ ಗೋಗ್ರಹಣ ಒಂದು ಅಧ್ಯಯನವೆಂಬ ಸಂಶೋಧನಾ ಪ್ರಬಂಧವಾಗಿದೆ.

## ಅಧ್ಯಯನದ ಆಕರಗಳು

ನಮ್ಮ ಅಧ್ಯಯನದಲ್ಲಿ ಬಹುಶಿಸ್ತೀಯ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಬಳಸಿಕೊಂಡಿರುವ ಆಕರಗಳನ್ನು ಈ ಕೆಳಗಿನಂತೆ ವಿಭಾಗಿಸಬಹುದಾಗಿದೆ.

೧. ಶಾಸನ ಸಂಪುಟಗಳು

ಬಿ.ಎಲ್. ರೈಸ್ ಅವರ "ಎಫಿಗ್ರಪಿಯಾ ಕರ್ನಾಟಕ" ಸಂಪುಟಗಳು ನನ್ನ ಸಂಶೋಧನೆಯಲ್ಲಿ ಶಾಸನಗಳ ಪಾಠದ ದೃಷ್ಟಿಯಿಂದ ಮುಖ್ಯವಾಗಿವೆ. ಶಿಕಾರಿಪುರ ಹಾಗೂ ಶಿವಮೊಗ್ಗ ಜಿಲ್ಲೆಯ ಶಾಸನಗಳಿಗೆ ಸಂಬಂಧಿಸಿದಂತೆ ಪರಿಷ್ಕೃತ ಆವೃತ್ತಿ ಸದ್ಯದಲ್ಲೇ ಬರಲಿದೆ. ಹಳೆಯ ಆವೃತ್ತಿಗಳಲ್ಲಿಯೂ ಹೆಚ್ಚಿನ ಶಾಸನಗಳು ಪ್ರಕಟವಾಗಿರುವುದರಿಂದ ಉಪಯುಕ್ತ ಆಕರವಾಗಿದೆ.

೨. ಪುರಾಣಗಳು/ಸಾಹಿತ್ಯ ಕೃತಿಗಳು

ಕನ್ನಡನಾಡಿನ ಮಹಾಕಾವ್ಯವಾದ ಮಹಾಭಾರತ ಕಥೆಯನ್ನು ಕನ್ನಡ ನಾಡಿನ ಅನೇಕ ಕವಿವರ್ಯರು ತಮ್ಮದೇ ಆದ ಶೈಲಿಯಲ್ಲಿ ಗಮನಿಸಿದ್ದಾರೆ. ಈ ಕಥೆಯಲ್ಲಿ ಗೋಗ್ರಹಣ ಪ್ರಸಂಗವನ್ನು ಹಾಗೂ ಯುದ್ಧದ ವರ್ಣನೆಗಳನ್ನು ಶಾಸನ ಸಾಹಿತ್ಯದ ಹಿನ್ನೆಲೆಯಲ್ಲಿ ಗಮನಿಸಲಾಗಿದೆ.

೩. ಜನಪದ ಸಾಹಿತ್ಯ

ಕನ್ನಡ ನಾಡು ಜನಪದ ಕಲೆಗಳ ತವರು. ವಿಭಿನ್ನ ಸಂಪ್ರದಾಯ, ಆಚರಣೆಗಳ ವೈವಿಧ್ಯತೆಯ ಕಾರಣಕ್ಕಾಗಿ, ಇಲ್ಲಿನ ಜನಪದ ಸಾಹಿತ್ಯ, ಕಲೆ, ಶ್ರೀಮಂತವಾಗಿದೆ. ಇವುಗಳಲ್ಲಿ ಜನಪದ ಕಲೆಗಳು, ಲಾವಣಿಗಳು, ಕಥೆಗಳು, ಗಾದೆಗಳು, ಹಾಗೂ ಗೋಸಂಬಂಧಿ ಗ್ರಾಮೀಣ ಆಚರಣೆಗಳನ್ನು ಪ್ರದಾನವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

೪. ಕೃತಿಗಳು

ಈ ಭಾಗದಲ್ಲಿ ಶಾಸನದ ಬಗೆಗಿನ ಹಾಗೂ ಇತಿಹಾಸದ ವಿಷಯಕ್ಕೆ ಹಾಗೂ ಭಾರತದ ಸಂಸ್ಕೃತಿಗೆ ಸಂಬಂಧಿಸಿದಂತೆ ಸಮಗ್ರ ಭಾರತದ ಇತಿಹಾಸ, ಪ್ರಾಚೀನ ಭಾರತದ ಇತಿಹಾಸ, ಕರ್ನಾಟಕದ ಸಾಂಸ್ಕೃತಿಕ ಇತಿಹಾಸಕ್ಕೆ ಸಂಬಂಧಿಸಿದಂತೆ ವಿವಿಧ ಲೇಖಕರ ಕೃತಿಗಳನ್ನು ಗಮನಿಸಲಾಗಿದೆ. ಪಂಪ ಭಾರತ, ಕರ್ನಾಟಕ ಭಾರತ ಕಥಾಮಂಜರಿ, ಗದಾಯುದ್ಧ, ಪ್ರಾಚೀನ ಭಾರತದ ಇತಿಹಾಸ, ಸಮಗ್ರ ಭಾರತದ ಇತಿಹಾಸ, ಚಿತ್ರಗಳಲ್ಲಿ ಚರಿತ್ರೆ, ಪ್ರಾಚೀನ ಅರ್ವಾಚೀನ ದನಗಳ ಇತಿಹಾಸ, ಪ್ರಾಚೀನ ಭಾರತದಲ್ಲಿ ಬೇಸಾಯ, ಋಷಿಮುನಿಗಳ ಕೃಷಿ, ಕನ್ನಡ ಶಾಸನಶಿಲ್ಪ, ತುರುಗೊಳ್ ಸಂಕಥನ, ಮುಂತಾದ ಕೃತಿಗಳು ಮಹತ್ವದ ಮಾಹಿತಿಯನ್ನು ಒದಗಿಸಿವೆ.

೫. ಲೇಖನಗಳು

ಈ ವರೆಗೆ ಸಂಶೋಧನಾಕಾರ್ಯದಲ್ಲಿ ತೊಡಗಿರುವ ಪ್ರಮುಖ ಸಂಶೋಧಕರ ಲೇಖನಗಳನ್ನು ಗಮನಿಸಲಾಗಿದೆ. ತುರುಗೊಳ್ ಹಾಗೂ ಗೋಸಂಬಂಧಿ ಲೇಖನಗಳನ್ನು ವಿಶೇಷವಾಗಿ ಗಮನಿಸಲಾಗಿದೆ.

೬. ವೃತ್ತಪತ್ರಿಕೆಗಳು

ವೃತ್ತಪತ್ರಿಕೆಗಳಲ್ಲಿ ತುರುಗೊಳ್ ಕದನಕ್ಕೆ ಸಂಬಂಧಿಸಿದಂತೆ ಲೇಖನಗಳು ಇಲ್ಲವೆಂದೇ ಹೇಳಬಹುದು. ಆದರೆ ಈ ಸಂಶೋಧನೆಗೆ ಪೂರಕವಾದ ಹೆಚ್ಚು ಲೇಖನಗಳು ಪ್ರಕಟವಾಗದೇ ಇರುವುದು ಕೊರತೆ ಎನ್ನಿಸಿದರೂ ಗೋಸಂಬಂಧಿ ಲೇಖನಗಳು ಹೆಚ್ಚು ಪ್ರಕಟವಾಗಿವೆ. ಪತ್ರಿಕೆಗಳ ವರದಿಯನ್ನು ಮತ್ತು ಇತ್ತೀಚೆಗೆ ಗೋಹತ್ಯಾ ನಿಷೇಧ ಕಾನೂನು ಜಾರಿಯಾದ ಮೇಲೆ ಹೆಚ್ಚಿನ ಪತ್ರಿಕೆಗಳಲ್ಲಿ ವರದಿಯಾದ ಲೇಖನಗಳನ್ನು ಗಮನಿಸಲಾಗಿದೆ.

೭. ಕ್ಷೇತ್ರಕಾರ್ಯಾಧಾರಿತ ಮಾಹಿತಿಗಳು

ಈ ಸಂಶೋಧನಾ ಕಾರ್ಯಕ್ಕೆ ತುರುಗೊಳ್ ಶಾಸನಗಳಿರುವ ಅನೇಕ ಪ್ರದೇಶಗಳ ಭೌಗೋಳಿಕ ಸಮೀಕ್ಷೆಯನ್ನು, ಪಶುಪಾಲನೆಗೆ ಸೂಕ್ತವಾದ ವಾತಾವರಣಕ್ಕೆ ಕಾರಣವಾದ ಅಂಶಗಳನ್ನು ಗುರುತಿಸಿ ಸಂಶೋಧನೆಗೆ ಬಳಸಿಕೊಂಡಿದೆ. ತುರುಗೊಳ್ ಶಾಸನಗಳ ಛಾಯಾಚಿತ್ರಗಳನ್ನು ಕ್ಷೇತ್ರ ಕಾರ್ಯದ ಮೂಲದಿಂದಲೇ ಬಳಸಿಕೊಂಡಿದೆ. ಈ ಚಿತ್ರಗಳು ಮಲೆನಾಡು ಪರಿಸರದ ಮಳೆಯ ಕಾರಣಕ್ಕೆ ಶಾಸನಗಳು ತೃಟಿತವಾಗಿರುವುದನ್ನು, ಅವುಗಳ ಹೀನಾಯ ಸ್ಥಿತಿಯನ್ನು ನಮ್ಮೆದುರು ತಿಳಿಸುತ್ತವೆ.

೮. ಈವರೆಗೆ ಪ್ರಕಟವಾಗಿರುವ ತುರುಗೊಳ್ ಛಾಯಾಚಿತ್ರಗಳು

ಈವರೆಗಿನ ಛಾಯಾಚಿತ್ರಗಳು ಶಾಸನಗಳನ್ನು ಗುರುತಿಸಲು ನೆರವು ನೀಡಿವೆ ಹಾಗೂ ಹೆಚ್ಚಿನವು ಗ್ರಾಮದ ಪ್ರಮುಖ ಸ್ಥಳಗಳಲ್ಲಿ ನಿಲ್ಲಿಸಿದ್ದ ಶಾಸನಗಳ, ಅಥವಾ ವಸ್ತು ಸಂಗ್ರಹಾಲಯದಲ್ಲಿನ ತುರುಗೊಳ್ ಶಾಸನಗಳಾಗಿವೆ. ಈ ಸಂಶೋಧನೆಯಲ್ಲಿ ಕ್ಷೇತ್ರಕಾರ್ಯದಲ್ಲಿ ತೆಗೆದ ನೂತನ ಛಾಯಾಚಿತ್ರಗಳನ್ನು ಬಳಸಿಕೊಳ್ಳಲಾಗಿದೆ.

೯. ಐತಿಹ್ಯಗಳು

ಗೋಸಂಬಂಧಿ ಐತಿಹ್ಯಗಳನ್ನು ಗಮನಿಸಿ ಗೋವುಗಳಿಗೆ ಧಾರ್ಮಿಕವಾಗಿ ಆರೋಪಿಸಿರುವ ದೈವೀಶಕ್ತಿಗಳ ಬಗ್ಗೆ, ಅವುಗಳ ಉಪಯುಕ್ತತೆಯ ಬಗ್ಗೆ ಇಲ್ಲಿ ಗಮನಿಸಲಾಗಿದೆ. ಈ ಎಲ್ಲ ಆಕರಗಳನ್ನು ಬಳಸಿಕೊಂಡು ಅಧ್ಯಯನಕ್ಕೆ ಪೂರಕವಾದ ಅಂಶಗಳನ್ನು ನನ್ನ ಸಂಶೋಧನೆಯಲ್ಲಿ ಬಳಸಿಕೊಳ್ಳಲಾಗಿದೆ.

ಗೋಗ್ರಹಣ ಪ್ರಸಂಗಗಳನ್ನು ಪ್ರಮುಖವಾಗಿ ಪ್ರಸ್ತಾಪಿಸಿರುವ ಪುರಾಣ ಗ್ರಂಥಗಳೆಂದರೆ ವೇದಗಳು ಮತ್ತು ಮಹಾಭಾರತ ಕತೆಗಳು. ಗೋಗ್ರಹಣ ಪ್ರಸಂಗಗಳ ಬಗ್ಗೆ ಹಾಗೂ ಅಂದಿನ ಮೌಲ್ಯಗಳ ಬಗೆ ಪಂಪ, ರನ್ನ, ಕುಮಾರವ್ಯಾಸ ಮುಂತಾದ ಕವಿಗಳ ಕೃತಿಗಳಲ್ಲಿ ಅದ್ಭುತವಾಗಿ

ಉಲ್ಲೇಖಿಸಲಾಗಿದೆ. ಕೆಲವು ಸಂಶೋಧಕರು ತಮ್ಮ ಸಂಶೋಧನೆಯಲ್ಲಿ ತುರುಗೊಳ್ ಯುದ್ಧ ವಿಧಾನಗಳನ್ನು ಸ್ಥೂಲವಾಗಿ ಅಧ್ಯಯನ ಮಾಡಿದ್ದಾರೆ. ಡಾ.ಡಿ.ವಿ.ಪರಮಶಿವಮೂರ್ತಿಯವರ "ತುರುಗೊಳ್ ಸಂಕಥನ" ಕೃತಿ ಈ ಗೋಗ್ರಹಣ ಪ್ರಸಂಗಗಳನ್ನು, ಸಾಮಾಜಿಕ ಸ್ಥಿತಿಗತಿಗಳನ್ನು ಪರಿಚಯಿಸಿಕೊಡುವಲ್ಲಿ ಮಹತ್ವದ ಕೃತಿಯಾಗಿದೆ. ಹಾಗೂ ಸಾಹಿತ್ಯದ ಸಂದರ್ಭದಲ್ಲಿ ಗೋಸಂಬಂಧಿತ ಘಟನೆಗಳ ಕುರಿತು ಅಧ್ಯಯನ ಕೈಗೊಳ್ಳಲು ಸಾಹಿತ್ಯ ಪ್ರಕಾರಗಳಾದ ಕತೆ, ಕಾದಂಬರಿ, ಗೀತೆಗಳನ್ನು, ಮತ್ತು ಬಿಡಿ ಲೇಖನಗಳನ್ನು ಪ್ರಮುಖ ಆಕರಗಳೆಂದು ಪರಿಗಣಿಸಲಾಗಿದೆ. ಹಾಗೂ ಕೃಷಿಯಾಧಾರಿತ ಪಶುಪಾಲನೆ ಭಾರತದಲ್ಲಿ ಪ್ರಚಲಿತವಿರುವುದರಿಂದ ಕೃಷಿ ಸಂಬಂಧಿ ಕಾಯಕಗಳ ಹಿನ್ನೆಲೆ, ಗ್ರಾಮೀಣ ಜನಪದ ಆಚರಣೆಗಳನ್ನು, ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಎಲ್ಲದಕ್ಕಿಂತ ಮುಖ್ಯವಾಗಿ ಇಲ್ಲಿಯವರೆಗೆ ಜನಮಾನಸದಿಂದ ದೂರವಾಗಿದ್ದ ಸಹಸ್ರಾರು ಶಾಸನಗಳ ಆಧರಿಸಿ, ಶಿವಮೊಗ್ಗ ಜಿಲ್ಲೆಯ ಶಾಸನಗಳನ್ನು ಪ್ರಧಾನವಾದ ಆಕರಗಳನ್ನಾಗಿ ಮಾಡಿಕೊಂಡಿದ್ದೇನೆ.

ಈ ಎಲ್ಲಾ ಆಕರಗಳನ್ನು ಅನುಲಕ್ಷಿಸಿ ಶಿವಮೊಗ್ಗ ಜಿಲ್ಲೆಯ ಶಾಸನಗಳನ್ನಾಧರಿಸಿ ಗೋಗ್ರಹಣ ಕದನಗಳ ಕಾರಣ-ಪರಿಣಾಮಗಳನ್ನು ಅನೂಹ್ಯ ಸಂಗತಿಗಳನ್ನು ಶೋಧಿಸಿ ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ. "ಗೋಗ್ರಹಣ-ಒಂದು ಅಧ್ಯಯನ" ಗೋವುಗಳ ರಕ್ಷಣೆಗಾಗಿ ಹೋರಾಡಿ ಮಡಿದ ಸಹಸ್ರಾರು ವೀರ ಯೋಧರ, ತ್ಯಾಗ ಬಲಿದಾನಗಳಿಗೆ, ಮಾನವನಿಗೆ ನೆರವಾಗಿಯೂ ಕಡೆಗಣಿಸಲ್ಪಟ್ಟ ಗೋವುಗಳ ಬಗೆಗಿನ ಭಾವನಾತ್ಮಕ, ಧಾರ್ಮಿಕ, ವ್ಯಾವಹಾರಿಕ ಸಂಬಂಧಗಳ ಹಾಗೂ ಸಾಮಾಜಿಕ ಮೌಲ್ಯಗಳ ಬಗೆಗಿನ ಅಧ್ಯಯನ ಈ ಕೃತಿಯಾಗಿದೆ.

## ಅಧ್ಯಯನದ ಸಮೀಕ್ಷೆ

ತುರುಗೊಳ್ ಕದನ ವಿಧಾನಗಳನ್ನು, ಯುದ್ಧದ ಕಾರಣ ಪರಿಣಾಮಗಳನ್ನೇ ವಸ್ತುವಾಗಿ ಹೊಂದಿರುವ ಕೃತಿಗಳ ಸಂಖ್ಯೆ ಬಹಳ ಕಡಿಮೆ ಇವೆ. ಪ್ರಕಟವಾಗಿರುವ ಎಲ್ಲಾ ಕೃತಿಗಳಲ್ಲಿಯೂ ತುರುಗೊಳ್ ಕದನಗಳನ್ನು ಪರಿಚಯಾತ್ಮಕವಾಗಿ ವಿವರಿಸುವ ಪ್ರಯತ್ನಗಳಾಗಿವೆಯೇ ಹೊರತು, ಪೂರ್ಣ ಪ್ರಮಾಣದ ತುರುಗೊಳ್ ಕದನಗಳ ಅಧ್ಯಯನಗಳಾಗಿಲ್ಲ. ಈ ನಿಟ್ಟಿನಲ್ಲಿ ಈ ಸಂಶೋಧನಾ ಮಹಾಪ್ರಬಂಧ ಪ್ರಾಮುಖ್ಯತೆ ಹೊಂದಿದೆ. ಇಲ್ಲಿಯವರೆಗೂ ತುರುಗೊಳ್ ಕದನಗಳ ಬಗ್ಗೆ ನಡೆದಿರುವ ಅಧ್ಯಯನದ ಸಮೀಕ್ಷೆಯನ್ನು ಹೆಚ್ಚಿನ ಅಧ್ಯಯನಕ್ಕಾಗಿ ಗಮನಿಸುವುದು ಸೂಕ್ತ.

**ಸಮಾಧಿ-ಬಲಿದಾನ-ವೀರಮರಣ ಸ್ಮಾರಕ:** ಎಂ.ಎಂ ಕಲಬುರ್ಗಿಯವರು ಸಂಶೋಧನಾ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಇವರ ಈ ಕೃತಿ ಇಡೀ ವೀರ ಪರಂಪರೆಯಲ್ಲಿ ಬಲಿದಾನ ನಡೆದಿರುವ ವಿಧಾನಗಳ, ಸಾಮಾಜಿಕ ಆಚರಣೆಗಳ ಬಗ್ಗೆ ತಿಳಿಸುವಾಗ ತುರುಗೊಳ್ ಕದನ ವಿಧಾನವನ್ನು ಪರಿಚಯಿಸಿದ್ದಾರೆ. ಇದು ಒಂದು ರೀತಿಯಲ್ಲಿ ಪರಿಚಯಾತ್ಮಕ ಲೇಖನವಾಗಿದೆ.

ಈ ಕೃತಿಯಲ್ಲಿ ತುರುಗೊಳ್ ಕದನಗಳನ್ನು ಮಹಾಭಾರತ ಕಥೆಯ ಹಿನ್ನೆಲೆಯಲ್ಲಿ ನೋಡಿರುವುದು ಕಂಡುಬರುತ್ತದೆ. ಕೆಲವು ಮುಖ್ಯ ಶಾಸನಗಳನ್ನು ಉಲ್ಲೇಖಿಸಿರುವುದು ಸ್ತುತ್ಯಾರ್ಹ. ಹಾಗೂ ಸೊರಬ ತಾಲ್ಲೂಕಿನ ಕೊರಕೋಡು ಶಾಸನದ ಪಾಠವನ್ನು ನೀಡಿ ಇಡೀ ತುರುಗೊಳ್ ಕದನವನ್ನು ಪರಿಚಯಿಸಿದ್ದಾರೆ. ಆದರೆ ತುರುಗೊಳ್ ಕದನವನ್ನೇ ಪ್ರಧಾನ ವಿಷಯವಾಗಿ ಇಡೀ ಕೃತಿಯನ್ನು ರಚಿಸಿಲ್ಲ ಎಂಬುದನ್ನು ಗಮನಿಸಬೇಕು. ಇವರ ಇನ್ನೊಂದು ಕೃತಿ **"ಕನ್ನಡ ಶಾಸನ ಸಾಹಿತ್ಯ"** ಈ ಕೃತಿಯು ಶಾಸನಗಳ ಸಾಹಿತ್ಯದ ವಿಶೇಷತೆಗಳ ಬಗ್ಗೆ ಗಮನ ಸೆಳೆಯುತ್ತದೆ. ಶಾಸನ ಸಾಹಿತ್ಯ ಕುರಿತು ಅಭ್ಯಾಸಿಸಲೇಬೇಕಾದ ಕೃತಿಯಾದರೂ ತುರುಗೊಳ್ ಸಾಹಿತ್ಯವನ್ನು ವಿಶೇಷವಾಗಿ ವಿವರಿಸುವ ಪ್ರಯತ್ನ ಮಾಡಲಿಲ್ಲ.

**ಎಪಿಗ್ರಫಿಯ ಕರ್ನಾಟಕ :** ಬಿ.ಎಲ್ ರೈಸ್ಇವರ ಶ್ರಮದ ಫಲವಾಗಿ ಕನ್ನಡ ನಾಡಿನ ಇತಿಹಾಸವನ್ನು ಶಾಸನಾಧಾರಿತವಾಗಿ ನೋಡಲು ಸಹಕಾರಿಯಾಗಿದೆ. ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯಿಂದ ೧೫ ಸಂಪುಟಗಳಲ್ಲಿ ಬಿಡುಗಡೆಯಾಗಿದೆ. ಇಡೀ ಶಾಸನ ಸಾಹಿತ್ಯದ ಪೂರ್ಣ ಪಠ್ಯಗಳನ್ನು ಒಳಗೊಂಡ ಪ್ರಪ್ರಥಮ ಕನ್ನಡ ಶಾಸನ ಸಾಹಿತ್ಯ ಭಂಡಾರ. ಇದರಲ್ಲಿ ಇಡೀ ಶಾಸನ ಪಾಠವನ್ನು ಕನ್ನಡ ಮತ್ತು ಇಂಗ್ಲೀಷ್ ಭಾಷೆಗೆ ತರ್ಜುಮೆ ಮಾಡಿ ಪ್ರಕಟಿಸಿದ್ದಾರೆ. ಒಂದು ಗ್ರಾಮದಲ್ಲಿ ದೊರೆತ ಎಲ್ಲಾ ಶಾಸನಗಳ ಪೂರ್ಣ ಪಾಠವನ್ನು ಸಂಗ್ರಹಿಸಿದ ರೀತಿ ಅದ್ಭುತ. ಈ ಸಂಪುಟಗಳು ನನ್ನ ಸಂಶೋಧನೆಯಲ್ಲಿ ಪ್ರಧಾನವಾದ ಆಕರಗಳಾಗಿ ಬಳಕೆಯಾಗಿವೆ. ಈ ಶಾಸನ ಸಂಪುಟಗಳಲ್ಲಿ ತುರುಗೊಳ್ ಶಾಸನಗಳನ್ನು hero stone ಎಂದು ಪರಿಗಣಿಸಿ ತುರುಗೊಳ್ ಕದನಗಳನ್ನು cattle raide ಎಂದು ಗುರುತಿಸುತ್ತಾರೆ. ಈ ಸಂಪುಟಗಳು ವಿವಿಧ ಜಿಲ್ಲೆಗಳ ಸಂಪೂರ್ಣ ಶಾಸನಗಳ ವಿವರಗಳನ್ನು ಒಳಗೊಂಡಿವೆ. ಇನ್ನೂ ಹೆಚ್ಚಿನ ಶಾಸನಗಳು ಮುದ್ರಣಗೊಳ್ಳಬೇಕಿದೆ ಎಂಬ ಮಾತು ಈ ಕ್ಷೇತ್ರದ ಎಲ್ಲ ಶಾಸನಗಳು ಪ್ರಕಟವಾಗಿಲ್ಲ ಎಂಬುದನ್ನು ತಿಳಿಸುತ್ತದೆ. ಈ ಕೃತಿಗಳಲ್ಲಿಯೂ ತುರುಗೊಳ್ ಶಾಸನಗಳ ಪಾಠವನ್ನು ನೀಡುವ ಬಗ್ಗೆ ಗಮನಕೊಟ್ಟಿತೇ ವಿನಃ ಅವುಗಳ ಕೂಲಂಕಶವಾದ ಅಧ್ಯಯನಕ್ಕೆ ತೊಡಗಿಲ್ಲ ಎಂಬುದು ತಿಳಿಯುತ್ತದೆ. ಆದರೆ ಕನ್ನಡ ಸಾಹಿತ್ಯದ ಇತಿಹಾಸದ ಆಕರಗಳಾಗಿರುವ ಶಾಸನಗಳೆಂಬ ನಿಧಿಯನ್ನು ಒಪ್ಪವಾಗಿ ಜೋಡಿಸಿರುವ ಮಹತ್ವದ ಕೃತಿಗಳು ಎಪಿಗ್ರಫಿಯ ಕರ್ನಾಟಕ ಕೃತಿ ಶ್ರೇಣಿಗಳು.

**ಸಾಂಸ್ಕೃತಿಕ ಸಂಕಥನ :** ಬಿ.ವಿ.ವಸಂತ್ ಕುಮಾರ್ ಈ ಕೃತಿಯನ್ನು ರಚಿಸಿದ್ದು ಈ ಕೃತಿಯಲ್ಲಿ ಶಿಕಾರಿಪುರ ತಾಲ್ಲೂಕನ್ನು ಪ್ರಧಾನವಾಗಿರಿಸಿಕೊಂಡು ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕ ದೃಷ್ಟಿಯಲ್ಲಿ ಶಾಸನಾಧಾರಿತ ಅಧ್ಯಯನ ನಡೆಸಿದ್ದಾರೆ. ಶಿಕಾರಿಪುರ ತಾಲ್ಲೂಕಿನ ವೀರಗಲ್ಲಿನ ವೀರಪರಂಪರೆಯ

ಯೋಧರನ್ನು ಅಧ್ಯಾಯ೬ರಲ್ಲಿ **"ಸಂಸ್ಕೃತಿಯಲ್ಲಿ ವೀರ ಪರಂಪರೆ"** ಎಂಬ ಅಧ್ಯಯದಲ್ಲಿ ಎಲ್ಲ ಗ್ರಾಮಗಳ ಪ್ರಮುಖ ವೀರಗಲ್ಲುಗಳ ವೀರರ ಪರಿಚಯಾತ್ಮಕ ವಿವರಣೆ ನೀಡಿದ್ದಾರೆ. ಇಲ್ಲಿ ವೀರರ ಬದುಕಿಗೆ ಭೌಗೋಳಿಕ ಹಾಗೂ ಶೈಕ್ಷಣಿಕ ಪರಿಸರ ಯಾವ ರೀತಿ ಕಾರಣವಾಗಿದೆ ಎಂಬುದನ್ನು ತಿಳಿಸಿದ್ದಾರೆ. ಅನೇಕ ಶಾಸನಗಳ ಮಾಹಿತಿಯಿದ್ದು, ಅಧ್ಯಯನಕ್ಕೆ ಉಪಯುಕ್ತ ನೆರವನ್ನು ಒದಗಿಸುತ್ತದೆ.

**ಕರ್ನಾಟಕದ ವೀರಗಲ್ಲು :** ಆರ್.ಶೇಷಶಾಸ್ತ್ರಿ ಅವರ ಈ ಕೃತಿ ಕನ್ನಡ ಸಾಹಿತ್ಯಕ್ಕೆ ಅನನ್ಯ ಕೊಡುಗೆಯಾಗಿದೆ. ಇದು ಇಡೀ ವೀರ ಪರಂಪರೆಯಲ್ಲಿ ವೀರ ಮರಣ ಹೊಂದಿದ ಅನೇಕ ಕದನ ವಿಧಾನಗಳಾದ ಕಳ್ಳರೊಡನೆ, ಪೆಣ್ಬುಯ್ಯಲಿನಲ್ಲಿ, ಸೀಮಾ ಸಂಬಂಧದಲ್ಲಿ, ಊರಳಿವು, ಹುಯ್ಯಲಿನಲ್ಲಿ, ನೀರಿನಲ್ಲಿ ಸತ್ತವರು, ಬೇಟೆಯಲ್ಲಿ, ತುರುಗಾಳಗ, ಮೊದಲಾದ ವಿಭಾಗಗಳನ್ನು ಮಾಡಿಕೊಂಡು ಇಡೀ ಯುದ್ಧ ಪರಂಪರೆಯಲ್ಲಿ ಮಡಿದವರ ವೀರ ಸ್ಮಾರಕಗಳ ಕುರಿತು ವಿವರವಾಗಿ ಸಂಶೋಧನೆ ನಡೆಸಿದ್ದಾರೆ. ಇವರ ಕೃತಿಯಲ್ಲಿಯೂ ತುರುಗೊಳ್ ಒಂದು ಯುದ್ಧದ ಪ್ರಕಾರವಾಗಿ ಘಟನೆಯ ಒಳ-ಹೊರಗನ್ನು ಓದುಗನಿಗೆ ಪರಿಚಯಿಸುವಲ್ಲಿ ಶಕ್ತವಾಗಿದೆ. ಇವರು ತುರುಗೊಳ್ ಶಾಸನಗಳನ್ನು ರಾಜಕೀಯ ಉದ್ದೇಶದ, ಸಂರಕ್ಷಣೆಗಾಗಿ, ಅಪಹರಿಸಲು ಹೋಗಿ ಹಾಗೂ ಕಳ್ಳತನಕ್ಕಾಗಿ ಎಂದು ವಿಭಾಗಿಸಿಕೊಂಡು ವಿವರಿಸಿದ್ದಾರೆ. ಕರ್ನಾಟಕದ ವೀರಗಲ್ಲುಗಳ ಬಗ್ಗೆ ಹೇಳುವ ವಿಸ್ತಾರವಾದ ವಿಷಯದ ಹಂದರದಲ್ಲಿ ತುರುಗೊಳ್ ಪ್ರಮುಖ ವಿಷಯವಾಗಲೇ ಇಲ್ಲ. ಆದರೆ ಕರ್ನಾಟಕದ ವೀರಗಲ್ಲುಗಳ ಕುರಿತ ವಿವರಣಾತ್ಮಕ ಪ್ರಪ್ರಥಮ ಕೃತಿ ಇದಾಗಿದೆ.

**ನಾಗರಖಂಡ ೭೦ ಒಂದು ಅಧ್ಯಯನ :** ಭೋಜರಾಜ ಪಾಟೀಲ್ ಇವರ ಸಂಶೋಧನಾ ಕೃತಿ. ಈ ಕೃತಿಯಲ್ಲಿ ಶಿಕಾರಿಪುರ ತಾಲ್ಲೂಕಿನ "ಬಂದಳಿಕೆ"ಯನ್ನು ಕೇಂದ್ರವಾಗಿರಿಸಿಕೊಂಡು ಶಿಕಾರಿಪುರ, ಹಿರೇಕೇರೂರು, ಸೊರಬ, ಬ್ಯಾಡಗಿ, ಹಾನಗಲ್, ಎಡನಾಡು ೭೦, ಜಿಡ್ಡುಳಿಗೆ ೭೦, ಬಳ್ಳಿಗಾವಿ, ಸತ್ತಳಿಗೆ, ಮುಂತಾದ ಭಾಗಗಳನ್ನೊಳಗೊಂಡ ಪ್ರದೇಶವೇ ನಾಗರಖಂಡ ೭೦ ಸಂಶೋಧನಾ ಪ್ರಬಂಧ. ಒಂದು ರಾಜ್ಯದ ಸಾಂಸ್ಕೃತಿಕ, ಸಾಮಾಜಿಕ, ವಾಣಿಜ್ಯ, ರಾಜಕೀಯ, ಆಡಳಿತ ವ್ಯವಸ್ಥೆ, ಆರ್ಥಿಕ ವ್ಯವಸ್ಥೆಯನ್ನು ಹಾಗೂ ಸಾಹಿತ್ಯ, ಕವಿ, ಧರ್ಮಗಳನ್ನು ಕೇಂದ್ರವಾಗಿರಿಸಿಕೊಂಡು ನಡೆಸಿದ ಅಧ್ಯಯನವಾಗಿದೆ. ಆದ್ದರಿಂದ ಈ ರಾಜವಂಶದ, ರಾಜ್ಯದ ಏಳು ಬೀಳುಗಳನೊಳಗೊಂಡ ಸಂಶೋಧನೆಯಾಗಿದ್ದು, ಶಿಕಾರಿಪುರ ತಾಲ್ಲೂಕಿಗೆ ಹೊಂದಿಕೊಂಡಂತೆ ಒಂದು ವಿಶಾಲ ಸಾಮ್ರಾಜ್ಯ ಇತ್ತು ಎಂಬುದನ್ನು ಶಾಸನಾಧಾರಗಳಿಂದ ದೃಡಪಡಿಸಿದ್ದಾರೆ. ಇದು ತುರುಗೊಳ್ ಶಾಸನಗಳ ಘಟನಾವಳಿಗಳನ್ನು ಹೋಲಿಸಿ ನೋಡುವುದಕ್ಕೆ ನೆರವಾಗಿದೆ.

**ಶಾಸನಾನುಸಂಧಾನ** : ಎಸ್.ಎಂ.ಹಿರೇಮಠ ಇವರ ಕೃತಿಯಲ್ಲಿ ಶಾಸನಗಳ ವಿಧಾನಗಳನ್ನು ಪರಿಚಯಿಸಲು ೬ ಅಧ್ಯಾಯಗಳಲ್ಲಿ ವಿಭಾಗಿಸಿಕೊಂಡಿದ್ದಾರೆ. ಆ ವೀರಗಲ್ಲುಗಳನ್ನು ಪರಿಚಯಿಸುವ ಭಾಗದಲ್ಲಿ ತುರುಗೊಳ್ ಶಾಸನಶಿಲ್ಪ ಯಾವ ರೀತಿ ಇರುತ್ತದೆ ಎಂದು ವರ್ಣಿಸಿದ್ದಾರೆ. ಅಲ್ಲದೆ ತಮಿಳುನಾಡಿನ, ಆಂಧ್ರ ಪ್ರದೇಶದ, ಕೆಲವು ಶಾಸನಗಳನ್ನು ಪರಿಚಯಾತ್ಮಕವಾಗಿ ಉದಾಹರಿಸಿದ್ದಾರೆ. ಈ ಕೃತಿ ಶಾಸನ ಪ್ರಕಾರಗಳ ವೈವಿಧ್ಯತೆಯ ಕಾರಣಗಳನ್ನು ಅರ್ಥಮಾಡಿಕೊಳ್ಳಲು ಸಹಕಾರಿಯಾಗಿದೆ. ಇದು ತುರುಗೊಳ್ ಶಾಸನಗಳನ್ನು ಕೇವಲ ಪರಿಚಯಿಸುತ್ತದೆಯೇ ಹೊರತು ವಿವರವಾದ ಅಧ್ಯಯನಕ್ಕೆ ಒಳಪಡಿಸಿಲ್ಲ.

**ಮೈಸೂರು ವಿಶ್ವವಿದ್ಯಾಲಯದ ಶಾಸನ ಸಂಪುಟಗಳು** : ಇವು ಮೈಸೂರು ವಿಶ್ವ ವಿದ್ಯಾಲಯ ಮತ್ತು ಕನ್ನಡ ಸಂಸ್ಕೃತಿ ಇಲಾಖೆ, ಕನ್ನಡ ಪುಸ್ತಕ ಪ್ರಾಧಿಕಾರ ಜಂಟಿಯಾಗಿ "ಕರ್ನಾಟಕ ಅರಸು ಮನೆತನಗಳು" ಶಾಸನ ಸಂಪುಟ ಮಾಲೆಯನ್ನು ಪ್ರಕಟಿಸಿದೆ.ಇವುಗಳಲ್ಲಿ

**ರಾಷ್ಟ್ರಕೂಟರ ಶಾಸನಗಳು**

**ಪಾಳೇಗಾರರ ಶಾಸನಗಳು**

**ಕೆಳದಿ ಅರಸರ ಶಾಸನ ಸಂಪುಟಗಳು**

ಪ್ರಮುಖ ಕೃತಿಗಳಾಗಿವೆ. ಇವು ಒಟ್ಟು ಶಾಸನಗಳನ್ನು ರಾಜರ ಆಡಳಿತಾವಧಿಯ, ಸಾಮ್ರಾಜ್ಯಗಳ ಹಿನ್ನೆಲೆಯಲ್ಲಿ ಶಾಸನದ ಸಾಹಿತ್ಯವನ್ನು ನೀಡಿದೆ. ಆದರೆ ವಿಶೇಷವಾಗಿ ಯಾವುದೇ ಒಂದು ಪ್ರಕಾರವನ್ನು ಕೂಲಂಕಶವಾಗಿ ವಿವರಿಸುವ ಪ್ರಯತ್ನ ಇದರಲ್ಲಿ ಆಗಿಲ್ಲ.

**"ಪಂಪ ಭಾರತಂ"** ಮತ್ತು **"ಕರ್ಣಾಟಕ ಭಾರತ ಕಥಾಮಂಜರಿ"** : ಪಂಪ ಮತ್ತು ಕುಮಾರವ್ಯಾಸರ ಕೃತಿಗಳಾಗಿದ್ದು ಇಡೀ ಯುದ್ಧ ಪರಂಪರೆಯನ್ನು ಕಟ್ಟಿಕೊಡುವಲ್ಲಿ ಶಕ್ತವಾದ ಕೃತಿಗಳಾಗಿವೆ. ಪಂಪನು ತನ್ನ ಭಾರತ ಕಥೆಯ ೧೪ ಆಶ್ವಾಸಗಳಲ್ಲಿ ನಾಲ್ಕು ಆಶ್ವಾಸಗಳನ್ನು ಯುದ್ಧದ ವರ್ಣನೆಗೇ ಮೀಸಲಿಟ್ಟಿರುವುದು ವಿಶೇಷವಾಗಿದೆ. ಹಾಗೂ ಕುಮಾರವ್ಯಾಸನು ಹಾಸ್ಯ ರಸದೊಂದಿಗೆ ಯುದ್ಧದ ಭೀಕರತೆಯನ್ನು ವಿವರಿಸುವಲ್ಲಿ ಆತನ ಕೃತಿ ಶಕ್ತವಾಗಿದೆ. ತುರುಗೊಳ್ ಯುದ್ಧ ವಿಧಾನಗಳ ಕೆಣಕುವ ರೀತಿ, ಹಸುಗಳ ಪರಿಸ್ಥಿತಿ, ಗೋವಳಿಗರ ಪರಿಸ್ಥಿತಿಯನ್ನು, ಸೈನ್ಯದ ವಿವರಗಳನ್ನು ಪಂಪ ಹಾಗೂ ಕುಮಾರವ್ಯಾಸ ಓದುಗನಿಗೆ ಶಕ್ತವಾಗಿ ಕಟ್ಟಿಕೊಟ್ಟಿದ್ದಾರೆ. ಪಂಪನ ಕೃತಿಯ ಗದ್ಯಾನುವಾದವನ್ನು ಎನ್.ಅನಂತರಂಗಾಚಾರ್ ಮಾಡಿದ್ದು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದೆ.

ಕುಮಾರ ವ್ಯಾಸ ಭಾರತವನ್ನು ಅ.ರಾ.ಸೇತುರಾಮ್ ಅನುವಾದಿಸಿದ್ದು, ಕಾಮಧೇನು ಪ್ರಕಾಶನ ಪ್ರಕಟಿಸಿದೆ. ಈ ಎರಡೂ ಕೃತಿಗಳು ಇಡೀ ಯುದ್ಧದ ಚಿತ್ರಣದ ವರ್ಣನೆ, ತುರುಗೊಳ್

ಶಾಸನಗಳಶಿಲ್ಪ ಮತ್ತು ತುರುಗೊಳ್ ಶಾಸನ ಸಾಹಿತ್ಯದ ಮೇಲೆ ಅಗಾಧ ಪರಿಣಾಮವನ್ನು ಬೀರಿದ ಕೃತಿಗಳಾಗಿವೆ. ಇಡೀ ತುರುಗೊಳ್ ಕದನಗಳಲ್ಲಿ ಉತ್ತರ ಗೋಗ್ರಹಣ ಮತ್ತು ದಕ್ಷಿಣ ಗೋಗ್ರಹಣದ ರಾಜಕೀಯದ ಉದ್ದೇಶಗಳನ್ನು ಅರ್ಥಮಾಡಿಕೊಳ್ಳಲು ಇವು ಸಹಕಾರಿಯಾಗಿದೆ. ಒಂದು ವೇಳೆ ಪಂಪ ಹಾಗೂ ಕುಮಾರವ್ಯಾಸ ತುರುಗೊಳ್ ಯುದ್ಧ ಪ್ರಸಂಗವನ್ನೇ ಶಕ್ತವಾಗಿ ಕಟ್ಟಿಕೊಡಲು ಆಸಕ್ತಿ ತೋರಿದ್ದರೆ ಅವು ಕನ್ನಡ ಸಾಹಿತ್ಯದ ಶ್ರೇಷ್ಠ ಕೃತಿಗಳಾಗುವುದರಲ್ಲಿ ಯಾವುದೇ ಸಂದೇಹವಿರಲಿಲ್ಲ. ಎನ್ನುವುದು ಸಂದರ್ಭೋಚಿತವಾಗುತ್ತದೆ.

**ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ:** ಎಂ.ಚಿದಾನಂದಮೂರ್ತಿಯವರ ಈ ಕೃತಿ ಸಂಶೋಧನೆಯ ಇತಿಹಾಸದಲ್ಲಿಯೇ ಮಹತ್ವದ ಕೃತಿಯಾಗಿದೆ. ಇಡೀ ಕರ್ನಾಟಕದ ಶಾಸನಗಳನ್ನು ಕ್ರಿ.ಶ.೪೫೦–೧೧೫೦ ರವರೆಗಿನ ಕಾಲಘಟ್ಟದ ಹಿನ್ನೆಲೆಯಲ್ಲಿ ವಿಭಾಗಿಸಿಕೊಂಡು ಧರ್ಮ, ದೇವಸ್ಥಾನ, ವಿದ್ಯಾಭ್ಯಾಸ, ಯುದ್ಧಕಲೆ, ಆತ್ಮಬಲಿ, ಆಡಳಿತ ವ್ಯವಸ್ಥೆ, ಆರ್ಥಿಕ, ಸಾಮಾಜಿಕ ವ್ಯವಸ್ಥೆಗಳ ಹಿನ್ನೆಲೆಯಲ್ಲಿ ಶಾಸನಾಧಾರಿತವಾದ ಅಧ್ಯಯನವಾಗಿದೆ. ಇದರಲ್ಲಿ ೧೦ನೇ ಅಧ್ಯಾಯವಾದ "ಯುದ್ಧಕಲೆ" ಭಾಗ ಪ್ರಾಚೀನ ಯುದ್ಧಕಲೆ ಕುರಿತು ವಿವರಿಸುತ್ತದೆ. ಈ ಭಾಗದಲ್ಲಿ ಯುದ್ಧ ಪ್ರಬೇಧಗಳನ್ನು ಗುರುತಿಸುವಾಗ "ತುರುಗೊಳ್" ಪ್ರಬೇಧಗಳನ್ನು ವಿವರಿಸುತ್ತಾರೆ. ಈ ಕೃತಿಯಲ್ಲಿ ತುರುಗೊಳ್ ಯುದ್ಧ ಪ್ರಸಂಗ ಈ ಮಹತ್ವದ ಕೃತಿಯಲ್ಲಿ ಒಂದು ಇಡೀ ಪುಟದಷ್ಟು ಮಾಹಿತಿಯನ್ನು ಒಳಗೊಂಡಿದೆ. ಆದರೂ ಕರ್ನಾಟಕದ ಶಾಸನಗಳನ್ನು ಸಾಂಸ್ಕೃತಿಕ ದೃಷ್ಟಿಯಿಂದ ನೋಡಲು ಕನ್ನಡ ಸಾಹಿತ್ಯದಲ್ಲೇ ಮೊದಲ ವಿಶಿಷ್ಟವಾದ ಕೃತಿ ಎಂದು ಪರಿಗಣಿತವಾಗಿದೆ. ಅಲ್ಲದೆ ಸಂಶೋಧನಾ ಕ್ಷೇತ್ರದಲ್ಲಿ ತೊಡಗಿಕೊಳ್ಳುವವರಿಗೆ ಇದು ಮಹತ್ವದ ಮಾರ್ಗದರ್ಶನ ನೀಡುವ ಕೃತಿಯಾಗಿದೆ.

**ಗೋವು:ಗೋಮಾತೆ:ಗೋಹತ್ಯಾ ನಿಷೇಧ ಕಾನೂನುಗಳು** ಎಂ.ಚಿದಾನಂದಮೂರ್ತಿಯವರ ಇನ್ನೊಂದು ಕೃತಿ. ಈ ಕೃತಿ ಗೋವನ್ನು ಪವಿತ್ರವಾಗಿ ಕಾಣಲು ಇರುವ ಕಾರಣಗಳನ್ನು ಮತ್ತು ಗೋಹತ್ಯೆ ನಿಷೇಧದ ಕಾನೂನುಗಳನ್ನು ಪರಿಚಯ ಮಾಡಿಕೊಡುತ್ತದೆ. ಗೋವು ಜನಪದರಲ್ಲಿ, ಧಾರ್ಮಿಕವಾಗಿ, ಆಚರಣೆಗಳಲ್ಲಿ ಹೇಗೆ ಪೂಜಿತವಾಗಿದೆ, ಎಂಬುದನ್ನು ಕೃತಿ ವಿವರಿಸುತ್ತದೆ.

**ಕನ್ನಡ ಶಾಸನ ಶಿಲ್ಪ :** .ಡಿ.ವಿ.ಪರಮಶಿವಮೂರ್ತಿ ಇವರ ಈ ಕೃತಿ ಶಾಸನಗಳಲ್ಲಿ ಮೂಡಿದ ಕಲಾಕೃತಿಗಳ, ಶಿಲ್ಪದ ಆಧಾರದಿಂದ ಶಾಸನದ ಪ್ರಕಾರಗಳನ್ನು ಗುರುತಿಸುವಲ್ಲಿ ಹಾಗೂ ಅಂದಿನ ಕದನಗಳ ವಿವರಗಳನ್ನು ತಿಳಿಸುವ ಕನ್ನಡ ಸಾಹಿತ್ಯದ ಮೊದಲ ಸಂಶೋಧನಾ ಪ್ರಬಂಧ. ಈ ಕೃತಿಯಲ್ಲಿ "ವೀರ ಶಾಸನಶಿಲ್ಪ" ಭಾಗದಲ್ಲಿ ತುರುಗೊಳ್ ಶಾಸನಗಳ ವೈವಿಧ್ಯತೆಯನ್ನು, ಅವುಗಳ ಪ್ರಾಮುಖ್ಯತೆಯನ್ನು ಶಾಸನೋಕ್ತ ಆಧಾರದಿಂದ ಚಿತ್ರ ಸಹಿತವಾಗಿ ವಿವರಿಸಿದ್ದಾರೆ. ಇಲ್ಲಿ

ತುರುಗೊಳ್ ಕದನಗಳ ಜೊತೆಗೆ ಪೆಣ್ಬುಯ್ಯಲ್, ಊರಳಿವು, ಮುಂತಾದ ಯುದ್ಧ ವಿಧಾನಗಳನ್ನು ವಿವರಿಸಿರುವುದು ತುರುಗೊಳ್ ಕದನಗಳ ಮಹತ್ವವನ್ನು ಹೆಚ್ಚಿಸಿದೆ. ಚಿತ್ರಸಹಿತ ವಿವರಣೆಯು ತುರುಗೊಳ್ ಶಾಸನಗಳನ್ನು ಗುರುತಿಸಲು ಮತ್ತು ವಿವರಿಸಲು ಸಹಕಾರಿಯಾಗುವಷ್ಟು ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಅಲ್ಲದೆ ಶಾಸನಶಿಲ್ಪ ಪ್ರಕಾರ ಯಾವ ರೀತಿ ಬೆಳೆದು ಬಂದಿದ್ದೆ ಮತ್ತು ಶಾಸನಶಿಲ್ಪದ ಪ್ರಾಮುಖ್ಯತೆಯನ್ನು ವಿವರಿಸುವ ಪ್ರಮುಖ ಕೃತಿಯಾಗಿದೆ. ಶಾಸ್ತ್ರಬದ್ಧವಾಗಿ ಅಂದಿನ ಶಾಸನಗಳನ್ನು, ತುರುಗೊಳ್ ಕದನಗಳನ್ನು ಗಮನಿಸಲು ಪ್ರಮುಖ ಆಕರವಾಗಿದೆ.

**ತುರುಗೊಳ್ ಸಂಕಥನ:** ಡಿ.ವಿ.ಪರಮಶಿವಮೂರ್ತಿ ಇವರ ಇನ್ನೊಂದು ಪ್ರಮುಖ ಕೃತಿ. ಹಂಪಿ ಕನ್ನಡ ವಿಶ್ವ ವಿದ್ಯಾನಿಲಯ ಪ್ರಸಾರಾಂಗ ಹೊರ ತಂದಿರುವ ಈ ಕೃತಿ ಕನ್ನಡ ಸಾಹಿತ್ಯದ ತುರುಗೊಳ್ ಕದನವನ್ನು ವಸ್ತುವಾಗಿ ಹೊಂದಿರುವ ಮತ್ತು ಪೂರ್ಣ ಪ್ರಮಾಣದಲ್ಲಿ ತುರುಗೊಳ್ ಕದನಗಳ ಕಾರಣ ಮತ್ತು ಪರಿಣಾಮಗಳನ್ನು ಶಕ್ತವಾಗಿ ಕಟ್ಟಿಕೊಡುವ ಮೊದಲ ಕೃತಿಯಾಗಿದೆ. ಈ ಕೃತಿಯಲ್ಲಿ ಗೋ ಸಂಸ್ಕೃತಿಯ ಇತಿಹಾಸ, ಜನಪದರಲ್ಲಿ ಗೋವು, ತುರುಗೊಳ್ ಸ್ಮಾರಕ ಶಿಲ್ಪಗಳ ಬೆಳವಣಿಗೆ, ಅವನತಿ, ಜನರಲ್ಲಿ ತುರುಗೊಳ್ ಶಾಸನಗಳ ಬಗ್ಗೆ ಇರುವ ಅಭಿಪ್ರಾಯಗಳ ಕುರಿತು ಕೃತಿ ವಿವರಿಸುತ್ತದೆ. ಇದು ಗೋಗ್ರಹಣ ಕದನಗಳನ್ನು ಪ್ರಧಾನವಾಗಿಟ್ಟುಕೊಂಡು ರಚನೆಯಾದ ಪ್ರಪ್ರಥಮ ಶಾಸನಾಧಾರಿತವಾದ ಕೃತಿಯಾಗಿದೆ.

**ಪುಣ್ಯಕೋಟಿ :** ಮಮ್ತಾಜ್ ಆಲಿಖಾನ್ ಇವರ ಕೃತಿಯಾಗಿದೆ. ಧಾರ್ಮಿಕವಾಗಿ, ಸಮಾಜದ ದೃಷ್ಟಿಯಲ್ಲಿ ಮತ್ತು ಕಾನೂನಾತ್ಮಕವಾಗಿ ಗೋವು ಹೇಗೆಲ್ಲಾ ಗೌರವಿಸಲ್ಪಡಲೇಬೇಕಾದ ಪ್ರಾಣಿಯಾಗಿದೆ. ಮತ್ತು ಧರ್ಮವನ್ನು ಮೀರಿ ಎಲ್ಲ ಜಾತಿಯವರಿಗೂ ಹಸು ಹೇಗೆ ಉಪಯುಕ್ತವಾಗಿದೆ ಎಂಬುದನ್ನು ವಿವರಿಸುವ ಮಹತ್ವದ ಕೃತಿಯಾಗಿದೆ. ಗೋಹತ್ಯಾ ನಿಷೇಧದ ಅನಿವಾರ್ಯತೆಯನ್ನು ಮತ್ತು ಈಗ ಜಾರಿಯಲ್ಲಿರುವ ಕಾನೂನುಗಳನ್ನು ಕೃತಿ ವಿವರಿಸುತ್ತದೆ.

**ಕನ್ನಡದೊಳ್ ಭಾವಿಸಿದ ಜನಪದಂ :** ವಸು.ಎಂ.ವಿ.ಅವರು ಸಂಪಾದಿಸಿರುವ ಕೃತಿಯಲ್ಲಿ ಪ್ರೊ. ರಾಜಾರಾಮ್ ಹೆಗಡೆಯವರು ಗೋಸಾಸದಿಂದ ತುರುಗೊಳ್‌ವರೆಗೆ, "ಮಧ್ಯಕಾಲೀನ ಕರ್ನಾಟಕದ ಗೋಪಾಲನಾ ಅರ್ಥವ್ಯವಸ್ಥೆಯ ಸ್ಥಿತ್ಯಂತರಗಳು" ಲೇಖನ ಗೋಸಾಸ ಹಾಗೂ ತುರುಗಳ್ ಶಾಸನಗಳ ವೈವಿಧ್ಯತೆಯನ್ನು ಶಾಸನಬದ್ಧವಾಗಿ ವಿವರಿಸುವ ಲೇಖನವಾಗಿದೆ.

**ಮಧ್ಯಕಾಲೀನ ಕರ್ನಾಟಕದಲ್ಲಿ ಯುದ್ಧಗಳು :** ಕೆ. ಪ್ರಭಾಕರರಾವ್ ಇವರು ಕುವೆಂಪು ವಿಶ್ವ ವಿದ್ಯಾಲಯಕ್ಕೆ ಸಲ್ಲಿಸಿರುವ ಸಂಶೋಧನಾ ಪ್ರಬಂಧ. ಈ ಕೃತಿಯಲ್ಲಿ ತುರುಗೊಳ್ ಕದನ ವಿಧಾನ ಮತ್ತು ಸ್ವರೂಪವನ್ನು ಒಂದು ಅಧ್ಯಯದ ಭಾಗವಾಗಿ ವಿವರಿಸಿದ್ದಾರೆ. ಇದರಲ್ಲಿ ಸೊರಬ ತಾಲ್ಲೂಕಿನ ಕೊರಕೋಡು, ಸಾಗರ ತಾಲ್ಲೂಕಿನ ಹೊಸಗುಂದ, ಬೈರಾಪುರ ಶಾಸನಗಳ

ವರ್ಣನೆಗಳನ್ನು ವಿವರಿಸಿದ್ದಾರೆ. ಅಲ್ಲದೆ ತುರುಗೊಳ್ ಕದನದ ಉದ್ದೇಶ, ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಈ ಸಂಶೋಧನಾ ಪ್ರಬಂಧ ಉಪಯುಕ್ತವಾಗಿದೆ.

**ಕಾಡುಗೊಲ್ಲರ ಬುಡಕಟ್ಟು ವೀರರು** : ಮೀರಾಸಾಬಿಹಳ್ಳಿ ಶಿವಣ್ಣ ಇವರ ಕೃತಿಯಾಗಿದ್ದು, ಈ ಕೃತಿಯಲ್ಲಿ ಪಶುಪಾಲನೆಯ ವೃತ್ತಿಯ ಹಿನ್ನೆಲೆಯಲ್ಲಿ ಬಂದ ಗೊಲ್ಲ ಸಮುದಾಯದ ನಾಯಕರು ಹೇಗೆ ಸಾಂಸ್ಕೃತಿಕ ವೀರರಾದರು ಎಂಬುದನ್ನು ವಿವರಿಸುತ್ತದೆ. ತುರುಗೊಳ್ ಕದನದ ಅನೇಕ ಶಾಸನಗಳ ನಾಯಕರು ದೈವತ್ವಕ್ಕೇರಿದ ಘಟನೆಗಳನ್ನು, ಮತ್ತು ಕಾಡುಗೊಲ್ಲರ ಸ್ಥಿತಿಗತಿಗಳನ್ನು ನಮಗೆ ತಿಳಿಯಲು ಸಹಕಾರಿಯಾಗಿದೆ.

**ಕಾಮಧೇನು** : ಶೈಲೇಶ್‌ಹೊಳ್ಳ.ಕೆ.ಎನ್ ಇವರು ಗೋಸಂತತಿ ಉಳಿಸಿ ಜಾಗೃತಿಯ ಭಾಗವಾಗಿ ೭ ಕೃತಿಗಳನ್ನು ಹೊರತಂದಿದ್ದಾರೆ. ಇವುಗಳಲ್ಲಿ ಮೂರು ಈಗಾಗಲೇ ಪ್ರಕಟವಾಗಿವೆ. ಅವುಗಳೆಂದರೆ ಕಾಮಧೇನು ಭಾಗ ೧,೨ ಮತ್ತು ೩. ಈ ಕೃತಿಗಳು ರಾಜ ಮಹರಾಜರು, ಪುರಾಣಗಳಲ್ಲಿ, ಹಾಗೂ ದೈನಂದಿನ ಬದುಕಿನಲ್ಲಿ ಗೋವು ಮತ್ತು ಗೋವಿನ ಉತ್ಪನ್ನಗಳು ಯಾವರೀತಿ ಬಳಸುತ್ತಿದ್ದೇವೆ ಹಾಗೂ ಗೋವುಗಳ ಮಹತ್ವವನ್ನು ಅವುಗಳ ಧಾರ್ಮಿಕ ಮಹತ್ವನ್ನು ವಿವರಿಸುತ್ತದೆ. ಆರ್ಥಿಕವಾಗಿ ಗೋವು ಯಾವ ರೀತಿ ಮಾನವನಿಗೆ ಉಪಯೋಗಕಾರಿಯಾಗಿದೆ. ವೈಜ್ಞಾನಿಕವಾಗಿ ಕೃಷಿಯಲ್ಲಿ ಮತ್ತು ದೈನಂದಿನ ಬದುಕಿನಲ್ಲಿ ಧರ್ಮ, ಸಮಾಜ, ಆರ್ಥಿಕ ದೃಷ್ಟಿಯಿಂದ ದನಗಳ ಪ್ರಾಮುಖ್ಯತೆಯನ್ನು ವಿವರಿಸುವಲ್ಲಿ ಶಕ್ತವಾಗಿದೆ.

**ಕನ್ನಡ ಶಾಸನಗಳ ಅಧ್ಯಯನ:** ಎಸ್.ಎಸ್.ಭಗವತಿ ಮತ್ತು ಹೆಚ್.ಎಸ್.ಮೇಲಿನಮನಿ ಅವರ ಕೃತಿಯಾಗಿದ್ದು ಶಾಸನಗಳ ಸ್ವರೂಪ, ಮಹತ್ವ, ಪ್ರಕಾರಗಳನ್ನು ಪರಿಚಯಿಸುತ್ತವೆ. ಈ ಕೃತಿಯಲ್ಲಿ ತುರುಗೊಳ್ ಯುದ್ಧದ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

**ಪ್ರಾಚೀನ ಭಾರತದಲ್ಲಿ ಬೇಸಾಯ:** ಸಿ.ಕೆ.ಕುಮುದಿನಿ ಇವರ ಕೃತಿ. ಕೃಷಿಯಲ್ಲಿ ಜಾನುವಾರುಗಳ ಬಳಕೆ, ಕೃಷಿ ಚಟುವಟಿಕೆಗಳಿಗೆ ದನಗಳ ಲಕ್ಷಣಾಧಾರಿತ ಆಯ್ಕೆ, ಅವುಗಳನ್ನು ಪಳಗಿಸುವ ರೀತಿ ಅವುಗಳ ಆರೈಕೆ ಕುರಿತ ಮೌಲ್ಯಯುತ ವಿವರಗಳಿವೆ.

**ಪ್ರಾಚೀನ ಹಾಗೂ ಅರ್ವಾಚೀನ ದನಗಳ ಇತಿಹಾಸ:** ಆರ್.ಎಸ್.ಜ್ಯೋತಿ ಅವರು ಬರೆದಿರುವ ಕೃತಿಯಾಗಿದೆ. ಭಾರತದ ಮೂಲ ತಳಿಗಳ ಗುಣ ಲಕ್ಷಣಗಳನ್ನು ವಿವರಿಸುವುದರೊಂದಿಗೆ ಗ್ರಾಮ ಸಮುದಾಯದಲ್ಲಿ ಪಶುಪಾಲನೆ ಯಾವ ರೀತಿ ಪ್ರಾಮುಖ್ಯತೆ ಪಡೆದಿತ್ತು ಎಂಬುದನ್ನು ವಿವರಿಸುತ್ತದೆ.

**ಜನಪದ ವಿಶ್ವಕೋಶ:** ಜನಪದ ಆಚರಣೆಗಳ ಸಂಪ್ರದಾಯ ರೀತಿ ನೀತಿಗಳ ಕುರಿತು ವಿವರಿಸುವ ಮೈಸೂರು ವಿಶ್ವ ವಿದ್ಯಾಲಯದ ಮಹತ್ವದ ಕೃತಿಯಾಗಿದೆ. ಜನಪದ ಆಚರಣೆಗಳನ್ನು ವಿವರಿಸುವ ಸಂದರ್ಭದಲ್ಲಿ ಅನೇಕ ಗೋ ಸಂಬಂಧಿ ಗ್ರಾಮೀಣ ಆಚರಣೆಗಳ ಕುರಿತು ಕೃತಿ ವಿವರಿಸುತ್ತದೆ.

**ದಕ್ಷಿಣ ಭಾರತದ ಜನಪದ ಕೋಶ ಸಂಪುಟಗಳು:** ಹಂಪಿ ಕನ್ನಡ ವಿಶ್ವವಿದ್ಯಾಲಯದ "ದಕ್ಷಿಣ ಭಾರತದ ಜನಪದ ಕೋಶ ಸಂಪುಟಗಳು" ಮುಖ್ಯವಾಗಿ ಜನಪದ ಪರಂಪರೆಯ ಮೂಲ, ರೂಢಿ ಸಂಪ್ರದಾಯಗಳನ್ನು ಹಾಗೂ ಆಚರಣೆಯ ವಿಧಾನಗಳನ್ನು ಪ್ರದರ್ಶನದ ರೀತಿ ನೀತಿಗಳನ್ನು ಕೃತಿ ಸಮಗ್ರವಾಗಿ ವಿವರಿಸುತ್ತದೆ. ಗೋ ಸಂಬಂಧಿ ಗ್ರಾಮೀಣ ಆಚರಣೆಗಳನ್ನು ಕುರಿತು ಅನೇಕ ಉಲ್ಲೇಖಗಳು ಕೃತಿಯಲ್ಲಿ ಲಭ್ಯ ಇವೆ.

**ಕರ್ನಾಟಕದ ಜನಪದ ಆಚರಣೆಗಳು** : ಸ.ಚಿ.ರಮೇಶ್ ಅವರ ಕೃತಿಯಾಗಿದ್ದು ಹಂಪಿ ಪ್ರಸಾರಾಂಗ ಪ್ರಕಟಿಸಿದೆ. ಜನಪದ ಆಚರಣೆಗಳನ್ನೇ ಪ್ರಧಾನವಾಗಿ ಗಮನಿಸಿ, ವಿವರವಾಗಿ ವಿವರಿಸುವ ಮೌಲ್ಯಯುತ ಕೃತಿ ಇದಾಗಿದೆ.

ಈ ಎಲ್ಲ ಅಂಶಗಳನ್ನು ಗಮನಿದಾಗ "ತುರುಗೊಳ್ ಸಂಕಥನವನ್ನು" ಹೊರತುಪಡಿಸಿದರೆ ಇನ್ನುಳಿದ ಯಾವುದೇ ಕೃತಿಗಳು "ತುರುಗೊಳ್ ಕದನಗಳನ್ನು ಪ್ರಧಾನ ವಿಚಾರವಾಗಿ ವಿವರಿಸಲ್ಪಟ್ಟ ಕೃತಿಗಳಾಗಲೇ ಇಲ್ಲ. ಈ ಕೊರತೆಯನ್ನು **"ಗೋಗ್ರಹಣ–ಒಂದು ಅಧ್ಯಯನ"** ಸಂಶೋಧನಾ ಮಹಾಪ್ರಬಂಧ ತುರುಗೊಳ್ ಕದನಗಳ ಕುರಿತ ಪೂರ್ಣ ಪ್ರಮಾಣದ ವಿವರಗಳನ್ನೊಳಗೊಂಡ ಕೃತಿ. ಈ ಕೃತಿಯು ಒಂದು ಭೌಗೋಳಿಕ ವ್ಯಾಪ್ತಿಯ ಎಲ್ಲ ತುರುಗೊಳ್ ಶಾಸನಗಳನ್ನು ಅಧ್ಯಯನ ಮಾಡುವ ಮೂಲಕ ಈ ಅಧ್ಯಯನ ಕ್ಷೇತ್ರದ ಕೊರತೆಯನ್ನು ತುಂಬಿಕೊಟ್ಟಿದೆ. ತುರುಗೊಳ್ ಕದನಗಳನ್ನು ಧಾರ್ಮಿಕ, ಸಾಮಾಜಿಕ, ಆರ್ಥಿಕ, ಹಾಗೂ ವೀರಮೌಲ್ಯಗಳ ವೀರಪರಂಪರೆಯಲ್ಲಿ ಪ್ರಧಾನವಾದ ಯುದ್ಧ ಪ್ರಕಾರವಾಗಿ ಶಾಸನಾಧಾರಿತವಾಗಿ ನಿರೂಪಿಸುತ್ತದೆ. ಈ ಎಲ್ಲಾ ಹಿರಿಯರ ಕೃತಿಗಳು ನನ್ನ ಸಂಶೋಧನಾ ಕ್ಷೇತ್ರಕ್ಕೆ ಬೆಳಕು ನೀಡಿ, ವಿವರವಾದ ಅಧ್ಯಯನಕ್ಕೆ ಆಧಾರಗಳನ್ನು ಒದಗಿಸಿವೆ. ಇವುಗಳ ಜೊತೆಗೆ ಸಂಶೋಧನಾ ಕಾರ್ಯದಲ್ಲಿ ನಾನು ಕೈಗೊಂಡಿರುವ ಕ್ಷೇತ್ರಕಾರ್ಯ, ಹಾಗೂ ಛಾಯಾ ಚಿತ್ರಗಳು ಪ್ರಬಂಧದ ಮೌಲ್ಯವನ್ನು ಹೆಚ್ಚಿಸಿವೆ. ಕನ್ನಡ ಸಾಹಿತ್ಯದಲ್ಲಿ ಒಂದು ನಿರ್ದಿಷ್ಟ ಭೂ ಪ್ರದೇಶವನ್ನು ಗುರುತಿಸಿಕೊಂಡು ತುರುಗೊಳ್ ಕದನಗಳ ಅಧ್ಯಯನ ನಡೆಸಿರುವುದು ಗ್ರಂಥದ ಮೌಲ್ಯವನ್ನು ಹೆಚ್ಚಿಸಿವೆ.

## ಅಧ್ಯಾಯ: ಎರಡು

# ಪಶುಪಾಲನೆಯ ಇತಿಹಾಸ

ಭಾರತ ಮೂಲತಃ ಕೃಷಿ ಪ್ರಧಾನ ದೇಶವಾಗಿದ್ದು ಕೃಷಿ ನಮ್ಮ ಮೂಲ ಕಸುಬಾಗಿದೆ. ಈ ಕಾರಣದಿಂದಲೇ ರೈತ ಭಾರತದ ಬೆನ್ನೆಲುಬು ಎಂದು ಮಹಾತ್ಮ ಗಾಂಧೀಜಿಯವರು ಹೇಳಿರುವರು. ಕೃಷಿಚಟುವಟಿಕೆಯಲ್ಲಿ ಮಾನವನಿಗಿರುವಷ್ಟೇ ಪ್ರಾಮುಖ್ಯತೆ ಪಶುಗಳಿಗಿದೆ. ಹೀಗಾಗಿ ನಮ್ಮ ಸಂಸ್ಕೃತಿಯಲ್ಲಿ ಪಶು ಸಂಸ್ಕೃತಿಯು ಹಾಸು ಹೊಕ್ಕಾಗಿ ಬೆರೆತು ಹೋಗಿದೆ. ಭಾರತದಲ್ಲಿ ಪಶುಪಾಲನೆಯ ಇತಿಹಾಸದ ಹೆಜ್ಜೆಯ ಗುರುತುಗಳನ್ನು ಹುಡುಕುತ್ತಾ ಹೋದಾಗ ಆ ದಾರಿ ನಮ್ಮನ್ನು ಕ್ರಿಸ್ತಪೂರ್ವಕ್ಕೆ ಕರೆದೊಯ್ಯುತ್ತದೆ. ಮಾನವನ ಬದುಕಿನ ವಿಕಾಸದ ಚರಿತ್ರೆಯ ಅಧ್ಯಯನವನ್ನು ಚರಿತ್ರೆಕಾರರು ಈ ಕೆಳಕಂಡಂತೆ ವಿಭಾಗಿಸಿಕೊಂಡಿದ್ದಾರೆ.

**ಪ್ರಾಗೈತಿಹಾಸಿಕ ಕಾಲ(PRE–HISTORIC PERIOD)**

ಅಲಿಖಿತ ಆಕರಗಳನ್ನು ಆಧರಿಸಿ ಬರೆದಿರುವ ಇತಿಹಾಸದ ಕಾಲವನ್ನು ಇತಿಹಾಸ ಪೂರ್ವಕಾಲ (ಪ್ರಾಗೈತಿಹಾಸಿಕ ಕಾಲ) ಎಂದು ಕರೆಯಲಾಗಿದೆ. ಈ ಕಾಲಘಟ್ಟದಲ್ಲಿ ಜನರು ಬಳಸಿರುವ ಆಯುಧೋಪಕರಣಗಳು ಹಾಗೂ ಅವರ ನೈಪುಣ್ಯತೆಯನ್ನು ಆಧರಿಸಿ ಇತಿಹಾಸ ಪೂರ್ವಕಾಲವನ್ನು ಮುಖ್ಯವಾಗಿ ೫ ಭಾಗಗಳಾಗಿ ವರ್ಗೀಕರಿಸಲಾಗಿದೆ. ಅವುಗಳೆಂದರೆ,

೧. ಹಳೆಯ ಶಿಲಾಯುಗ (Palaeolithic age)

೨. ಮಧ್ಯ ಶಿಲಾಯುಗ (Mesolithic age)

೩. ನವ ಶಿಲಾಯುಗ (Neolithic age)

೪. ತಾಮ್ರ ಶಿಲಾಯುಗ (Cholcolithic age)

೫. ಕಬ್ಬಿಣಯುಗ ಅಥವಾ ಬೃಹತ್ ಶಿಲಾಯುಗ (Megalithic age)

ಎಂದು ವರ್ಗೀಕರಿಸಿ ಮಾನವನ ಇತಿಹಾಸದ ಹೆಜ್ಜೆ ಗುರುತುಗಳನ್ನು ಹುಡುಕಲು ಪ್ರಯತ್ನಿಸಿದ್ದಾರೆ.

ಅವುಗಳಲ್ಲಿ ಹಳೆಯ ಶಿಲಾಯುಗದ(**Palaeolithic age**) ಕಾಲವನ್ನು ಗಮನಿಸಿದಾಗ ಅಲೆಮಾರಿತನದಿಂದ ನೆಲೆನಿಂತ ಬದುಕಿನ ಆರಂಭದ ಹಂತಗಳನ್ನು ಗುರುತಿಸಬಹುದು. ಪ್ರಾಣಿಗಳಂತೆ ತಿರುಗುತ್ತ, ಆಹಾರಕ್ಕಾಗಿ ಬೇಟೆಯಾಡಿ ಬದುಕುತ್ತಿದ್ದ ಮಾನವನು ಕಾಲಕ್ರಮೇಣ ಸಂಘಟಿತನಾಗಿ ಸಮೂಹ ರಚನೆಯಲ್ಲಿ ಬೇಟೆಯಾಡತೊಡಗಿದನು. ಆ ಸಮೂಹಗಳು ಹಲವು ದಿಕ್ಕಿಗೆ ಚದುರಿ ಗುಂಪುಗಳಿಗೆ ಅಗತ್ಯ ಆಹಾರ ಹುಡುಕುತ್ತಾ ಬೇರೆ ಬೇರೆ ದಾರಿಗಳಲ್ಲಿ ಸಾಗಿ ವಿಭಿನ್ನ ಸಮುದಾಯಗಳಾದವು. ಈ ಸಮುದಾಯಗಳು ಪ್ರಕೃತಿಯ ವಾತಾವರಣಕ್ಕೆ ತಕ್ಕಂತೆ ಉಡುಗೆ, ತೊಡುಗೆ, ಆಯುಧಗಳ ಬಳಕೆ, ಪಾತ್ರೆಗಳ ಬಳಕೆ, ಮುಂತಾದ ಜೀವನ ವಿಧಾನಗಳನ್ನು ರೂಪಿಸಿಕೊಂಡವು. ಕಾಲಕ್ರಮೇಣ ಬೆಂಕಿಯ ಉಪಯೋಗ ಮತ್ತು ಚಕ್ರದ ಉಪಯೋಗ ಹಾಗೂ ಲೋಹದ ಬಳಕೆ ಮಾನವನ ಇತಿಹಾಸದಲ್ಲಿ ದೊಡ್ಡ ಕ್ರಾಂತಿಯನ್ನು ಉಂಟುಮಾಡಿತು. ಮಾನವ ಆಹಾರವನ್ನು ಎಂದು ಸುಟ್ಟು ತಿನ್ನಲಾರಂಭಿಸಿದನೋ ಅಂದಿನಿಂದ ಒಂದೆಡೆ ಕಲೆತು ಆಹಾರವನ್ನು ತಿನ್ನುವ ಅಭ್ಯಾಸ ರೂಢಿಯಾಗಿರಬೇಕು. ಇದರಿಂದಾಗಿ ಬೇಟೆ ಮತ್ತು ಆಹಾರ ತಯಾರಿಕೆಯಲ್ಲಿ ಒಂದೆಡೆ ನಿಲ್ಲುವ ಪ್ರಯತ್ನಗಳಾದವು. ಮಾನವನು ಎರೆಡು ಕಾರಣಗಳಿಂದ ಪ್ರಾಣಿ ಬೇಟೆ ರೂಡಿಸಿಕೊಂಡನು. ಒಂದು ರಕ್ಷಣೆಗಾಗಿ ಇನ್ನೊಂದು ಆಹಾರಕ್ಕಾಗಿ. ರಕ್ಷಣಾತ್ಮಕವಾಗಿ ಮಾನವ ಬುದ್ಧಿಶಕ್ತಿ ಬೆಳೆದಂತೆಲ್ಲ ಆಹಾರಕ್ಕಾಗಿ ಬೇಟೆಯಾಡುವ ವಿಧಾನಗಳೂ ಬದಲಾದವು. ಯಾವಾಗ ಮಾನವನು ನೆಲೆ ನಿಲ್ಲಲು ಪ್ರಾರಂಭಿಸಿದನೋ ಅಂದಿನಿಂದ ಅವನ ಜೀವನ ವಿಧಾನ ಸ್ಥಿರತೆಯೆಡೆಗೆ ಸಾಗಿತು. ಮನೆ ಕುಟುಂಬದ ಪರಿಕಲ್ಪನೆಗಳು ಬೆಳೆಯಿತು. ಆಹಾರ ಸಂಪಾದನೆಯ ಪ್ರಮುಖ ಮಾರ್ಗವಾದ ಬೇಟೆ ಕ್ರಿಯೆಯಲ್ಲಿ ಪರಿಣಿತನಾದ ಮಾನವ ಕಾಲಕ್ರಮೇಣ ದೈಹಿಕ ಶಕ್ತಿಯ ಜೊತೆಗೆ ಬುದ್ಧಿ ಶಕ್ತಿಯನ್ನೂ ಬಳಸಲಾರಂಭಿಸಿದ. ಇದರಿಂದ ತನ್ನ ಶಕ್ತಿಗೆ ಮೀರಿದ ಪ್ರಾಣಿಗಳನ್ನು ಉಪಾಯದಿಂದ ಸುಲಭವಾಗಿ ಬೇಟೆಯಾಡತೊಡಗಿದ. ಕಾಲ ಕ್ರಮೇಣ ತನ್ನ ಕೆಲಸಗಳ ಸಹಕಾರಕ್ಕಾಗಿ ನಾಯಿ ಮುಂತಾದ ಪ್ರಾಣಿಗಳನ್ನು ಬಳಸತೊಡಗಿದ. ತನಗೆ ಅತಿ ಅವಶ್ಯವಾದ ಪ್ರಾಣಿಗಳನ್ನು ತನ್ನ ಜೊತೆಯಲ್ಲೇ ಸಾಕತೊಡಗಿದ.

**ಗಾರ್ಡನ್ ಚೈಲ್ಡ್** ಹೇಳುವಂತೆ ಬಹುಶಃ ಕ್ರಿ.ಪೂ. ೬೦೦೦ ವರ್ಷಗಳಿಂದೀಚೆಗೆ ಮನುಷ್ಯ ತನ್ನ ಪರಿಸರದ ವಿರುದ್ಧ ಆಕ್ರಮಣಕಾರಿ ಪ್ರವೃತ್ತಿಯನ್ನು ಬೆಳೆಸಿಕೊಂಡು ತನ್ನ ಸುತ್ತಲ ಪ್ರಕೃತಿಯನ್ನು ಗೆಲ್ಲಲು ಹಾಗೂ ಅವನನ್ನು ಕಾಡು ಪ್ರಾಣಿಗಳಿಗಿಂತ ಭಿನ್ನವಾಗಿ, ಹಾಗೂ ಶಕ್ತಿಶಾಲಿಯಾಗಿ ಮಾಡಿದ್ದು ಸಾಂಘಿಕ ಜೀವನ ಮತ್ತು ಶಿಲಾ ಆಯುಧಗಳು.[೧] ಈ ಹಂತದಲ್ಲಿ ನೆಲೆನಿಂತ ಬದುಕು ಹಾಗೂ ಉಪಯುಕ್ತ ಪ್ರಾಣಿಗಳನ್ನು ಸಾಕುವ ವಿವರಣೆಗಳನ್ನು ಈ ಅವಧಿಯಲ್ಲಿ ಕಾಣುತ್ತೇವೆ. ಆನಂತರದ ಹಂತವನ್ನು ಮಧ್ಯ ಶಿಲಾಯುಗ ಎಂದು ಸಂಶೋಧಕರು ಗುರುತಿಸಿದ್ದಾರೆ.

## ಮಧ್ಯಶಿಲಾಯುಗ(MESOLITHIC AGE)

ಮಧ್ಯ ಶಿಲಾಯುಗದ ಕಾಲದ ಜನ ಜೀವನದಲ್ಲಿ ಅನೇಕ ಬಗೆಯ ಸುಧಾರಣೆಗಳು ಕಂಡುಬರತೊಡಗಿದವು. ಮಾನವ ಅಲೆಮಾರಿತನದಿಂದ ವಾಸಕ್ಕೆ ಯೋಗ್ಯವಾದ, ಪ್ರಕೃತಿಯ ವೈಪರೀತ್ಯಗಳಾದ ಮಳೆ, ಬಿಸಿಲು, ಚಳಿ, ಬೆಂಕಿಗಳಿಂದ ರಕ್ಷಣೆ ಪಡೆಯುವ ನಿಟ್ಟಿನಲ್ಲಿ ಕಲ್ಲಿನ ಗುಹೆ, ಬಂಡೆಗಳ ಅಡಿಯಲ್ಲಿ, ಕಾಡು ಪ್ರಾಣಿಗಳಿಂದಲೂ ರಕ್ಷಣೆ ಪಡೆಯಲು ಎತ್ತರವಾದ ಬೆಟ್ಟಗಳು ಸೂಕ್ತ ಎಂದು ಕಂಡುಕೊಂಡನು. ದೂರದಲ್ಲಿ ನಡೆಯಬಹುದಾದ ವಿದ್ಯಮಾನಗಳನ್ನು ಗಮನಿಸಲು ಬೆಟ್ಟ ಪ್ರದೇಶಗಳ ವಾಸ ಅವಕಾಶ ಮಾಡಿಕೊಟ್ಟವು. ಬೇಟೆಯ ಸಮಯದಲ್ಲಿ ಬೇಟೆಯ ಗುರಿಯನ್ನು, ದಿಕ್ಕನ್ನು, ನಿಗದಿಪಡಿಸಿ ಬೇಟೆಗೆ ಹೊರಡಲು, ದೂರದಿಂದಲೇ ಪ್ರಾಣಿಗಳ ಚಲನವಲನಗಳನ್ನು ಗಮನಿಸತೊಡಗಿದನು. ಬೆಟ್ಟ ಪ್ರದೇಶಗಳನ್ನು ಏರಿ ಸುರಕ್ಷಿತ ಭೇಟೆಯ ವಿಧಾನಗಳನ್ನು ಅನುಸರಿಸತೊಡಗಿದನು. ಕಾಲ ಕ್ರಮೇಣ ಅವನ ಬೇಟೆಯ ವಿಧಾನಗಳಲ್ಲೂ ಅನೇಕ ಮಾರ್ಪಾಡುಗಳಾದವು. ಮಾನವ ಒಂದೆಡೆ ಗುಂಪಾಗಿ ನೆಲೆನಿಂತಿದ್ದರಿಂದ ಅವನ ಆಹಾರದ ಅಗತ್ಯಗಳು ಹೆಚ್ಚುತ್ತಾ ಹೋದವು. ಹಾಗಾಗಿ ದೊಡ್ಡ ದೊಡ್ಡ ಪ್ರಾಣಿಗಳನ್ನು ಗುಂಪಾಗಿ ಸೇರಿ ಬೇಟೆಯಾಡುವುದು ಅನಿವಾರ್ಯ ಮತ್ತು ಅಸ್ತಿತ್ವದ ಪ್ರಶ್ನೆಯಾಯಿತು. ತನಗಿಂತಲೂ ಶಕ್ತಿಶಾಲಿಯಾದ ಹಾಗೂ ವೇಗವಾಗಿ ಓಡುವ ಪ್ರಾಣಿಗಳನ್ನು ಬೇಟೆ ಆಡಲು ಮಾನವ ಒಗ್ಗಟ್ಟಾಗಿ ಬೇಟೆಯಾಡುವುದು ಅನಿವಾರ್ಯವಾಯಿತು. ಈ ದೊಡ್ಡ ಬೇಟೆಯನ್ನು ನಿಗದಿತ ದಿನಗಳಲ್ಲಿ ಆಡುತ್ತಿದ್ದರು. ಉಳಿದ ದಿನಗಳಲ್ಲಿ ಆಹಾರಕ್ಕಾಗಿ ಎಮ್ಮೆ, ಆಕಳು, ಕುರಿ, ಹೋತ, ಹಂದಿ, ಕರಿಬಾತು, ಮೊಲ, ನರಿ, ಮೀನು, ಸಾರಂಗ, ಆಮೆ ಇನ್ನೂ ಮುಂತಾದ ಪ್ರಾಣಿಗಳನ್ನು (ಹೊಂಚು ಹಾಕಿ ಕೆಲವೇ ವ್ಯಕ್ತಿಗಳು ಬೇಟೆಯಾಡಲು ಸಾಧ್ಯವಿದ್ದರಿಂದ)ಬಳಸುತ್ತಿದ್ದನು. ಈ ಅವಧಿಯಲ್ಲಿ ಕಂಡುಬಂದ ಪ್ರಮುಖ ಬೆಳವಣಿಗೆಯೆಂದರೆ ಬೇಸಾಯ ಮಾಡುವುದು. ಅಂದರೆ ಮಾನವನ ಭವಿಷ್ಯದ ಅಗತ್ಯಗಳಿಗಾಗಿ ಆಹಾರ ಉತ್ಪಾದನೆಯ ವಿಧಾನಗಳು ಬೆಳವಣಿಗೆಯಾದದ್ದು, ಈ ಯುಗದ ವಿಶೇಷ. ಆದ್ದರಿಂದಲೇ ಈ ಯುಗವನ್ನು **'ಸ್ಥಿತ್ಯಂತರ ಶಿಲಾಯುಗ'**ಎಂದು ಕರೆಯಲಾಗಿದೆ.[೨]

ಈ ಒಂದೊಂದು ಹಂತಗಳೂ ನೂರಾರು ವರ್ಷ ನಡೆಯುತ್ತಾ ಮಾನವನ ಜೀವನದ ವಿಧಾನಗಳು ಬದಲಾದವು. ಪ್ರಾಣಿ ಪ್ರಪಂಚದಿಂದ ಭಿನ್ನವಾದ ಆಲೋಚನೆಗಳನ್ನು, ಜೀವನ ವಿಧಾನಗಳನ್ನು ರೂಡಿಸಿಕೊಂಡು ನೆಲೆ ನಿಂತ ಮಾನವನ ಬದುಕು ಹೊಸರೀತಿಯ ಜೀವನಕ್ಕೆ ಸಾಕ್ಷಿಯಾಯಿತು. ಆ ಜೀವನ ವಿಧಾನವನ್ನು ನಾವು **"ನವ ಶಿಲಾಯುಗ(NEOLITHIC AGE)"** ಎನ್ನುತ್ತೇವೆ.

**ನವಶಿಲಾಯುಗ(NEOLITHIC AGE)**

ಆದಿ ಮಾನವನು ಬಹುಕಾಲದವರೆಗೆ ಬೇಟೆಯಾಡಿದ ಮಾಂಸವನ್ನು ತಮ್ಮ ಆಹಾರವನ್ನಾಗಿ ಉಪಯೋಗಿಸುತ್ತಿದ್ದನು. ಕಾಲ ಕ್ರಮೇಣ ಅವನು ಪರಿಸರದಲ್ಲಿ ದೊರೆಯುತ್ತಿದ್ದ ಹಣ್ಣುಗಳು, ಗೆಡ್ಡೆಗೆಣಸುಗಳನ್ನು ತಮ್ಮ ಆಹಾರವನ್ನಾಗಿ ಬಳಸಲು ಪ್ರಾರಂಭಿಸಿದನು. ಒಂದು ಕಥೆಯ ಪ್ರಕಾರ ಒಂದು ದಿನ(ಕ್ರಿ.ಪೂ ೯೦೦೦)ಅಂದರೆ ಸು. ೧೧,೦೦೦ ವರ್ಷಗಳ ಹಿಂದೆ ಒಬ್ಬ ಹುಡುಗ ಕಾಡಿನಲ್ಲಿ ಸಿಕ್ಕ ಗೋಧಿಕಾಳುಗಳನ್ನು ತಾಯಿಗೆ ಕೊಡುತ್ತಾನೆ. ಆಕೆ ಆ ಕಾಳುಗಳನ್ನು ಹಿಟ್ಟುಮಾಡಲು ಕಲ್ಲುಗಳನ್ನು ಬಳಸುವಾಗ ಕೆಲವು ಕಾಳುಗಳು ನೆಲದ ಮೇಲೆ ಬಿದ್ದವು. ಕೆಲವು ವಾರಗಳ ನಂತರ ಇದೇ ಕುಟುಂಬ ಹಿಂದೆ ಉಳಿದುಕೊಂಡ ಜಾಗದ ಬಳಿ ಹಾದು ಹೋಗುವಾಗ ಆ ಗೋಧಿ ಗಿಡಗಳು ತೆನೆ ಬಿಟ್ಟದ್ದನ್ನು ಕಂಡರು. ಬೀಜಗಳನ್ನು ಭೂಮಿಗೆ ಸೇರಿಸಿದರೆ ಬೆಳೆ ತೆಗೆಯಬಹುದು ಎಂಬುದನ್ನು ಕಲಿತ. ಹೀಗೆ ಮಾನವನು ಆಹಾರಕ್ಕಾಗಿ ಅಲೆಯದೆ ಒಂದು ಕಡೆ ನೆಲೆನಿಂತು ಕೃಷಿ ಚಟುವಟಿಕೆ ಕೈಗೊಳ್ಳಲು ಸಹಾಯಕವಾಯಿತು.[೩]

ವ್ಯವಸಾಯದ ಜೊತೆಗೆ ಮೀನು ಹಿಡಿಯುವುದು, ಹಾಗೂ ಅಗತ್ಯಕ್ಕೆ ತಕ್ಕ ಪ್ರಾಣಿಗಳನ್ನು ಆಹಾರಕ್ಕಾಗಿ ಸಾಕುವುದು ಆರಂಭವಾಯಿತು. ವ್ಯವಸಾಯವೇ ಮುಖ್ಯ ವೃತ್ತಿ ಆಗುವತ್ತ ಮಾನವನ ಜೀವನ ಚಕ್ರ ಸಾಗಿತು. ಆಹಾರದ ಕ್ರಮದಲ್ಲಿ ಅನೇಕ ಬದಲಾವಣೆಗಳಾದವು. ಧಾನ್ಯ ಬಳಸುವುದನ್ನು ಆರಂಭಿಸಿದ ಮಾನವ, ಧಾನ್ಯಗಳನ್ನು ಬೇಯಿಸುವ ಸಲುವಾಗಿ ಹಾಗೂ ಧಾನ್ಯಗಳನ್ನು ಸಂಗ್ರಹಿಸಲು, ಮಡಕೆ ಮಾಡುವುದನ್ನು ಕಲಿತ. ನದಿಯ ತೀರದಲ್ಲಿಯೋ ಅಥವಾ ಕೆರೆಯ ಬಳಿಯಲ್ಲಿಯೋ ಇವರು ಬೀಡು ಬಿಟ್ಟಿರುತ್ತಿದ್ದರಿಂದ ನದಿಪಾತ್ರದಲ್ಲಿ ಜೇಡಿಮಣ್ಣು, ಮತ್ತು ಮೆದುಮಣ್ಣು, ಸುಲಭವಾಗಿ ದೊರೆಯುತ್ತಿದ್ದರಿಂದ ಕುಂಬಾರಿಕೆ ಕಲಾತ್ಮಕತೆಯನ್ನು ಪಡೆಯಲು ಹೆಚ್ಚು ಕಾಲ ತೆಗೆದುಕೊಳ್ಳಲಿಲ್ಲ. ಉತ್ಖನನದ ವೇಳೆ ದೊರೆತಿರುವ ಅನೇಕ ಬಗೆಯ ಧಾನ್ಯಗಳು ನವಶಿಲಾಯುಗದ ಜನರು ವ್ಯವಸಾಯವನ್ನು ಅವಲಂಬಿಸಿದ್ದರು ಎಂಬುದಕ್ಕೆ ಸಾಕ್ಷಿಯಾಗಿವೆ. ಈ ವೇಳೆಗೆ ಪಶುಪಾಲನೆಯನ್ನು ರೂಢಿಸಿಕೊಂಡದ್ದಕ್ಕೆ ಅಂದಿನ ಮಣ್ಣಿನ ಮಡಿಕೆ ಹಾಗೂ ಪಾತ್ರೆಗಳ ಮೇಲಿನ ಚಿತ್ರಕಲೆಯಲ್ಲಿ ದೊರೆತಿರುವ ಉದ್ದಕೊಂಬಿನ ಹೋರಿಯ ದೃಶ್ಯ ಸಾಕ್ಷಿಯಾಗಿದೆ.

ಪ್ರಪಂಚದ ಅತ್ಯಂತ ಪ್ರಾಚೀನ ನಾಗರಿಕತೆಗಳಲ್ಲಿ **ಹರಪ್ಪ ನಾಗರಿಕತೆ** ಅಥವಾ **ಸಿಂಧೂ ಬಯಲಿನ ನಾಗರಿಕತೆ** ಪ್ರಮುಖವಾದದ್ದು. ಈ ನಾಗರಿಕತೆ ಭಾರತದಲ್ಲಿ ಅಸ್ತಿತ್ವ ಹೊಂದಿತ್ತು ಎಂಬ ವಿಚಾರ ೨೦ನೇ ಶತಮಾನದ ಆರಂಭದವರೆಗೂ ತಿಳಿದಿರಲಿಲ್ಲ. ಕ್ರಿ.ಶ. ೧೮೫೬ರಲ್ಲಿ ಈ ನಾಗರಿಕತೆಯ ಕುರುಹುಗಳು ವಾಯುವ್ಯ ರೈಲ್ವೇ ಹಳಿ ನಿರ್ಮಾಣ ಕಾರ್ಯದಲ್ಲಿ ದೊರೆತರೂ ಆ ಬಗ್ಗೆ ಯಾರೂ ಆಸಕ್ತಿಯನ್ನು ತಾಳಲಿಲ್ಲ. ೧೮೭೨ರಲ್ಲಿ **ಅಲೆಕ್ಸಾಂಡರ್ ಕನ್ನಿಂಗ್ ಹ್ಯಾಂ**,

ಹರಪ್ಪ ಬಳಿಯ ಕೆಲವು ಮುದ್ರೆಗಳನ್ನು ಪತ್ತೆ ಹಚ್ಚಿದರು. ೧೯೨೧-೨೨ರಲ್ಲಿ **ದಯಾರಾಂ ಸಹಾನಿ**, ಹರಪ್ಪ ನಿವೇಶನವನ್ನು ಹಾಗೂ ೧೯೨೨-೨೩ರಲ್ಲಿ **ಆರ್.ಡಿ.ಬ್ಯಾನರ್ಜಿ**ಯವರು ಮೊಹೆಂಜೋದಾರೋ ನಿವೇಶನವನ್ನು ಉತ್ಖನನ ಮಾಡಿದ್ದರ ಫಲವಾಗಿ ಭಾರತದಲ್ಲಿ ನಾಗರೀಕತೆ ಆರಂಭವಾದದ್ದು ಆರ್ಯರ ಆಗಮನದ ನಂತರವಲ್ಲ ಎಂಬುದು ಮನವರಿಕೆಯಾಗಿದೆ. ಭಾರತ ಕ್ರಿ.ಪೂ. ೩೦೦೦ ವರ್ಷದಲ್ಲಿ ಅತ್ಯುತ್ತಮ ನಾಗರಿಕತೆಯನ್ನು ಹೊಂದಿದ್ದ ನಾಡಾಗಿತ್ತು ಎಂಬುದು ಸ್ಪಷ್ಟವಾಗಿದೆ.[೪]

ಈ ನಾಗರಿಕತೆಯ ಉತ್ಖನನದ ವೇಳೆಯಲ್ಲಿ ದೊರೆತಿರುವ ಮುದ್ರೆಗಳು, ವಿಗ್ರಹಗಳು ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಎಮ್ಮೆಯ ತಲೆಯೊಂದಿಗೆ ಯೋಗಿಯ ಭಂಗಿಯಲ್ಲಿ ಕುಳಿತಿರುವ ಬಹುಶಃ ಮೂರು ಮುಖಗಳನ್ನು ಹೊಂದಿರುವ ಮತ್ತು ಕಾಡು ಪ್ರಾಣಿಗಳಿಂದ ಸುತ್ತುವರೆದಿರುವ ಉಬ್ಬು ಚಿತ್ರವನ್ನು "ಶಿವ ಅಥವಾ ಪಶುಪತಿ" (ಪ್ರಾಣಿಗಳ ಒಡೆಯ) ಎಂದು ಗುರುತಿಸಬಹುದು. ಇನ್ನೊಂದು ಬಗೆಯಲ್ಲಿ ಯೋಚಿಸುವುದಾದರೆ ಆತ ಹೆಚ್ಚು ಪ್ರಾಣಿಗಳನ್ನು ಸಾಕಿದ ಅಥವಾ ಪಳಗಿಸಿದ ನಾಯಕ ಎಂದು ಊಹಿಸಲು ಅವಕಾಶವಿದೆ. ಹರಪ್ಪ ಸಂಸ್ಕೃತಿಯ ಜನತೆ ಮಾತೃದೇವತೆ, ಹಾಗೂ ಶಿವನ ಆರಾಧಕರಾಗಿದ್ದರು ಎಂದು ಊಹಿಸಲು ಅವಕಾಶವಿದೆ. ಬಿಡುವಿನ ವೇಳೆಯಲ್ಲಿ ಮನೆಯೊಳಗಿನ (INDOOR) ಹಾಗೂ ಮನೆಹೊರಗಿನ ಆಟಗಳನ್ನು(OUTDOOR)ಆಡುತ್ತಿದ್ದರು. ಮನೆ ಹೊರಗಿನ ಆಟಗಳಲ್ಲಿ ಗೂಳಿ ಕಾಳಗ, ಬೇಟೆ ಹಾಗೂ ಕೋಳಿ ಕಾಳಗ ಇದ್ದವು. ಗೂಳಿಕಾಳಗ ಅಂದಿನ ಕಾಲದಲ್ಲಿ ಕಾಡುಗಳಲ್ಲಿ ಅಲೆಯುತ್ತಿದ್ದ ಕಾಡು ದನಗಳನ್ನು ಪಳಗಿಸುವ ಕ್ರಮವಾಗಿದ್ದಿರಬೇಕು. ಅಥವಾ ತಮ್ಮ ಬಳಿ ಅದಾಗಲೇ ಸಾಧುವಾಗಿದ್ದ ಹಸುಗಳಿಗೆ ಸಂಕರ ಮಾಡುವ ಉದ್ದೇಶದಿಂದ ಕಾಡಿನ ಬಲಿಷ್ಟ ಗೂಳಿಗಳನ್ನು ತಂದು ಅವುಗಳನ್ನು ಪಳಗಿಸಿದ್ದಿರಬೇಕು. ಇವೆಲ್ಲವೂ ಪಶುಪಾಲನೆ ಆವೇಳೆಗೆ ಆರಂಭವಾಗಿತ್ತು ಎಂಬುದಕ್ಕೆ ಸಾಕ್ಷಿಯಾಗಿವೆ.

ಈ ಗೂಳಿಕಾಳಗ ಅಂದಿನ ಜನಪ್ರೀಯ ಕ್ರೀಡೆಯಾಗಿತ್ತು. ಈ ಕ್ರೀಡೆ ಅಂದಿನ ಪಶುಪಾಲನೆಯ ಆರಂಭದ ಹಂತದ ಬಗ್ಗೆ ಬೆಳಕು ಚೆಲ್ಲುತ್ತದೆ. ಪಶುಪಾಲನೆಯ ಆರಂಭಿಕ ಹಂತಗಳಲ್ಲಿ ಬಲಶಾಲಿ ಹೋರಿಗಳು ಜನರ ಸಂಪರ್ಕಕ್ಕೆ ಸಿಗದೆ ಕಾಡಿನಲ್ಲಿ ಇದ್ದಿರಬೇಕು. ಆ ಹೋರಿಗಳನ್ನು ಸಾಧುವಾದ ಹಸುಗಳೊಂದಿಗೆ ಸೇರಿಸುವ ಪ್ರಯತ್ನದಲ್ಲಿ ಆಗಾಗ ಹೋರಿಗಳನ್ನು ಹಿಡಿದು ಅವುಗಳನ್ನು ಪಳಗಿಸತೊಡಗಿದರು. ಅದು ಒಂದು ಕ್ರೀಡೆಯ ಸ್ವರೂಪವನ್ನು ಪಡೆದಿರಬೇಕೆಂದು ದೊರೆತಿರುವ ಉಲ್ಲೇಖಗಳಿಂದ ಖಚಿತವಾಗುತ್ತದೆ. ಕೃಷಿಗೆ ಪ್ರಾಧಾನ್ಯತೆ ಹೆಚ್ಚಿದಂತೆ, ಸ್ಥಿರ ಕೃಷಿಯು ಅತ್ಯಂತ ಮಹತ್ವ ಪಡೆದುಕೊಂಡಿತು. ಕೃಷಿ ಭೂಮಿಯನ್ನು ಉಳಲು ಎತ್ತುಗಳು ಅಗತ್ಯವಾಗಿದ್ದರಿಂದ, ಪಶುಪಾಲನೆ ಪ್ರಾಮುಖ್ಯತೆಗಳಿಸಿತು. ಈ ವೇಳೆಗೆ ಹರಪ್ಪ ಜನ ಬಲಶಾಲಿಯಾದ

ಗೂಳಿಗಳನ್ನು ಪಳಗಿಸುವ, ಆನೆಗಳನ್ನೂ ಪಳಗಿಸುವ ತಂತ್ರಗಳನ್ನು ಕಲಿತಿರಬೇಕು. ಆನೆ ಮತ್ತು ಒಂಟೆ ಸಾಕಿದ ಬಗ್ಗೆ ಅಮ್ರಿ ಬಳಿ ಲಭ್ಯವಾಗಿರುವ ಮುದ್ರೆಗಳನ್ನು ಆಧರಿಸಿ ಹೇಳಲಾಗಿದೆ. ಹರಪ್ಪ ಜನರಿಗೆ ಕುದುರೆಯ ಪರಿಚಯ ಇತ್ತೆಂದು **ಎ.ಡಿ. ಪುಸಾಲ್ಕರ್** ಅಭಿಪ್ರಾಯ ಪಡುತ್ತಾರೆ. ಅಂದಿನ ಸಮಾಜ ತಮ್ಮ ಯಾನಕ್ಕೆ ಸಮುದ್ರದಲ್ಲಿ ನೌಕೆಗಳನ್ನು ಬಳಸಿಕೊಂಡರೆ, ಭೂಸಾರಿಗೆಗೆ ಎತ್ತಿನ ಬಂಡಿ ಅಥವಾ ಚಕ್ಕಡಿಯನ್ನು ಬಳಸಿಕೊಳ್ಳುತ್ತಿದ್ದರು.[೪೪]

ಪ್ರಕೃತಿಗೆ ತಕ್ಕಂತೆ ಮನುಷ್ಯ ಬದುಕಲು ಕಲಿತುಕೊಂಡ. ಹವಾಮಾನಕ್ಕೆ ತಕ್ಕಂತೆ ಆಹಾರ ಪದ್ಧತಿಗಳು ಬದಲಾದವು. ಉಡುಗೆ-ತೊಡುಗೆಗಳು, ವಾಸದ ಸ್ಥಳಗಳು ಬೇರೆ ಬೇರೆ ರೀತಿಯ ವಿನ್ಯಾಸವನ್ನು ಪಡೆದುಕೊಂಡವು. ಬೇಟೆಗಾಗಿ ಚದುರಿದ ಮಾನವನ ಗುಂಪುಗಳು ಬೇರೆ ಬೇರೆ ಭೂಭಾಗಗಳಲ್ಲಿ, ಅಲ್ಲಿನ ಪ್ರಾಕೃತಿಕ ಅನುಕೂಲಕ್ಕೆ ತಕ್ಕಂತೆ, ಪ್ರಾಕೃತಿಕ ವಿಕೋಪಗಳಿಂದ ರಕ್ಷಣೆ ಪಡೆಯುವ ರಕ್ಷಣಾತಂತ್ರಗಳನ್ನು ಹಾಗೂ ಆ ಭಾಗದ ಪ್ರಾಣಿಗಳನ್ನು ಬೇಟೆಯಾಡಲು ಬೇಕಾದ ಬೇಟೆಯ ತಂತ್ರಗಳನ್ನು ರೂಪಿಸಿಕೊಂಡು ಬದುಕತೊಡಗಿದರು. ಅಲ್ಲಿನ ಮೂಲ ಸೌಕರ್ಯಕ್ಕೆ ತಕ್ಕಂತೆ (ಅಂದರೆ ಗದ್ದೆಗಳಲ್ಲಿ ತುಂಬಾ ಕೆಸರಿರುವ ಪ್ರದೇಶಗಳಲ್ಲಿ ಸಿಕ್ಕಿಕೊಳ್ಳದ, ಸಿಕ್ಕಿಕೊಂಡರೂ ಸುಲಭದಲ್ಲಿ ದೂಡಬಹುದಾದ, ಹಳಿಕಟ್ಟಿದ ಗಾಡಿಯನ್ನು ಬಳಸಿಕೊಳ್ಳುವಂತೆ, ರಸ್ತೆ ಚೆನ್ನಾಗಿರುವ, ನೀರಾವರಿ ಪ್ರದೇಶಗಳಲ್ಲಿ ಟಯರ್ ಗಾಡಿಗಳನ್ನು ಬಳಸುತ್ತಿರುವಂತೆ) ಬದಲಾದರು. ಪ್ರಕೃತಿದತ್ತವಾಗಿ ದೊರೆಯುವ ಪ್ರಾಣಿಗಳನ್ನೇ ಅವರು ಸಾರಿಗೆಗಾಗಿ ಬಳಸತೊಡಗಿದರು. ಭೂ ವೈವಿಧ್ಯತೆಗೆ ಅನುಗುಣವಾಗಿ ಕೃಷಿಯಲ್ಲಿ ಬಳಸುವ ಪ್ರಾಣಿಗಳೂ ಭಿನ್ನವಾಗತೊಡಗಿದವು. ವಾಹನಕ್ಕೆ ಬಳಸುವ ಪ್ರಾಣಿಗಳ ವೇಗಕ್ಕೆ ತಕ್ಕಂತೆ, ಪ್ರಾಕೃತಿಕ ಅಗತ್ಯಕ್ಕೆ ತಕ್ಕಂತೆ ಮಾನವನ ವಿಕಾಸದ ವೇಗವೂ ಹೆಚ್ಚಾಯಿತು. ಅತಿ ವೇಗದ ಪ್ರಾಣಿ ಕುದುರೆ ಮಾನವ ಸ್ನೇಹಿಯಾಯಿತು. ಹವಾಮಾನಕ್ಕೆ ತಕ್ಕಂತೆ ಜನರ ಗುಂಪು ಇತರ ಭೂಭಾಗಗಳಿಗೆ ವಲಸೆ ಹೋಗುವುದು ಸಹಜವಾಗಿತ್ತು. ಹೀಗೆ ವಲಸೆ ಬಂದಾಗ ಆ ಸುರಕ್ಷಿತ ನೆಲೆಯನ್ನು ಆಕ್ರಮಿಸುವ ಕ್ರಮವೂ ಅಸ್ತಿತ್ವದ ಭಾಗವಾಗಿತ್ತು. ಹುಲ್ಲುಗಾವಲು, ನೀರು, ಆಹಾರಗಳಿಗಾಗಿ ದುರ್ಬಲ ಗುಂಪುಗಳ ಮೇಲೆ ಪ್ರಬಲ ಗುಂಪುಗಳು ದಾಳಿ ಮಾಡತೊಡಗಿದವು. ಅಂದಿನ ಕಾಲದ ಮಾನವನಿಗೆ ವಿಶಾಲವಾದ ಭಾವನೆಗಿಂತ ಅಸ್ತಿತ್ವದ ಪ್ರಶ್ನೆ ಹಾಗೂ ಸುರಕ್ಷತೆಯೇ ಪ್ರಧಾನವೆನ್ನಿಸಿತು. ಆದ್ದರಿಂದ ಮಾನವ ತಾನು ನೆಲೆನಿಂತ ಜಾಗದ ಒಡೆತನಕ್ಕಾಗಿ ಸಂಘರ್ಷದ ಹಾದಿ ಹಿಡಿಯಲು ಪ್ರಾರಂಭಮಾಡಿದ.

ಹೀಗೆ ಆಹಾರಕ್ಕಾಗಿ ಅಲೆಯುತ್ತಾ ಸಾಗಿದ ಗುಂಪುಗಳು ಪುನಃ ಮೂಲಸ್ಥಾನಕ್ಕೆ ಬಂದಾಗ ಶತ ಶತಮಾನಗಳೇ ಗತಿಸಿ ಅನೇಕ ಬದಲಾವಣೆಗಳಾಗಿದ್ದವು. ಅಂದರೆ ಭಿನ್ನ ಗುಂಪುಗಳ ನಡುವೆ ಅನೇಕ ಭಿನ್ನತೆಗಳಿದ್ದವು. ಈ ಭಿನ್ನತೆಗಳೇ ಆ ಗುಂಪುಗಳ ಅ ಸ್ಮಿತೆಯಾಯಿತು. ಹೀಗೆ

ಪುನಃ ಬಂದ ಒಂದು ಗುಂಪನ್ನು ಇತಿಹಾಸದ ಪುಟಗಳು ಆರ್ಯರು ಎಂದು ಗುರುತಿಸಿದೆ. (ಆರ್ಯ– ದ್ರಾವಿಡ ಎಂಬ ಕಲ್ಪನೆಗಳ ಹಿಂದೆಯೂ ವರ್ಣ ರಾಜಕೀಯವನ್ನು ಗುರುತಿಸಬಹುದು. ಇದನ್ನು ಪೂರ್ಣವಾಗಿ ಅರಿಯಲು ಭೂಗೋಳ ಹಾಗೂ ಇತಿಹಾಸವನ್ನು ಒಟ್ಟಿಗೆ ನೋಡಬೇಕಾಗಿದೆ.) ಭಾರತವನ್ನು ಆಕ್ರಮಿಸಿಕೊಂಡ ಜನರು ತಮ್ಮನ್ನು "ಆರ್ಯರು" ಎಂದು ಕರೆದುಕೊಂಡಿದ್ದಾರೆ.[೫] ಇವರು ಅಲ್ಲಿಯವರೆಗೂ ಇದ್ದ ಭಾರತದ ಮೂಲನಿವಾಸಿಗಳಾದ ದ್ರಾವಿಡರನ್ನು ಬುದ್ಧಿವಂತಿಕೆಯಿಂದ ಆಳತೊಡಗಿದರು. ಅದಾಗಲೇ ಬರೆದಿಡುವ, ಓದುವ ಕ್ರಮ ಕಲಿತ ಆರ್ಯರು ತಾವು ಶ್ರೇಷ್ಠರೆಂದು ಪ್ರತಿ ಹಂತದಲ್ಲೂ ದ್ರಾವಿಡರನ್ನು ಕೆಳಹಂತದಲ್ಲಿ ಚಿತ್ರಿಸುತ್ತಾ ಸಾಗಿದರು. ಬರವಣಿಗೆ, ಓದು, ವ್ಯವಹಾರ, ಮತ್ತು ಜೀವನಪದ್ಧತಿಗಳಲ್ಲಿ ಆರ್ಯರನ್ನೇ ಅನುಸರಿಸಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು. ಇದರಿಂದ ಆರ್ಯರು ಓದಿನಲ್ಲಿ, ಆಹಾರ ಪದ್ಧತಿಯಲ್ಲಿ, ಮತ್ತು ಜೀವನ ಕ್ರಮಗಳಲ್ಲಿ ಶ್ರೇಷ್ಠರು ಎನಿಸಿಕೊಂಡರು. ಅವರ ಮೈ ಬಣ್ಣವೂ ಇಲ್ಲಿನ ನಿವಾಸಿಗಳ ಕರಿ ಬಣ್ಣದ ಬದಲು ಬಿಳಿಯಾಗಿತ್ತು. ಅದನ್ನು ತಮ್ಮ ಜನಾಂಗದ ಶ್ರೇಷ್ಠತೆ ಎಂದು ಬಣ್ಣಿಸಿಕೊಂಡರು. ಜರ್ಮನಿಯ ವಿದ್ವಾಂಸ **ಮ್ಯಾಕ್ಸ್ ಮುಲ್ಲರ್** ಆರ್ಯರ ಮೂಲಸ್ಥಾನ ಮಧ್ಯ ಏಷ್ಯಾ ಎಂದಿದ್ದಾರೆ. ನೊಮೋದಿಕ್ ಕುಲದೇವರ ಆರಾಧಕರರಾದ ಇವರು ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುವ ಜನರಾದ ಇವರು ಸುಮಾರು ಕ್ರಿಸ್ತಪೂರ್ವ ೨೦೦೦ದಲ್ಲಿ ಮಧ್ಯ ಏಷ್ಯಾದಿಂದ ಹೊರಟು ಅಂತಿಮವಾಗಿ ಇರಾಕ್, ಬಲೂಚಿಸ್ತಾನಗಳ ಮೂಲಕ ಭಾರತವನ್ನು ಪ್ರವೇಶಿಸಿದರು.

ಆರ್ಯರು ಭಾರತವನ್ನು ಒಂದೇ ಬಾರಿಗೆ ಆಕ್ರಮಿಸಿಕೊಳ್ಳಲಿಲ್ಲ. ಈ ಕ್ರಿಯೆಗೆ ಶತಮಾನಗಳೇ ಬೇಕಾಯಿತು. ದ್ರಾವಿಡರೊಂದಿಗೆ ನಿರಂತರವಾಗಿ ಬಿತ್ತಲು ಯೋಗ್ಯವಾದ ಫಲವತ್ತಾದ ಭೂಮಿಗಾಗಿ, ನದಿಬಯಲಿಗಾಗಿ, ಹುಲ್ಲುಗಾವಲಿಗಾಗಿ, ಆಹಾರಕ್ಕಾಗಿ, ಸಾಂಸ್ಕೃತಿಕವಾಗಿ ಮತ್ತು ಬೌದ್ಧಿಕವಾಗಿಯೂ ಸಂಘರ್ಷಗಳು ನಡೆಯುತ್ತಲೇ ಇದ್ದವು. ಹಂತ ಹಂತವಾಗಿ ದ್ರಾವಿಡ ಸಂಸ್ಕೃತಿಯು ಆರ್ಯ ಸಂಸ್ಕೃತಿಯ ಅನುಕರಣೆಯನ್ನು ಮಾಡುತ್ತಾ ತಮ್ಮದೇ ಸಂಸ್ಕೃತಿಯ ಭಾಗವಾಗಿ ಒಪ್ಪಿಕೊಂಡರು. ಮೊದಲಿಗೆ ಅವರು ಸಪ್ತ ಸಿಂಧೂ ಅಂದರೆ ಏಳು ನದಿಗಳ(ಸಿಂಧು, ರಾವಿ, ಬಿಯಾಸ್, ಚೇನಾಬ್, ಝೀಲಂ, ಸಟ್ಲೇಜ್, ಮತ್ತು ಸರಸ್ವತಿ) ಬಯಲಿನಲ್ಲಿ ನೆಲೆಗೊಂಡರು. ಈ ಭಾಗಕ್ಕೆ ಅವರು ಬ್ರಹ್ಮಾವರ್ತ(ದೇವರುಗಳ ಭೂಭಾಗ) ಎಂದು ಕರೆದರು. ಈ ಸಪ್ತಸಿಂಧು ಭಾಗದಲ್ಲೇ ಆರ್ಯರು ಮೊದಲ ಸಾಹಿತ್ಯದ ದಾಖಲೆಯಾದ ಋಗ್ವೇದವನ್ನು ಸೂತ್ರಗಳ ರೂಪದಲ್ಲಿ ರಚಿಸಲಾಯಿತು. ಆರ್ಯರು ಹಳ್ಳಿಗಳಲ್ಲಿ ವಾಸಿಸುತ್ತಿದ್ದರು. ಅನೇಕ ಗುಡಿಸಲುಗಳು ಒಟ್ಟೊಟ್ಟಿಗೆ ಇರುತ್ತಿದ್ದವು. ಹೊಲಗಳ ಪಕ್ಕದಲ್ಲೇ ಅವರು ವಾಸಿಸುವ ಹಳ್ಳಿಗಳಿರುತ್ತಿದ್ದವು. ಕಾಡುಪ್ರಾಣಿಗಳು ಅಥವಾ ಬೇರೆ ಜನರು ಸುಲಭವಾಗಿ ದಾಳಿಮಾಡದಂತೆ ರಕ್ಷಣೆಗಾಗಿ ಹಳ್ಳಿಯ ಸುತ್ತಲೂ

ದನಿಗೋಡೆಯಿರುತ್ತಿತ್ತು. ಇವರು ಹಸುವಿಗೆ ತುಂಬಾ ಪ್ರಾಮುಖ್ಯತೆಯನ್ನು ನೀಡುತ್ತಿದ್ದರಿಂದ ಇದರ ತಲೆಯ ಚಿನ್ಹೆಯು ಹಳ್ಳಿಗಳ ಹೆಬ್ಬಾಗಿಲ ಮೇಲೆ ಇರುತ್ತಿತ್ತು.[೬]

ಆರ್ಯರು ಪಶುಸಂಗೋಪನೆ ಮತ್ತು ಬೇಸಾಯಗಳ ಮಿಶ್ರ ಆರ್ಥಿಕ ಪದ್ಧತಿಗಳನ್ನು ಅನುಸರಿಸುತ್ತಿದ್ದರು. ಅದರಲ್ಲಿ ಪಶುಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದರು. ಆರ್ಯರ ಆರ್ಥಿಕತೆಯ ಮೂಲ ಪಶುಪಾಲನೆಯಾಗಿತ್ತು. ಒಂದು ಕುಟುಂಬದ ಆರ್ಥಿಕ ಸ್ಥಿರತೆಯನ್ನು, ಸಂಪತ್ತನ್ನು ನಿರ್ಧರಿಸುವಾಗ ಆ ಒಂದು ಕುಟುಂಬ ಹೊಂದಿರುವ ದನಕರುಗಳ ಸಂಖ್ಯೆಯನ್ನು ಆಧರಿಸಿ ನಿರ್ಣಯಿಸಲಾಗುತ್ತಿತ್ತು. ಆಗಿನ ಕಾಲದ ಹಸುಗಳಿಗೆ ಪ್ರಕೃತಿದತ್ತ ಆಹಾರ ಸಮೃದ್ಧವಾಗಿ ದೊರೆಯು ತ್ತಿದ್ದರಿಂದ ಹಾಲಿನ ಉತ್ಪಾದನೆಯು ಹೆಚ್ಚಾಗಿತ್ತು. ಹೆಚ್ಚಾದ ಹಾಲು ಕೆಚ್ಚಲಿಗೆ ಭಾರವಾಗದಂತಿರಲು ದಿನಕ್ಕೆ ಮೂರು ಹೊತ್ತು ಹಾಲನ್ನು ಹಿಂಡುತ್ತಿದ್ದರು. ಹೆಚ್ಚಿನ ಸಂಖ್ಯೆಯ ಹಸುಗಳು ಇರುತ್ತಿದ್ದರಿಂದ, ತಮ್ಮ ತಮ್ಮ ಹಸುಗಳನ್ನು ಗುರುತಿಸಲು ಸಾಮ್ಯತೆ ಒಡೆತನವನ್ನು ಅಭಿವ್ಯಕ್ತಗೊಳಿಸಲು ಹಸುಗಳ ಕಿವಿಗಳ ಮೇಲೆ ಗುರುತನ್ನು ಹಾಕಲಾಗುತ್ತಿತ್ತು. ಈ ವೇಳೆಗೆ ಗೋವುಗಳು ಮಾಂಸಾಹಾರವಾಗಿ ಮಾತ್ರ ಪ್ರಾಮುಖ್ಯತೆಗಳಿಸದೆ, ಅವುಗಳ ಉಪ ಉತ್ಪನ್ನಗಳ ಕಾರಣಕ್ಕಾಗಿ ಪ್ರಾಮುಖ್ಯತೆಗಳಿಸಿದವು. ನಿರ್ದಿಷ್ಟ ಪ್ರಸಂಗಗಳನ್ನು ಹೊರತುಪಡಿಸಿದರೆ ಗೋಮಾಂಸ ಸೇವನೆ ನಿಷಿದ್ಧವಾಗಿತ್ತು. ಹಾಗಾಗಿಯೇ ಹಸುವನ್ನು **"ಅಘ್ನ"**(ಕೊಲ್ಲಲಾಗದ್ದು) ಎಂದು ಕರೆದರು. ಈ ವೇಳೆಗೆ ದನಗಳನ್ನು ಮೊದಲಿನಿಂದಲೂ ಆಹಾರವೆಂದು ಒಪ್ಪಿಕೊಂಡವರು ಈಗ ಅದನ್ನು ಆಹಾರವಾಗಿ ಉಪಯೋಗಿಸಬಾರದು, ಎಂಬ ನಿಯಮ ಅನೇಕ ಸಂಘರ್ಷಗಳಿಗೆ ಕಾರಣವಾಯಿತು. ಒಂದು ವೇಳೆ ನಿರ್ದಿಷ್ಟ ಸಂದರ್ಭವನ್ನು ಹೊರತುಪಡಿಸಿ ಗೋವನ್ನು ಕೊಂದರೆ ಕೊಂದ ವ್ಯಕ್ತಿಯನ್ನು ಮರಣದಂಡನೆಗೆ ಗುರಿಪಡಿಸಲು ಅವಕಾಶವಿತ್ತು. ಕೃಷಿಯಲ್ಲಿ **"ನೇಗಿಲು"** ಪ್ರಮುಖ ಪಾತ್ರ ವಹಿಸಿತ್ತು. ಭೂಮಿಯನ್ನು ಉಳುಮೆ ಮಾಡಲು, ನೇಗಿಲನ್ನು ಎಳೆಯಲು ಎತ್ತು ಅಥವಾ ಹೋರಿಯನ್ನು ಬಳಸುತ್ತಿದ್ದರು.[೭]

ಕಾಲ ಕ್ರಮೇಣ ಮಾನವನ ಜೀವನದ ಪ್ರಮುಖ ಉದ್ಯೋಗವೇ ಕೃಷಿಯಾಯಿತು. ಬೇಟೆಯಾಡುತ್ತಾ ಬಿಡುವಿರದ ಓಡಾಟ ಅಲೆದಾಟಕ್ಕೆ ವಿರಾಮ ನೀಡಿದ ಸ್ಥಿರ ಕೃಷಿ ಮಾನವನಿಗೆ ಬೇಟೆಯ ಜೀವನಕ್ಕಿಂತ ಹೆಚ್ಚಿನ ಬಿಡುವು ದೊರೆಯುವಂತೆ ಮಾಡಿತು. ಆಹಾರ ಸಂಗ್ರಹಣೆಯ ಜೊತೆಗೆ ನೆಲೆನಿಂತ ಬದುಕಿನಲ್ಲಿ ಉತ್ಪಾದನೆಯ ಎರಡು ಮಾರ್ಗವಾಗಿ ಕೃಷಿ ಹಾಗೂ ಪಶುಪಾಲನೆಯನ್ನು ರೂಡಿಸಿಕೊಂಡನು. ಇದು ಮಾನವನ ಜೀವನದಲ್ಲಿ ಅನೇಕ ಬದಲಾವಣೆಗಳನ್ನು ತರಲು ಕಾರಣವಾಯಿತು. ಅಲ್ಲಿಯವರೆಗೂ ರಕ್ಷಣೆಗಾಗಿ ಹಾಗೂ ಆಹಾರಕ್ಕಾಗಿ ಮಾತ್ರ ಪ್ರಾಣಿಗಳನ್ನು ಬಳಸಿಕೊಂಡಿದ್ದ ಮಾನವ, ಪ್ರಾಣಿಗಳ ಆಹಾರ ಪದ್ಧತಿ, ಬದುಕುವ ವಿಧಾನಗಳನ್ನು ಅರಿತು ಕೊಳ್ಳತೊಡಗಿದ. ಆರ್ಯರು ಪ್ರಾರಂಭದಿಂದಲೂ ದನಕರುಗಳನ್ನು ಸಾಕುವುದು, ಹಾಗೂ ಇತರ

ಸಾಕುಪ್ರಾಣಿಗಳನ್ನು ಪೋಷಿಸುವ ದನಗಾಹಿಗಳೇ ಆಗಿದ್ದರು. ಆದಾಯ ತರುತ್ತಿದ್ದ ಗೋವುಗಳನ್ನು ಪೂಜ್ಯ ಭಾವನೆಯಿಂದ ಕಾಣುತ್ತಿದ್ದರು. ಗೋವಿನಿಂದ ಉತ್ಪನ್ನಗೊಳ್ಳುವ ಹಾಲು, ಮತ್ತಿತರ ಉಪಉತ್ಪನ್ನಗಳು ಆರ್ಯರ ದಿನನಿತ್ಯದ ಮುಖ್ಯ ಆಹಾರಗಳಾಗಿದ್ದವು. ಪ್ರತಿ ದಿನವೂ ಗೋಪಾಲಕನು ದನಗಳನ್ನು ಮೇಯಿಸಲು ಗೋವುಗಳಿಗೆ ಮೇಯಲು ಮೀಸಲಾಗಿರಿಸಿದ ಜಾಗಗೋಮಾಳಕ್ಕೆ ಅಟ್ಟಿಕೊಂಡು ಹೋಗುತ್ತಿದ್ದನು. ಸಂಪತ್ತಿನ ಮೂಲ ದ್ರವ್ಯಗಳೇ ಆಗಿದ್ದ ಪಶುಗಳನ್ನು ಬೇರೆ ಬೇರೆ ಬುಡಕಟ್ಟಿನವರು ಅಥವಾ ದ್ರಾವಿಡರು ಅಥವಾ ಆರ್ಯರು, ಗೋವುಗಳನ್ನು ಅಪಹರಿಸುತ್ತಿದ್ದರು. ಗೋವುಗಳನ್ನು ಅಪಹರಿಸುವ ಈ ಕ್ರಮ ಅಂದಿನ ಜೀವನದ ಹೊಸ ಸಂಘರ್ಷಕ್ಕೆ ಕಾರಣ ಆಗಿತ್ತು. ಕಾರಣ ಹೆಚ್ಚಾದ ಗೋ ಸಂಪತ್ತು. ಈ ಅಪಹರಣಕಾರ ಸಂಘರ್ಷದಲ್ಲಿ ಗೋವುಗಳನ್ನು ರಕ್ಷಿಸಲಿಕ್ಕಾಗಿಯೇ ಅನೇಕ ವೇಳೆ ಯುದ್ಧಗಳನ್ನು ಮಾಡುತ್ತಿದ್ದರು. ಇಂತಹ ಯುದ್ಧಗಳನ್ನು ಋಗ್ವೇದದಲ್ಲಿ **"ಗವಿಸ್ತಿ"** ಎಂದು ಕರೆದಿದ್ದಾರೆ. ಗವಿಸ್ತಿ ಎಂದರೆ ಅಪಹರಣಗೊಂಡ ಗೋವುಗಳನ್ನು ಹುಡುಕುವುದೆಂದೇ ಅರ್ಥವಾಗಿತ್ತು. ಗೋವುಗಳು ದ್ರವ್ಯಗಳಿಕೆಯ ಪ್ರಮುಖ ಸಾಧನಗಳಾಗಿದ್ದರಿಂದ ಅವುಗಳನ್ನು ಮತ್ತೊಬ್ಬರಿಗೆ ಕೊಡುಗೆಯನ್ನಾಗಿ ಕೊಡುತ್ತಿದ್ದರು. ಭಾರತದಲ್ಲಿ ಯಮುನಾ ಕಣಿವೆ ವಿಶೇಷವಾಗಿ ಗೋ ಸಂಪತ್ತಿಗೆ ಪ್ರಸಿದ್ಧವಾಗಿತ್ತು. ಪ್ರಾಚೀನ ಭಾರತದಲ್ಲಿ ಹಸುಗಳ ಕಿವಿಯ ಮೇಲೆ ಗುರುತು ಹಾಕುವ ಅಭ್ಯಾಸ ರೂಢಿಯಲ್ಲಿದ್ದು **'೮'**ಎಂಬ ಚಿನ್ಹೆಯನ್ನು ಗೋವಿನ ಕಿವಿಗೆ ಹಾಕಿ ಅದನ್ನು **"ಅಷ್ಟಕರ್ಣಿ"** ಎಂದು ಕರೆಯುತ್ತಿದ್ದರು. ಋಗ್ವೇದದ ಆರ್ಯರು ಗೋವುಗಳ ಜೊತೆಗೆ ಭಾರ ಎಳೆಯುವ ಎತ್ತು, ಕುದುರೆ, ನಾಯಿ, ಆಡು, ಕುರಿಗಳನ್ನು ಸಾಕುತ್ತಿದ್ದರು.[೮]

ಆರ್ಯರು ಭಾರತಕ್ಕೆ ಬರುವುದಕ್ಕಿಂತ ಪೂರ್ವದಲ್ಲಿ ಸುಮಾರು ೨೦೦೦ ವರ್ಷಗಳ ಹಿಂದೆಯೇ ಸಾಕಿದ್ದ ಕಾಂಕ್ರೆಜ್, ಗಿರ್ ಮತ್ತು ಹಳ್ಳಿಕಾರ್ ಜಾತಿಯ ದನಗಳನ್ನು ಭಾರತದ ಪ್ರಾಚೀನ ಇತಿಹಾಸ ಪ್ರಸಿದ್ಧ ಮೂಲ ತಳಿಗಳೆಂದು ಕರೆಯಲಾಗಿದೆ. ಅಂದಿನ ಜನರಲ್ಲಿ ಯಾರ ಬಳಿ ಹೆಚ್ಚು ಹಸುಗಳಿವೆಯೋ ಅವರನ್ನೇ ರಾಜ ಎನ್ನುತ್ತಿದ್ದರು. ಹೆಚ್ಚು ಹಸುಗಳಿರುವವನು ಆ ಸಮಾಜದ ಮುಖ್ಯಸ್ಥನಾಗುತ್ತಿದ್ದ. ಅಂದಿನ ಕಾಲದಲ್ಲಿ ಒಬ್ಬರ ಗೋವುಗಳನ್ನು ಮತ್ತೊಬ್ಬರು ಹಿಡಿದು, (ಗ್ರಹಣ ಮಾಡಿ) ತಂದು ತಮ್ಮ ಹಿಂಡನ್ನು ಬೆಳೆಸುತ್ತಿದ್ದರು. ಈ ಗೋವುಗಳ ಹಿಂಡಿನ ಸಲುವಾಗಿಯೇ ಅವರಲ್ಲಿ ಆಗಾಗ ಜಗಳ, ಹೊಡೆದಾಟ, ಯದ್ಧಗಳೂ ಸಹ ಆಗುತ್ತಿದ್ದವು.[೯]

ಆರ್ಯರಲ್ಲಿ ಅನೇಕ ವಿಶೇಷ ತಳಿಗಳಿದ್ದವು. ವಿವಿಧ ಕಡೆ ಅಲೆಯುತ್ತಾ ಒಂದು ಸುದೀರ್ಘ ಪ್ರಯಾಣ ಮಾಡಿ ಬಂದ ಆರ್ಯರಿಗೆ ವ್ಯಾಪಾರವೂ ಕರಗತವಾಗಿತ್ತು. ಇಲ್ಲಿನ ಮೂಲ ನಿವಾಸಿಗಳಾದ ದ್ರಾವಿಡರು ಅವರ ಜೀವನ ಶೈಲಿಗೆ ಮಾರುಹೋದರು. ಇದು ದ್ರಾವಿಡರ ಸಾಂಸ್ಕೃತಿಕ ಬದಲಾವಣೆಗೂ ಕಾರಣವಾಗಿದೆ. ಭಾಷೆ, ಬದುಕುವ ಶೈಲಿ, ವ್ಯವಸಾಯ ಪದ್ಧತಿ,

ಆಹಾರ ಶೈಲಿ ಮತ್ತು ಜೀವನ ವಿಧಾನದಲ್ಲಿ ತಮ್ಮ ಶ್ರೇಷ್ಠತೆಯನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಆರ್ಯರು ದ್ರಾವಿಡರಿಗಿಂತ ಶ್ರೇಷ್ಠ ಎನಿಸಿದರು. ಈ ಶ್ರೇಷ್ಠತೆಯ ಪ್ರಶ್ನೆಯಿಂದ ಅನೇಕ ಹೋರಾಟಗಳೂ ನಡೆದವು.

ಪ್ರಾಚೀನ ಭಾರತದ ಜನರಿಗೆ ಗೊಬ್ಬರದ ಉಪಯೋಗ ತಿಳಿದಿತ್ತು. ಭಾರತೀಯ ರೈತ ತೀರಾ ಇತ್ತೀಚಿನವರೆಗೂ ತುಂಬಾ ಸಾಂಪ್ರದಾಯಿಕ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಿದ್ದ. ಎತ್ತುಗಳಿಂದ ಕಟ್ಟಿಗೆಯ ನೇಗಿಲನ್ನ ಎಳಸಿ ರೆಂಟೆ ಹೊಡೆಯುತ್ತಿದ್ದರು. ಎತ್ತುಗಳನ್ನು ಬಳಸಿ ರಾಶಿಹಾಕಿದ ಧಾನ್ಯವನ್ನು ಪಶುಗಳ ಕಾಲಿನಿಂದ ತುಳಿಸಿ ತೆನೆಗಳಿಂದ ಕಾಳುಗಳನ್ನು ಬಿಡಿಸುತ್ತಿದ್ದರು. ಗಾಳಿಗೆ ತೂರಿ ಕಾಳನ್ನು ಕೇರುತ್ತಿದ್ದರು. ಈ ಕಾರಣದಿಂದಾಗಿ ರೈತರಿಗೆ ನೇಗಿಲು ಹೊಡೆಯುವುದಕ್ಕೆ, ಸಾಮಾನು-ಸರಕುಗಳನ್ನು ಸಾಗಿಸುವುದಕ್ಕೆ, ವಿನಿಮಯಕ್ಕೆ ಹಾಗೂ ಮನುಷ್ಯನ ಆಹಾರಕ್ಕಾಗಿ ಪಶುಗಳು ಬಳಕೆಯಾಗುತ್ತಿದ್ದವು. ಹಳ್ಳಿಗಳ ಪ್ರತಿ ಮನೆಯಲ್ಲಿಯೂ ಹಾಲಿಗಾಗಿ ಅನೇಕ ಹಸುಗಳಿರುತ್ತಿದ್ದವು. ಒಂದು ಹಳ್ಳಿಯ ಸಮುದಾಯಕ್ಕೆ ಒಬ್ಬ ದನಗಾಹಿಯನ್ನು ನೇಮಿಸುವ ಪದ್ಧತಿಯಿತ್ತು. ದನಗಳನ್ನು ಹೊಡೆದುಕೊಂಡು ಪ್ರತಿದಿನ ಮುಂಜಾನೆ ನೇಗಿಲು ಹೊಡೆದ ಹೊಲಗಳನ್ನು ದಾಟಿ ಅಡವಿಗೆ ಕರೆದೊಯ್ಯುತ್ತಿದ್ದ. ಒಡೆಯರು ಕಾಯ್ದ ಸಲಾಕೆಯಿಂದ ದನಗಳ ಮೇಲೆ ಮಾಡಿದ ಗುರುತುಗಳಿರುತ್ತಿದ್ದವು. ದನಗಳನ್ನು ಸಾಯಂಕಾಲ ಕತ್ತಲಾಗುವವರೆಗೂ ಮೇಯಿಸಿಕೊಂಡು ಮರಳಿ ಗ್ರಾಮಗಳಿಗೆ ಕರೆತರುತ್ತಿದ್ದರು. ದನಗಳಿದ್ದ ಮನೆಗಳಲ್ಲಿ ಹಾಲು, ಮೊಸರು, ತುಪ್ಪ ಆಹಾರದ ಮುಖ್ಯ ಭಾಗವಾಗಿದ್ದವು.

ಈ ವೇಳೆ ಭಾರತದಲ್ಲಿ ಮಾನವನು ಚದುರಿದ ಭಿನ್ನ ಭಿನ್ನ ಗುಂಪುಗಳಲ್ಲಿ ವಾಸಿಸಲು ಪ್ರಾರಂಭಿಸಿದ್ದ. ಸಾಗುವಳಿ ಮಾಡುವ ರೈತರಿಗೆ ಸೇರಿದ ದನಗಳಲ್ಲದೆ, ದೇಶದ ಅರಣ್ಯ ಪ್ರದೇಶದಲ್ಲಿ ಈ ನಾಗರಿಕತೆಯನ್ನು ಒಪ್ಪಿಕೊಳ್ಳದ, ಅರೆ ಅಲೆಮಾರಿ ಜೀವನ ನಡೆಸುವ ಮತ್ತು ದನಕಾಯುವುದನ್ನೇ ಜೀವನೋಪಾಯ ಮಾಡಿಕೊಂಡ ಜನರ ಅನೇಕ ದೊಡ್ಡ ದೊಡ್ಡ ದನಗಳ ಹಿಂಡುಗಳಿರುತ್ತಿದ್ದವು. ಇಂಥ ಜನರ ಒಂದು ಮಹತ್ವದ ಜನಾಂಗವೆಂದರೆ ಕ್ರಿ.ಶ.ದ ಆರಂಭದ ಸುಮಾರಿಗೆ ದಕ್ಷಿಣ ರಾಜಸ್ಥಾನ, ಮಾಳ್ವ, ಮತ್ತು ಸಿಂಧ್ ಭಾಗದಲ್ಲಿ ವ್ಯಾಪಕವಾಗಿ ಹರಡಿಕೊಂಡಿದ್ದ ಆಬೀರರು. ಗೊಲ್ಲ, ಕೃಷ್ಣನ ಪಂಥವನ್ನು ಈ ದೃಷ್ಟಿಯಲ್ಲಿ ಗಮನಿಸಬಹುದು.[೧೦]

ಆರ್ಯರು ಭಾರತಕ್ಕೆ ಬಂದ ನಂತರ, ಇಲ್ಲಿನ ಮೂಲ ನಿವಾಸಿಗಳೊಂದಿಗೆ ಹಲವು ಶತಮಾನಗಳ ಕಾಲ ಸಂಘರ್ಷದ ಬದುಕು ಸಾಗಿಸಿದ್ದಾರೆ. ಈ ಸಂದರ್ಭದಲ್ಲೇ ಆರ್ಯರು ಅನೇಕ ಕಟ್ಟಳೆಗಳನ್ನು ಅನಾರ್ಯರ(ದ್ರಾವಿಡರು)ಮೇಲೆ ಹೇರುತ್ತಾ, ಧರ್ಮಗ್ರಂಥಗಳನ್ನು, ವರ್ಣವ್ಯವಸ್ಥೆಯನ್ನು ಜಾರಿಗೆ ತರಲು ಕಾರಣರಾದರು. ಪ್ರತಿಹಂತದಲ್ಲೂ ಆರ್ಯರು ಶ್ರೇಷ್ಠರೆಂದು

ಬಿಂಬಿಸಿಕೊಂಡರು. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳಲ್ಲಿ ಹಲವಾರು ಪುರಾಣಗಳಲ್ಲಿ ಆರ್ಯರನ್ನು ದೇವತೆಗಳಂತೆ, ಇಲ್ಲಿನ ಮೂಲ ನಿವಾಸಿಗಳನ್ನು(ದ್ರಾವಿಡ) ಅಸುರರಂತೆ ಕಾಣುತ್ತಾ ಸಂಘರ್ಷದ ಜೊತೆ ಜೊತೆಗೇ ಇಲ್ಲಿನ ಮೂಲ ನಿವಾಸಿಗಳನ್ನು (ಸಿಂಧೂ, ಹರಪ್ಪ ಜನರ ಬದುಕನ್ನು) ದುರ್ಬಲಗೊಳಿಸಿ ತಾವು ಪ್ರಬಲರಾಗಿ ಬೆಳೆದರು. ದಾನಗಳ ರೂಪದಲ್ಲಿ ಪಶುಗಳನ್ನು ಪಡೆಯಲು ಆರ್ಯರು ಮಾತ್ರ ಅರ್ಹರು ಎಂದು ಧಾರ್ಮಿಕ ಗ್ರಂಥಗಳ ಮೂಲಕ ಬಿಂಬಿಸಲಾಯಿತು. ದಾನವನ್ನು ಪಡೆಯಲು ಆರ್ಯರು ಮಾತ್ರ ಅರ್ಹರು ಎನ್ನುವ ಮೂಲಕ ಶ್ರೀಮಂತಿಕೆಯನ್ನು ತಮ್ಮದಾಗಿಸಿಕೊಂಡರು. ಇನ್ನೊಂದು ವರ್ಗ ದಾನಕೊಡುವುದನ್ನು ಶ್ರೇಷ್ಠವೆಂದು ನಂಬಿ ಕೊಟ್ಟು ಕೊಟ್ಟು ಬಡವಾಗುತ್ತಾ ಸಾಗಿತು. ಆರ್ಯರುಗಳು ತಮ್ಮ ದೇವರುಗಳ ಕಲ್ಪನೆಯಿಂದ ದೇವರುಗಳನ್ನು ಪೂಜಿಸುವ ವಿಧಿ ವಿಧಾನಗಳ ಆಚರಣೆಗಳು ಮತ್ತು ಸಂಸ್ಕೃತಿಯಿಂದ ಇಡೀ ಮಾನವ ಸಮುದಾಯ ಭಿನ್ನವಾಗುವಂತೆ ನೋಡಿಕೊಂಡರು.

**ವಿಷ್ಣು ಸೂಕ್ತದಲ್ಲಿ:** "ಎಲ್ಲಿ ಬಲಿಷ್ಠವಾದ ಕೊಂಬುಗಳನ್ನುಳ್ಳ ಚುರುಕಾದ ಗೋವುಗಳು ಇರುವುವೋ ಅಲ್ಲಿ ಆಕಳುಗಳ ಮಧ್ಯದಲ್ಲಿ ಮಹಾಗತಿಯನ್ನುಳ್ಳ ಸ್ತೋತ್ರ ಪ್ರಿಯನಾದ ಮಹಾ ವಿಭೂತಿಯಾದ ವಿಷ್ಣುವಿನ ಪರಮ ಪದವು (ಪಾದಸ್ಥಾನವು, ವಾಸಸ್ಥಾನವು) ಪ್ರಕಾಶಿಸುತ್ತದೆ. ಇಂಥ ಗೋವುಗಳ ಮಧ್ಯದಲ್ಲಿಯೇ ಕೃಷ್ಣನು ಸದಾ ವಾಸಿಸುವುದಾಗಿ ವರ್ಣಿಸಲಾಗಿದೆ. ಇದಕ್ಕಾಗಿಯೇ ಶ್ರೀಕೃಷ್ಣನನ್ನು ಗೋಪಾಲಕೃಷ್ಣ ಎಂದು ಸಂಬೋಧಿಸಲಾಗಿದೆ. ಅಂದಿನ ಪಶುಪಾಲಕರನ್ನು ಗೊಲ್ಲರು, ದನಗಾಹಿಗಳು ಎಂದು ಕರೆಯುತ್ತಿದ್ದರು."[೧೧]

ಗೋವುಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಿದ ಶ್ರೀಕೃಷ್ಣನು ಗೊಲ್ಲನಾಗಿ ದೈವತ್ವಕ್ಕೇರಿದವನು. ಮಾನವನಾಗಿ ದೈವತ್ವಕ್ಕೆ ಏರಬಹುದೆಂಬ ಕಲ್ಪನೆಯನ್ನು ಜನರಲ್ಲಿ ಬಿತ್ತಲು ಯಶಸ್ವಿಯಾದ ಉದಾಹರಣೆ ಶ್ರೀಕೃಷ್ಣನ ಪಾತ್ರ ಎನಿಸುತ್ತದೆ. ಅದಕ್ಕಿಂತ ಮಿಗಿಲಾಗಿ ಗೋವುಗಳನ್ನೇ ಆಶ್ರಯಿಸಿದ ಗ್ರಾಮೀಣ ಬದುಕೊಂದು ಇತ್ತು ಎಂಬುದನ್ನು ಕೃಷ್ಣನ ಕಥೆಯಲ್ಲಿ ನೋಡಬಹುದು. ಗೋವುಗಳನ್ನು ಅಡವಿಗಳಲ್ಲಿ ಮೇಯಿಸಲು ಹೋಗುವಾಗ ಅಲ್ಲಿ ಬರುವ ತೊಂದರೆಗಳು ಒಂದು ಸಂಘರ್ಷದ ಕಥಾನಕವನ್ನೇ ತನ್ನಲ್ಲಿ ಅಡಗಿಸಿಕೊಂಡಿದೆ. ಅ ಎಲ್ಲಾ ಘಟನೆಗಳಲ್ಲೂ ಕೃಷ್ಣನೇ ಗೆಲ್ಲುವ ಮೂಲಕ ತ್ರಿಕಾಲ ಜ್ಞಾನಿಯಾಗಿ, ಮುಂದೆ ನಡೆಯಬಹುದಾದದ್ದನ್ನು, ಹಿಂದೆ ನಡೆದಿರುವುದನ್ನು ಮತ್ತು ಇಂದು ನಡೆಯುತ್ತಿರುವುದನ್ನು ಬಲ್ಲವನಾಗಿ ದೇವತಾ ಸ್ವರೂಪಿಯಾಗಿ ನಿಲ್ಲುತ್ತಾನೆ. ಶಕ್ತಿಶಾಲಿಯಾಗಿ ಮಹಾಭಾರತ ಕಥೆಯನ್ನು ತನ್ನಂತೆ ನಡೆಸುವ ಕೃಷ್ಣ ಅಪ್ರತಿಮ ಬುದ್ಧಿವಂತನಾಗಿ ಕಾಣುತ್ತಾನೆ. ಗೋವಿನ ಮಹಾತ್ಮೆಯನ್ನು ಶ್ರೀಕೃಷ್ಣನ ಮೂಲಕ ಜಗತ್ತಿಗೆ ತಿಳಿಸಲಾಗುತ್ತಿದೆ.

ಗೀತೆಯಲ್ಲಿ ಶ್ರೀ ಕೃಷ್ಣ

**"ಗಾವೋ ವಿಶ್ವಸ್ಯ ಮಾತರಂ ॥ ಮಾತರಃ ಸರ್ವ ಭೂತಾನಾಂ ಗಾವಃ ಸರ್ವಸುಖಃ ಪ್ರಧಾಃ"**

ಆಕಳು ವಿಶ್ವಕ್ಕೆ ಮಾತೆಯ ಸಮಾನ, ಗೋಮಾತೆಯಿಂದಲೇ ಸರ್ವಸುಖ ಪ್ರಾಪ್ತಿ ಎಂದು ಆಕಳ ಮಹಿಮೆಯನ್ನು ಕೊಂಡಾಡಿದ್ದಾರೆ.[೨] ಹೀಗೆ ವೇದಗಳು, ಸೂಕ್ತಿಗಳಲ್ಲಿ, ಶಾಸ್ತ್ರಗ್ರಂಥಗಳಲ್ಲಿ ಪಶುಗಳ ಮಹಿಮೆಯನ್ನು ಸಾರುತ್ತಾ, ತಮ್ಮ ಯಜ್ಞ ಯಾಗಾದಿಗಳಲ್ಲಿ, ಪಶುವಿನ ಉತ್ಪನ್ನಗಳನ್ನು ಯಾವ ರೀತಿ ಬಳಸುತ್ತಾರೆ? ಅದರಿಂದ ಲಾಭಗಳೇನು? ಎಂಬುದನ್ನು ಉಪದೇಶಿಸುವ ರೀತಿಯನ್ನು ಗಮನಿಸಬಹುದು. ವ್ಯವಸಾಯದ ಭಾಗವಾಗಿದ್ದ ಪಶುಗಳನ್ನು ಹೊಂದುವುದು ಅಂದು ಅನಿವಾರ್ಯವಾಗಿತ್ತು. ಅವುಗಳನ್ನು ಪಡೆಯಲು ಆರ್ಯರು ಮಾತ್ರ ಅರ್ಹರು, ಉಳಿದವರು ದಾನಗಳನ್ನು ಕೊಡಬೇಕೇ ವಿನಃ ಪಡೆಯಬಾರದು ಎಂಬ ಕಟ್ಟಳೆಯ ಮೂಲಕ ಸಮಾಜದ ಇನ್ನೊಂದು ವರ್ಗವನ್ನು ಹಂತಹಂತವಾಗಿ ನಿಯಂತ್ರಿಸಿದರು. ಅವರೆಲ್ಲ ಗೊಸಂಪತ್ತನ್ನು ಕಳೆದುಕೊಂಡು ಬಡವರಾಗುವಂತೆ ಮಾಡಿದರು. ಅವುಗಳಲ್ಲಿನ ಒಂದು ಉದಾಹರಣೆಯನ್ನು ಗಮನಿಸುವುದಾದರೆ

> **ಪದ್ಮ ಪುರಾಣದ ಸೃಷ್ಟಿ ಕಾಂಡದಲ್ಲಿ**
> **"ಗೋ ಪ್ರಚಾರಂ ಯಥಾಶಕ್ತಿಯೋ ವೈತ್ಯಜತಿ ಹೇತುನಾ**
> **ದಿನೇದಿನೇ ಬ್ರಹ್ಮಭೋಜ್ಯಂ ಪುಣ್ಯಂ ತಸ್ಯಶತಾಧಿಕಮ್**
> **ತಸ್ಮಾತ್ ಗವಾಂಪ್ರಚಾರಂತು ಮುಕ್ತ್ವಾ ಸ್ವರ್ಗಾನ್ನ ಹೀಯತೈ**
> **ಯಃಛಿನ್ನತಿದ್ರುಮ ಪುಣ್ಯಂ ಗೋಪ್ರಚಾರಂ ಛಿನತ್ಯಪಿ**
> **ಸತ್ಯ ಏಕವಿಶ ಪುರುಷಾಃ ಪಚ್ಯಂತೇ ಕೌರವೇಷು ಚ**
> **ಗೋಚೌರಘ್ನಂ ಗ್ರಾಮಗೋಪಃ ಶಕೊಜ್ಞಜ್ಞಾತ್ವಾತು ದಂಡಯೇತ್"**

ಅಂದರೆ ಯಾವ ಮನುಷ್ಯನು ಆಕಳುಗಳ ಸಲುವಾಗಿ ಗೋಚರ ಭೂಮಿಯನ್ನು ಬಿಡುತ್ತಾನೋ ಅಂಥವರಿಗೆ ಪ್ರತಿದಿನವೂ ನೂರಕ್ಕಿಂತಲೂ ಹೆಚ್ಚು ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಪುಣ್ಯವು ಲಭಿಸುತ್ತದೆ. ಗೋಚರ ಭೂಮಿಯನ್ನು ಬಿಟ್ಟವರು ಸ್ವರ್ಗದಿಂದ ಚುತರಾಗುವುದೇ ಇಲ್ಲ. ಯಾರು ಗೋಚರ ಭೂಮಿಗೆ ಹಾನಿಯನ್ನು ಉಂಟುಮಾಡುತ್ತಾರೋ ಮತ್ತು ಅದರಲ್ಲಿನ ವೃಕ್ಷಗಳನ್ನು ಕಡಿಯುತ್ತಾರೋ ಅಂಥವರು ಇಪ್ಪತ್ತೊಂದು ಪೀಳಿಗೆ ನರಕ ವಾಸದಲ್ಲಿ ಹೊರಳಾಡುತ್ತಾರೆ. ಯಾವ ವ್ಯಕ್ತಿ ಮೇಯುವ ಕಾಲಕ್ಕೆ ಪೀಡೆಯನ್ನು ಉಂಟುಮಾಡುತ್ತಾನೋ ಅಂಥ ವ್ಯಕ್ತಿಯನ್ನು ಸಮರ್ಥ ಗ್ರಾಮ ರಕ್ಷಕನು ದಂಡನೆ ಮಾಡಬೇಕು ಎಂಬ ಮಾತುಗಳನ್ನು ಗಮನಿಸಿದಾಗ ಗೋವುಗಳ ಹಾಗೂ ಗೋಚರ ಭೂಮಿಯನ್ನು ನೋಡಿಕೊಳ್ಳಲು ನಿಯಮಗಳನ್ನು

ರೂಪಿಸಿಕೊಳ್ಳಲಾಯಿತು. ಅಲ್ಲದೆ ಅಂದಿನ ವೇದಗಳ ಕಾಲದಲ್ಲೇ ಸಮಾಜ ಗೋವಿನ ದಾನಗಳ ಬಗ್ಗೆ ವಿವರಿಸಿದೆ. ಆದರೆ ಈ ದಾನವನ್ನು ಸ್ವೀಕರಿಸಲು ಬ್ರಾಹ್ಮಣರು ಮಾತ್ರ ಅರ್ಹರು ಎಂದು ತಿಳಿಸಿರುವುದು ಅನೇಕ ಚರ್ಚೆಗಳಿಗೆ ಅವಕಾಶ ಮಾಡಿಕೊಟ್ಟಿದೆ. ಕುಮಾರವ್ಯಾಸ ಭಾರತದಲ್ಲಿ ಗೋವುಗಳನ್ನು ದಾನ ನೀಡಿದ ವಿವರಣೆ ಈ ರೀತಿ ಇದೆ.

**"ತರಿಸಿ ಹೋರಿಯ ಗವಿಯ ಗೂಳಿಯ**
**ಬರಿಸಿದನುಕೆಲ ಕೆಲವ ಕೃಷಿಕರಿಗೆ**
**ಗಿರಿಸಿದನು ಗೋಲಕ್ಷವಿತ್ತನು ವಿಪ್ರಸಂಕುಲಕೆ**
**ಕರಿಸಿ ಕೊಟ್ಟನು ಭಟರಿಗೆ, ಮ**
**ಲ್ಲರಿಗೆ, ಗಾಯಕರಿಗೆ, ವಿದ್ಯಾವಂ**
**ತರಿಗೆ ಬಹು ವಿಧ ಬಹಳ ವಂದಿಗೆ ಮಾಗಧ ವ್ರಜಕೆ"**

ದುರ್ಯೋಧನನು ಹೋರಿಗಳನ್ನು ಹಸುಗಳನ್ನು ತರಿಸಿ ಕೆಲವನ್ನು ಕೃಷಿಕರಿಗೆ ಕೊಟ್ಟನು. ಬ್ರಾಹ್ಮಣರಿಗೆ ಲಕ್ಷ ಗೋವುಗಳನ್ನು ದಾನ ಕೊಟ್ಟನು. ಭಟ್ಟರು, ವಂಧಿಮಾಗಧರು, ಮಲ್ಲರು, ವಿಟರು, ನಟರು, ಆನೆ, ಮತ್ತು ಕುದುರೆ ಆರೈಕೆಗಾರರನ್ನು ಕರಸಿ ಅವರಿಗೂ ಗೋವುಗಳನ್ನು ಕೊಟ್ಟನು. ಅದರಲ್ಲೂ ದಾನ ನೀಡಲು ಗರ್ಭದರಿಸಿದ ಹೆಣ್ಣು ಆಕಳುಗಳೇ ಶ್ರೇಷ್ಠ ಎಂದು ಬ್ರಾಹ್ಮಣರು ವೇದಗಳ ಮೂಲಕ ಹೇಳಿಸಿರುವುದು ಹಾಲು, ಹೈನು, ಕರುಗಳನ್ನು ಹೆಚ್ಚು ಪರಿಶ್ರಮವಿಲ್ಲದೆ ಬೇಗ ಪಡೆಯುವ ಉಪಾಯವೇ ಆಗಿದೆ. ಕನ್ನಡದ ನೂರಾರು ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ **"ಉಭಯಮುಖಿ"** ದಾನದ ಉಲ್ಲೇಖವಿದೆ. ಕರುವಿಗೆ ಜನ್ಮ ನೀಡುತ್ತಿರುವ ಹಸುವಿನ ದಾನವೇ ಉಭಯಮುಖಿ ದಾನವಾಗಿದೆ. ಗೋ ತಳಿ ಸಂವರ್ಧನೆಯ ಸಲುವಾಗಿಯೇ ಹಿಂಡಿನಲ್ಲಿ ಉತ್ತಮವಾದ ಹೋರಿಗಳನ್ನು ಬೀಜಕ್ಕಾಗಿ ಆರಿಸುತ್ತಿದ್ದರು. ಒಕ್ಕಲುತನಕ್ಕೆ ಯೊಗ್ಯವಾದ ದನಗಳನ್ನು ಹಿಂಡಿನಿಂದ ಬೇರ್ಪಡಿಸುತ್ತಿದ್ದರು. ಬ್ರಾಹ್ಮಣರಿಗೆ, ಗಾಯಕರಿಗೆ, ಮತ್ತು ವಿದ್ಯಾವಂತರಿಗೆ ಉತ್ತೇಜನಕ್ಕಾಗಿ, ಅವನ ಮರ್ಯಾದೆಗಾಗಿ, ಗೋವುಗಳನ್ನು ದಾನ ಕೊಡುತ್ತಿದ್ದರು ಎಂಬುದನ್ನು ಮೇಲಿನ ಪದ್ಯ ತಿಳಿಸುತ್ತದೆ.

ಆರ್ಯರು ಸಮಾಜದಲ್ಲಿ ಏಣಿ ಶ್ರೇಣಿಗಳನ್ನು ಶಾಸ್ತ್ರ, ಗ್ರಂಥಗಳು, ವೇದಗಳು, ಸೂಕ್ತಕಗಳು, ಸಂಹಿತೆಗಳ ಮೂಲಕ ತಮಗೆ ಅನುಕೂಲಕರ ವಾತಾವರಣವನ್ನು ನಿರ್ಮಿಸಿಕೊಂಡರು. ಈ ವೇದಗಳು ಎಲ್ಲಿಂದ ಬಂದವೆಂದು ತಿಳಿಯದಂತೆ ಬರೆಯಲು ಕೆಲವರು ಕಾಡಿನಲ್ಲಿ ಆಶ್ರಮವಾಸ ಮಾಡತೊಡಗಿದರು. ಆಶ್ರಮ ನಿರ್ವಹಣೆಗೆ ಪಶುಪಾಲನೆ ಸಹಾಯಕವಾಗಿತ್ತು. ಧ್ಯಾನ ಮಾಡುವುದು, ಹಾಗೂ ಶಿಕ್ಷಣ ನೀಡುವುದು, ಆಶ್ರಮಗಳ ಒಪ್ಪಿತ ಕಾರ್ಯಗಳಾದವು. ಧ್ಯಾನದಿಂದ ದೈವತ್ವ

ಪಡೆದು ಅವರು ಒಂದು ವರ್ಗಕ್ಕೆ ಅನುಕೂಲಕರವಾದ ಸಾಹಿತ್ಯವನ್ನು ಸೃಷ್ಟಿಸಿದರು. ಖರ್ಚುವೆಚ್ಚ ನಿಭಾಯಿಸಲು, ಅರಸರು ಮಕ್ಕಳಿಗೆ (ನಗರದಲ್ಲಿ ವಾಸಿಸುವವರ ಮಕ್ಕಳಿಗೆ)ಶಿಕ್ಷಣ ನೀಡುತ್ತಿದ್ದರು. ರಾಜನು ಇದಕ್ಕೆ ಪ್ರತಿಯಾಗಿ ಧಾನ್ಯಗಳನ್ನು, ಪಶುಗಳನ್ನು ಋಷಿಮುನಿಗಳಿಗೆ ದಾನವಾಗಿ ಕೊಡುವ ಸಂಪ್ರದಾಯ ಬೆಳೆದು ಬಂದಿತು. ರಾಜನ ದಾನಕಾರ್ಯ ಹೆಚ್ಚಿದಂತೆ ಆಶ್ರಮವಾಸಿಗಳು, ನೀತಿನಿಯಮಗಳನ್ನು ರಾಜನ ಮೂಲಕ ಜಾರಿಗೆ ತಂದು ವ್ಯವಸ್ಥಿತ ಆಡಳಿತವನ್ನು ಜಾರಿಗೆ ತಂದರು. ಈ ಆರ್ಯ–ದ್ರಾವಿಡರ ಸಂಘರ್ಷದ ಬದುಕಿಗೆ ಒಂದು ಒಪ್ಪಿತ ನಿಯಮಗಳು ಅಸ್ತಿತ್ವಕ್ಕೆ ಬಂದು ಬಹುಸಂಖ್ಯಾತರು ಆ ನಿಯಮಗಳನ್ನು ಅನುಸರಿಸತೊಡಗಿದರು. ನಿಯಮಗಳನ್ನು ಅನುಸರಿಸದ ಅಲ್ಪ ಸಂಖ್ಯಾತರನ್ನು ಬಹುಸಂಖ್ಯಾತರು ಸಂಘರ್ಷದ ಮೂಲಕ, ಶಿಕ್ಷೆಯ ಮೂಲಕ ಅನುಸರಿಸುವಂತೆ ಮಾಡಿದರು. ಎಲ್ಲರೂ ಒಪ್ಪಿದ, ಒಪ್ಪಿಸಿದ ಒಂದು ವ್ಯವಸ್ಥೆ ಜಾರಿಗೆ ಬಂದಿತು. ಆ ವ್ಯವಸ್ಥೆಯ ಪ್ರಧಾನನೇ ರಾಜ, ಸಹಾಯಕನಾಗಿ ಮಂತ್ರಿ, ಹಣಕಾಸು ಅಧಿಕಾರಿಗಳು ಹೀಗೆ ಅನೇಕರು ಜವಾಬ್ದಾರಿಗಳನ್ನು ಹಂಚಿಕೊಂಡು ಆಡಳಿತ ನಡೆಸತೊಡಗಿದರು. ಅರಣ್ಯದಲ್ಲಿ ಋಷಿಮುನಿಗಳ ಆಶ್ರಮದಲ್ಲಿ ರಚಿಸಿದ ನಿಯಮಗಳನ್ನು ಸಮಾಜವು ಗೌರವಿಸಿತು. ಯಾಗಗಳ ವಿಧಿವಿಧಾನಗಳನ್ನು ನಿರ್ಣಯಿಸಿ ಆಚರಿಸುವ ಪದ್ಧತಿಗಳು ಜಾರಿಗೆ ಬಂದವು. ಕಲ್ಪವೃಕ್ಷ, ಚಿಂತಾಮಣಿ, ಕಾಮಧೇನು, ಇಷ್ಟಾರ್ಥ ಸಿದ್ಧಿಸುವವೆಂದು ಶಾಸ್ತ್ರಗಳಲ್ಲಿ ಸೃಷ್ಟಿಸಿ ಹೇಳಿದರು. ಮಹಾಭಾರತದಲ್ಲಿ ಯಕ್ಷರು ಯುಧಿಷ್ಠಿರನಿಗೆ ಅಮೃತ ಯಾವುದು? ಎಂದು ಕೇಳಿದ್ದಕ್ಕೆ ಯುದಿಷ್ಠಿರ **"ಗವಾಮೃತಃ"** ಆಕಳ ಹಾಲೇ ಅಮೃತ ಎಂದು ಎಂದು ಗೋಮಹಾತ್ಮೆ ಹೇಳಿದ್ದಾರೆ. ಇನ್ನೊಂದು ಸಂದರ್ಭದಲ್ಲಿ **"ಗಾವೋ ಯಜ್ಞಸ್ಯರಿಂಫಲಂ ಗೋಕ್ಷುಯಜ್ಞಃ ಪ್ರತಿಷ್ಠಿತಃ"** ಅರ್ಥಾತ್ ಆಕಳು ಯಜ್ಞದ ಫಲವನ್ನು ಕೊಡುತ್ತದೆ ಎಂದು ಈ ಕೆಳಗಿನ ಶ್ಲೋಕ ತಿಳಿಸಿದೆ.

> **'ಗೋಭ್ಯೋ ಹವಿಃ ಪ್ರಜಾಯೇತ ಯಜ್ಞಸಿದ್ಧಸತೋನಿಶಂ,**
> **ಯಜ್ಞಾತ್ ಭವತಿ ಪರ್ಜನ್ಯಃ ಪರ್ಜನ್ಯಾತ್ ಅನ್ನ ಸಂಭವ।**
> **ಅನ್ನಾತ್ ಜೀವಂತಿ ಲೋಕೇ ಅಸ್ಮಿನ್ ಪಶುಪಕ್ಷಿ ನದಾದಾಯ।**
> **ತತಃ ಸ್ವಾಸ್ಥ್ಯಬತಾಪೇತೋ ಮಾನವಃ ಕರ್ಮ ತತ್ಪರಃ।**
> **ಧನಂ ಭೋಗಾಂಶ್ಚ ಪುಣ್ಯಂತ ಸಮುಪಾರ್ಜಯತ್ ಸದಾ।**
> **ತೈಹಿಃ ಅಭ್ಯೃತ್ಯ ಹರಿಂ ಸಾಕ್ಷಾತ್ ಧ್ರುವಂ ಮೋಕ್ಷಮುಪಾರ್ಚ್ಛತಿ॥**

ಹವಿಸ್ಸನ್ನು ಆಕಳು ಮಾತ್ರ ಕೊಡಬಲ್ಲದು. ಹವಿಸ್ಸಿನಿಂದ ಯಜ್ಞಸಿದ್ಧಿ, ಯಜ್ಞದಿಂದ **"ಯಜ್ಞಾದ್ ಭವತಿ ಪರ್ಜನ್ಯ"** ಯಜ್ಞದಿಂದ ಮಳೆ, ಮಳೆಯಿಂದ ಬೆಳೆ, ಬೆಳೆಯಿಂದ ಅನ್ನ, ಅನ್ನದಿಂದ ಸಕಲ ಪ್ರಾಣಿಗಳಿಗೂ ಸಂತೃಪ್ತಿ ಸಿಗುತ್ತದೆ. ಎಂದು ವಿವರಿಸಿದರು. ಅಥರ್ವಣ

ವೇದದಲ್ಲಿ(ಶೌನಿಕ ಸಂಹಿತೆ ೯:೭:೧:೨೫)"<u>ಏತದ್ ವೈ ವಿಶ್ವರೂಪಂ ಸರ್ವ ರೂಪಮ್ ಗೋ ರೂಪಮ್</u>" ಎಂದು ಆಕಳಿಗೆ ಬ್ರಹ್ಮಾಂಡ ಸ್ವರೂಪವನ್ನೇ ಕೊಡಲಾಗಿದೆ. ಗೋಪೂಜೆ ಎಂದರೆ ಅದು ಕೇವಲ ಆಕಳ ಪೂಜೆಯಲ್ಲ. ಅದು ಸಮಸ್ತ ಬ್ರಹ್ಮಾಂಡ ಪೂಜೆ ಎಂದು ಗೋಮಹಾತ್ಮೆಯನ್ನು ಹೇಳಲಾಗಿದೆ. ಆದ್ದರಿಂದಲೇ ಆಕಳನ್ನು **"ಸರ್ವದೇವಮಯಿ"** ಎಂದು ಕರೆಯಲಾಗಿದೆ.[೧೩]

ಗೋಮಾತೆಗೆ ಮಾನವ ಜೀವನ ಧರ್ಮದಲ್ಲಿ ಪವಿತ್ರ ಪೂಜ್ಯ ಸ್ಥಾನವಿದೆ. ವಿಶ್ವವೇ ಆಕಳನ್ನು ಗೋಮಾತೆ ಎಂದು ಪರಿಗಣಿಸಿದೆ. ವೇದ, ಪುರಾಣಗಳು, ಧರ್ಮಗ್ರಂಥಗಳು ಮತ್ತು ಸಾಹಿತ್ಯ ಎಲ್ಲವೂ ಗೋಮಹಾತ್ಮೆಯನ್ನು ಸಾರಿವೆ. ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕು ಪುರುಷಾರ್ಥಗಳು ಗೋವಿನಿಂದ ಸಿದ್ಧಿಯಾಗುತ್ತವೆ ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ.[೧೪]

ಬದಲಾದ ಜೀವನ ವಿಧಾನದಲ್ಲಿ ಮುಖ್ಯವಾದ ಆದಾಯದ ಮೂಲಗಳಾಗಿ ಪಶುಪಾಲನೆ ಹಾಗೂ ಕೃಷಿ ಕಾಯಕ ಪರಿವರ್ತನೆಗೊಂಡಿತು. ಇತರೆ ಆದಾಯದ ಮೂಲವೆಂದರೆ ರಾಜರ ಊಳಿಗಕ್ಕೆ ಅಥವಾ ಸೈನ್ಯಕ್ಕೆ ಸೇರುವುದೇ ಆಗಿತ್ತು. ಶ್ರೇಷ್ಠ ಯೋಧರಿಗೆ ಶ್ರೇಷ್ಠ ಬಹುಮಾನಗಳು ಹಾಗೂ ಧಾನ್ಯಗಳನ್ನು ಅವರ ಸೇವೆಯನ್ನು ಪರಿಗಣಿಸಿ ನೀಡುತ್ತಿದ್ದರು. ಒಮ್ಮೊಮ್ಮೆ ಯುದ್ಧದ ಸಂದರ್ಭಗಳಲ್ಲಿ ಗ್ರಾಮಗಳನ್ನು ದೋಚುವಾಗ ಇವರಿಗೆ ಅಪಾರ ಸಂಪತ್ತೂ ಕೈವಶವಾಗುತ್ತಿತ್ತು. ಹೀಗಾಗಿ ಪ್ರಾಚೀನ ಕಾಲದಲ್ಲಿ ಯುದ್ಧ ಎಂದರೆ ಸಂಪತ್ತಿನ ಲೂಟಿ ಎಂಬ ಭಾವನೆಯೂ ಜನರಲ್ಲಿ ಮೂಡಿಸಿತ್ತು. ಶೇ ೭೦%ರಷ್ಟು ಜನ ತಮ್ಮ ಜೀವನೋಪಾಯಕ್ಕೆ ಕೃಷಿಯನ್ನೇ ಅವಲಂಬಿಸಿದ್ದರು. ಭಾರತದ ಆರ್ಥಿಕತೆಗೂ ಮುಖ್ಯವಾಗಿ ಕೃಷಿಯೇ ಆಧಾರ ಸ್ಥಂಭ. **"ಕೃಷಿತೋನಾಸ್ತಿ ದುರ್ಭಿಕ್ಷಂ"** ಎಂದು ನಮ್ಮ ಪೂರ್ವಜರು ಹೇಳಿದ್ದಾರೆ. ಕೃಷಿಯಿಂದ ಮಾತ್ರ ಈ ಮಾನವ ಸಮಾಜ ಬದುಕ ಬಲ್ಲದು. ವಸ್ತು, ಮನೆ, ಏನಿಲ್ಲದಿದ್ದರೂ ನಡೆಯುತ್ತದೆ. ಆದರೆ ಕೃಷಿ ಇಲ್ಲದಿದ್ದರೆ ಬದುಕು ನಡೆಯುವುದೇ ಇಲ್ಲ. ಕೃಷಿಯಿಂದ ಆಹಾರ, ಆಹಾರದಿಂದ ಮಾನವ ಬದುಕುತ್ತಾನೆ. ಈ ಕಾರಣದಿಂದಲೇ ಮಹಾತ್ಮ ಗಾಂಧೀಜಿಯವರು ರೈತ ಭಾರತದ ಬೆನ್ನೆಲುಬು ಎಂದಿರುವರು. ಕೃಷಿ ಚಟುವಟಿಕೆಗಳ ಜೊತೆಗೇ ಉಪಕಸುಬು ಎಂಬಂತೆ ಜೊತೆಯಾಗಿದ್ದು ಪಶುಪಾಲನೆ. ಆಕಳು ಮತ್ತು ಎಮ್ಮೆಗಳು ಮನೆಯಲ್ಲಿ ಉತ್ಪಾದನೆಗೆ ಮೂಲವಾದರೆ, ಹೋರಿಗಳು ಮತ್ತು ಕೋಣಗಳು ಗದ್ದೆಯ ಉತ್ಪಾದನೆಗೆ ಸಹಾಯಕವಾಗಿದ್ದವು.

ಕುಮಾರವ್ಯಾಸನ ಒಂದು ಪದ್ಯದಲ್ಲಿ,

**"ಕೃಷಿ ಮೊದಲು ಸರ್ವಕ್ಕೆ ಕೃಷಿಯಂ**
**ಪಸರಿಸುವುದಾ ಕೃಷಿಯನುದ್ಯೋ।**
**ಗಿಸುವ ಜನವನು ಪಾಲಿಸುವುದು ಜನಪದದ ಜನದಿ॥**

**ವಸುವು ತೆರಳುವುದು ವಸುವಿನಿಂಸಾ**
**ಧಿಸುವುದಾವುದ ಸಾಧ್ಯವದರಿಂ**
**ಕೃಷಿ ವಿಹೀನನ ದೇಶವದು ದುರ್ದೇಶ ಕೇಳೆಂದ॥**

ಕೃಷಿ ಇಲ್ಲದ ದೇಶ ದುರ್ದೇಶ ಎಂದು ಕುಮಾರವ್ಯಾಸ ತನ್ನ ಕಾವ್ಯದಲ್ಲಿ ಹೇಳಿದ್ದಾನೆ. ಒಕ್ಕಲುತನ ಉತ್ತಮವಾಗಬೇಕಾದರೆ ದನಗಳು ಗಟ್ಟಿಮುಟ್ಟಾಗಿದ್ದು, ಹೆಚ್ಚೆಚ್ಚು ಹಾಲು ಕೊಡುವವಾಗಿರಬೇಕು. ಭಾರತದ ವ್ಯವಸಾಯಕ್ಕೆ ಆಕಳು ಮತ್ತು ಎತ್ತುಗಳು ಆಧಾರವಾಗಿವೆ. ಅಧಿಕ ಆಹಾರೋತ್ಪಾದನೆಯನ್ನು ಮಾಡಬೇಕೆಂದರೆ ವ್ಯವಸಾಯದಲ್ಲಿ ದನಗಳ ಪಾತ್ರ ಮುಖ್ಯ ಹಾಗೂ ಮಹತ್ವದ್ದು. ಗೋವು ತನ್ನ ಹಾಲಿನ ಜೊತೆಗೆ ತನ್ನ ಸಂತಾನವನ್ನೂ ವೃದ್ಧಿಸಿಕೊಳ್ಳುವುದ ರಿಂದ ಅದು ರೈತರಿಗೆ ವರದಾನವಾಗುತ್ತದೆ. ಎತ್ತುಗಳೇ ರೈತನ ಜೀವನ ಸಂಗಾತಿಗಳು, ಅವನ ಸುಖ, ದುಖಃಗಳಲ್ಲಿ ಸಮಭಾಗಿಗಳು. ನಮ್ಮ ದೇಶದಲ್ಲಿ ಗೋಪುತ್ರನಿಲ್ಲದೆ ಹೊಲ ಉಳುವಂತಿಲ್ಲ. ಹೊಲ ಉಳದೇ ಭೂಮಿ ಹದವಾಗುವುದಿಲ್ಲ, ಹದವಿಲ್ಲದೆ ಬೀಜ ಬಿತ್ತಲು ಸಾಧ್ಯವಿಲ್ಲ. ಹೆಚ್ಚು ಬೆಳೆ ಬೆಳೆಯಲು ಭೂಮಿಗೆ ಗೊಬ್ಬರ, ಗೋಮೂತ್ರ, ಎಲ್ಲವನ್ನೂ ಕೊಡುವ, ಈ ಆಕಳು ನಮ್ಮೆಲ್ಲರಿಗೂ ಗೋಮಾತೆ. ಭಾರತದ ಅಳಿವು-ಉಳಿವು ಆಕಳಿನ ಮೇಲೆ ನಿಂತಿದೆ ಎಂದರೆ ಅತಿಶಯೋಕ್ತಿಯಲ್ಲ.[೧೫]

ಪಶುಗಳ ಉತ್ಪಾದನೆ ಹಾಗೂ ಪಶುಗಳಿಂದ ಸಿಗುವ ಉತ್ಪನ್ನಗಳು ಒಂದು ದೇಶದ ಆರ್ಥಿಕ ವ್ಯವಸ್ಥೆಯನ್ನು ನಿರ್ಧರಿಸಬಲ್ಲದು ಎಂಬ ಮಾತು ಅವುಗಳಿಗಿರುವ ಮಹತ್ವವನ್ನು ತಿಳಿಸುತ್ತದೆ. ಭಾರತ ಕೃಷಿ ಪ್ರಧಾನವಾದ ಆರ್ಥಿಕತೆಯನ್ನು ಹೊಂದಿಯೂ ಇತರೆ ಕೆಲವು ದೇಶಗಳಿಗಿಂತ ಉಚ್ಛ್ರಾಯ ಸ್ಥಿತಿಯಲ್ಲಿರಲು ಗೋಸಂತತಿಯೇ ಮುಖ್ಯ ಕಾರಣ. ಆದ್ದರಿಂದ ಗೋ ಪುತ್ರನೇ ಅತಿ ಶ್ರೇಷ್ಠ ಪುತ್ರನೆಂದು ಜನಪದರು ಭಾವಿಸುತ್ತಾರೆ. ಪ್ರಾಚೀನ ಭಾರತದ ವೇದ ಕಾಲದ ಋಷಿ ಆಶ್ರಮಗಳು ದೊಡ್ಡ ವಿದ್ಯಾಪೀಠಗಳಾಗಿದ್ದವು. ಈ ಆಶ್ರಮದ ಯಜ್ಞ ಯಾಗಾದಿ ಕರ್ಮಗಳಿಗೆ, ಆಶ್ರಮ ನಿವಾಸಿಗಳಿಗೆ ಬೇಕಾಗುವ ಹಾಲು, ತುಪ್ಪ, ಬೆಣ್ಣೆ, ಮೊಸರುಗಳಿಗಾಗಿ ಆಶ್ರಮದಲ್ಲಿ ದೊಡ್ಡ ದೊಡ್ಡ ಗೋಶಾಲೆಗಳಿರುತ್ತಿದ್ದವು. ಗೌತಮ ಮುನಿಯ ಆಶ್ರಮದಲ್ಲಿ ೧೦೦೦ ಆಕಳ ಹಿಂಡಿನ ಗೋಶಾಲೆಯಿತ್ತು. ಆಯಾ ಗೋಶಾಲೆಯಲ್ಲಿದ್ದವರು ಆಯಾ ಗೋತ್ರಕ್ಕೆ ಸೇರಿದವರಾದರು. **'ಗೋತ್ರ'** ಮತ್ತು **'ಗೌಕ್ಷತಿ'** ಎಂಬ ಶಬ್ದಗಳ ಅರ್ಥ ಸಾಮುದಾಯಿಕ ದನಗಳ ದೊಡ್ಡಿ ಮತ್ತು ಸಾರ್ವಜನಿಕ ಗೋಮಾಳ ಎಂದು **ಡಾ॥ ದಾಸ್** ಹೇಳುತ್ತಾರೆ. ಮಹಾರಾಜರು, ಶ್ರೀಮಂತರು ಈ ಗುರುಕುಲಗಳಿಗಾಗಿ ಆಕಳುಗಳ ಹಿಂಡನ್ನು ಮತ್ತು ಭೂಮಿಯನ್ನು ದಾನವಾಗಿ ಕೊಡುತ್ತಿದ್ದರು. ಈ ಗೋಶಾಲೆಗಳ ವಿಚಾರಣೆ, ದನಗಳನ್ನು ಕಾಯುವುದು, ಮೇಯಿಸುವುದು,

ಕಟ್ಟುವುದು, ಹಾಲು ಹಿಂಡುವುದು, ಮೊದಲಾದ ಕಾರ್ಯಗಳೆಲ್ಲವೂ ಆಶ್ರಮದ ಶಿಷ್ಯವರ್ಗದವರ ಒಂದು ಮುಖ್ಯ ಕರ್ತವ್ಯವಾಗಿತ್ತು. ಹೀಗಾಗಿ ಈ ಶಿಷ್ಯ ವೃಂದವು ಪಶುಪಾಲನೆ, ಸಂವರ್ಧನೆ ಮತ್ತು ಹೈನೋತ್ಪಾದನೆಯಲ್ಲಿ ಪರಿಣತಿ ಪಡೆದಿತ್ತು. ಇಂಥ ಸೇವೆಗಳ ಆಧಾರದಲ್ಲೇ ಅವನ ನಿಸ್ವಾರ್ಥ ಗೋಪ್ರೇಮವನ್ನು ಗಮನಿಸಿ ಅವನಿಗೆ ಸ್ಥಾನ ಮಾನಗಳು ಲಭಿಸುತ್ತಿದ್ದವು.[೧೬]

ಛಾಂದೋಗ್ಯ ಉಪನಿಷತ್ತಿನಲ್ಲಿ **"ನಿಸ್ವಾರ್ಥ ಸೇವೆಯೇ ಜ್ಞಾನ ಸಂಪಾದನೆಯ ಸಾಧನ"** ಎಂದು ವಿವರಿಸಿದೆ. ಗೋಸೇವೆಯಿಂದ ಸತ್ಯಕಾಮ ಜಾಬಾಲಕನಿಗೆ ಜ್ಞಾನ ಪ್ರಾಪ್ತಿಯಾಯಿತೆಂದು ಹೇಳಲಾಗಿದೆ. ಆ ಕಥೆ ಏನೆಂದರೆ ಗೌತಮ ಮುನಿಗಳು ಸತ್ಯಕಾಮ ಜಾಬಾಲಕನಿಗೆ ೪೦೦ ಹಸುಗಳನ್ನು ಕೊಟ್ಟು, ಈ ೪೦೦ ಹಸುಗಳು ಎಂದು ೧೦೦೦ ಹಸುಗಳಾಗುತ್ತವೆಯೋ ಅಂದು ಮರಳಿ ಆಶ್ರಮಕ್ಕೆ ಬಾ ಎಂದು ಕಳಿಸಿದರು. ಸತ್ಯಕಾಮನು ದನಗಳನ್ನು ಮೇಯಿಸುತ್ತಾ ಒಂದು ಹುಲ್ಲುಗಾವಲನ್ನು ಸೇರಿ ಅಲ್ಲಿ ಬೀಡು ಬಿಟ್ಟು ದನಗಳ ಪಾಲನೆ ಪೋಷಣೆ ಮಾಡುತ್ತಿದ್ದನು. ಕ್ರೂರ ಪ್ರಾಣಿಗಳಿಂದ ದನಗಳನ್ನು ಕಾಪಾಡುವುದು ಅವನ ನಿತ್ಯದ ಕೆಲಸವಾಗಿತ್ತು. ಒಂದು ದಿನ ಎತ್ತು ಮಾತನಾಡುವುದು ಕೇಳಿಸಿತು. 'ಎಲೈ ಸತ್ಯಕಾಮನೇ, ನಮ್ಮನ್ನು ನಮ್ಮ ಆಚಾರ್ಯರ ಆಶ್ರಮಕ್ಕೆ ಕರೆದುಕೊಂಡು ಹೋಗು, ಈಗ ನೀನು ಜ್ಞಾನದ ಅಧಿಪತಿಯಾಗಿರುತ್ತೀಯ, ಎಂದು ಹೇಳಿ ಅವನಿಗೆ ಜ್ಞಾನೋಪದೇಶ ಮಾಡಿತು. ಈ ಪ್ರಕಾರ ಆಕಳ ಸೇವೆಯಿಂದ ಸತ್ಯಕಾಮನಿಗೆ ಜ್ಞಾನ ಪ್ರಾಪ್ತಿಯಾಯಿತು. ಇಲ್ಲಿ ಗೋವಿನ ವಾಣಿ ಕೇಳಿಸಿತು ಎಂಬುದು ಅತಿಶಯೋಕ್ತಿ ಎನಿಸಿದರೂ ಅವನಿಗೆ ಜ್ಞಾನ ಪ್ರಾಪ್ತಿಯಾಯಿತು ಎಂದು ತಿಳಿಯಬಹುದು. ಈ ಅಂಶವು ಗೋವುಗಳ ಸೇವೆಯನ್ನು ಯಾರು ಮಾಡುತ್ತಾರೋ ಅವರು ಸಕಲ ಭಾಗ್ಯಗಳನ್ನು ಅನುಭವಿಸಲು ಸಹಕಾರಿಯಾಗಿತ್ತು.[೧೭]

ಬೃಹದ್ಧಾರಣ್ಯಕ ಹಾಗೂ ಛಾಂದೋಗ್ಯ ಉಪನಿಷತ್ತಿನಲ್ಲಿ ವಿದೇಹ ರಾಜನಾದ ಜನಕ ಮಹಾರಾಜರು ತತ್ವಜ್ಞಾನಿಗಳ ಒಂದು ಸಭೆಯಲ್ಲಿ ನಡೆಸಿದ ಒಂದು ಸ್ಪರ್ಧೆಯಲ್ಲಿ ಜಯಿಸಿದ ಯಜ್ಞಾವಲ್ಕರಿಗೆ ಪಾರಿತೋಷಕ ನೀಡಿ ಕಾಣಿಕೆಯಲ್ಲಿ ಸ್ವಲ್ಪ ಭಾಗ ಮಾತ್ರ ನೀಡಿ ಉಳಿದ ಹೆಚ್ಚಿನ ಭಾಗವನ್ನು ಒಂದು ಸಾವಿರ ಆಕಳು ರೂಪದಲ್ಲಿ ಕೊಟ್ಟನು. ಇದನ್ನು ಕೊಡುವಾಗ ಪ್ರತಿ ಆಕಳ ಕೊಂಬಿನ ಮೇಲೆ ೫ ಬಂಗಾರದ ಪಾದುಕೆಗಳ ಗುರುತನ್ನು ಇಟ್ಟುಕೊಟ್ಟನು ಎಂಬ ಕಥೆ ಇದೆ.[೧೮] ಪ್ರತಿಯೊಂದು ಗುರುಕುಲವೂ ಆಹಾರ ಹಾಗೂ ಸಂಚಾಲನೆಗಾಗಿ ಸಾಕಷ್ಟು ಜಮೀನು ಮತ್ತು ದನಗಳ ಹಿಂಡಿನ ಮೇಲೆಯೇ ಪೂರ್ಣವಾಗಿ ಅವಲಂಬಿಸಿದ್ದವು. ಗುರುಕುಲ ನಿರ್ವಹಣೆಯಲ್ಲಿ ಆಕಳುಗಳ ಪಾತ್ರ ಮುಖ್ಯವಾಗಿತ್ತು. ಗುರುಕುಲದ ವಿದ್ಯಾರ್ಥಿಗಳಿಗೆ ಮೊದಲ ಪಾಠವೇ ಆಕಳುಗಳ ಸೇವೆ. ಈ ಪ್ರಕಾರ ದನಗಳು ಮತ್ತು ಜನರ ನಿಕಟ ಬಾಂಧವ್ಯ ಭಾರತದಲ್ಲಿ ಸಾವಿರಾರು

ವರ್ಷಗಳಿಂದ ನಡೆದು ಬಂದಿದೆ. ಗೋವಿನ ಸೇವೆಯಿಂದ ಪಾಪ ವಿಮುಕ್ತಿ, ಕಪಿಲ ಆಕಳ ದರ್ಶನದಿಂದ ಶಾಪ ವಿಮೋಚನೆ, ಮೇಯುತ್ತಿರುವ ಆಕಳನ್ನು ತಡೆದು ನಿಲ್ಲಿಸಿದಲ್ಲಿ ನರಕ ದರ್ಶನವಾಗುವುದು ಎಂಬೆಲ್ಲಾ ನಂಬಿಕೆಗಳು ಶಾಸ್ತ್ರಬದ್ಧವಾಗಿ ಜಾರಿಗೆ ಬಂದವು.[೯]

**ಪ್ರಾಚೀನ ಗೋ ಸಂಪತ್ತು**

ಮಾನವ ವಿಕಾಸದ ಹಂತಗಳನ್ನು ದಾಟಿ ತನ್ನದೇ ಆದ ಕುಟುಂಬ, ಗ್ರಾಮ, ನಗರ, ಮತ್ತು ರಾಜ್ಯ, ಎಂದು ಭೂಮಿಯನ್ನು ಹಂಚಿಕೊಂಡು ಅದಕ್ಕೊಬ್ಬ ರಾಜ, ಅವನಿಗೆ ಸಹಾಯಕರಾಗಿ ರೂಪಿಸಿಕೊಳ್ಳುತ್ತಾ ಒಂದು ಆಡಳಿತ ವ್ಯವಸ್ಥೆಯನ್ನು ಮಾಡಿಕೊಂಡನ್ನು. ಋಷಿ ಮುನಿಗಳು ಆಶ್ರಮ ವಾಸಿಗಳಾಗಿ ನಗರದ ಅರಸರು ಮತ್ತು ಇತರರಿಂದ ವಿಶೇಷ ದಾನಗಳನ್ನು ಪಡೆದು ಸಂತುಷ್ಟರಾದರು. ಪಶುಪಾಲನೆಯ ಕಾರಣದಿಂದ ಅವನಲ್ಲಿದ್ದ ಮೃಗತ್ವವನ್ನು ಕಳೆದುಕೊಂಡು ಮಾನವ ನಾಗರಿಕನಾಗಿ ಬದುಕತೊಡಗಿದ. ಅಂದಿನ ಮಾನವನ ಆಸ್ತಿ ಎಂದರೆ ಹಸುಗಳೇ ಆಗಿದ್ದವು. ಈ ದನಗಳ ತಳಿಗಳನ್ನು ಆ ಮನೆತನ, ಗ್ರಾಮ, ಅಥವಾ ಜನಾಂಗ ಶತಮಾನಗಳಿಂದ ಪೋಷಿಸಿಕೊಂಡು ಬಂದಿದ್ದವು. ಇಂದಿಗೂ ಅನೇಕ ಗೋವುಗಳ ಸಂತತಿಯನ್ನು ಕೆಲವು ಪ್ರದೇಶಗಳ ಹೆಸರಿನಿಂದಲೇ ಗುರುತಿಸುತ್ತಾರೆ. ಗೋವುಗಳನ್ನು ವಿನಿಮಯಕ್ಕೆ ಬಳಸುತ್ತಿದ್ದರಿಂದ ಅಂದಿನ ಜನರು ತಾವು ಪಡೆದ ಸೇವೆಗೆ ಪ್ರತಿಯಾಗಿ ಆಕಳುಗಳನ್ನು ಕೊಡುತ್ತಿದ್ದರು. ಇದರಿಂದಾಗಿ ಗೋಧನ(ಗೋಸಂಪತ್ತು) ಅಂದಿನ ಸಮಾಜದಲ್ಲಿ ತುಂಬಾ ಪ್ರಾಮುಖ್ಯತೆ ಪಡೆದಿತ್ತು. ಪ್ರಾಚೀನ ಭಾರತದಲ್ಲಿ ಋಷಿಗಳು, ಮಹಾರಾಜರು, ಮತ್ತು ಶ್ರೀಮಂತರು ದೊಡ್ಡ ದೊಡ್ಡ ಗೋಶಾಲೆಗಳನ್ನಿಟ್ಟಿದ್ದರು. ಅದು ಪ್ರತಿಷ್ಠೆಯ ವಿಷಯವಾಗಿತ್ತು. ಅಂದು ಗೋಧನವೇ ಅವರ ಸಂಪತ್ತಾಗಿತ್ತು. ಆಕಳುಗಳೇ ಅಂದಿನ ಸಂಪತ್ತಿನ ಅಳತೆಗೋಲಾಗಿದ್ದವು.

**ಯಾರಬಳಿ** ೫ ಲಕ್ಷ ಅಕಳುಗಳಿದ್ದವರನ್ನು **"ಉಪನಂದ"** ಎಂದು

೯ ಲಕ್ಷ ಆಕಳುಗಳಿವೆಯೋ ಅವರನ್ನು **"ನಂದ"** ಎಂದು

೧೦ ಲಕ್ಷ ಆಕಳುಗಳಿದ್ದವರನ್ನು **"ವೃಕ್ಷಭಾನು"** ಎಂದು

೨೫ ಲಕ್ಷ ಆಕಳುಗಳಿದ್ದವರನ್ನು **"ವೃಕ್ಷಭಾನುವರ"** ಎಂದು

೧ ಕೋಟಿ ಆಕಳುಗಳಿದ್ದವರನ್ನು **"ನಂದರಾಜ"** ಎಂದು ಕರೆಯುತ್ತಿದ್ದರು.

ಆಕಳುಗಳ ದಾನ ಅಂದು ಸಾಮಾನ್ಯವಾಗಿತ್ತು. ಹೆಚ್ಚು ಹೆಚ್ಚು ಹಸುಗಳನ್ನು ದಾನ ಕೊಡುವುದು ದಾನ ಕೊಟ್ಟವರ ಶ್ರೀಮಂತಿಕೆಯನ್ನು ವ್ಯಕ್ತಪಡಿಸುತ್ತಿತ್ತು. ಅಲ್ಲದೆ ಈ ದಾನವನ್ನು ಬ್ರಾಹ್ಮಣರು ಮಾತ್ರ ಸ್ವೀಕರಿಸಲು ಅರ್ಹರಾಗಿದ್ದರು ಎಂದು ರಾಜರು ಹಾಗೂ ಜನಸಾಮಾನ್ಯರು ನಂಬಿದ್ದರು. ಈ ನಂಬಿಕೆ ಒಂದು ರೀತಿಯಲ್ಲಿ ಸಮಾಜದ ಆರ್ಥಿಕ ಅಸಮಾನತೆಗೂ ಕಾರಣವಾಗಿತ್ತು.

ಮಗಳ ಮದುವೆಗೆ ವರನಿಗೆ ದಕ್ಷಿಣೆಯಾಗಿ ಹಸುಗಳನ್ನು ಕೊಡುತ್ತಿದ್ದರು. ಭಗವಾನ್ ಸಿದ್ಧಾರ್ಥನ ಕಾಲದಲ್ಲಿ ಧನಂಜಯನೆಂಬ ಬಹುದೊಡ್ಡ ಶ್ರೀಮಂತನಿದ್ದನು. ಅವರು ತನ್ನ ಮಗಳ ದಕ್ಷಿಣೆಯ ಸಲುವಾಗಿ ೫೦೦ ಗಾಡಿ ಬಂಗಾರ, ಬೆಳ್ಳಿ, ಮತ್ತು ತಾಮ್ರದ ಪಾತ್ರೆಗಳನ್ನಲ್ಲದೇ ದಾನ ರೂಪವಾಗಿ(ವಂತಿಗೆಯಾಗಿ)ಆಕಳ ಹಿಂಡನ್ನು ಕೊಟ್ಟನು. ಈ ಹಿಂಡು ೬ ಮೈಲು ಉದ್ದದಷ್ಟು, ೧೪೦ ಮೊಳ ಅಗಲದಷ್ಟಿತ್ತೆಂದು ಹೇಳಲಾಗಿದೆ. 'ಮಹಾವೀರನ' ಅನುಯಾಯಿಗಳಾದ 'ರಾಜಗ್ರಹಯ' 'ಮಹಾಶಾಲಕನ' ಹತ್ತಿರ ೮೦,೦೦೦/– ಆಕಳುಗಳ ಹಿಂಡು, ಕಾಶಿಯ 'ಚುಲನಪಿತನ' ಹತ್ತಿರ ೮ ಲಕ್ಷಾವಧಿಯಷ್ಟು ಹಿಂಡು, ಚಂಪಾದ 'ಕಾಮದೇವ, ಕಾಶಿಯ ಸೂರದೇವ, ಕೆಂಪಾಲಿಯ ಕುಂಡ ಕೋಕಿಲ ಈ ಪ್ರತಿಯೊಬ್ಬರ ಹತ್ತಿರ ೬೦೦೦೦/– ದನಗಳಿದ್ದವು. ಶ್ರವಸತಿಯಂದನಿಪಲಿತ ಮತ್ತು ಶಾಲಿನಿಪಿತ ಇವರ ಹತ್ತಿರ ೪೦,೦೦೦/– ಆಕಳುಗಳು ಮತ್ತು ಶಾಕದಲ ಪುತ್ರನಲ್ಲಿ ೧೦೦೦೦/–ಆಕಳುಗಳು, ಮಹಾಶಾಕನ ಪತ್ನಿಯಾದ ರೇವತಿಗೆ ೮೦೦೦೦/– ಆಕಳುಗಳು ವರದಕ್ಷಿಣೆಯಾಗಿ ಕೊಡಲ್ಪಟ್ಟವು ಎಂದು **ಉಪಾಸಕದಾಸ ಸಂಗಸೂತ್ರ** ದಿಂದ ತಿಳಿದುಬರುತ್ತದೆ.[೨೦]

ಸುಮಾರು ೨೩೦೦ ವರ್ಷಗಳ ಹಿಂದೆ ನಮ್ಮ ದೇಶದಲ್ಲಿ ಪಶುಪಾಲನೆಯ ಮಹತ್ವ ಹಾಗೂ ಬೆಳವಣಿಗೆ ಯಾವ ರೀತಿ ಸಾಗಿತ್ತು ಎಂಬುದಕ್ಕೆ ಅಂದಿನ ಕಾಲದ ಆರ್ಥಿಕ ಪರಿಸ್ಥಿತಿಯ ಮೇಲೂ ಬೆಳಕು ಚೆಲ್ಲುವ ಕೃತಿಯಾಗಿ **"ಕೌಟಿಲ್ಯನ ಅರ್ಥಶಾಸ್ತ್ರ"** ಪ್ರಾಮುಖ್ಯತೆ ಪಡೆದಿದೆ. ಅಂದಿನ ಕಾಲದ ಜನ ಜೀವನದಲ್ಲಿ ಪಶುಪಾಲನೆಯ ಪ್ರಾಮುಖ್ಯತೆ, ಪ್ರಮುಖ ಆರ್ಥಿಕ ಮೂಲವಾಗಿ ಪಶುಪಾಲನೆ ಹೇಗೆ ಸ್ಥಾನ ಪಡೆದಿತ್ತು ಎಂಬುದರ ಬಗ್ಗೆ ಕೌಟಿಲ್ಯನ ಅರ್ಥಶಾಸ್ತ್ರವು ಬೆಳಕು ಚೆಲ್ಲುತ್ತದೆ. ಪಶುಪಾಲನೆಯಲ್ಲಿ ಆಡಳಿತ ಹಾಗೂ ಅನುಕೂಲತೆಯ ದೃಷ್ಟಿಯಿಂದ ಮಾಡಿಕೊಂಡ ವಿಭಾಗಗಳ ಬಗ್ಗೆ ಈ ರೀತಿ ವಿವರಣೆ ಇದೆ.

೧. **ಗೋಧ್ಯಕ್ಷ**: ಗೋವುಗಳ ಮೇಲ್ವಿಚಾರಕ, ಗೋಧ್ಯಕ್ಷನು ವೇತನೋಪಗ್ರಹ, ಕರಪ್ರತಿಕರ, ಭಗ್ನೋತ್ಸೃಷ್ಟಕ, ಭಾಗಾನುಪ್ರವಿಷ್ಟಕ, ವ್ರಜಪಯಾಗ್ರ, ನಷ್ಟ, ವಿನಷ್ಟ, ಮತ್ತು ಕ್ಷೀರ ಘೃತ ಸಂಜಾತ ಹೀಗೆ ಎಂಟು ತರಹದ ವಿಭಾಗಗಳನ್ನು ಆಡಳಿತದ ದೃಷ್ಟಿಯಿಂದ ಮಾಡಿಕೊಂಡಿದ್ದರು. ಆ ವಿಭಾಗಗಳ ವಿವರಗಳನ್ನು ಈ ಕೆಳಗಿನಂತೆ ನೀಡಿದೆ.

೧. **ವೇತನೋಪಗ್ರಹ** : ಗೋಗಾಯಿ, ಎಮ್ಮೆ ಕಾಯುವವ(ಮಹಿಷಪಾಲಕ), ಹಾಲು ಹಿಂಡುವವ, ಬೆಣ್ಣೆ ಕಡೆಯುವವ ಮತ್ತು ಕ್ರೂರ ಪ್ರಾಣಿಗಳಿಂದ ದನಗಳನ್ನು ಕಾಯುವ ಬೇಟೆಗಾರ ಇವರೆಲ್ಲರೂ ತಮ್ಮ ಕೆಲಸಗಳಿಗೆ ಪ್ರತಿಫಲವಾಗಿ ಕೆಲವು ಹಾಲು ಹಿಂಡುವ ದನಗಳನ್ನು ಪಡೆಯುತ್ತಿದ್ದರು. ದನಗಳ ಹಿಂಡಿಗೆ ಕೂಲಿಯಿಂದ ಕಾಯಲ್ಪಡುವ ದನಗಳ ಹಿಂಡು ಎಂಬ ಹೆಸರಿತ್ತು. ಇದೇ **ವೇತನೋಪಗ್ರಹ** ಎನ್ನುವರು. ಅಂದಿನ ಕಾಲದ ಜನಜೀವನದಲ್ಲಿ ಧನದ ಪ್ರಾಮುಖ್ಯತೆಯನ್ನೇ

ಹಾಲುಕೊಡುವ ಹಸುಗಳು ಹೊಂದಿದ್ದರಿಂದ ನಿಗದಿಪಡಿಸಿದ ಜನರಿಂದ ನಿಗದಿಪಡಿಸಿದ ಸೇವೆಗೆ ಅನುಗುಣವಾಗಿ ಹಸುಗಳ ಉತ್ಪಾದನೆಯನ್ನು ಅಥವಾ ಹಸುಗಳನ್ನು ವಿನಿಮಯದ ನಾಣ್ಯಕ್ಕೆ ಪ್ರತಿಯಾಗಿ ನೀಡುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ.

೨. **ಕರಪ್ರತಿಕರ** : ಸಮವಯಸ್ಸಿನ ಆಕಳು, ಹಿಂಡುವ ದನ, ಗಬ್ಬದ ದನ, ಮಣಕ (ಕಡಸು) ಮತ್ತು ಕರು, ಇವುಗಳ ಒಂದು ನೂರು ಸಂಖ್ಯೆಯ ಹಿಂಡುಗಳನ್ನು ಒಬ್ಬ ಸಂರಕ್ಷಿಸಬೇಕು. ಈ ಕರಾರಿನಂತೆ ಸಾಕುವ ಪ್ರತಿಯೊಬ್ಬನೂ ಒಡೆಯನಿಗೆ ಪ್ರತಿವರ್ಷ ೮ ವಾರ ತುಪ್ಪ (೮೪ ಕುತ್ತೆ ತುಪ್ಪ) ಒಂದೊಂದು ಬಾಲಕ್ಕೆ ಒಂದೊಂದು ಪಣ, ಮತ್ತು ರಾಜಮುದ್ರೆಯಿಂದ ಕೂಡಿದ ಸತ್ತ ದನಗಳ ಚರ್ಮವನ್ನು ವಾರ್ಷಿಕ ತೆರಿಗೆಯಾಗಿ ಕೊಡಬೇಕು. ಇದಕ್ಕೆ **'ಕರಪ್ರತಿಕರ'** ಎನ್ನುವರು.

೩. **ಭಗ್ನೋತ್ಸೃಷ್ಟಕ** : ಅಂಗವಿಕಲವಾದ, ಬೇರೆಯವರಿಂದ ಸುಲಭವಾಗಿ ಹಿಂಡಲಾಗದ, ಕಾಲು ಕಟ್ಟಿ ಕಷ್ಟದಿಂದ ಕರೆಯಬೇಕಾದ, ತಮ್ಮ ಕರುಗಳನ್ನೇ ಕೊಲ್ಲುವಂತಹ ನೂರು ದನಗಳ ಹಿಂಡಿನ ಗುಂಪಿಗೆ 'ನಿರುಪಯುಕ್ತವಾದ ಮತ್ತು ಪರಿತ್ಯಕ್ತವಾದ ಹಿಂಡು' ಎಂದು ಕರೆಯಲಾಗುತ್ತಿತ್ತು. ಇಂಥ ಹಿಂಡಿನವರು, ಘೃತಾಧಿರಾಜ ಭಾಗದ ಅರ್ಧವನ್ನೋ ಅಥವಾ ಮೂರನೇ ಒಂದಂಶವನ್ನು ಯೋಗ್ಯವಾದ ರೀತಿಯಲ್ಲಿ ರಾಜನಿಗೆ ಕೊಡಬೇಕು. ಇದಕ್ಕೆ **ಭಗ್ನೋತ್ಸೃಷ್ಟಕ** ಎಂದು ಹೆಸರು.

೪. **ಭಾಗಾನುಪ್ರವಿಷ್ಟಕ** : ಕಳ್ಳಕಾಕರು ಅಥವಾ ಶತ್ರುಗಳು ತಮ್ಮ ದನಗಳನ್ನು ಅಪಹರಿಸುವರೆಂಬ ಭಯದಿಂದ ಹೆದರಿ ತಮ್ಮ ಆಕಳುಗಳ ರಕ್ಷಣೆಗಾಗಿ ರಾಜನ ಗೋಶಾಲೆಯಲ್ಲಿ ತಂದುಬಿಟ್ಟು ದನಗಳ ಪಾಲನೆ ಮಾಡಿದ್ದಕ್ಕೆ ಕೂಲಿಯ ರೂಪವಾಗಿ ಆ ಪಶುಗಳ ಮಾಲೀಕರು ರಾಜನಿಗೆ ಹತ್ತನೇ ಒಂದು ಭಾಗವನ್ನು ಕೊಡುವ ಪದ್ಧತಿಗೆ **"ಭಾಗಾನುಪ್ರವಿಷ್ಟಕ"** ಎಂದು ಹೆಸರು. ಇಲ್ಲಿ ಗಮನಿಸಬೇಕೆಂದರೆ ಅಂದಿನ ಕಾಲದಲ್ಲೇ ತುರು ಅಪಹರಣಗಳು ತಮ್ಮ ಹಿಂಡನ್ನು ಹೆಚ್ಚಿಸಿಕೊಳ್ಳುವ ಉದ್ದೇಶದಿಂದ ಅಥವಾ ಗ್ರಾಮಗಳ ಅಥವಾ ಗುಂಪುಗಳ ನಡುವಿನ ಜಿದ್ದಿಗೆ ಗೋಗ್ರಹಣಗಳು ನಡೆದಿವೆ ಎಂಬುದನ್ನು ಊಹಿಸಲು ಭಾಗಾನುಪ್ರವಿಷ್ಟಕ ಅವಕಾಶ ಮಾಡಿಕೊಡುತ್ತದೆ. ಅಲ್ಲದೆ ರಾಜರ ಸಹಕಾರವಿಲ್ಲದೆ ಪಶು ಸಂಗೋಪನೆ ನಡೆಸುವುದು ಕಷ್ಟವಾಗಿತ್ತು. ಆಳುವ ರಾಜರು, ಗ್ರಾಮ ಮುಖಂಡರು, ದುರ್ಬಲರಾದರಂತೂ ಮೊದಲು ಅಪಾಯಕ್ಕೆ ಸಿಲುಕುತ್ತಿದ್ದದ್ದು ಗೋವುಗಳೇ ಆಗಿದ್ದವು.

೫. **ವ್ರಜಪರ್ಯಗ್ರ:** ಇದು ಒಂದು ರೀತಿಯಲ್ಲಿ ಇಂದಿನ ಆಧುನಿಕ ಡೈರಿಗಳ ದಾಖಲೀಕರಣವನ್ನೇ ಹೋಲುತ್ತದೆ. ಅಂದಿನ ಕಾಲದಲ್ಲಿ ದನಗಳನ್ನು ಈ ಕೆಳಗಿನಂತೆ ವರ್ಗೀಕರಿಸುತ್ತಿದ್ದರು.

೧. ಹೋರಿಗಳು, ೨. ಕರುಗಳು, ೩. ಸಾದು ದನಗಳು, ೪. ದುಡಿತದ ದನಗಳು, ೫. ಹೂಡುವುದಕ್ಕೆ ರೂಢಿ ಮಾಡಿದ ದನಗಳು, ೬. ಬೀಜಕ್ಕಾಗಿ ಇಟ್ಟ ಹೋರಿಗಳು, ೭. ಮಾಂಸಕ್ಕಾಗಿ

ಕಾದಿಟ್ಟ ದನಗಳು, ೮. ಎಮ್ಮೆಗಳು, ೯. ಹೂಡುವ ಎಮ್ಮೆಗಳು, ೧೦. ಮಣಕಗಳು, ೧೧. ಆಕಳುಗಳು, ೧೨. ಗಬ್ಬದ ದನಗಳು, ೧೩. ಹಿಂಡುವ ದನಗಳು, ೧೪. ಬರಡಾದ ದನ/ಎಮ್ಮೆಗಳು, ೧೫. ಉಪಜೀವಿಗಳು (ಒಂದು ಅಥವಾ ಎರಡು ತಿಂಗಳ ಅದಕ್ಕಿಂತ ಸಣ್ಣ ಕರುಗಳು, ಈ ರೀತಿ ಮೊಲೆ ಕುಡಿಯುವ ಕರುಗಳಿಗೆ ಉಪಜೀವಿಗಳೆಂದು ಹೆಸರು). ಈ ಎಲ್ಲಾ ದನಗಳಿಗೆ ೨ ತಿಂಗಳ ಮೇಲಿನ ಕರುಗಳಿಗೂ ಹಾಗೂ ಯಾರೂ ಕೇಳದ ಬೇರೆ ಹಿಂಡಿನಿಂದ ಬಂದ ದನಗಳಿಗೂ ರಾಜಮುದ್ರೆಯನ್ನು ಒತ್ತುತ್ತಿದ್ದರು. ದನಗಳ ಎತ್ತರ, ದಪ್ಪ, ಗುರುತು(ಚಹರೆಪಟ್ಟಿ), ಬಣ್ಣ, ಕೋಡಿನಿಂದ ಕೋಡಿಗಿರುವ ಅಂತರ, ಮತ್ತು ಕೋಡಿನ ಆಕಾರ, ಇವುಗಳನ್ನು ಪುಸ್ತಕದಲ್ಲಿ ಬರೆದು ಇಡುತ್ತಿದ್ದರು. ಈ ಪದ್ಧತಿಗೆ **"ವರ್ಗೀಕರಣ ಪದ್ಧತಿ"** ಅಥವಾ **"ವ್ರಜಪರ್ಯಗ್ರ"** ಎಂದು ಹೆಸರು.

೬. **ನಷ್ಟ:** ಹುಲ್ಲುಗಾವಲುಗಳಲ್ಲಿ ದನಗಳನ್ನು ಮೇಯಿಸುವಾಗ ಕಳ್ಳರಿಂದ ದನಗಳು ಅಪಹರಿಸಲ್ಪಟ್ಟರೆ ಅಥವಾ ಕಾಡಿನಲ್ಲಿ ದಾರಿ ತಪ್ಪಿ ಹಿಂಡಿನಿಂದ ತಪ್ಪಿಸಿಕೊಂಡು ಕಳೆದು ಹೋದ ಬೀಡಾಡಿ ದನಗಳನ್ನು **"ಕಳೆದುಹೋದ ದನಗಳು"** ಎಂದು ನೊಂದಾಯಿಸಲಾಗುತ್ತಿತ್ತು. ಇವುಗಳಿಗೆ "ನಷ್ಟ"ವೆಂದು ಹೆಸರು.

೭. **ವಿನಷ್ಟ:** ದನಗಳು ಕೆಸರಿನಲ್ಲಿ ಹೂತಾಗ, ಪ್ರಪಾತದಲ್ಲಿ ಸಿಕ್ಕಿಬಿದ್ದಾಗ, ರೋಗದಿಂದಾಗಲೀ ಅಥವಾ ಮುಪ್ಪಿನಿಂದಾಗಲಿ ಸತ್ತಾಗ, ನೀರಿನಲ್ಲಿ ಮುಳುಗಿ ಹೋದಾಗ, ಬಿರುಗಾಳಿಗೆ ಸಿಲುಕಿ ದೊಡ್ಡ ಮರಗಳು ದನಗಳ ಮೇಲೆ ಬಿದ್ದು ದನಗಳು ಸತ್ತಾಗ, ನದಿಯ ದಡ ಕುಸಿದು ದನ ಅದರ ಕೆಳಗೆ ಸಿಲುಕಿ ಹೂತು ಹೋದಾಗ, ದೊಣ್ಣೆ ಅಥವಾ ಕಲ್ಲಿನ ಹೊಡೆತದಿಂದ ಸತ್ತಾಗ, ಸಿಡಿಲು ಬಡಿದು, ಹುಲಿಹಿಡಿದು ಸತ್ತಾಗ, ಹಾವು, ಮೊಸಳೆ, ಕಾಡ್ಗಿಚ್ಚಿನಿಂದ ಸತ್ತ ದನಗಳಿಗೆ ಅಂದಿನ ಕಾಲದಲ್ಲಿ **"ಎಂದೂ ಮರಳಿ ದೊರೆಯಲಾಗದ ದನಗಳು"** ಅಥವಾ **"ವಿನಷ್ಟದನಗಳು"** ಎಂದು ಕರೆಯಲಾಗುತ್ತಿತ್ತು.

ಪಶುಪಾಲಕರು(ಗೋಪಾಲಕ)ಗಳು ಮೇಲೆ ಹೇಳಿದ ಗಂಡಾಂತರಗಳಿಂದ ದನಗಳನ್ನು ರಕ್ಷಿಸಲು ಸರ್ವ ಪ್ರಯತ್ನಗಳನ್ನು, ತಮ್ಮ ಪ್ರಾಣವನ್ನೂ ಲೆಕ್ಕಿಸದೇ ಮಾಡಬೇಕು. ಪಾಲಕನ ಯಾವುದೇ ಮೈಮರವಿನಿಂದ ಅಥವಾ ದೋಷದಿಂದ ವಿನಷ್ಟ ಆದರೆ ಪಾಲಕರು ನಷ್ಟವನ್ನು ತುಂಬಿಕೊಡಬೇಕು. ಆಕಳುಗಳನ್ನು ಯಾರಾದರೂ ಗಾಯಗೊಳಿಸಿದಲ್ಲಿ ಅಥವಾ ಬೇರೆಯಾರಾದರೂ ಗಾಯಮಾಡಿ ನೋಯಿಸುವುದಕ್ಕೆ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಸಹಾಯ ನೀಡಿದಲ್ಲಿ, ದನಗಳನ್ನು ಕಳ್ಳತನ ಮಾಡಿದಲ್ಲಿ ಅಥವಾ ಬೇರೆಯವರಿಗೆ ಕಳ್ಳತನ ಮಾಡಲು ಸಹಾಯ ಮಾಡಿದಲ್ಲಿ ಅಂಥಹವರನ್ನು ಕೊಂದು ಹಾಕಲಾಗುತ್ತಿತ್ತು.ರಾಜಮುದ್ರೆ ಹಾಕಿರುವ ದನಗಳ ಬದಲು ಹಿಂಡಿನ ಬೇರೆ ದನಗಳನ್ನು ಅದರ ಸ್ಥಳದಲ್ಲಿ ಅದಲು ಬದಲು ಮಾಡಿದಲ್ಲಿ ಅಂಥಹವರಿಗೆ ದಂಡ

ಹಾಗೂ ಶಿಕ್ಷೆ ವಿಧಿಸಲಾಗುತ್ತಿತ್ತು. ಅಪಹರಿಸಿದ ದನಗಳನ್ನು "**ಕಳ್ಳರಿಂದ ಪುನಃ ವಶಪಡಿಸಿಕೊಂಡಲ್ಲಿ ಅಂಥಹವರಿಗೆ ಬಹುಮಾನ ಸಿಗುತ್ತಿತ್ತು. ದನಗಳನ್ನು ಮೇಯಿಸುವಾಗ ಶತ್ರುಗಳಿಂದ ಗೋವುಗಳ ಅಪಹರಣ ಆಗದಂತೆ, ಶತ್ರುಗಳ ಕೈಗೆ ಸಿಗದಂತೆ ಅವುಗಳನ್ನು ಪಾರುಮಾಡಿ ರಕ್ಷಿಸಿದಲ್ಲಿ ಅಂಥಹವರಿಗೆ ದನದ ಅರ್ಧಬೆಲೆ ಕೊಡಲಾಗುತ್ತಿತ್ತು.**" ದನಗಳನ್ನು ಮೇಯಿಸಲು ಕಾಯ್ದಿಟ್ಟ ಗೋಮಾಳಗಳಲ್ಲಿ, ಹುಲ್ಲುಗಾವಲುಗಳಲ್ಲಿ, ಋತುಮಾನಗಳಿಗೆ ತಕ್ಕಂತೆ ನೀರು–ಮೇವು, ಸಮೃದ್ಧವಾಗಿರುವುದನ್ನು ತಿಳಿದು ಮೇಯಿಸುತ್ತಿದ್ದರು. ಸರ್ಪ, ಹುಲಿ, ಮುಂತಾದ ಮೃಗಗಳನ್ನು ಹೆದರಿಸಲು ಮತ್ತು ತಮ್ಮ ಹಸುಗಳು ಮೇಯುತ್ತಿರುವ ಜಾಗವನ್ನು ಸುಲಭವಾಗಿ ಗುರುತಿಸಲು ದನಗಳ ಕೊರಳಿಗೆ ಲೋಹದ ಘಂಟೆಗಳನ್ನು ಕಟ್ಟುತ್ತಿದ್ದರು.

ದನಗಳನ್ನು ಕಳ್ಳರು ಕದ್ದೊಯ್ದಾಗ, ಅಥವಾ ಕ್ರೂರ ಪ್ರಾಣಿಗಳಿಂದ ಅಥವಾ ಮುದಿತನದಿಂದ ಹಾನಿಯಾದಾಗ ತಕ್ಷಣ ವರದಿ ಮಾಡದಿದ್ದಲ್ಲಿ, ಕಳೆದ ದನಗಳ ಬೆಲೆಯನ್ನು ಗೋಪಾಲಕನು (ಗೋಗಾಯಿ) ನೀಡಬೇಕಾಗುತ್ತಿತ್ತು. ದನಗಳೇನಾದರೂ ಸತ್ತರೆ ಸಾಕ್ಷಿಗಾಗಿ ಸತ್ತ ದನಗಳ ಚರ್ಮ ಮುದ್ರೆ ಸಹಿತ ಒಪ್ಪಿಸಬೇಕಿತ್ತು. ಈ ಎಲ್ಲವೂ **ವಿನಷ್ಟ** ಎಂದು ಕರೆಸಿಕೊಳ್ಳುತ್ತಿದ್ದವು.

೮. **ಕ್ಷೀರಘೃತ ಸಂಜಾತ:** ಗೋಪಾಲಕರು ಹಾಲಿನಿಂದ ಬರುವ ಬೆಣ್ಣೆಯ ಲೆಕ್ಕಾಚಾರ ಮಾಡುತ್ತಿದ್ದರು. ದನಗಳನ್ನು ಅವುಗಳ ವಯಸ್ಸು, ಬಣ್ಣಗಳ ಪ್ರಕಾರ ವಿಂಗಡಿಸಿ ೧೦ ದನಗಳಿಗೆ ಒಂದೊಂದು ಗುಂಪುಗಳಾಗಿ ವಿಂಗಡಿಸಿ ಮೇಯಿಸಲಾಗುತ್ತಿತ್ತು. ಗೊಲ್ಲರ ರಕ್ಷಣಾ ಶಕ್ತಿಗನುಗುಣವಾಗಿ ಗೋವುಗಳನ್ನು ಮೇಯಿಸಲು ದೂರಕ್ಕೂ ಅಥವಾ ಹತ್ತಿರಕ್ಕೂ ಊರಿನಿಂದ ಹೊರಗೆ ಒಯ್ಯಲಾಗುತ್ತಿತ್ತು. ಎಲ್ಲ ದನಗಳಿಗೂ ಸಾಕಷ್ಟು ಮೇವು ಮತ್ತು ನೀರು ಪೂರೈಸಲಾಗುತ್ತಿತ್ತು. ಒಂದು ಹಿಂಡಿನಲ್ಲಿ ೧೦೦ ಪಶುಗಳಿರುತ್ತಿದ್ದವು. ಪ್ರತಿ ಹಿಂಡಿಗೆ ಕೆಲವು ಉತ್ತಮ ಹೋರಿಗಳು ಇರುತ್ತಿದ್ದವು. ಪಶುಗಳ ಪಾಲನೆಯ ಬಗ್ಗೆ ಕೌಟಿಲ್ಯನ ಅರ್ಥಶಾಸ್ತ್ರವು ಬೆಳಕು ಚೆಲ್ಲುತ್ತದೆ.[೨೧]

ಹೀಗೆ ರಾಜ ಮಹಾರಾಜರ ಕಾಲದಿಂದಲೂ ಪಶುಸಂಗೋಪನೆ ವ್ಯವಸ್ಥಿತ ರೀತಿಯಲ್ಲಿ ಸಾಗಿತ್ತು. ಭಾರತದಲ್ಲಿ ಕೈಗಾರಿಕಾ ಕ್ರಾಂತಿ ಸಂಭವಿಸುವವರೆಗೂ ಇಡೀ ಗ್ರಾಮೀಣ ಭಾಗದ ಸಂಚಾರ ವ್ಯವಸ್ಥೆಯನ್ನು ನಿರ್ವಹಿಸಲು ಎತ್ತುಗಳು ಅಗತ್ಯವಾಗಿದ್ದವು. ಯಾರ ಮನೆಯಲ್ಲಿ ಹೆಚ್ಚು ಎತ್ತುಗಳಿವೆಯೋ ಅವರು ದೊಡ್ಡ ಕೃಷಿಕರು ಎಂದು ಸಮಾಜ ಭಾವಿಸಿತ್ತು. ಹಳ್ಳಿಯ ಮನೆಮನೆಯಲ್ಲೂ ಘೃತ (ತುಪ್ಪ) ತಯಾರಿಸಲು ಸಾಧ್ಯವಿದ್ದರಿಂದ ಅಡುಗೆ ಹಾಗೂ ಪೂಜಾ ಕಾರ್ಯಗಳಿಗೆ ಹಸುವಿನ ತುಪ್ಪ ಪ್ರಾಮುಖ್ಯತೆ ಪಡೆಯಿತು. ಆಧುನಿಕ ಯುಗದ ಹಸಿರು ಕ್ರಾಂತಿ ಘೋಷಣೆಗೂ ಮುನ್ನ ರಸಾಯನಿಕ ಗೊಬ್ಬರಗಳ ತಯಾರಿಕೆ ಮತ್ತು ಆಧುನಿಕ ಯಂತ್ರಗಳು ಆರಂಭವಾಗುವವರೆಗೂ ಗೋವಿನ ತ್ಯಾಜ್ಯಗಳು ಕೃಷಿಯಲ್ಲಿ ಪ್ರಧಾನ ಪಾತ್ರ ವಹಿಸಿದ್ದವು. ಸ್ವಾತಂತ್ರ್ಯಾನಂತರ ಸರ್ಕಾರದ

ನೀತಿಗಳು ಪಂಚವಾರ್ಷಿಕ ಯೋಜನೆಗಳು, ರೈತರ ಮನೋಭಾವದಲ್ಲಿ, ಸಾಂಪ್ರದಾಯಿಕ ಬೇಸಾಯ ಕ್ರಮದಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿತು. ಯಂತ್ರಗಳನ್ನು ಹೊಂದಿದವ ಶ್ರೇಷ್ಠ, ಆಧುನಿಕ ಎಂದೂ, ದನಗಳಲ್ಲಿ ವ್ಯವಸಾಯ ಮಾಡುವವನು ಕನಿಷ್ಠ ಅಥವಾ ಬಡವ ಎಂಬ ಭಾವನೆ ಜನರಲ್ಲಿ ಮೂಡಿತು. ಬಿಡುವಿರದ ದುಡಿತಕ್ಕೆ ಸಿದ್ಧನಾದ ರೈತ ಪಶುಗಳೊಂದಿಗಿನ ಕುಣಿಯುವ ಕರುಗಳೊಂದಿಗೆ ಸಂಭ್ರಮಿಸುವ, ಮನೆಯ ಹಿರಿಯ ಯಜಮಾನರಂತೆ ಗೋವುಗಳನ್ನು ಪರಿಗಣಿಸುವ ಭಾವನಾತ್ಮಕ ಸಂಬಂಧಗಳು ಮೆಲ್ಲನೆ ಬದಲಾಗತೊಡಗಿದವು. ಹಸಿರುಕ್ರಾಂತಿಯ ನಂತರ ಕ್ಷೀರ ಕ್ರಾಂತಿಯ ಯೋಜನೆಗಳು ದೇಸಿ-ವಿದೇಶಿ ಹಸುಗಳ ಲಾಭ-ನಷ್ಟಗಳ ಲೆಕ್ಕಾಚಾರವನ್ನು ಮಾಡಿ ರೈತರು ಪಶುಪಾಲನೆ ನಡೆಸುವಷ್ಟು ಬದಲಾದರು. ಹೆಚ್ಚು ಹಾಲು ಕೊಡುವುದಕ್ಕೆ ಕಂಪನಿ ಆಹಾರಗಳನ್ನು ಬಳಸುವುದನ್ನು ಕಲಿತ ಪಶುಪಾಲಕ ಸುಲಭ ದಾರಿ ಹುಡುಕತೊಡಗಿದನು. ಉಳುವವನೆ ಭೂಮಿಯ ಒಡೆಯ, ಎಂಬ ಘೋಷಣೆ ಭೂಮಿ ಇಲ್ಲದ ರೈತರಿಗೂ ಭೂಮಿ ದೊರೆಯುವಂತೆ ಮಾಡಿತು. ಸಹಜವಾಗಿ ದನಗಳನ್ನು ಮೆಯಿಸಲು ಭೂ ಪ್ರದೇಶಗಳು ಕಡಿಮೆ ಆದಂತೆ ದನಗಳನ್ನು ಕಟ್ಟಿ ಮೇಯಿಸುವುದು ಅನಿವಾರ್ಯವೂ ಆಯಿತು. ಇಂತಹ ಸಂದರ್ಭದಲ್ಲಿ ನಿಂತಲ್ಲೇ ಮೇಯುವ ಮಿಶ್ರತಳಿಗಳು ಪ್ರಾಮುಖ್ಯತೆ ಪಡೆದವು.

ಆಧುನಿಕ ಸೈನ್ಯ ವ್ಯವಸ್ಥೆ ಕುದುರೆ, ಒಂಟೆ, ಆನೆ, ಕಾಲಾಳು, ದಳಗಳು, ಬದಲಾಗಿ ಭೂ-ಜಲ, ವಾಯುವಿನಲ್ಲಿ ಸಂಚರಿಸಬಹುದಾದ ಟ್ಯಾಂಕರ್, ವಿಮಾನ, ಸಬ್‌ಮೆರಿನ್‌ಗಳನ್ನು ಹೊಂದಿ ಆಧುನಿಕ ಯುದ್ಧ ಸಾಮಗ್ರಿಗಳಿಂದ ಕೈಗೊಳ್ಳುವ ರಣತಂತ್ರಗಳೂ ಬದಲಾದವು. ಅರಸೊತ್ತಿಗೆಗಳು ಕೊನೆಗೊಂಡು ಪ್ರಜಾತಂತ್ರ ವ್ಯವಸ್ಥೆ ಪ್ರಾರಂಭವಾಗಿ ಯುದ್ಧದ ಪ್ರಾಮುಖ್ಯತೆ ಕಡಿಮೆಯಾಯಿತು. ಮಾನವನು ತನ್ನ ಅನ್ವೇಷಣೆಯ ಫಲವಾಗಿ ವ್ಯಾಪಾರಕ್ಕಾಗಿ ಹೊಸ ಭೂ ಪ್ರದೇಶಗಳನ್ನು ಹುಡುಕುವ ಸಾಹಸಗಳು ನಡೆದವು. ಡಚ್ಚರು, ಫ್ರೆಂಚರು, ಹೂಣರು, ಬ್ರಿಟೀಷರು ಭಾರತಕ್ಕೆ ವ್ಯಾಪಾರಕ್ಕಾಗಿ ಬಂದು ತಮ್ಮ ಶಕ್ತಿಯ ಕಾರಣದಿಂದ ನಮ್ಮನ್ನು ಆಳತೊಡಗಿದರು. ಇದು ಭಾರತೀಯರಲ್ಲಿ ಸ್ವಾಭಿಮಾನ ಮತ್ತು ಸ್ವಾತಂತ್ರದ ಹೋರಾಟಕ್ಕೆ ಮುನ್ನುಡಿಯಾಯಿತು. ಆಧುನಿಕತೆ, ವೈಜ್ಞಾನಿಕ ಸಂಶೋಧನೆಗಳು ಮಾನವನ ಅಭಿವೃದ್ಧಿಯ ವೇಗವನ್ನು ಹೆಚ್ಚಿಸಿದವು. ಕೈಗಾರಿಕೀಕರಣ, ಸರ್ಕಾರಗಳಿಂದ ರಚನೆಯಾದ ಶಿಕ್ಷಣ ವ್ಯವಸ್ಥೆ, ಅನೇಕ ಉದ್ಯೋಗಾವಕಾಶಗಳು ಹೆಚ್ಚಾಗಿ ಕೃಷಿ ಕೆಲಸಗಳಿಗಿಂತ ಸರ್ಕಾರಿ ಅಥವಾ ಕಛೇರಿ ಕೆಲಸವೇ ಲೇಸು ಎಂಬ ಭಾವನೆ ಬೆಳೆಯಿತು. ಈ ಕಾರಣಗಳಿಂದ ಹಳ್ಳಿಗಳಿಂದ ಪೇಟೆಗಳ ಕಡೆಗೆ ಶಿಕ್ಷಣಕ್ಕಾಗಿ, ಉದ್ಯೋಗಕ್ಕಾಗಿ ವಲಸೆ ಆರಂಭವಾಯಿತು. ಈ ವಲಸೆ ನಿರಂತರವಾಗಿ ಸಾಗಿ ಅಕ್ಷರಸ್ಥ-ಅನಕ್ಷರಸ್ಥ, ಆಧುನಿಕ-ಹಿಂದುಳಿದ, ನಗರ-ಹಳ್ಳಿ, ವಾಹನ-ಎತ್ತಿನಗಾಡಿ, ಸಗಣಿಗೊಬ್ಬರ-ರಸಾಯನಿಕ ಗೊಬ್ಬರ ಹೀಗೆ ಸಂಪ್ರದಾಯ-ಆಧುನೀಕತೆಯ

ಸಂಘರ್ಷಕ್ಕೆ ಕಾರಣವಾದವು. ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿದ್ದ ಪಶುಪಾಲನೆಯನ್ನು ತಮ್ಮ ಜೀವನದ ಭಾಗವಾಗಿಸಿಕೊಂಡಿದ್ದ ರೈತರು ಯಂತ್ರಗಳನ್ನು ಒಪ್ಪಿಕೊಳ್ಳುತ್ತಿದ್ದಂತೆ ಮನುಷ್ಯ-ಪ್ರಾಣಿಗಳ ಒಂದು ಅವಿನಾಭಾವ ಸಂಬಂಧವು ಕಳಚಿಬಿತ್ತು. ಮಾರುಕಟ್ಟೆ ಸಂಸ್ಕೃತಿಯು ಹಣವನ್ನು ಹೊಂದಲು ಬೇಕಾದ ಆಧುನಿಕ ಕ್ರಮಗಳ ಅಧ್ಯಯನ, ಸಾಂಪ್ರದಾಯಿಕ ಪಶುಪಾಲನೆಗೆ ಹೊಡೆತಕೊಟ್ಟಿದ್ದು ಅಷ್ಟೇ ಸತ್ಯ. ಆರಂಭದಲ್ಲಿ ಬಂದ ಸಾಂಕ್ರಾಮಿಕ ರೋಗಗಳೂ ಕೂಡ ಪಶುಪಾಲನೆಯನ್ನು ಅಗತ್ಯ ಕಾರ್ಮಿಕರಿಲ್ಲದೆ ನರಳುವಂತೆ ಮಾಡಿತು. ಅದೊಂದು ಪೂಜ್ಯ ಭಾವನೆಯ ಕಾರ್ಯ ಎಂಬ ಭಾವನೆ ಬದಲಾಗಿ, ಹೊರದೇಶದ ಹಸುಗಳು ಕೊಡುತ್ತಿದ್ದ ಹೆಚ್ಚಿನ ಮೊತ್ತದ ಹಾಲು ನಮ್ಮ ದೇಸಿ ಹಸುಗಳು ಕೊಡುವ ಹಾಲಿಗಿಂತ ಮಿಗಿಲೆನಿಸಿತು. ಈ ಕಾರಣಗಳಿಂದ ಅನಿವಾರ್ಯ ಕಸುಬಾಗಿದ್ದ ಮತ್ತು ಪಾರಂಪರಿಕವಾಗಿ ಕುಟುಂಬ ಕೈಂಕರ್ಯವಾಗಿದ್ದ ಕೃಷಿ ಚಟುವಟಿಕೆ ಬಡವಾಯಿತು. ಎಲ್ಲರಿಗೂ ಸುಲಭವಾದ ಉದ್ಯೋಗವೇ ಬೇಕು ಎಂಬಂತಾಯಿತು. ಶ್ರಮದಾಯಕವಾದ ಕೃಷಿ ಕಡೆಗಣಿಸಲ್ಪಟ್ಟಿತು. ಸರ್ಕಾರದ ಆದ್ಯತೆಯ ಕಾರಣದಿಂದಲೂ ಕೃಷಿಯಲ್ಲಿ ತೊಡಗಿದವರಿಗೆ ಜೀವನ ಕಷ್ಟವಾಯಿತು. ಬೇಸಾಯ-ನೀಸಾಯ-ನಿಮ್ಮಪ್ಪಸಾಯ ಮನೆಮಂದಿಯೆಲ್ಲಾ ಸಾಯ ಎಂಬ ಮಾತು ಹುಟ್ಟಿದವು. ಅಲ್ಲದೆ ಮಾನವನ ದುರಾಸೆಯ ಫಲವಾಗಿ ದನಗಳ ಸಂತತಿ ನಶಿಸಿದವು. ಮಾನವನ ವಿಕಾಸದೊಂದಿಗೇ ಹೆಜ್ಜೆ ಹಾಕಿ ತನ್ನ ಉಪಯುಕ್ತತೆಯಿಂದ ದೈವತ್ವವನ್ನು ಪಡೆದು ಪೂಜ್ಯನೀಯವಾಗಿದ್ದ ದನಗಳು ಕಾಲ ಕ್ರಮೇಣ ತಮ್ಮ ಮಹತ್ವವನ್ನು ಕಳೆದುಕೊಂಡವು.

### ಅಡಿ ಟಿಪ್ಪಣಿಗಳು

೧. ಎ.ಎಲ್.ಭಾಷಮ್, ಪ್ರಾಚೀನ ಭಾರತ ಎಂಬ ಅದ್ಭುತ, ಪು.೧೭

೨. ಟಿ.ಜಿ.ಚಂದ್ರಶೇಖರಪ್ಪ, ಸಮಗ್ರ ಭಾರತದ ಇತಿಹಾಸ, ಪು.೧೨

೩. ಚಿತ್ರಗಳಲ್ಲಿ ಚರಿತ್ರೆ, ಪು.೨೪-೨೫

೪ ಎ.ಎಲ್.ಭಾಷಮ್, ಪ್ರಾಚೀನ ಭಾರತ ಎಂಬ ಅದ್ಭುತ, ಪು.೪೩

೪ಅ. ಟಿ.ಜಿ.ಚಂದ್ರಶೇಖರಪ್ಪ, ಸಮಗ್ರ ಭಾರತದ ಇತಿಹಾಸ, ಪು.೨೭

೫. ಟಿ.ಜಿ.ಚಂದ್ರಶೇಖರಪ್ಪ, ಸಮಗ್ರ ಭಾರತದ ಇತಿಹಾಸ, ಪು.೪೦-೪೩

೬ ಚಿತ್ರಗಳಲ್ಲಿ ಚರಿತ್ರೆ, ಪು.೧೧೮-೧೯

೭ ಟಿ.ಜಿ.ಚಂದ್ರಶೇಖರಪ್ಪ, ಸಮಗ್ರ ಭಾರತದ ಇತಿಹಾಸ, ಪು.೫೬-೫೭

೮. ಡಾ॥ ಕೆ. ಸದಾಶಿವ, ಪ್ರಾಚೀನ ಭಾರತದ ಇತಿಹಾಸ, ಪು.೯೬–೯೭

೯. ಆರ್.ಎಸ್ ಜ್ಯೋತಿ, ಪ್ರಾಚೀನ ಹಾಗೂ ಅರ್ವಾಚೀನ ದನಗಳ ಇತಿಹಾಸ, ಪು.೧–೨

೧೦. ಎ.ಎಲ್.ಭಾಷಮ್, ಪ್ರಾಚೀನ ಭಾರತ ಎಂಬ ಅದ್ಭುತ, ಪು.೨೮೦

೧೦ಅ ಕುಮಾರವ್ಯಾಸ ಭಾರತ, ಆದಿ ಪರ್ವ ೩೭

೧೧. ಆರ್.ಎಸ್ ಜ್ಯೋತಿ, ಪ್ರಾಚೀನ ಹಾಗೂ ಅರ್ವಾಚೀನ ದನಗಳ ಇತಿಹಾಸ, ಪು.೨

೧೨. ಅದೇ, ಪು.೧೭

೧೩. ಅದೇ, ಪು.೧೬

೧೪. ಅದೇ, ಪು.೧೫

೧೫. ಅದೇ, ಪು.೧೦

೧೬. ಅದೇ, ಪು.೧೮

೧೭. ಅದೇ, ಪು.೨೦

೧೮. ಅದೇ, ಪು.೨೧

೧೯. ಅದೇ, ಪು.೨೧–೨೫

೨೦. ಅದೇ, ಪು.೨೭

## ಅಧ್ಯಾಯ: ಮೂರು

# ಶಿಷ್ಟ ಸಾಹಿತ್ಯದಲ್ಲಿ ಗೋಗ್ರಹಣ

ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಗೋಗ್ರಹಣದ ಅಂಶಗಳನ್ನು ಪ್ರಧಾನವಾಗಿ ಬಳಸಿರುವ ಮತ್ತು ಉಲ್ಲೇಖಿಸಿರುವ ಕೃತಿಗಳು ಹೆಚ್ಚಿಲ್ಲ. ಏಕೆಂದರೆ ಪ್ರಾಚೀನ ಸಾಹಿತ್ಯದಲ್ಲಿ ಗೋಗ್ರಹಣವೆಂದರೆ ಮಹಾಭಾರತದ ವಿರಾಟಪರ್ವದಲ್ಲಿನ ಗೋಗ್ರಹಣವೇ ಆಗಿದೆ. ಆದರೆ ಗ್ರಾಮ ಸಮುದಾಯದಲ್ಲಿ ನೂರಾರು ಸಾವಿರಾರು ಗೋಗ್ರಹಣ ಕದನಗಳು ನಡೆದಿದ್ದರೂ ಕೂಡ ಅವು ಶಾಸನಗಳಲ್ಲಿ ದಾಖಲಾದವೇ ಹೊರತು ಅದೇ ವಸ್ತು ಕಾವ್ಯಗಳ ರೂಪದಲ್ಲಿ ಪರಿವರ್ತನೆಯಾಗಲಿಲ್ಲ. ಮಧ್ಯಕಾಲೀನ ಸಾಹಿತ್ಯದಲ್ಲಿ ಮಹಾಭಾರತದ ಗೋಗ್ರಹಣವನ್ನೇ ಸರಳೀಕರಿಸಿಯೋ ಅಥವಾ ಭಿನ್ನ ಛಂದಸ್ಸಿನಲ್ಲೋ ಹೇಳಲು ಯತ್ನಿಸಿದರು ಅಷ್ಟೆ. ಸಮಾಜದಲ್ಲಿ ನಡೆದ ತುರುಗಾಳಗಗಳ ವಸ್ತುವನ್ನಿಟ್ಟುಕೊಂಡು ಕಾವ್ಯಗಳ ರಚನೆಯಾಗಿದ್ದರೆ ಸಾಹಿತ್ಯ ಚರಿತ್ರೆಗೆ ಹೊಸ ಆಯಾಮವೇ ಒದಗುತ್ತಿತ್ತು. ಆದರೆ ನಮ್ಮ ಕವಿಗಳು ಇದರ ಕಡೆ ಗಮನಹರಿಸಲಿಲ್ಲ.

ಆಧುನಿಕ ಸಾಹಿತ್ಯದಲ್ಲೂ ಗೋಗ್ರಹಣ ಪ್ರಸಂಗಗಳು ಕಾಲಕ್ಕೆ ತಕ್ಕಂತೆ, ಸಾಹಿತ್ಯ ರೂಪಕ್ಕೆ ತಕ್ಕಂತೆ ಬಿಂಬಿತವಾಗಲಿಲ್ಲ. ಕೆಲವರು ಮಾತ್ರ ಮಹಾಭಾರತದ ಗೋಗ್ರಹಣ ಪ್ರಸಂಗವನ್ನೇ ಭಿನ್ನ ರೀತಿಯಲ್ಲಿ ಚಿತ್ರಿಸಿದರೇ ಹೊರತು ಅದನ್ನೇ ಪ್ರಧಾನವಾಗಿ ಬಳಸಿ ಕಥೆ, ಕಾದಂಬರಿ, ನಾಟಕ ಮುಂತಾದವು ರಚನೆಮಾಡಲಿಲ್ಲ.

ಎಸ್.ಎಲ್. ಭೈರಪ್ಪನವರ "ತಬ್ಬಲಿಯು ನೀನಾದೆ ಮಗನೆ" ಕಾದಂಬರಿಯಲ್ಲಿ ಗೋವನ್ನು ಆಹಾರವಾಗಿ ಬಳಸುವುದರ ಪರ ವಿರೋಧ ಅಂಶಗಳ ಚರ್ಚೆಯಾಗಿದೆ. ಹಾಗೇ ಇವರ ಪರ್ವ ಕಾದಂಬರಿಯಲ್ಲಿಯೂ ಗೋವನ್ನು ಆಹಾರವಾಗಿ ನೀಡುವ ಉಲ್ಲೇಖಗಳು ಕಂಡುಬರುತ್ತವೆಯೇ ಹೊರತು ಗೋವುಗಳನ್ನು ಹಿಡಿದಿಡುವ, ತುರುಗೊಳ್ ಯುದ್ಧ ವಿಧಾನಗಳ ಕುರಿತು ಉಲ್ಲೇಖಗಳಿಲ್ಲ. ವೀರ ಕಾವ್ಯಗಳೆಂದು ಪರಿಗಣಿತವಾಗಿರುವ ಪಂಪ ಮತ್ತು ರನ್ನರ ಕಾವ್ಯಗಳಲ್ಲೂ ಈ ಪ್ರಸಂಗವನ್ನು

ವಿಶೇಷವಾಗಿ ಚಿತ್ರಿಸಿಲ್ಲ. ಅವರು ಮನಸ್ಸು ಮಾಡಿದ್ದರೆ ಗೋಗ್ರಹಣದ ಪ್ರಸಂಗವನ್ನೇ ವೀರಕಾವ್ಯದ ವಸ್ತುವನ್ನಾಗಿ ತೆಗೆದುಕೊಳ್ಳಬಹುದಿತ್ತು. ಅವರ ಕಾವ್ಯಶೈಲಿಗೆ ಈ ಕಥೆಯು ಚೆನ್ನಾಗಿ ಹೊಂದುತ್ತಿತ್ತು. ಆದರೆ ಅವರೂ ಕೂಡ ಅದನ್ನು ಕೇವಲ ಒಂದು ಪ್ರಸಂಗವೆಂಬಂತೆ ಚಿತ್ರಿಸಿ ಕೈಬಿಟ್ಟಿದ್ದಾರೆ. ಆದರೆ ಪಂಪ ಮತ್ತು ರನ್ನರ ಅನೇಕ ಪದ್ಯಗಳು ಶಾಸನ ಕವಿಗಳಿಗೆ ಸ್ಫೂರ್ತಿಯಾಗಿವೆ. ನೂರಾರು ಶಾಸನಗಳಲ್ಲಿ ತುರುಗಾಳಗದ ಚಿತ್ರಣ ಮಾಡುವಾಗ ಇವರ ಕಾವ್ಯಗಳಿಂದ ಪ್ರೇರಣೆ ಪಡೆದಿರಬಹುದೆಂದು ಕಂಡುಬರುತ್ತದೆ. ಕನ್ನಡದ ಅನೇಕ ಕವಿಗಳ ಪ್ರಭಾವ ಶಾಸನ ಸಾಹಿತ್ಯದ ಮೇಲಾಗಿರುವುದರಿಂದ ಮತ್ತು ಅನೇಕ ಶಾಸನಗಳನ್ನು ಸ್ವತಃ ಕವಿಗಳೇ ಬರೆದಿರುವುದರಿಂದ ಅಂತಹ ಶಾಸನಗಳ ಸಾಹಿತ್ಯ ಒಂದು ಪುಟ್ಟ ಕಾವ್ಯದಂತೆ ಚಿತ್ರಣಗೊಂಡಿದೆ.

ಉದಾಹರಣೆಗೆ: ಕೊರಕೋಡಿನ ಒಂದು ವೀರಗಲ್ಲು ಅಣ್ಣ ತಮ್ಮಂದಿರು ಶತ್ರುಗಳ ಜೊತೆ ಹೋರಾಡುವಾಗ ಗುಹೆಯ ಬಾಗಿಲೊಳು ಸಿಂಹನಿರ್ಪಂತೆ ಎಂದು, ಸೊರ್ಕಿದ ಆನೆ ಕಬ್ಬಿನ ತೋಟವನ್ನು ಹೊಕ್ಕಂತೆ, ಎಂದೂ ಕಡಜಗಳ ಗೂಡನ್ನು ಕೆಣಕಿದಂತೆ, ಎಂದೂ ಹೇಳುತ್ತದೆ. ಆ ವೀರರ ವೀರಾವೇಶವನ್ನು ಶಾಸನದಲ್ಲಿ ವರ್ಣಿಸಲಾಗಿದೆ. ಶಾಸನ ಸಾಹಿತ್ಯದಲ್ಲಿ ಇಂಥಹ ನೂರಾರು ಚಿತ್ರಗಳು ದೊರೆಯುತ್ತವೆ. ಇವುಗಳ ಮೇಲೆ ನಮ್ಮ ಪ್ರಾಚೀನ ಕವಿಗಳ ಪ್ರಭಾವವಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಪ್ರಾಚೀನ ಕಾಲದಿಂದಲೂ ಗೋವುಗಳ ಬಗ್ಗೆ ವಿಶೇಷ ಒಲವನ್ನು ಹೊಂದಿರುವ ಭಾರತೀಯ ಸಮಾಜ, ಗೋವುಗಳ ಪಾಲನೆ ಅಷ್ಟೈಶ್ವರ್ಯವನ್ನು ತಂದುಕೊಡುತ್ತದೆ ಎಂಬ ನಂಬಿಕೆಯನ್ನು ಹೊಂದಿದೆ. ಅಂದರೆ ಧನ, ಧಾನ್ಯ, ವಿದ್ಯೆ, ಸಂತಾನ, ವೀರ, ಮತ್ತು ಜಯ ಮುಂತಾದ ಎಲ್ಲ ಭಾಗ್ಯಗಳೂ ಆ ಮನೆಯಲ್ಲಿ ನೆಲೆಗೊಳ್ಳುತ್ತವೆ ಎಂಬುದು ಅವರ ನಂಬಿಕೆಯಾಗಿತ್ತು.

> **"ಗೋಃ ಮತ್ತಾ ನ ವಿದ್ಯತೇ ತಥಾಧೇನು :**
> **ಸದನಂ ರಮಣೀಯಂ ಅಷ್ಟೈಶ್ವರ್ಯ**
> **ಮಹೀಲಕ್ಷ್ಮೀ ವಸತೇ ಗೋಮಯೇ ಸದಾ"**

ಅರ್ಥಾತ್ ಯಾರ ಮನೆಯಲ್ಲಿ ಗೋವುಗಳು ನಿರಂತರವಾಗಿ ಇರುತ್ತವೆಯೋ ಆ ಮನೆಯಲ್ಲಿ ರಮಣೀಯ ಅಷ್ಟೈಶ್ವರ್ಯದಿಂದ ಲಕ್ಷ್ಮಿಯು ಸದಾ ನೆಲಸಿರುತ್ತಾಳೆ ಎಂಬ ಆಧ್ಯಾತ್ಮ ಭಾವನೆ ಇಂದಿನ ಆಧುನಿಕ ಯುಗದಲ್ಲೂ ಸತ್ಯವಾಗಿವೆ. ಏಕೆಂದರೆ ಕೃಷಿಯ ಆಧಾರವೆ ಗೊಬ್ಬರವಾಗಿದ್ದು ನಮ್ಮ ಗ್ರಾಮದಲ್ಲಿ ಗೊಬ್ಬರವನ್ನು ಲಕ್ಷ್ಮೀ ಸ್ವರೂಪದಲ್ಲಿ ಇಂದಿಗೂ ಪೂಜಿಸಲಾಗುತ್ತಿದೆ. ಪ್ರಾಚೀನ ಕೃಷಿ ಪದ್ಧತಿ ಆಧುನಿಕ ವಿಜ್ಞಾನಿಗಳಿಂದಲೂ ಪ್ರಶಂಸನೀಯವಾಗಿದೆ. ರಾಸಾಯನಿಕ ಕೃಷಿ ವಿಧಾನಗಳಿಂದ ರೈತ ನಷ್ಟವನ್ನು ಅನುಭವಿಸಿ ಮತ್ತೆ ಗೋಮಯ ಆಧಾರಿತವಾದ

ಸಾವಯವ ಕೃಷಿ ಕಡೆಗೆ ಮುಖಮಾಡಿದ್ದಾನೆ. ಇತಿಹಾಸದ ನೆಮ್ಮದಿಯ ಜೀವನಕ್ಕೆ ಕಾರಣವಾಗಿದ್ದ ಪಶುಪಾಲನೆ ಮತ್ತೆ ಪ್ರಾಮುಖ್ಯತೆ ಪಡೆದುಕೊಂಡಿದೆ. ಕೃಷಿ ಚಟುವಟಿಕೆಗಳಿಗೆ ಗೋವು ಮಾತ್ರ ಆಧಾರ ಎಂದು ಆಧುನಿಕ ಮಾನವ ಒಪ್ಪಿ ನಡೆಯತೊಡಗಿದ್ದಾನೆ. ಕೃಷಿ ಭೂಮಿಗೆ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳಿಂದ ಆಗಿರುವ ಹಾನಿಯನ್ನು ಸರಿಪಡಿಸಲು ಗೋವುಗಳಿಂದ ಮಾತ್ರ ಸಾಧ್ಯ ಎಂದು ಇತ್ತೀಚೆಗೆ ಮಾನವನಿಗೆ ಮನದಟ್ಟಾಗಿದೆ. ಇಂಥ ವೈಜ್ಞಾನಿಕ ದೃಷ್ಟಿಯನ್ನು ನಮ್ಮ ಪ್ರಾಚೀನರು ಹೊಂದಿದ್ದರಿಂದಲೇ ದನಗಳನ್ನು ಧನಕ್ಕೆ ಹೋಲಿಸಿ, ಕಳೆದುಕೊಳ್ಳಲಾರದ ಆಸ್ತಿ ಎಂದು ನಂಬಿ ಜೀವನ ನಡೆಸಿದರು. ಆ ಗೋವುಗಳ ರಕ್ಷಣೆ ಜೀವನದ ಪರಮ ಧ್ಯೇಯವಾಗಿ, ಅವುಗಳನ್ನು ರಕ್ಷಿಸುವುದು ವೀರಮೌಲ್ಯವಾಗಿ ಜೀವನದ ಒಂದು ಭಾಗವಾಯಿತು.

ವೇದಸಂಸ್ಕೃತಿಯ ಪರಿಚಯ ಕೃತಿಯಲ್ಲಿ ಕೆ.ಎಸ್. ನಾರಾಯಣಾಚಾರ್ಯರು ಗೋವುಗಳಿಗೆ ಸಂಬಂಧಿಸಿದ ಕತೆಯೊಂದನ್ನು ಋಗ್ವೇದದಿಂದ ತೆಗೆದು ವಿವರಿಸಿದ್ದಾರೆ. ಈ ಘಟನೆಯೇ ಅತ್ಯಂತ ಪ್ರಾಚೀನ ತುರುಗೊಳ್ ಯುದ್ಧ ಎಂದು ಉಲ್ಲೇಖಿಸಬಹುದು.

ಆ ಕಥೆ ಹೀಗಿದೆ. **'ಪಣಿ'** ಗಳೆಂಬ ದೈತ್ಯರು ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟರು. ಆಗ ಇಂದ್ರನು ಗೋವುಗಳನ್ನು ಹುಡುಕಲು **'ಸರಮೆ'** ಎಂಬ ದೇವಶುನಿ(ನಾಯಿ)ಯನ್ನು ಕಳುಹಿಸಿದನು. ಸರಮೆಯು ಗೋವುಗಳು ಇರುವ ಜಾಗವನ್ನು ಪತ್ತೆಹಚ್ಚಿ ಇಂದ್ರನಿಗೆ ತಿಳಿಸಿ ಗೋವುಗಳ ಬಿಡುಗಡೆಗೆ ಸಹಾಯ ಮಾಡಿತು. ಸರಮೆಯು ಪಣಿಗಳನ್ನು ಮತ್ತು ಅವರು ಗೋವುಗಳನ್ನು ಬಚ್ಚಿಟ್ಟಿರುವ ಪ್ರದೇಶಗಳನ್ನು ಕಂಡುಹಿಡಿದ ಮೇಲೆ ಅವರು ಸರಮೆಯನ್ನು ವಿವಿಧ ಪ್ರಲೋಭನೆಗೆ ಗುರಿಪಡಿಸಿದರು.

**ಪಣಿಗಳು:** ಹೇ ಸರಮೇ! ಏನನ್ನು ಬಯಸಿ ಬಂದಿರುವೆ? ಈ ಉದ್ದದ ದಾರಿಯನ್ನು, ದಾರಿಯ ಮದ್ಯೆ ಅಡ್ಡವಾಗಿದ್ದ 'ರಸಾ' ಎಂಬ ನದಿಯನ್ನು ನೀನು ದಾಟಿದ್ದಾದರೂ ಹೇಗೆ? ನಿನ್ನ ಮಹತ್ವದ ಉದ್ದೇಶ ಹಾಗೂ ಆಗಮನದ ಕಾರಣವೇನು?

**ಸರಮೆ:** ಅಯ್ಯಾ ಪಣಿಗಳೇ ನಾನು ಇಂದ್ರನ ಧೂತಿ, ನಿಮ್ಮಲ್ಲಿ ಬಚ್ಚಿಡಲ್ಪಟ್ಟ "ಗೋವು"ಗಳೆಂಬ 'ಮಹಾನಿಧಿ'ಗಳನ್ನು ಹುಡುಕುತ್ತಾ ಸಂಚರಿಸುತ್ತಿದ್ದೇನೆ. ನದಿಯ ಜಲವು ತಾನಾಗಿಯೇ ದಾರಿಕೊಡದಿದ್ದರೆ ನಾನು ಅತಿಕ್ರಮಿಸಬಹುದೆಂಬ ಭಯದಿಂದ ನನಗೆ ದಾರಿಕೊಟ್ಟಿತು. ಹೀಗೆ 'ರಸಾ' ನದಿ ದಾಟಿದೆ.

**ಪಣಿಗಳು:** ನಿನಗೆ ಇಂಥ ಶಕ್ತಿ ಸಾಮರ್ಥ್ಯ ಇರುವುದಾದರೆ ನಿನ್ನ ಒಡೆಯನಾದ ಇಂದ್ರ ಎಂಥಹವನಿರ ಬೇಕು? ಎಂಥಹ ರೂಪ ಸಂಪನ್ನನಾಗಿರಬೇಕು. ಇವಳನ್ನು ನಮ್ಮ ಗೆಳತಿಯಾಗಿ ಹೊಂದೋಣ. ನಮ್ಮ ಗೋವುಗಳಿಗೆ ಇವಳೇ ಒಡತಿಯಾಗಲಿ, ಎಂದು ಆಸೆ ತೋರಿಸುತ್ತಾರೆ.

**ಸರಮೆ:** ಎಲೈ ಪಣಿಗಳೇ! ಇಂದ್ರನು ನಿಮ್ಮಿಂದ ಹತನಾಗತಕ್ಕವನಲ್ಲ. ಅವನು ಎಲ್ಲರನ್ನೂ (ನಿಮ್ಮನ್ನೂ) ನಾಶಮಾಡತಕ್ಕವನು. ನಾನು ಇಲ್ಲಿಗೆ ಬಂದು ಮುಟ್ಟಿರುವುದೇ ಇಂದ್ರನ ಶಕ್ತಿಗೆ ನಿದರ್ಶನ. ಯಾವ ಅಡ್ಡ ನದಿಗಳೂ, ಎಷ್ಟೇ ಆಳವಾದರೂ ಇಂದ್ರನನ್ನು ಹೊರಗಿಡಲಾರವು. ನಿಮ್ಮ ಮರಣಕಾಲ ಸಮೀಪವಾಯಿತು.

**ಪಣಿಗಳು:** (ಕೋಪಗೊಂಡು)ಹೇ ಸರಮೇ! ನೀನು ನಿಜವಾಗಿಯೂ ಸೌಭಾಗ್ಯವತಿ. ಇದು ದ್ಯುಲೋಕದ ಕೊನೆಯಭಾಗ. ಇಂಥಹ ದುರ್ಗಮ ಪ್ರದೇಶಕ್ಕೆ ಬಂದಮಾತ್ರದಿಂದ ಏನಾಯ್ತು? ಯುದ್ಧವೇ ಇಲ್ಲದೆ ಈ ಗೋವುಗಳನ್ನು ಬಿಟುಕೊಡುವಷ್ಟು ಮೂರ್ಖರಲ್ಲ ನಾವು. ನಮಗೂ ಹರಿತವಾದ ಆಯುಧಗಳಿವೆ.

**ಸರಮೆ:** ಯೋಧರಿಗೆ ಉಚಿತವಾದ ಮಾತು ಇದಲ್ಲ. ನಿಮ್ಮ ಶರೀರಗಳು ಬಾಣಗಳಿಗೆ ಅಭೇಧ್ಯವಲ್ಲ. ಏಕೆಂದರೆ ಅವು ಪಾಪಪೂರ್ಣವಾಗಿವೆ. ನಿಮ್ಮ ದಾರಿ ಸರಿ ಇಲ್ಲ. ಬೃಹಸ್ಪತಿಯು ನಿಮ್ಮ ಮಾತನ್ನೂ, ದೇಹವನ್ನೂ ಸರಿಪಡಿಸಲಾರನು.

**ಪಣಿಗಳು:** ಗೋವುಗಳು ಗುಪ್ತವಾಗಿಡಲ್ಪಟ್ಟಿರುವ ಈ ಪರ್ವತ ಪ್ರದೇಶವು ಸಕಲ ವಿಧವಾದ ರಕ್ಷಣೆಯನ್ನು ಹೊಂದಿದೆ. ಇಲ್ಲಿ ಕುದುರೆಗಳು, ಸಂಪತ್ತು ಹೇರಳವಾಗಿದೆ. ನಮ್ಮ ಸೈನಿಕರು ಎಚ್ಚರವಾಗಿದ್ದಾರೆ. ನೀನು ಇಲ್ಲಿಗೆ ಬಂದದ್ದೇ ವ್ಯರ್ಥ.

**ಸರಮೆ:** ಆದರೇನು? ಅಂಗೀರಸರೆಂಬ ಋಷಿಗಳ, ಸೋಮಪಾನಮಾಡಿ, ಶಕ್ತರಾಗಿ ಆಯಾಸ್ಯನೊಡನೆ ಇಲ್ಲಿ ಬರುವುದು ಖಂಡಿತ! ಈ ಗೋವುಗಳನ್ನು ಅವರೇ ಹಂಚಿಕೊಂಡು ಬಿಡುತ್ತಾರೆ. ನೀವು ಈಗ ಹೇಳುತ್ತಿರುವ ಮಾತುಗಳು ವ್ಯರ್ಥವೆಂದು ತಿಳಿಯುವಿರಿ.

**ಪಣಿಗಳು:** (ಬೆದರಿಕೆ ಭಾಷೆ ಬಿಟ್ಟು ಸಾಮ ಮತ್ತು ದಾನೋಪಾಯಗಳಿಂದ ಅವಳನ್ನು ವಶಪಡಿಸಿ ಕೊಳ್ಳಲು ಪ್ರಯತ್ನಿಸುತ್ತಾ) ಹೇ ಸರಮೇ ದೇವತೆಗಳು ಕೊಡಲ್ಪಟ್ಟ ಶಕ್ತಿ ಇಲ್ಲದಿದ್ದರೆ ನೀನು ಇಲ್ಲಿಯವರೆಗೆ ಬರುತ್ತಲೇ ಇರಲಿಲ್ಲ. ಸೌಭಾಗ್ಯವತಿಯಾದ ನೀನು ನಮ್ಮೊಡನೆ ಗೋವುಗಳನ್ನು ಹಂಚಿಕೊಂಡು ಸುಖವಾಗಿ ಇದ್ದುಬಿಡು.

**ಸರಮೆ:** (ಪ್ರಲೋಭನೆಗೆ ಒಪ್ಪದೆ) ಈ ಸಹೋದರ, ಸಹೋದರಿ ಸಂಬಂಧ ಯಾವುದೋ ತಿಳಿಯದು! ಇದು ಇಂದ್ರನಿಗೂ ಶತ್ರು ಭಯಂಕರವಾದ ಅಂಗೀರಸರಿಗೂ ಗೊತ್ತಿದೆ. ನಾನು ಬಂದಾಗಲೇ ನನ್ನ ಹಿಂದೆಯೇ "ಗೋಕಾಮರಾದ" ದೇವತೆಗಳು ಬಂದು ಈ ಪ್ರದೇಶವನ್ನು ಸುತ್ತುವರೆದು ನಿಂತಿರುವರೆಂದು ತಿಳಿಯಿರಿ. ಬೇರೆಲ್ಲಾದರೂ ಓಡಿಹೋಗಿರಿ. ಬೃಹಸ್ಪತಿಯೂ, ಸೋಮನೂ, ಅಂಗೀರಸರೂ ಮತ್ತು ಸೋಮವನ್ನುಹಿಂಡುವ ಒರಳುಕಲ್ಲೂ ಈ ಗೋವುಗಳನ್ನು ಹೊಂದಲಿ ಎಂಬ ಸಂಭಾಷಣೆ ಇದೆ.[೧]

ಮುಂದಿನ ಕಥೆಯನ್ನು ಈ ಸೂಕ್ತದಲ್ಲಿ ಹೇಳಿಲ್ಲ. ಶೌನಕರ, ಬೃಹದ್ದೇವತೆಯಲ್ಲಿ ೮ನೇ ಅಧ್ಯಾಯದಲ್ಲಿ ಇದೇ ಕಥೆಯನ್ನು ವೇದದ ಇತರ ಭಾಗಗಳಿಂದ ಗ್ರಹಿಸಿ ಹೀಗೆ ಮುಂದುವರಿಸ ಲಾಗಿದೆ. 'ಸಾಯಣ' ಭಾಷ್ಯದಲ್ಲಿಯೂ ಸರಮೆಯು ಈ ವಿಷಯವನ್ನು ಇಂದ್ರನಿಗೆ ತಿಳಿಸಿತೆಂದೂ, ಇಂದ್ರನು ಅವರನ್ನು ಕೊಂದು ಗೋವುಗಳನ್ನು ಬಿಡಿಸಿದನೆಂದೂ ಈ ಸೂಕ್ತದಲ್ಲಿ ಪ್ರತಿಪಾದಿತ ವಾಗಿದೆಯೆಂದು ಮಾತ್ರ ಬರೆದಿದ್ದಾರೆ. ಇದರ ಮುಂದುವರಿದ ವಿವರ ಬೃಹದ್ದೇವತೆಯಲ್ಲಿದೆ.

ಪಣಿಗಳೊಡನೆ ತನಗೆ ಯಾವ ಸಂಬಂಧವೂ ಗೊತ್ತಿಲ್ಲವೆಂದು ಹೇಳಿದ ಸರಮೆಯು ಅವರಿಂದ ಹಣವನ್ನಾಗಲೀ, ಮತ್ತೇನನ್ನಾಗಲೀ ಬಯಸದೇ ಆ ಬಚ್ಚಿಟ್ಟ ಗೋವುಗಳ ಒಂದಿಷ್ಟು 'ಹಾಲನ್ನು' ಮಾತ್ರ ಪಾನಮಾಡಲು ಬಯಸಿತಂತೆ.

**"ಸಾಬ್ರವಿನ್ನಾಹಮಿಚ್ಛಾಮಿ ಸ್ವಸೃತ್ವಂ ವಾಧನಾನಿ ವಾ ।**

**ಪಿಬೇಯಂ ತು ಪಯಸ್ತ್ವಾಸಾಂ ಗವಾಂ ಯಸ್ತಾ ನಿಗೂಹಥ ।"**

ಹೀಗೆ ಪ್ರಲೋಭನೆಗೆ ಒಳಪಟ್ಟ ಸರಮೆಗೆ ಅವರು ಹಾಲನ್ನು ಕೊಡಲು, ಸರಮೆಯು ಅದನ್ನುತನ್ನ ಸ್ವಭಾವಕ್ಕೂ – ಚಪಲದಾಸೆಗೂ ಅನುಸಾರವಾಗಿ (ಸ್ವಭಾವಾಚ್ಚ, ಲೌಲಾಚ್ಚ) ಕುಡಿದು, ಪ್ರಶಂಶಿಸಿ ಮತ್ತೆ ಶತಯೋಜನ ವಿಸ್ತೃತವಾದ 'ರಸಾ' ನದಿಯನ್ನು ದಾಟಿ ಹಿಂದಿರುಗಿ ಇಂದ್ರನಿಗೆ ಸುಳ್ಳುವರದಿ ಮಾಡಿತಂತೆ. ಸರಮೆಯ ಸ್ವಭಾವ ಬದಲಾಗಲು ಕಾರಣವೇನು? ಎಂದು ಕೇಳಿದರೆ **"ಪ್ರಭಾವತ್ ಅಸುರಸ್ಯತು"** ಎಂಬುದಾಗಿ (ಅಸುರರ ಪ್ರಭಾವವೇ ಕಾರಣ) ಎಂದು ಶೌನಕರು ವಿವರಿಸಿದ್ದಾರೆ. ಅಸುರ ಸ್ಪೃಷ್ಟವಾದ ಮಾತ್ರದಿಂದ ದೈವೀ ಪದಾರ್ಥವಾದ ಹಾಲಿಗೂ ಅಸುರ ಪ್ರಭಾವವೇ ಇರುವುದಕ್ಕೆ ಇದು ನಿದರ್ಶನ. ಆಗ ಈ ಪ್ರಭಾವವನ್ನು ಕುಗ್ಗಿಸಿ **"ಸರಮೆ"** ಬಾಯಿಯಿಂದ ನಿಜವನ್ನು ಹೊರಡಿಸಲು ಇಂದ್ರನು ಅದನ್ನು ಕಾಲಿನಿಂದ ಒದೆಯಲು ಸರಮೆಯ ಆ ಅಸುರದತ್ತವಾದ ಹಾಲನ್ನು ವಾಂತಿ ಮಾಡಿತಂತೆ.

**"ತಾಂ ಜಘಾನ ಪದಾ ಕ್ರುದ್ಧಃ ಉದ್ಗಿರಂತೀ ಪಯಸ್ತತಃ!"**

ನಂತರ ಹೆದರಿ ಪ್ರಾಣಿಗಳನ್ನೇ ಮತ್ತೆ ಹುಡುಕುತ್ತಾ ದೇವ ಭಯದಿಂದ ಉದ್ವೇಗಗೊಂಡು ಪಣಿಗಳ ಗುಪ್ತಸ್ಥಾನಕ್ಕೆ ಅದು ನಡೆಯಿತಂತೆ. ಇದರ ಹೆಜ್ಜೆಯನ್ನು ಅನುಸರಿಸಿ, ಹರಿವಾಹನನಾದ ಇಂದ್ರನು ಹೋಗಿ ಪಣಿಯನ್ನು ಕೊಂದು ಗೋವುಗಳನ್ನು ಹಿಂದಿರುಗಿಸಿ ತಂದನು. ಇದು ಕಥೆಯ ಒಟ್ಟು ಚೌಕಟ್ಟು. ಇದು ವೇದದಲ್ಲಿ ಬರುವ ಗೋಗ್ರಹಣದ ಕಥೆ.

ಪಣಿಗಳು: –ಎಂದರೆ **"ಕಿಂಚ ಪಣಯಃವ್ಯಯ ಅಸಹಿಷ್ಣವಃ ವಣಿಜಃ**

**ಪಣಿಃ ವಣಿಕ್ ಭವತೀತಿಯಾಸ್ಕಃ।**

**ಪಣಯಃ ಇತಿಲುಬ್ಧಕಾಃ ಅಭುದ್ಯಮಾನಾಃ ಯುಗಾದೀನಾಂ**

**ಅಕುರ್ವಾಣಾಃ ಅದಾನಶೀಲಾಃ ಅಸ್ಮತ್ ಶತ್ರುವಃ"[೨]**

ಪಣಿಗಳೆಂದರೆ ಕೂಡಿಟ್ಟ ಹಣ ಖರ್ಚಾಗುವುನ್ನು ಸಹಿಸದ ವರ್ತಕ ಮನೋವ್ಯಾಪಾರದ ಜಿಪುಣರು, ಬುದ್ಧಿ ಇಲ್ಲದವರು, ತಿಳಿಯಲು ಆಸೆಯಿಲ್ಲದವರು, ಯುಗಾದಿ ವೇದ ಕರ್ಮಗಳನ್ನು ಮಾಡದವರು ಎಂದಿದೆ. **'ಗೋ'**ಎಂದರೆ ವೇದೋಕ್ತವಾದ ಆಧ್ಯಾತ್ಮವಿದ್ಯೆ. ಗೋವುಗಳ ಹೆಜ್ಜೆಗುರುತೆಂದರೆ ವೇದದ ವಾಕ್ಯಗಳ 'ಪದ'ಗಳ ಮಾರ್ಮಿಕಾರ್ಥಗಳು. ಇದನ್ನು ತಿಳಿದವರೆ 'ಪದಜ್ಞಾಃ' ಎಂಬ ವೇದಾರ್ಥ ಜ್ಞಾನ ಉಳ್ಳವರು. ಇಂಥಹ ಕಾಮಧೇನುವಾದ ವೇದದ ನಾಲ್ಕು ಪಾದಗಳೇ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಗೋವಿನ ಸೇವೆಯಿಂದ ಈಡೇರಿಸಿಕೊಳ್ಳಬಹುದೆಂದು ನಂಬಿದ್ದರು.

ಇನ್ನು **'ಸರಮೆ'** ಎಂದರೆ ಸಾಯಣಾಚಾರ್ಯರು ಸರಮೆ ಶಬ್ದಕ್ಕೆ **'ಸರಮಾವಾಕ್ ವಾಕ್** ದೇವ ಶುನಿವಾ' ಅಂದರೆ **'ವಾಕ್'** ಶಕ್ತಿಗೆ ಸರಮೆ ಎಂಬ ಅಭಿಪ್ರಾಯ. ಯಾಸ್ಕರು ನಿರುಕ್ತದಲ್ಲಿ[೩] **'ಸರಮಾ ಸರಣಾತ್'** ಎಂದರೆ ಶೀಘ್ರವಾಗಿ ನಡೆಯುವವಳು, ಸಂಚರಿಸುವವಳು ಎಂದು ಅರ್ಥೈಸಿದ್ದಾರೆ. ಇಲ್ಲಿ 'ಗೋವು'ಗಳೆಂದರೆ ದಿವ್ಯಜ್ಞಾನವೆಂದು ಅವು ಗೋಚರಿಸುವ ಕಾಲವೇ 'ಜ್ಞಾನೋದಯ' ಕಾಲ. 'ಉಷಃ' ಕಾಲವೆಂದೂ, ಇದನ್ನು ಅಂಗೀರಸರು ಪಡೆಯಲು 'ಸರಮೆ'ಯು ಕಾರಣವೆಂದೂ, ಈ 'ಸರಮೆ'ಯು ಋತ(ವ್ರತ) ಸತ್ಯದ ದಾರಿಯಲ್ಲಿ ಎಲ್ಲರಿಗಿಂತ ಮುಂದೆ ಶೀಘ್ರವಾಗಿ ನಡೆದು ಜ್ಞಾನರೂಪವಾದ ಗೋವುಗಳನ್ನು ಪತ್ತೆಹಚ್ಚಿದಳೆಂದು ಹೇಳಲ್ಪಟ್ಟಿದೆ. ಹೀಗೆ ಸರಮೆಯು ಋತಪಥ(ಸತ್ಯದ ದಾರಿ)ದಲ್ಲಿಯೇ ವೇಗವಾಗಿ ಸಂಚರಿಸ ತಕ್ಕವಳು ಮತ್ತು ಜ್ಞಾನದ ಗೂಢ ಪ್ರದೇಶವನ್ನು ಅವುಗಳ (ಶ್ರುತಿ ಪರಿಮಳದಿಂದಲೇ) ಸುಹಾಸನೆಯಿಂದಲೇ ಎಷ್ಟೇ ದೂರದಲ್ಲಿದ್ದರೂ ಪತ್ತೆಹಚ್ಚತಕ್ಕವಳು. ಮಿಂಚಿನ ವೇಗದಲ್ಲಿ ವೇದ ವಾಕ್ಯಗಳಲ್ಲಿರುವ ದಿವ್ಯಾರ್ಥಗಳನ್ನು ನಮ್ಮ ಕಣ್ಣಿಗೆ ಗೋಚರಿಸುವಂತೆ ಪತ್ತೆಮಾಡಿ ಹಿಡಿದುಕೊಡುವ ಅದೇ ವೇದ ವಾಕ್ಯಾವಲಂಬಿಯಾದ ಅತೀಂದ್ರಿಯ ಶಕ್ತಿಗೆ ಸರಮಾ ಎಂದು ಹೆಸರು.[೪] ಇಲ್ಲಿ ವೇದಗಳಲ್ಲಿ ಉಲ್ಲೇಖಿತವಾಗಿರುವ ಗೋಗ್ರಹಣ ಪ್ರಸಂಗವನ್ನು ಉಲ್ಲೇಖಿಸಿರುವುದೆ ವೇದಗಳ ಸಾರ ಸಂಗ್ರಹಿಸುವ ಪ್ರಯತ್ನದಲ್ಲಿ ಕಂಡುಬರುತ್ತದೆ. ಆದರೆ ಅದಕ್ಕೊಂದು ಸುಂದರ ರೂಪವನ್ನು ಕೊಟ್ಟು ಕಲಾತ್ಮಕತೆಯ ಚೌಕಟ್ಟಿನಲ್ಲಿ ವೀರಯುಗದ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಕಟ್ಟಿಕೊಟ್ಟವನೆಂದರೆ ನಮ್ಮ ಆದಿ ಕವಿ ಪಂಪ.

ವೀರ ಕವಿಯಾದ ರನ್ನನು ತನ್ನ 'ಸಾಹಸ ಭೀಮ ವಿಜಯಂ' ಕೃತಿಯಲ್ಲಿ ಈ ಕೆಳಗಿನಂತೆ ಹೇಳುತ್ತಾನೆ.

**ತುಱುಗೊಳೊಳ್ ಪೆಣ್ಬುಯ್ಯಲೊ**

**ಳೆಱೆವೆಸದೊಳ್ ನೆಂಟನೆಡರೊಳೂರಟೆವಿನೊಳಂ ॥**

**ತಱೆಸಂದು ಗಂಡುತನಮನೆ**

**ನೆಱಪದವಂ ಗಂಡನಲ್ಲನೆಂತುಂ ಪಂಡಂ॥ ದ್ವಿತೀಯಾಶ್ವಾಸ ಪದ್ಯ ೨೪**

ಈ ಪದ್ಯದ ಪ್ರಕಾರ ದನಕರುಗಳ ರಕ್ಷಣೆಗಾಗಿ ಹೋರಾಡದವನು ಗಂಡಸೇ ಅಲ್ಲ. ಅಂದರೆ ವೀರನೇ ಅಲ್ಲ ಎಂಬ ಮಾತನ್ನು ಹೇಳಿ ಅದು ಆ ಕಾಲದ ಒಂದು ಮೌಲ್ಯ ಮತ್ತು ಯುವಕರ ಕರ್ತವ್ಯವಾಗಿತ್ತು ಎಂಬುದನ್ನು ರನ್ನ ಕವಿ ಸೂಚಿಸುತ್ತಾನೆ.

**ಪಂಪ**

ಆದಿ ಕವಿ ಪಂಪ ಕನ್ನಡದ ರತ್ನತ್ರಯರಲ್ಲಿ ಮೊದಲಿಗ. ಈತ ಬರೆದಿರುವ ಎರಡು ಕೃತಿಗಳಲ್ಲಿ ವಿಕ್ರಮಾರ್ಜುನ ವಿಜಯಂ ಲೌಕಿಕ ಕಾವ್ಯವಾಗಿದೆ. ತನ್ನ ಆಶ್ರಯದಾತ ಅರಿ ಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಈ ಕೃತಿಯನ್ನು ರಚಿಸಿದ್ದಾನೆ. ಯುದ್ಧ ಭೂಮಿಯ ಅಗಾಧ ಅನುಭವಗಳನ್ನು ಮತ್ತು ಯುದ್ಧ ಭೂಮಿಯ ಚಿತ್ರಣವನ್ನು ಓದುಗನಿಗೆ ಕಟ್ಟಿಕೊಡುವಲ್ಲಿ ಪಂಪನು ಯಶಸ್ವಿಯಾದಷ್ಟು ಮತ್ತಾವ ಕವಿಯೂ ಆಗಿಲ್ಲ. ರನ್ನ ತನ್ನ "ಗದಾಯುದ್ಧ" ಕೃತಿಯನ್ನು ಸಿಂಹಾವಲೋಕನ ಕ್ರಮದಿಂದ ಹೇಳುವ ಪ್ರಯತ್ನ ಹಾಗೂ ಭೀಮನನ್ನು ನಾಯಕನನ್ನಾಗಿಸುವ ಉದ್ದೇಶ ಹೊಂದಿದ್ದರಿಂದ ಕುರುಕ್ಷೇತ್ರ ಯುದ್ಧದ ನಂತರ ಹದಿನೆಂಟನೆಯ ದಿನ ನಡೆದ ಗದಾಯುದ್ಧ ಪ್ರಾಮುಖ್ಯತೆ ಪಡೆದಿದೆ. ಆದರೆ ಪಂಪನಲ್ಲಿ ಇಡೀ ಭಾರತ ಕಥೆಯನ್ನು ಹೇಳುವ ಪ್ರಯತ್ನವನ್ನು ಕಾಣಬಹುದು. ಪಾಂಡವರ ಬಾಲ್ಯದ ದಿನಗಳ ಜೊತೆಗೆ ಅರ್ಜುನನ ಎಲ್ಲ ವಿವರಗಳನ್ನೂ ಬಿಡದೆ ಚಿತ್ರಿಸಿ, ಮುಂದೆ ಅಜ್ಞಾತವಾಸ, ಗೋಗ್ರಹಣ, ಕೃಷ್ಣದೌತ್ಯ, ಮತ್ತು ಯುದ್ಧ ನಿರ್ಣಯ ಮೊದಲಾದ ಭಾಗಗಳನ್ನೆಲ್ಲ ಹತ್ತು ಆಶ್ವಾಸಗಳಲ್ಲೇ ಮುಗಿಸಿದ್ದಾನೆ. ಆನಂತರ ನಾಲ್ಕು ಆಶ್ವಾಸಗಳು ಯುದ್ಧದ ವರ್ಣನೆಗೇ ಮೀಸಲಾಗಿಡುವ ಮೂಲಕ ಕನ್ನಡ ಸಾಹಿತ್ಯದಲ್ಲಿ ಯುದ್ಧ ಭೂಮಿಯ ವರ್ಣನೆಯನ್ನು ಶಕ್ತವಾಗಿ ಕಟ್ಟಿಕೊಟ್ಟ ಕೀರ್ತಿ ಪಂಪನಿಗೆ ಸಲ್ಲುತ್ತದೆ. ಕಥೆಯ ಮೂಲವನ್ನು ವ್ಯಾಸನಿಂದಲೇ ಪಡೆದರೂ ಅದನ್ನು ಹೊಸರೀತಿಯಲ್ಲಿ ಹೇಳಿರುವುದು ಪಂಪನ ಪ್ರತಿಭೆಗೆ ಸಾಕ್ಷಿ.[೫] ಪಂಪ ಭಾರತದ ಅಷ್ಟಮಾಶ್ವಾಸದಲ್ಲಿ ಅಜ್ಞಾತವಾಸದಲ್ಲಿದ್ದ ಪಾಂಡವರನ್ನು ಹುಡುಕಿ ಮತ್ತೆ ವನವಾಸಕ್ಕೆ ಅಟ್ಟಬೇಕಾದರೆ ಅವರನ್ನು ಅಜ್ಞಾತವಾಸ ಮುಗಿಯುವುದರೊಳಗೆ ಹುಡುಕಿ ಯುದ್ಧರಂಗಕ್ಕೆ ಕರೆತರಬೇಕು ಎಂದು ಪ್ರಯತ್ನಪಡುತ್ತಾರೆ. ಪಾಂಡವರನ್ನು ಹುಡುಕುತ್ತಿದ್ದಾಗ ವಿರಾಟನ ರಾಜ್ಯದಲ್ಲಿ ಕೀಚಕನ ವಧೆಯಾದದ್ದು ಮತ್ತು ಅಲ್ಲಿನ ಗೋ ಸಂತತಿ ಹೆಚ್ಚಾಗಿರುವ ವಿಷಯವನ್ನು ದೂತರು ತಿಳಿಸುತ್ತಾರೆ. ಇದು ವಿರಾಟನ ಅರಮನೆಯಲ್ಲಿ ಪಾಂಡವರು ಇರುವರೆಂಬ

ಅನುಮಾನವನ್ನು ಕೌರವರಿಗೆ ತರುತ್ತದೆ. ವಿರಾಟನು ವಾಸಿಸುವ ಪ್ರಸಿದ್ಧ ಸ್ಥಳ ವಿರಾಟನಗರವೇ ಪಾಂಡವರಿರುವ ಸ್ಥಳ ಎಂದು ಗುರುತಿಸಿಕೊಂಡು ತಡಮಾಡದೇ ನಾವು ವಿರಾಟನ ಗೋವುಗಳನ್ನು ಹಿಡಿಯೋಣ. ಹಾಗೆ ಗೋವುಗಳನ್ನು ಹಿಡಿದರೆ ಪಾಂಡವರು ಸುಮ್ಮನಿರುವ ಶೂರರಲ್ಲ,[೬] ಎಂಬ ರಾಜಕೀಯ ಕಾರಣವನ್ನು ನಿಶ್ಚಯಿಸಿ, ದಕ್ಷಿಣ ಗೋಗ್ರಹಣಕ್ಕೆ **"ತ್ರಿಗರ್ತ"** ರಾಜನಿಗೆ ಆಜ್ಞೆ ನೀಡುತ್ತಾನೆ. ಆತ ೪೦೦೦ತೇರು(ರಥ)ಗಳೊಡನೆ ದಕ್ಷಿಣ ದಿಕ್ಕಿನಲ್ಲಿ ದನಗಳನ್ನು ಹಿಡಿಯುತ್ತಾನೆ. ಇದು ಮಹಾಭಾರತದ ಕತೆಯಂತೆಯೇ ಸಾಗಿದರೂ ವರ್ಣನೆಯ ದೃಷ್ಟಿಯಿಂದ ಪಂಪ ದೃಶ್ಯಗಳನ್ನು ಸಹೃದಯರಿಗೆ ಕಟ್ಟಿಕೊಡುವಲ್ಲಿ ಯಶಸ್ವಿಯಾಗುತ್ತಾನೆ. ಉತ್ತರದಲ್ಲಿ ದುರ್ಯೋಧನನ ನೇತೃತ್ವದಲ್ಲಿ ಗೋವುಗಳನ್ನು ಹಿಡಿದ ವಿವರಗಳು ಅಷ್ಟಮಾಶ್ವಾಸದಲ್ಲಿ ಬರುತ್ತವೆ. ಆ ಸಂದರ್ಭದಲ್ಲಿ ಉಪಸ್ಥಿತರಿದ್ದ ಗೋವಳರು ತಮ್ಮ ಜೀವನದ ವೀರಮೌಲ್ಯವನ್ನು ಬಗೆದು

**ತುರು ಪರಿವಾಗಳೆಮ್ಮ ಪೆಣನಂ ತುಳಿದುಂಪರಿಗುಂ ದಲೆಂದು ಚಃ**
**ತುರುಗೊಳೆ ಬಾಳುಮೆಂದು ತುರುಗೋಳೊಳೆಸಾವುದು ಸೈಪಿದೆಂದು ಪಾ।**
**ಯ್ದುರಿಕೆಯ ಗೋವರಣ್ಮೆ ಬರೆ ಪಾಯಿಸಿ ಘೋರಯಿರಲ್ ತೆಗುಳ್ದುತ**
**ತ್ತರ ತರಿದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್॥**

ದನಗಳು ಓಡುವಾಗ ನಮ್ಮ ಹೆಣಗಳನ್ನು ತುಳಿದುಕೊಂಡು ಹೋಗಲಿ. ದನಗಳನ್ನು ಶತ್ರುಗಳು ಹಿಡಿದರೆ ನಾವು ಬದುಕಿರಲಾರೆವು. ತುರುಗಾಳಗದಲ್ಲಿ ಸಾಯುವುದು ನಮ್ಮ ಪುಣ್ಯ, ಅದೃಷ್ಟ ಎಂದು ಬಗೆದ ಪ್ರಸಿದ್ಧ ಗೋಪಾಲಕರು ಪೌರುಷ ಪ್ರದರ್ಶನ ಮಾಡಿ ಬರಲು ಕುದುರೆಯ ರಾಹುತರು ಕುದುರೆಗಳನ್ನು ಮುನ್ನುಗ್ಗಿಸಿ ಅವರನ್ನು ಬೆನ್ನಟ್ಟಿ ದೇವಾಲಯಕ್ಕೆ ದೊಡ್ಡ ಮರವನ್ನು ಕಡಿಯುವಂತೆ ಚೂರು ಚೂರಾಗಿ ಕತ್ತರಿಸಿದರು. ಆಗ ಒಬ್ಬ ಗೋಪಾಲಕನು ಅಷ್ಟು ಮಂದಿಯ ಸಾವನ್ನು ಕಂಡು ಮನಸ್ಸಿನಲ್ಲಿ ಕೋಪ ಹೆಚ್ಚಿಯೂ ಪಶುಗಳ ನಾಶವನ್ನು ಸಹಿಸಲಾರದೆಯೇ ವಿರಾಟನಿಗೆ ವಿಷಯ ತಿಳಿಸಿದನು. ಗೋಗ್ರಹಣದಲ್ಲಿ ಸಿಲುಕಿದ ಗೋವುಗಳ ಪರಿಸ್ಥಿತಿಯನ್ನು ಪಂಪ ಈ ರೀತಿ ವರ್ಣಿಸುತ್ತಾನೆ. 

**"ಅದಟರ ಚೆನ್ನಪೊಂಗರ ಸಬಂಗಳ ತೊಳ್ತಿರಿಯೊಳ್ ತೊಡಂಕಿ ನಿ**
**ಲ್ಲದೆ ಪೊರಮಟ್ಟ ತಮ್ಮ ಮನದೊಳ್‌ಮಿಗೆ ಬೆಚ್ಚಿಸಿದಂತೆ ತೋರುವ।**
**ಗ್ಗದ ನಿಡುಗೋಡು ಮೇಡುಮಮರತ್ತುಮಿರುಂಕಿದ ಕೆಚ್ಚಲೆತ್ತಮೆ**
**ತ್ತಿದ ಕುಡಿವಾಲಮಂದೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್"[೭]**

ಶೂರರ ಮತ್ತು ಪರಾಕ್ರಮಶಾಲಿಗಳ ಶವಗಳ ತುಳಿದಾಟದಲ್ಲಿ ಸಿಕ್ಕಿಕೊಂಡು ನಿಂತುಕೊಳ್ಳದೆ ಹೊರಟು ತಮ್ಮ ಮನಸ್ಸಿನಲ್ಲಿ ವಿಶೇಷವಾಗಿ ಹೆದರಿದಂತೆ ಕಾಣುವ ಕೊನೆಬಾಗಿಯೂ, ನೀಳವಾಗಿಯೂ

ಇರುವ ಕೊಂಬುಗಳೂ ಹಿಣಿಲು, ಒಳಗೆ ಸೇರಿಕೊಂಡು ಬಿಗಿದುಕೊಂಡಿರುವ ಕೆಚ್ಚಲು, ಸಂಪೂರ್ಣವಾಗಿ ಮೇಲೆತ್ತಿಕೊಂಡಿರುವ ಬಾಲದ ತುದಿಯು ಪ್ರಕಾಶಿಸುತ್ತಿರಲು ಕರಿಯ ಹಸುಗಳು, ಯುದ್ಧರಂಗದಲ್ಲಿ ಓಡಿಹೋದವು.

**"ಸಮೆದುದು ಪೋಗು ಗೋಗ್ರಹಣದಲ್ಲಿಯೆ ಭಾರತಮೆಂಬ ಮಾತನಂ**
**ದಮರ ನರೋರಗರ್ ನುಡಿಯೆ ರೌದ್ರಶರಂಗಳಿನೆಚ್ಚು ಯುದ್ಧದೊಳ್।**
**ಸಮಸಮನಾಗಿ ಕಾದಿದೊಡೆ ಕರ್ಣನ ವಕ್ಷಮನೆಚ್ಚು ಗರ್ವಮಂ**
**ಸಮೆಯಿಸಿಕೊಂದನಂಕದ ವಿಕರ್ಣನನೊಂದೆ ವಿಕರ್ಣದಿಂ ನರಂ"**[೮]

ಗೋಗ್ರಹಣದಲ್ಲಿಯೇ ಮಹಾಭಾರತ ಯುದ್ಧವು ಮುಗಿದುಹೋಯಿತು ಎಂಬ ಮಾತನ್ನು ಆದಿನ ದೇವತೆಗಳೂ, ಮನುಷ್ಯರೂ, ಉರಗರೂ (ಮೂರುಲೋಕದವರೂ) ಹೇಳುವ ಹಾಗೆ ಅರ್ಜುನನು ಭಯಂಕರವಾದ ಬಾಣಗಳಿಂದ ತನಗೆ ಯುದ್ಧದಲ್ಲಿ ಸರಿಸಮವಾಗಿ ಕಾದಿದ ಕರ್ಣನ ಎದೆಗೆ ಹೊಡೆದು ಅವನ ಅಹಂಕಾರವನ್ನು ಕಡಿಮೆ ಮಾಡಿ ಶೂರನಾದ ವಿಕರ್ಣನನ್ನು ಒಂದೇ ಬಾಣದಿಂದ ಕೊಂದನು ಎನ್ನುವ ಮಾತುಗಳನ್ನು ಗಮನಿಸಿದಾಗ ಕುರುಕ್ಷೇತ್ರದ ಯುದ್ಧದಲ್ಲಿ ಯಾರು ಗೆಲ್ಲುತ್ತಾರೆ ಎಂಬುದನ್ನು ಪರೀಕ್ಷೆ ಮಾಡಿಕೊಂಡಂತೆ ಈ ಗೋಗ್ರಹಣ ಯುದ್ಧ ನಡೆಯಿತು. ಯುದ್ಧದ ಗೆಲುವು ಎರಡೂ ಪಕ್ಷಗಳ ಬಲಾಬಲಗಳನ್ನು ಒರೆಗೆ ಹಚ್ಚಿ ನೋಡಿಕೊಳ್ಳಲು ಸಹಾಯಕವಾಗಿದೆ. ಪಂಪ ಗೋಗ್ರಹಣ ಪ್ರಸಂಗದಲ್ಲಿ ಕಥೆಯ ಓಟಕ್ಕೆ ಒತ್ತುನೀಡಿದ್ದರೆ, ಕುಮಾರವ್ಯಾಸನು ಗೋಗ್ರಹಣ ಪ್ರಸಂಗದಲ್ಲಿ ಹಾಸ್ಯ, ರೌದ್ರ, ವೀರತ್ವವನ್ನು ಅರ್ಜುನ (ಬೃಹನ್ನಳೆ) ಹಾಗೂ ಉತ್ತರನ ಮೂಲಕ ಸಹೃದಯರಿಗೆ ವರ್ಣರಂಜಿತವಾಗಿ ಸಶಕ್ತವಾಗಿ ಕಟ್ಟಿಕೊಟ್ಟಿದ್ದಾನೆ.

ಕುಮಾರವ್ಯಾಸನ ಕಾಲ ಕ್ರಿ.ಶ.೧೪೩೦ ಎಂದು ಚರಿತ್ರಕಾರರು ಗುರುತಿಸುತ್ತಾರೆ. ಇವನ ಕರ್ನಾಟಕ ಭಾರತ ಕಥಾ ಮಂಜರಿ ಕೃತಿಯಲ್ಲಿ ಗೋಗ್ರಹಣದ ಪ್ರಸಂಗವಿದೆ. ಕೀಚಕನ ಮರಣದ ಸುದ್ದಿಯನ್ನು ತಿಳಿದ ಕೌರವ ಅಳೆದು ತೂಗಿ, ಕೀಚಕನನ್ನು ಕೊಂದವನು ಭೀಮನೇ ಎಂದು ತೀರ್ಮಾನಿಸುತ್ತಾನೆ. ಅವರನ್ನು ವಿರಾಟನ ಆಸ್ಥಾನದಿಂದ ಹೊರಹಾಕಿ ಮತ್ತೆ ವನವಾಸಕ್ಕೆ ಅಟ್ಟುವ ಉದ್ದೇಶವನ್ನು ಈ ಕೆಳಗಿನ ಪದ್ಯ ಸಾರುತ್ತದೆ.

**"ಅರಿ ವಿರಾಟನ ಪುರಕೆ ಹಾಯಿದು**
**ತುರುಸೆರೆಯ ತೆಗೆಸುವೆವು ಪಾಂಡವ**
**ರಿರಲು ಧರ್ಮದ ಮೇರೆ, ಮರ್ಯಾದೆಗಳ ಬಲ್ಲವರು**
**ಅರವರಿಸದಂಗೈಸುವರು ನಾ.**

ವರಿದು ಕೊಂದೆವು ಬಳಿಕ ವನದಲಿ

ವರುಷ ಹದಿಮೂರಕ್ಕೆ ಕೊಡುವೆವು ಮತ್ತೆ ರಣ ವೀಳೆಯವ"[೯]

ವಿರಾಟನ ಆಸ್ಥಾನದಲ್ಲಿ ಗೋಗ್ರಹಣ ಮಾಡಿರಿ. ಧರ್ಮಅರಿತ ಪಾಂಡವರು ಅಲ್ಲಿದ್ದರೆ ಖಂಡಿತ ಬಂದೇ ಬರುತ್ತಾರೆ. ಇವರನ್ನು ಗುರುತಿಸಿ ವೀಳೆಯವನ್ನು ಕೊಟ್ಟು ಮತ್ತೆ ೧೩ ವರ್ಷಗಳ ಕಾಲ ಅವರು ತೊಳಲುವಂತೆ ಮಾಡೋಣ ಎಂದು ದುರ್ಯೋಧನನು ಹೇಳಿದನು. ಇದನ್ನು ಎಲ್ಲರೂ ಅನುಮೋದಿಸಿ ಗೋಗ್ರಹಣ ನಡೆಸಲು ಯೋಜನೆ ರೂಪಿಸತೊಡಗುತ್ತಾರೆ. ಆನಂತರ ದುರ್ಯೋಧನನ ಸಲಹೆಯಂತೆ,

"ಎರೆಡು ಮೋಹರವಾಗಿ ತೆಂಕಲು

ಹರಿದು ತುರುಗಳ ತಡೆಯಿ, ನಾವು

ತ್ತರದಲಾನುವೆವೆನುತ ನೃಪತಿ ತ್ರಿಗರ್ತರನ್ನು ಕಳುಹೆ

ಹುರಿಯೊಡೆದು ಹದಿನಾರು ಸಾವಿರ

ವರಮಹಾರಥರೊಗ್ಗಿನಲಿದು

ರ್ಧರ ಸುಶರ್ಮ ನುದಾಳಿಯಿಟ್ಟನು ತೆಂಕದೆಸೆಗಾಗಿ"[೧೦]

"ಸೈನ್ಯವನ್ನು ಎರಡು ಭಾಗ ಮಾಡೋಣ. ನೀವು ದಕ್ಷಿಣ ದಿಕ್ಕಿನಲ್ಲಿ ಗೋಗ್ರಹಣ ಮಾಡಿರಿ, ನಾವು ಉತ್ತರದಲ್ಲಿ ಗೋಗ್ರಹಣ ಮಾಡುತ್ತೇವೆ" ಎಂದು ತ್ರಿಗರ್ಥರಿಗೆ ಹೇಳಲು ಅವರ ಮುಖ್ಯಸ್ಥನಾದ ಸುಶರ್ಮನು ಹದಿನಾರು ಸಾವಿರ ಜನ ಮಹಾರಥರೊಡನೆ ದಕ್ಷಿಣ ದಿಕ್ಕಿನಲ್ಲಿ ದಾಳಿಯಿಟ್ಟನು. ಈ ಅಂಶ ಗಮನಿಸಿದಾಗ ಕುಮಾರವ್ಯಾಸನ ಕಾಲ ಕ್ರಿ.ಶ. ೧೪೩೦ ಎಂದರೆ ಅವನ ಬಾಲ್ಯದಲ್ಲಿ ಅಥವಾ ಜೀವಿತಾವಧಿಯಲ್ಲಿ ನೋಡಿದ ಗೋಗ್ರಹಣ ಅವನ ಮನಸ್ಸಿನ ಮೇಲೆ ಪರಿಣಾಮ ಬೀರಿರಲು ಸಾಧ್ಯವಿದೆ. ಗೋಗ್ರಹಣದ ಸನ್ನಿವೇಶವನ್ನು ಮುಂದಿನ ಪದ್ಯಗಳಲ್ಲಿ ಎಳೆಎಳೆಯಾಗಿ ಚಿತ್ರಿಸಿದ್ದಾನೆ.

"ಅಸಿತ ಪಕ್ಷಾಷ್ಟಮಿಯ ದಿನ ಸಂ

ಧಿಸಿದರಾಳೆದ್ದುದು ವಿರಾಟನ

ಪಶು ಸಮೂಹವ ಮುತ್ತಿದರು ಗೋಪಾಲಕರಕೆಡಹಿ

ಹೊಸಮುಖಕೆ ಸೀವರಿಸಿದವು ದೆಸೆ

ದೆಸೆಗೆ ಹಿಂಡುಗಳೊಡೆದು ಹಾಯ್ದವು

ಮಸಗಿ ತಂಬಾರವದ ಕಳವಳವಾಯ್ತು ನಿಮಿಷದಲಿ"[೧೧]

ಕೃಷ್ಣ ಪಕ್ಷದ ಅಷ್ಟಮಿಯ ದಿನ ಸುಷರ್ಮನ ಸೈನಿಕರು ದಕ್ಷಿಣ ದಿಕ್ಕಿನಲ್ಲಿದ್ದ ವಿರಾಟನ ಗೋಪಾಲಕರನ್ನು ಕೊಂದು ಗೋವುಗಳನ್ನು ಹಿಡಿದರು. ಹೊಸ ಜನರನ್ನು ನೋಡಿ ಗೋವುಗಳು ಅಸಡ್ಡೆಯಿಂದ ಅಬ್ಬರಿಸುತ್ತಾ ತಮ್ಮ ಹಿಂಡನ್ನು ಬಿಟ್ಟು "ಅಂಬಾ" ಎಂದು ಕೂಗುತ್ತಾ ಓಡಿದವು. ಭಾರೀ ಸದ್ದಾಯಿತು.

**"ಆಳು ಸುತ್ತಲೂ ಕಟ್ಟ ತುರುಗಳ**
**ಕೋಳ ಹಿಡಿದರು ಬೊಬ್ಬಿರಿದು ಗೋ**
**ಪಾಲಕರಂತೆ ಕಾದಿದರು ಕಡಿ ಖಂಡಮಯವಾಗೆ**
**ಮೇಲೆ ಮೇಲೈತಪ್ಪ ಹೆಬ್ಬಲ**
**ದಾಳು ಕುದುರೆಯ ಕಂಡು ನೂಕದು**
**ಕಾಳಗವು ತಮಗೆನುತ ತಿರುಗಿತು ಗೋವರುಳಿದವರು"**[೧೨]

ಸೈನಿಕರು ಗೋವುಗಳನ್ನು ಸುತ್ತುವರಿದು ವಶಕ್ಕೆ ಪಡೆದರು. ಗೋಪಾಲಕರು ಗರ್ಜಿಸಿ ಯುದ್ಧಮಾಡಿದವರನ್ನು ಕಡಿದು ಹಾಕಲಾಯಿತು. ಸೈನ್ಯ ಬಲವನ್ನು ನೋಡಿದ ಗೋವಳರು ಈ ಯುದ್ಧ ತಮಗೆ ಸಾಧ್ಯವಿಲ್ಲ ಎಂದು ಗೋಪಾಲಕರು ಹಿಂದಿರುಗಿದರು. ಅಂದಿನ ಗೋಗ್ರಹಣ ಯುದ್ಧಗಳಲ್ಲಿ ಶತ್ರು ಸೈನಿಕರ ಬಲ ಹೆಚ್ಚಾದಾಗ ಗೋವಳರ ಪರಿಸ್ಥಿತಿಯನ್ನು ಮುಂದಿನ ಪದ್ಯದಲ್ಲಿ ವಿವರಿಸಲಾಗಿದೆ.

**"ಮಿಸುಪ ಕಂಬಳಿ ಕೊಂಬು ಕಲ್ಲಿಯ**
**ಬಿಸುಟು ಗಾದಿಯ ಗೋವಳರು ಹೊ**
**ತ್ತಸುವ ಕೊರಳಲಿ ಹಿಡಿದು ನಾಲಿಗೆ ಒಣಗಿ ಢಗೆಹೊಯ್ದು**
**ವಿಷಯ ರಣಭೀತಿಯಲಿ ಕಂದಿದ**
**ಮುಸುಡ ತೊದಲಿನ ನುಡಿಯ ಮರಣದ**
**ದೆಸೆಯ ಕೈಸನ್ನೆಗಳ ಕಾತರರೈದಿದರು ಪುರವ"**[೧೩]

ತಾವು ಹೊದ್ದ ಕಂಬಳಿ, ಹಿಡಿದ ಕೊಂಬು, ಬುತ್ತಿ ತಂದ ಕಲ್ಲಿಯ ಚೀಲಗಳನ್ನೆಸೆದು ಗೋವಳರು ಕಂಗಾಲಾಗಿ ಹೊರಟರು. ಅವರ ಪ್ರಾಣ ಕತ್ತಿಗೆ ಬಂದು ನಿಂತಿತ್ತು. ನಾಲಗೆ ಒಣಗಿತ್ತು. ಯುದ್ಧ ಭೀತಿಯ ಧಗೆಹೊಯ್ದು ಬಲಶಾಲಿಯಾದ ಸೈನ್ಯದ ಭೀತಿಯಿಂದ ಅವರ ಮುಖಗಳು ಬಾಡಿದವು. ಮಾತುಗಳು ತೊದಲಿದವು. ಸಾವು ಬಂತೆಂದು ಕೈಸನ್ನೆಯಲ್ಲಿಯೇ ಮಾತಾಡುತ್ತಾ ವಿರಾಟನ ಪುರಕ್ಕೆ ಓಡಿದರು. ಎಂಬಲ್ಲಿ ಸೈನ್ಯದ ಅಗಾಧತೆ ನೋಡಿ ಗೋವಳರು

ಕೈ ಚೆಲ್ಲಿ ಕುಳಿತಾಗ ಅವರ ಮಾನಸಿಕ ಸ್ಥಿತಿ ಸಾವೇ ಬಂದು ಎದುರು ನಿಂತಂತೆ ಅವರು ಭಾವಿಸಿದ್ದಾರೆ. ಮುಂದಿನ ಪದ್ಯದಲ್ಲಿ

**"ಬಸಿವ ನೆತ್ತರ ಗೋವರರಸಂ**
**ಗುಸಿರಲಾರದೆ ದೊಪ್ಪ ನಡೆಗಡೆ**
**ದಸುವ ಕಳೆದರು ಕೆಲರು, ಕೆಲಬರು ತಮ್ಮ ಸಂತೈಸಿ**
**ಅಸಮ ಬಲವದು ಜೀಯಗೋವರ**
**ಕುಸುರಿದರಿದರುವತ್ತು ಸಾವಿರ।**
**ಪಶುಸಮೂಹ ಹಿಡಿದರೆಂದರುಮತ್ಸ್ಯ ಭೂಪತಿ"**[೧೪]

ಮೈಯೆಲ್ಲಾ ರಕ್ತವಾಗಿ, ಇನ್ನೂ ರಕ್ತ ಒಸರುತ್ತಿದ್ದ ಕೆಲವು ಗೋವಳರು ಓಡುತ್ತಾ ಬಂದು ದೊರೆಯ ಮುಂದೆ ನಿಂತು ಮಾತನಾಡಲಾರದೆ ಪ್ರಾಣ ಬಿಟ್ಟರು. ಕೆಲವರು ಸುಧಾರಿಸಿಕೊಂಡು "ಪ್ರಭೂ ಅದು ಭಾರಿ ಸೈನ್ಯ. ಗೊಲ್ಲರನ್ನು ಕೊಚ್ಚಿ ಕೊಚ್ಚಿ ಹಾಕಿದರು. ೬೦,೦೦೦ ಗೋವುಗಳನ್ನು ಹಿಡಿದುಕೊಂಡು ಹೋದರು" ಎಂದರು. ಎಂಬ ಮಾತುಗಳಲ್ಲಿ ತುರುಸೆರೆಯಲ್ಲಿ ೬೦ ಸಾವಿರ ಗೋವುಗಳನ್ನು ಸೆರೆ ಹಿಡಿದರು ಎಂಬುದು ಆ ಯುದ್ಧದಲ್ಲಿ ಭಾಗವಹಿಸಿದವರ ಸಂಖ್ಯೆ ಹಾಗೂ ಭೀಕರತೆಯನ್ನು ಊಹಿಸಲು ಅವಕಾಶ ಮಾಡಿಕೊಡುತ್ತದೆ.

ಕೌರವನ ರಾಜಕೀಯದ ಉದ್ದೇಶವನ್ನು ಊಹಿಸುವ ಪಾಂಡವರು "ನಮ್ಮನ್ನು ಅಜ್ಞಾತವಾಸದ ಅವಧಿ ಮುಗಿಯುವ ಮೊದಲೇ ನಮ್ಮನ್ನು ಕಂಡುಹಿಡಿದು, ಮತ್ತೆ ಅರಣ್ಯವಾಸಕ್ಕೆ ಕಳಿಸಲು ಬಂದಿದ್ದಾರೆ" ಎನ್ನುತ್ತಾ ಗೋವುಗಳಿಗೆ ಒದಗಿದ ಸಂಕಟವನ್ನು ನೋಡುತ್ತಾ ಕೂರುವುದು ವೀರಧರ್ಮವಲ್ಲ ಎಂದು,

**"ಅವಧಿ ತೀರಲಿ ಮೇಣುಮಾಣಲಿ**
**ಎವಗೆ ತುರುಹುಯ್ಯಲನು ಕೇಳಿದು**
**ಕಿವಿಯಲುದಕವ ಕೊಂಡಡಾ ಪಾತಕವನೆಣಿಸುವೊಡೆ**
**ಎವಗೆ ನೂಕದು ಸಾಕದಂತಿರ**
**ಲವರ ಬೆಂಬಳಿವಿಡಿದು ವರಗೋ**
**ನಿವಹವನು ಮರಳಿಚುವೆನೆಂದು ಧರ್ಮಾನಂದನನು"**[೧೫]

'ಅವಧಿ ಮುಗಿದಿರಲಿ ಬಿಟ್ಟಿರಲಿ ಗೋವುಗಳಿಗೆ ಸಂಕಟ ಒದಗಿರುವುದನ್ನು ಕಿವಿಯಲ್ಲಿ ಕೇಳಿ, ನೀರನ್ನು ಕುಡಿದರೂ ಬರುವ ಪಾಪವನ್ನು ಲೆಕ್ಕ ಹಾಕಲು ಸಾಧ್ಯವಿಲ್ಲ. ಅದು ಹಾಗಿರಲಿ, ವಿರಾಟ ಬಲದ ಹಿಂದೆ ಹೋಗಿ ಗೋವುಗಳನ್ನು ಹಿಂದಿರುಗಿಸುತ್ತೇನೆ' ಎಂಬ ಧರ್ಮಜನ

ಮಾತು ಅಂದಿನ ಜೀವನ ಧರ್ಮದ ಮೌಲ್ಯವನ್ನೇ ಎತ್ತಿ ಹೇಳುತ್ತದೆ. ಅನಂತರ ಪಾಂಡವರೂ ಯುದ್ಧದಲ್ಲಿ ಭಾಗವಹಿಸಿದ ನಂತರ ಯುದ್ಧದ ಭೀಕರತೆಯನ್ನು ಈ ಕೆಳಗಿನ ಪದ್ಯ ವಿವರಿಸುತ್ತದೆ.

> **"ಕುದುರೆ ಹೊಕ್ಕವು ದಂತೆ ಗಟೆ ತು**
> **ಳಿದವು ರಥವಾಜಿಗಳು ಸೇನೆಯ**
> **ಹೊದರ ಹೊಯ್ದವು ಕೂಡೆ ಕಾಲಾಳಿರಿದು ಕಾದಿದರು.**
> **ಕದಡಿತಾ ದಳ ಮೈಯೊಳ ಹೊಕ್ಕವು**
> **ಬಿದಿರಿದೆಲುಗಳು ಮುರಿದು ನೆತ್ತಿಯ**
> **ಮಿದಳು ಸುರಿದುದು ನೆತ್ತರುಬ್ಬರಿಸುದುದು ನೆರೆಮಸಗಿ"**[೧೬]

ಕುದುರೆ ಆನೆಗಳು ಮುನ್ನುಗ್ಗಿದವು. ರಥಗಳು ಸೇನೆಯನ್ನು ಭಾಗಮಾಡಿ ಮುನ್ನುಗ್ಗಿದವು. ಕಾಲಾಳುಗಳು ಯುದ್ಧನಿರತರಾದರು. ಸೈನ್ಯವು ಕದಡಿತು. ಮೈ ಎಲುಬುಗಳು ಹೊರಕಾಣಿಸಿದವು. ನೆತ್ತಿಯ ಚಿಪ್ಪು ಮುರಿದು ಮಿದುಳು ಹೊರಕ್ಕೆ ಬಿದ್ದವು. ರಕ್ತವು ಉಕ್ಕಿ ಹರಿಯಿತು.

> **"ದಿಂಡುಗೆಡೆದವು ದಂತಿಘಟೆ ಶತ**
> **ಖಂಡವಾದವು ತುರುಗದಳ ಮುಂ**
> **ಕೊಂಡಿರಿದು ಕಾಲಾಳು ಕೆಡೆದವು ತಾರುಥಟ್ಟಿನಲಿ**
> **ತುಂಡಿಸಿತು ರಥವಾಜಿ ಮಿದುಳಿನ**
> **ಜೊಂಡಿನಲಿ ರಣಭೂಮಿ ರಕುತದ**
> **ಗುಂಡಿಗೆಗಳೊಗ್ಗಾಯ್ತು ಶಾಕಿನಿ ಡಾಕಿನೀ ಜನಕೆ"**[೧೭]

ಆನೆಗಳು ಬಿದ್ದು ಹೊರಳಿದವು. ಕುದುರೆಗಳು ತುಂಡು ತುಂಡಾದವು. ಕಾಲಾಳುಗಳು ಮುನ್ನುಗ್ಗಿ ಹೊಡೆದಾಡಿ ಸಾಲು ಸಾಲಾಗಿ ಬಿದ್ದರು. ರಥಕ್ಕೆ ಕಟ್ಟಿದ ಕುದುರೆಗಳು ತುಂಡಾದವು. ಮಿದುಳು, ರಕ್ತಗಳನ್ನು ತಿನ್ನಲು ಶಾಕಿನಿ ಡಾಕಿನಿಯರು ಗುಂಪಾಗಿ ಬಂದರು. ಎಂಬ ಸಾಲುಗಳು ಗೋಗ್ರಹಣದ ಭೀಕರತೆಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತವೆ. ಇದೇ ಭಾಗದ ಪದ್ಯ ಒಂದರಲ್ಲಿ[೧೮]ಬಾಣಗಳಿಂದ ೮ ಸಹಸ್ರ ಕುದುರೆ ಕೊಂದು, ೫೦೦ ಆನೆಗಳನ್ನು ಸೀಳಿ, ಸಹಸ್ರ ರಥಗಳನ್ನು ಮುರಿದು, ಲೆಕ್ಕವಿಲ್ಲದಷ್ಟು ಕಾಲಾಳುಗಳನ್ನು ಒರಸಿದ ವಿಷಯ ಬರುತ್ತದೆ. ಇದು ದಕ್ಷಿಣ ಗೋಗ್ರಹಣವಾದರೆ, ಇನ್ನು ಉತ್ತರ ಗೋಗ್ರಹಣದಲ್ಲಿ ಭೀಷ್ಮ, ಕರ್ಣ, ದ್ರೋಣರು ಮುಂದಾಳತ್ವ ವಹಿಸಿ ವಿರಾಟನ ಗೋವುಗಳನ್ನು ಹಿಡಿದರು. ಅಲ್ಲದೆ ಸೆರೆ ಸಿಕ್ಕ ಗೋವಿನ ಕಡೆಯವನ್ನು ಶತ್ರುರಾಜರು ಹೇಗೆ ಅವಮಾನಿಸುತ್ತಿದ್ದರು ಎಂಬುದಕ್ಕೆ ಮುಂದಿನ ಪದ್ಯ ಸಾಕ್ಷಿಯಾಗಿದೆ.

"ಮೇಲುದಳಕಿದಿರಾಗೆ ಬರೆ ಹರಿ
ಗಾಳಗದೊಳೊಡೆಮುರಿದು ಗೋವರು
ದೊಳಿಗೋಟೆಯ ಕೊಂಡರಮರರ ರಾಜಧಾನಿಗಳ
ಸಾಲರಿದು ಕೆಟ್ಟೋಡಿದರು ಗೋ
ಪಾಲಕನೊಬ್ಬನ ಹಿಡಿದು ಮೂಗಿನ
ಮೇಲೆ ಸುಣ್ಣವ ಬರೆದು ಬಿಟ್ಟರು ಹಗೆಯ ಪಟ್ಟಣಕೆ"[೧೯]

ಕೌರವ ಸೈನ್ಯದವರು ಒಬ್ಬ ಗೊಲ್ಲನನ್ನು ಹಿಡಿದು ಅವನ ಮೂಗಿಗೆ ಸುಣ್ಣವನ್ನು ಬಳಿದು ವಿರಾಟಪುರಕ್ಕೆ ಕಳಿಸಿದರು ಎಂಬುದು ವೀರತ್ವವನ್ನು ಅಣಕಿಸುವ ಪರಿಯನ್ನು ತಿಳಿಸುತ್ತದೆ. ಮುಂದಿನ ಪದ್ಯದಲ್ಲಿ ಸತ್ತು ಹೋದ ಗೋವಳರನ್ನು ಅಣಕಿಸುತ್ತಾ ಗೋವುಗಳನ್ನು ವಶಪಡಿಸಿಕೊಂಡು ಒಬ್ಬ ಗೋವಳನಿಗೆ ಈ ಯುದ್ಧ ನಿಮ್ಮಂಥ ಗೋವಳರಿಗೆ ಸಾಧ್ಯವಿಲ್ಲ ಯಾರಾದರೂ ವೀರರಿದ್ದರೆ ಬರಹೇಳು ಎಂದು ಮೂದಲಿಸುತ್ತಾನೆ. ಅಲ್ಲದೆ ಉತ್ತರಕುಮಾರನ ಪೌರುಷ, ಜಂಬ ಕೊಚ್ಚಿಕೊಳ್ಳುವ ಪ್ರಸಂಗದಲ್ಲಿ ಇಡೀ ಕೌರವ ಸೈನ್ಯದ ವರ್ಣನೆಯ ಪ್ರಸಂಗ ಕುಮಾರವ್ಯಾಸ ಹಾಸ್ಯ, ಭೀಕರತೆಯ ಮಿಶ್ರಣ ಮಾಡಿ ಸಹೃದಯರಿಗೆ ಉಣಬಡಿಸಿದ್ದಾನೆ.

ಗೋವಳನು

"ಎತ್ತದುವ್ವಾಳಿಸುವಡಾಲಿಗ
ಳತ್ತಲಾನೆಯ ಘಟು ಕಾಲಾ
ಳೊತ್ತರದ ರಣವಾಜಿ ರೂಡಿಯ ರಾಯರಾವುತರು
ಸುತ್ತ ಬಳಸಿಹುದೆತ್ತಮನಹರಿ
ವತ್ತ ಮೊಹರವಲ್ಲದನ್ಯವ
ಮತ್ತೆ ಕಾಣೆನು ಜೀಯ ಹದನಿದುವೈರಿ ವಾಹಿನಿಯ"[೨೦]

ಕಣ್ಣನ್ನು ಎತ್ತ ತಿರುಗಿಸಿದರೂ ಅಲ್ಲಿ ಆನೆ, ಕಾಲಾಳುಗಳು, ರಣ ಸನ್ನದ್ಧ, ರಾವುತರು ಸುತ್ತಲೂ ಕಾಣುತ್ತಾರೆ. ಮನಸ್ಸನ್ನು ಎಷ್ಟು ದೂರಕ್ಕೆ ಕಳಿಸಿದರೂ ಶತ್ರು ಸೈನ್ಯವಲ್ಲದೆ ಬೇರೇನೂ ಕಾಣುವುದಿಲ್ಲ ಎಂಬ ಮಾತು ಭೀಕರ ಯುದ್ಧದ ವರ್ಣನೆಯನ್ನು ಕಣ್ಣಿಗೆ ಕಟ್ಟುವುದರ ಜೊತೆಗೆ ಶತ್ರುರಾಜರ ಯುದ್ಧದ ಆಕ್ರಮಣದ ತಯಾರಿಯನ್ನು ಕಣ್ಣ ಮುಂದೆ ನಿಲಿಸುತ್ತದೆ. ಅರ್ಜುನ ಅತಿರಥ ಮಹಾರಥರೊಡನೆ ಉತ್ತರ ಗೋಗ್ರಹಣ ಯುದ್ಧದಲ್ಲಿ ಹೇಗೆ ಯುದ್ಧ ಮಾಡಿದ? ಹಾಗೂ ಆ ರಣರಂಗ ಹೇಗಿತ್ತು ಎಂಬುದನ್ನು ಈ ಕೆಳಗಿನ ಪದ್ಯಗಳು ವರ್ಣಿಸುತ್ತವೆ.

"ಕುರಳ ಬಾಯಲಿ ಕಾರಿ ಕಾಲ
ಳೊರಳಿ ಕೆಡೆದುದು ಬೊಳೆಯಂಬುಗ
ಳರಿಯೆ ಸಮ ಸೀಳಾಗಿ ಬಿದ್ದವು ಗಜದ ಹೋಳುಗಳು
ಕೊರಳು ಹರಿದೊರತೆಯಲಿ ರಕುತದ
ಹೊರಳಿಗಳ ಹೊನಲಿನಲಿ ಮುಳುಗಿತು
ತುರಗ ರಥದಳರಾಜಿ ಹೊಸ ಕುಮ್ಮರಿಯ, ಹೋಲಿಸಿತು।
ಹರಿಗೆ ಖಂಡಿಸಿ ಜೋಡು ಸೀಸಕ
ಜರಿದು ಬಲುದೋಳುಡಿದು ಗೋಣರೆ
ಹರಿದು ನಿಟ್ಟೆಲು ಮುರಿದು ತೊಡೆಯರೆಗಡಿದು ತಲೆಯೊಡೆದು
ನರ ಹರಿದು ಕರುಳೊಕ್ಕು ನೆಣನು
ಬ್ಬರಿಸಿ ಕಾಳಿಜ ಕಾಯ್ದು ನೆತ್ತರು
ಸುರಿದು ಹರಿದೊಗಲಿನಲಿ ಹೊರಳಿತು ವೈರಿ ಪಾಯದಳ"[೨೧]

ಕಾಲಾಳುಗಳು ಕರುಳುಗಳನ್ನು ಕಾರಿಕೊಂಡು ಬಿದ್ದರು. ಬೋಳೆ ಅಂಬುಗಳು ಆನೆಗಳನ್ನು ಸಮವಾಗಿ ಸೀಳಿದವು. ಸೈನಿಕರ, ಆನೆ, ಕುದುರೆಗಳ ತಲೆ ಹಾರಿ ಚಿಮ್ಮುವ ಒರತೆಯಾಗಿ ಹರಿದು ತೊರೆಯಾದ ರಕ್ತದಲ್ಲಿ ಕುದುರೆಗಳು, ರಥಗಳು ಮುಳುಗಿ ಹೋದವು ಹೊಸದಾಗಿ ಕಡಿದ ಕಾಡಿನಂತೆ ರಣರಂಗವು ಕಾಣಿಸಿತು.

ಗುರಾಣಿ ಕತ್ತರಿಸಿ ಬಿದ್ದು ಕವಚ ಶಿರಸ್ತ್ರಾಣಗಳು ಕಡಿದು ತೋಳು ಕತ್ತರಿಸಿ, ಕತ್ತು ಅರ್ಧ ಕತ್ತರಿಸಿ ಎಲುಬುಗಳು ಮುರಿದು, ತೊಡೆಗಳು ಅರೆ ಕತ್ತರಿಸಿ, ನರಗಳು ಹರಿದು, ಕರುಳು, ಪಿತ್ತಕೋಶ, ಗುಲ್ಮಗಳು ಹೊರಬಂದು ಚರ್ಮ ಹರಿದು, ರಕ್ತ ಸುರಿದು, ಕಾಲಾಳುಗಳು ಬಿದ್ದರು ಎಂದು ರಣರಂಗದ ಭೀಕರ ಚಿತ್ರಣವನ್ನು ನೀಡಿದೆ.

ನಮಗೆ ಈವರೆಗೆ ದೊರೆತಿರುವ ಎಲ್ಲ ಶಾಸನಗಳಲ್ಲಿಯೂ ಯುದ್ಧದ ವರ್ಣನೆ ಇಲ್ಲ. (ಕೊರಕೋಡು ಹಾಗೂ ಕೆಲವೇ ಕೆಲವು ಶಾಸನಗಳಲ್ಲಿ) ಯುದ್ಧದ ವರ್ಣನೆಗಿಂತ ವೀರನ ಹೋರಾಟದ ವರ್ಣನೆಗೆ ಮಾತ್ರ ಸ್ಥಾನ ದೊರೆತಿದೆ. ಆದರೆ ಯುದ್ಧದ ಭೀಕರತೆಯನ್ನು ಮಹಾಭಾರತದ ಗೋಗ್ರಹಣ ಪ್ರಸಂಗಗಳಲ್ಲಿ ಕಾಣಬಹುದು. ಅದನ್ನು ಕುಮಾರವ್ಯಾಸ ಅದ್ಭುತವಾಗಿ ಚಿತ್ರಿಸಿದ್ದಾನೆ. ಅಲ್ಲದೆ ಗೋಗ್ರಹಣ ಪ್ರಸಂಗದಲ್ಲಿ ಹಸುಗಳು ಅನುಭವಿಸುತ್ತಿದ್ದ ತಲ್ಲಣ ತವಕಗಳನ್ನು ಈ ಪದ್ಯ ವಿವರಿಸುತ್ತದೆ.

"ಬಿಗಿದ ಕೆಚ್ಚಲ ತೊರೆದೊಗುವ ಹಾ
ಲುಗಳ ಮಿಗೆ ಸೂಳೆದ್ದ ಬಾಲವ
ಮೇಗನೆಗಹಿ ದೆಸೆದೆಸೆಯ ನೋಡುತ ಬೆಚ್ಚಿ ಬಿರುವರಿವ
ಅಗಿದು ಸರಳಿಸಿ ನಿಲುವ ಹೊಸಬರ
ಸೊಗಡಿಗವ್ವಳಿಸುತ್ತ ಗೋವರು
ತೆಗೆದ ಪಥದಲಿ ತೆಕ್ಕವರಿದವು ಹಿಂಡುಹಿಂಡಿನಲಿ"[೨೨]

ಹಾಲು ಕರೆಯದೆ ಬಿಗಿದ ಕೆಚ್ಚಲುಗಳಿಂದ ಹಾಲು ಹೊರಹೊಮ್ಮುತ್ತಿರಲು, ಮತ್ತೆ ಮತ್ತೆ ಬಾಲವನು ಮೇಲೆತ್ತಿ, ಮುಖವನ್ನು ಮೇಲೆತ್ತಿ ದಿಕ್ಕು ದಿಕ್ಕುಗಳನ್ನು ಗಾಬರಿಯಿಂದ ನೋಡುತ್ತಾ, ಭಯದಿಂದ ಆಗಾಗ ನಡುಗುತ್ತಾ, ಸ್ವಲ್ಪ ಹೊತ್ತು ನಿಂತು, ಹೊಸಬರ ಮೈವಾಸನೆಯನ್ನು ಸಹಿಸದೆ ನಡಗುತ್ತ ಗೋವಳರು ತೋರಿಸಿದ ದಾರಿಯಲ್ಲಿ ಗೋವುಗಳು ಊರತ್ತ ಹೊರಟವು. ಯುದ್ಧದ ಆರಂಭಮಾಡಲು ಕೌರವರು ಗೋವಳರ ಮೂಗಿಗೆ ಸುಣ್ಣ ಬಳಿದು, ವೀರರಾರಾದರೂ ಇದ್ದರೆ ಯುದ್ಧಕ್ಕೆ ಬರಹೇಳು ಎಂದು ಯುದ್ಧವನ್ನು ಆರಂಭಿಸುತ್ತಾರೆ. ಆದರೆ ಅಂತ್ಯದಲ್ಲಿ ವೀರ ಪರಾಕ್ರಮಿ ಅರ್ಜುನ ಈ ಉತ್ತರ ಗೋಗ್ರಹಣವನ್ನು ಗೆದ್ದು ತಮ್ಮ ಊರಕಡೆಗೆ ಹೆಜ್ಜೆ ಹಾಕುತ್ತಿದ್ದ ಗೋವುಗಳನ್ನು ನೋಡುತ್ತಾ ಪದ್ಯ ೫೨ರಲ್ಲಿ 'ಕೌರವ ರಾಜನ ಸೈನ್ಯ ಸೋತುಹೋಯಿತು. ಈ ಅಪಮಾನವನ್ನು ತೊಡೆದು ಹಾಕಬಲ್ಲ ವೀರನನ್ನು ಯುದ್ಧಕ್ಕೆ ಬರಹೇಳು, ಎಂದು ಪ್ರತಿ ಸವಾಲು ಹಾಕುವ ಅರ್ಜುನನ ಮಾತು ವೀರತ್ವದ ಪ್ರತೀಕವಾಗಿದೆ.[೨೩] ಅಲ್ಲದೆ ಸಮಯಕ್ಕೆ ಸರಿಯಾಗಿ ಹಸುಗಳ ಹಾಲು ಕರೆಯದಿದ್ದರೆ ಹಸುಗಳ ಕೆಚ್ಚಲು ಹಾಲಿನಿಂದ ತುಂಬಿ ತೊಂದರೆ ಅನುಭವಿಸಿ ಅನೇಕ ರೋಗಗಳಿಗೆ ಕಾರಣವಾಗುತ್ತದೆ. ಪಶುಗಳ ಪಾಲನೆಯಲ್ಲಿ ಸಕಾಲಕ್ಕೆ ಹಾಲನ್ನು ಕರೆಯುವುದು ಅತ್ಯಂತ ಮುಖ್ಯ ಮತ್ತು ಮಹತ್ವದ್ದು. ಈ ಸಂಗತಿಯು ಗೋವುಗಳ ಒಡೆಯರನ್ನು ಶತ್ರು ರಾಜರುಗಳ ಬೇಡಿಕೆಗಳನ್ನು ಈಡೇರಿಸುವ ಸಂದಿಗ್ದತೆಯನ್ನು ತಂದೊಡ್ಡುತ್ತಿತ್ತು. ಒಂದು ವೇಳೆ ಕ್ಷಿಪ್ರವಾಗಿ ಮಾತುಕತೆಗಳನ್ನು ನಡೆಸಿಯೋ ಅಥವಾ ಯುದ್ಧವನ್ನು ಮಾಡಿಯೋ ಸೆರೆಹಿಡಿದ ಗೋವುಗಳನ್ನು ಬಿಡಿಸಿಕೊಳ್ಳದಿದ್ದರೆ, ಇಡೀ ದನಗಳ ಹಿಂಡು ರೋಗಕ್ಕೆ ತುತ್ತಾಗಿ ಹಾಲಿನ ಇಳುವರಿ ಕಡಿಮೆಯಾಗುತ್ತಿತ್ತು. ಸಕಾಲಕ್ಕೆ ಹಾಲು ಕರೆಯದಿದ್ದರಿಂದ ಇಡೀ ದನಗಳ ಹಿಂಡು ಕೃಷವಾಗಿ ಹೋಗುತ್ತಿದ್ದದ್ದನ್ನು ಪದ್ಯದಲ್ಲಿ ಊಹಿಸಲು ಅವಕಾಶ ಮಾಡಿಕೊಡುತ್ತದೆ.

ಆಧುನಿಕ ಸಾಹಿತ್ಯ ಕೃತಿಗಳ ರಚನೆಯ ಕಾಲಕ್ಕೆ ಶಿಷ್ಟ ಸಂಸ್ಕೃತಿಯಲಿ ವೀರರ ಪರಂಪರೆ ಬದಲಾದ ಕೃಷಿ ಪದ್ಧತಿ,ಶೈಕ್ಷಣಿಕ, ಮತ್ತು ಕೈಗಾರಿಕಾ ನೀತಿಗಳು ಬದಲಾದದ್ದು ಜೀವನದ ಕ್ರಮಗಳಲ್ಲೂ ಏರುಪೇರಾಗಲು ಕಾರಣವಾಯಿತು. ಬದಲಾದ ಬದುಕಿನ ಕ್ರಮಗಳಲ್ಲಿ ಯಂತ್ರಗಳೇ

ಪ್ರಾಮುಖ್ಯತೆ ಪಡೆದದ್ದರಿಂದ ದನಗಳ ಪಾಲನೆಯ ಪ್ರಾಮುಖ್ಯತೆ ಕಡಿಮೆ ಆಯಿತು. ಹಾಗಾಗಿ ಗೋವು ೧೯ನೇ ಶತಮಾನದಲ್ಲಿ ಗ್ರಾಮೀಣ ಪರಿಸರದ ಜನರಲ್ಲಿ ಗೋವುಗಳು ಭಾವನಾತ್ಮಕ ಪರಿಧಿಯಿಂದ ವ್ಯಾವಹಾರಿಕ ಪರಿಧಿಯ ಸ್ಥಾನ ಪಡೆದದ್ದು ಸಾಹಿತ್ಯದ ಹಂತದಲ್ಲಿ ಮುಖ್ಯವಾಗಲೇ ಇಲ್ಲ. ಹಾಗೂ ೧೮೫೭ರ ಸಿಪಾಯಿ ದಂಗೆಯ ಸಂದರ್ಭದಲ್ಲಿ ದನ ಮತ್ತು ಹಂದಿ ಕೊಬ್ಬನ್ನು ಆಯುಧಗಳಿಗೆ ಬಳಸಿದ್ದು ಸ್ವಾತಂತ್ರ್ಯ ಹೋರಾಟಕ್ಕೆ ನಾಂದಿಯಾಯಿತು. ಅಲ್ಲಿಂದ ಮುಂದೆ ಗೋವನ್ನು ನಮ್ಮ ಭಾವನಾತ್ಮಕತೆಯ ವಿಚಾರದಿಂದ ದೂರವಿರುವಂತೆ ಬ್ರಿಟೀಷ್ ವ್ಯವಸ್ಥೆ ನೋಡಿಕೊಂಡಿತು. ಅಲ್ಲದೆ ಈ ವೇಳೆಗೆ ಗೋಗ್ರಹಣ ಯುದ್ಧಗಳು ನಿಂತುಹೋಗಿ ತುರುಗೊಳ್ ಕದನಗಳು ಜನಮಾನಸದಿಂದ ದೂರವಾಯಿತು. ಪಾಶ್ಚಾತ್ಯ ಸಿದ್ಧಾಂತಗಳ ಪ್ರಭಾವಗಳೂ ಕೂಡ ಗೋವುಗಳ ಪ್ರಾಮುಖ್ಯತೆಗಳನ್ನು ಮೂಲೆಗೆ ತಳ್ಳಿತು.

**ಅಡಿಟಿಪ್ಪಣಿಗಳು**

೧. ಡಾ.ಕೆ.ಎಸ್.ನಾರಾಯಣಾಚಾರ್ಯ, ವೇದ ಸಂಸ್ಕೃತಿ ಪರಿಚಯ, ಪು.೧೦೮

೨. ಅದೇ, ಪು.೩೩೧

೩. ಅದೇ, ಪು.೩೪೧

೪. ಅದೇ, ಪು.೩೪೧

೫. ಪಂಪಭಾರತ, ಪು.೧೮

೬. ಕುಮಾರವ್ಯಾಸ ಭಾರತ, ಪದ್ಯ ೮೯

೭. ಅದೇ, ಪದ್ಯ ೧೦೪

೮. ಅದೇ, ಪದ್ಯ ೧೦೭

೯. ಅದೇ, ಪದ್ಯ ೨೪

೧೦. ಅದೇ, ಪದ್ಯ ೪೦

೧೧. ಅದೇ, ಪದ್ಯ ೪೧

೧೨. ಅದೇ, ಪದ್ಯ ೪೨

೧೩. ಅದೇ, ಪದ್ಯ ೪೩

೧೪. ಅದೇ, ಪದ್ಯ ೪೪

೧೫. ಅದೇ, ಪದ್ಯ ೪೮

೧೬. ಅದೇ, ಪದ್ಯ ೫೩

೧೭. ಅದೇ, ಪದ್ಯ ೫೪

೧೮. ಅದೇ, ಪದ್ಯ ೬೪ರಲ್ಲಿ

೧೯. ಅದೇ, ಸಂಧಿ ೬(೩)

೨೦. ಅದೇ, ಪದ್ಯ ೧೦೧

೨೧. ಅದೇ, ೮ನೇ ಸಂಧಿಯ ೩೮, ೩೯

೨೨. ಅದೇ, ಪದ್ಯ ೫೦

೨೩. ಅದೇ, ಪದ್ಯ ೫೧

## ಅಧ್ಯಾಯ: ನಾಲ್ಕು

# ಜನಪದ ಸಾಹಿತ್ಯದಲ್ಲಿ ಗೋಗ್ರಹಣ

ಭಾರತ ಹಳ್ಳಿಗಳ ದೇಶ. ಭಾರತದಲ್ಲಿ ೬,೩೮,೫೯೬ ಹಳ್ಳಿಗಳಿವೆ ಎಂದು ೨೦೧೧ರಲ್ಲಿ ನಡೆದ ಸರ್ವೇಕ್ಷಣೆಯಲ್ಲಿ ತಿಳಿದು ಬಂದಿದೆ. ಪ್ರತಿಯೊಂದು ಹಳ್ಳಿಯೂ ತನ್ನದೇ ಆದ ಸಾಂಸ್ಕೃತಿಕ ಆಚರಣೆಗಳನ್ನು, ರೂಢಿ-ಸಂಪ್ರದಾಯಗಳನ್ನು ಹೊಂದಿವೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಹವಾಮಾನಗಳಿಗೆ ತಕ್ಕಂತೆ ಭೌಗೋಳಿಕವಾಗಿ ಸಂಸ್ಕೃತಿ ಮತ್ತು ಜನಪದ ಆಚರಣೆಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಇಡೀ ಗ್ರಾಮೀಣ ಬದುಕಿನ ಜೀವನವನ್ನು ಜನಪದ ಸಂಸ್ಕೃತಿ ಎಂದು ಸಾಹಿತ್ಯದ ಸಂದರ್ಭದಲ್ಲಿ ಗಮನಿಸಲಾಗುತ್ತಿದೆ. ಗ್ರಾಮೀಣ ಪ್ರದೇಶದ ಜನರು ತಮ್ಮ ನೋವು, ನಲಿವು ಸಂಭ್ರಮಗಳು, ಆಚರಣೆಗಳನ್ನು ಮೌಖಿಕ ಪರಂಪರೆಯಲ್ಲಿ ಹಾಡುಗಳ ಮೂಲಕ, ತ್ರಿಪದಿಗಳ ಮೂಲಕ, ತಲತಲಾಂತರದಿಂದ ಮುಂದಿನ ತಲೆಮಾರಿಗೆ ವರ್ಗಾಯಿಸುವ ಕೆಲಸವನ್ನು ನಡೆಸುತ್ತಾ ಬಂದಿದೆ. ಈ ಹಾಡುಗಳು ಜನಪದರ ನೋವಿಗೆ, ನಲಿವಿಗೆ ಹಬ್ಬದ ಸಡಗರಕ್ಕೆ, ಆಸರ-ಬೇಸರಗಳಿಗೆ, ಶ್ರಮ ಪರಿಹಾರಕವಾಗಿ ಹೃದಯದಿಂದ ಹುಟ್ಟಿದ ಮಾತುಗಳೇ ಜನಪದ ಹಾಡುಗಳಾಗಿವೆ. ಇಡೀ ಗ್ರಾಮೀಣ ಸಮುದಾಯ ಶ್ರಮವನ್ನೇ ನಂಬಿ ಬದುಕಿದೆ. ಮಾನವನ ತೋಳ್‌ಬಲಕ್ಕೆ ಹೆಗಲುಕೊಟ್ಟು ದುಡಿಯುತ್ತಿರುವ ಬಸವ, ಹಸುಗಳು ರೈತರ ಹಬ್ಬ, ಆಚರಣೆಗಳ ಸಂದರ್ಭದಲ್ಲೂ ಪ್ರಾಮುಖ್ಯತೆ ಪಡೆದಿವೆ. ರೈತರ ಮನೆಯಲ್ಲಿ ಕಣಜ ತುಂಬುವುದಕ್ಕೂ ಆ ರೈತನ ಮನೆಯಲ್ಲಿರುವ ಎತ್ತುಗಳ ಸಂಖ್ಯೆಗೂ ಸಂಬಂಧವಿದೆ. ಯಾರ ಮನೆಯಲ್ಲಿ ಹೆಚ್ಚು ದನಗಳ ಹಿಂಡು ಇರುತ್ತದೋ ಅವರ ಮನೆಯ ಸಂಭ್ರಮಕ್ಕೂ ಮಿತಿಇರುವುದಿಲ್ಲ. ದನ-ಕರುಗಳಿರುವ ರೈತರ ಮನೆಯ ಬಾಗಿಲನ್ನು ಹಾಕುವುದು ಅಶುಭ ಎಂದೇ ಭಾವಿಸುತ್ತಾರೆ. ಅವುಗಳಿಗೆ ಮೇವು ನೀರು ಹಾಕುವುದು ಪರಮ ಕರ್ತವ್ಯ ಎಂದು ರೈತ ಭಾವಿಸುತ್ತಾನೆ.

ನಮ್ಮ ಗ್ರಾಮೀಣ ಸಂಸ್ಕೃತಿಯನ್ನು ಪಶುಗಳಿಂದ ಹೊರತುಪಡಿಸಿ ಅಧ್ಯಯನ ಮಾಡುವ ಹಾಗೆಯೇ ಇಲ್ಲ. ಗ್ರಾಮೀಣರ ಜೀವನದಲ್ಲಿ ಪಶುಗಳು ಅಷ್ಟು ಹಾಸುಹೊಕ್ಕಾಗಿ ಬೆರೆತಿವೆ.

ಅನೇಕ  ಮನೆಗಳಲ್ಲಿ ರಾಸುಗಳನ್ನು ತಮ್ಮ ಸ್ವಂತ ಮಕ್ಕಳಿಗಿಂತಲೂ ಪ್ರೀತಿಯಿಂದ ನೋಡಿಕೊಳ್ಳುವರು, ಕಾಪಾಡುವರು. ಅವುಗಳ ರಕ್ಷಣೆಗಾಗಿ ದೊಡ್ಡ ದೊಡ್ಡ ಹೋರಾಟಗಳೇ ನಡೆದಿವೆ. ಸಹಸ್ರಾರು ಜನ ಪ್ರಾಣವನ್ನು ಬಿಟ್ಟಿದ್ದಾರೆ. ಇವರೆಲ್ಲರೂ ಸಾರ್ಥಕ ಸೇವೆಮಾಡಿ ಸ್ವರ್ಗಕ್ಕೆ ಸಂದರೆಂದು ಇವರ ಹೆಸರಿನಲ್ಲಿ ನಿಲ್ಲಿಸಿರುವ ಸಹಸ್ರಾರು ಸ್ಮಾರಕ ಶಾಸನಗಳು ನಮಗೆ ತಿಳಿಸುತ್ತವೆ. ಗೋವುಗಳನ್ನು ದೇವರೆಂದು ತಿಳಿದು ಆರಾಧಿಸುತ್ತಿದ್ದ ಜನ ಅವುಗಳಿಗೆ ಆಪತ್ತು ಬಂದಾಗ ತಮ್ಮ ಪ್ರಾಣವನ್ನು ಒತ್ತೆ ಇಟ್ಟು ರಕ್ಷಿಸುತ್ತಿದ್ದ ಅನೇಕ ಬುಡಕಟ್ಟು ವೀರರ ಕತೆಗಳು ನಮ್ಮ ಜನಪದ ಸಾಹಿತ್ಯದಲ್ಲಿವೆ. ಇಂತಹ ಅನೇಕ ವೀರರು ದೇವರುಗಳಾಗಿ ಇಂದಿಗೂ ಆರಾಧಿಸಲ್ಪಡುತ್ತಿದ್ದಾರೆ.[೧]

ಮಳೆ ಹನಿ ಭೂಮಿಗೆ ಬಿದ್ದ ದಿನದಿಂದ ಕೃಷಿಯಲ್ಲಿ ತೊಡಗುವ ರೈತನು ತನ್ನ ಹೊಲದ ಕೆಲಸಗಳಿಗೆ, ಎತ್ತುಗಳು, ಕೋಣಗಳು, ಮತ್ತು ಹಸುಗಳು ಬೆಂಬಲ ಪಡೆಯುತ್ತಾನೆ. ಇವುಗಳು ಬೆಳೆದ ಫಸಲನ್ನು ಪುನಃ ಮನೆಗೆ ತಂದು ಕಣಜ ತುಂಬುವವರೆಗೂ ರೈತನ ಜೊತೆಯಾಗಿ ದುಡಿಯುತ್ತವೆ. ಮನೆಯ ಎಲ್ಲ ಸಣ್ಣ ಪುಟ್ಟ ಅಗತ್ಯಗಳನ್ನು ಸುಗ್ಗಿ ಬರುವವರೆಗೆ ಗೋಮಾತೆಯೇ ನೋಡಿಕೊಳ್ಳುತ್ತಾಳೆ. ಜನಪದ ಹಾಡೊಂದರಲ್ಲಿ ಗೋವಿನ ಉತ್ಪನ್ನಗಳನ್ನು ಮಾರಿ ಮಗುವಿಗೆ ಬೇಕಾದ ವಸ್ತುಗಳನ್ನು ತರವುದನ್ನು ಚಿತ್ರಿಸಲಾಗಿದೆ.

**"ಅಳಬ್ಯಾಡೊ ನನಕಂದ ನಾ ಹಾಲು ಮಾರಿ ಬರ್ತೀನಿ**
**ಹಾಲು ಮಾರಿ ಬರ್ತೀನಿ ನಿಂಗೆ ಕಾಲಿಗೆ ಕಡಗಾ ತರ್ತೀನಿ**
**ಅಳಬ್ಯಾಡೋ ನನಕಂದಾ ನಾ ಮೊಸರು ಮಾರಿ ಬರ್ತೀನಿ**
**ಮೊಸರು ಮಾರಿ ಬರ್ತೀನಿ ನಿಂಗೆ ಹಸೀರು ಅಂಗಿ ತರ್ತೀನಿ'**

ಹೀಗೆ ಹಾಡು ಮುಂದುವರೆಯುತ್ತದೆ. ಇಲ್ಲಿ ಹಾಲಿನ ಪ್ರತಿಯೊಂದು ಉತ್ಪನ್ನವನ್ನು ಮಾರಿ ಬರುವ ಹಣದಲ್ಲಿ ಕಂದನಿಗಾಗಿ ಕಡಗ ಮತ್ತು ಹಸಿರು ಅಂಗಿ ಮುಂತಾದ ವಸ್ತುಗಳನ್ನು ತರುವ ಬರವಸೆಯನ್ನು ಕೊಡುತ್ತ ಹಟ ಮಾಡುವ ಮಗುವನ್ನು ಮಲಗಿಸಲು ತಾಯಿ ಪ್ರಯತ್ನಿಸುತ್ತಾಳೆ. ಹಾಗೆಯೇ ರೈತರ ಮನೆಯ ದಿನಸಿ, ಅಗತ್ಯ ವಸ್ತುಗಳನ್ನು ಖರೀದಿಸಲು ಗೋವಿನ ಉತ್ಪನ್ನಗಳು ಸಹಾಯಕವಾಗಿವೆ. ಗಂಡು ಮನೆಯ ಹೊರಗೆ/ಹೆಣ್ಣು ಮನೆಯ ಒಳಗೆ ದುಡಿಯವುದು ಮಾನವ ಹಾಗೂ ದನಗಳಲ್ಲೂ ಕ್ರಮ ತಪ್ಪದೆ ಸಾಗಿದೆ. ಜನಪದರು ಬಾಯಿ ಇಲ್ಲದ ಬಸವನೊಂದಿಗೆ ಮನುಷ್ಯರಂತೆ ಮಾತನಾಡುವುದನ್ನು ಇಂದಿಗೂ ಕಾಣಬಹುದು. ಏಕೆಂದರೆ ದನಗಳು ರೈತನ ಜೀವನದ ಬೆನ್ನೆಲುಬು. ಆದ್ದರಿಂದಲೇ ರೈತರು ತಮ್ಮ ಹಬ್ಬ-ಹರಿದಿನಗಳಲ್ಲಿ, ಆಚರಣೆಗಳಲ್ಲಿ, ಗೋವುಗಳಿಗೆ ಪ್ರಧಾನ ಸ್ಥಾನವನ್ನು ನೀಡಿ ದೇವರಂತೆ ಆರಾಧಿಸುತ್ತಾನೆ. ಇಂಥಹ ಗೋಸಂಬಂಧಿ ಜನಪದ ಸಾಹಿತ್ಯ, ಆಚರಣೆಗಳ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅ. ಕಥೆಗಳು**

ನಮ್ಮ ಗ್ರಾಮೀಣ ಸಮಾಜದಲ್ಲಿ ಎಲ್ಲಾ ದೃಷ್ಟಿಗಳಿಂದ ಆಕಳುಗಳು ಉಪಯುಕ್ತ ಪ್ರಾಣಿಗಳಾಗಿವೆ. ಗ್ರಾಮೀಣ ಬದುಕಿನ ಆಧಾರ ಸ್ಥಂಭವೇ ಪಶುಪಾಲನೆಯಾಗಿದೆ. ಮಾನವ ಎಂದು ತನ್ನ ಅಲೆಮಾರಿ ಜೀವನವನ್ನು ಸ್ಥಾವರ ಜೀವನವನ್ನಾಗಿ ಮಾಡಿಕೊಂಡು ಬೇಟೆಕಾಯಕದಿಂದ ಸಸ್ಯಹಾರದ ಕಡೆಗೆ, ಪರಿವರ್ತಿತನಾಗಿ ಬೆಳೆಗಳನ್ನು ಬೆಳೆಯುವ ಕೃಷಿ ಪದ್ಧತಿಯನ್ನು ರೂಡಿಸಿಕೊಂಡನೋ ಅಂದಿನಿಂದ ಒಂದುಕಡೆ ನೆಲೆನಿಲ್ಲುವ ಬದುಕನ್ನು ಪ್ರಾರಂಭಿಸಿದ. ತನ್ನ ರಕ್ಷಣೆಗಾಗಿ ಮತ್ತು ಕೆಲಸಗಳಿಗೆ ನೆರವಿಗಾಗಿ ಪ್ರಾಣಿಗಳನ್ನು ಸಾಕತೊಡಗಿದ. ಮಾನವನ ಜೊತೆ ಅವನ ಬದುಕಿಗೆ ಜೊತೆಯಾದ ಪ್ರಾಣಿಗಳಲ್ಲಿ ಮುಖ್ಯ ಸ್ಥಾನ ಎಮ್ಮೆ ಮತ್ತು ದನಗಳಿಗೆ ಸಲ್ಲುತ್ತದೆ. ಮಾನವನ ಜೊತೆಯಾಗಿ ದುಡಿಯುತ್ತಿರುವ, ವ್ಯವಸಾಯಕ್ಕೆ ಬಳಸುವ ಹೋರಿಯನ್ನು ನಂದಿ, ಬಸವ ಎಂದೂ ಕರೆಯುವರು. ನಂದಿ ಪುರಾಣಗಳಲ್ಲಿ ಪರಮೇಶ್ವರನ ವಾಹನ. ನಂದಿ ಭೂಲೋಕಕ್ಕೆ ಬಂದು ಮಾನವನ ಜೊತೆಯಾಗಲು ಕಾರಣ ತಿಳಿಸುವ ಒಂದು ಕಥೆ ಈ ಕೆಳಗಿನಂತಿದೆ.

**ಕಥೆ:** ಒಮ್ಮೆ ಪರಮೇಶ್ವರ ನಂದಿಯ ಮೇಲೆ ಕುಳಿತು ಭೂಲೋಕವನ್ನೆಲ್ಲಾ ಸುತ್ತುತ್ತಾ ಜನಜೀವನವನ್ನು, ಮನುಷ್ಯರ ಸುಖ ದುಃಖಗಳನ್ನು ಹತ್ತಿರದಿಂದ ಕಂಡು, ಜನರ ಹಸಿವು, ಆಸೆ, ಕೊರತೆಗಳನ್ನು ಕಂಡು ಚಿಂತಾಕ್ರಾಂತನಾಗಿ ಕೈಲಾಸಕ್ಕೆ ಮರಳಿದನು. ಆನಂತರ ಮನುಷ್ಯನ ಕೊರತೆಗಳಿಗೆಲ್ಲಾ ಕಾರಣ ದುಡಿಮೆ ಕಡಿಮೆ ಮಾಡಿ ತಿನ್ನುವುದನ್ನೇ ಜೀವನ ಎಂದುಕೊಂಡಿರುವುದೇ ಕಾರಣ ಎಂದು ಯೋಚಿಸಿದ ಶಿವ. ತನ್ನ ವಾಹನ ನಂದಿಗೆ "ನಂದಿ ಇನ್ನು ಮುಂದೆ ಭೂಲೋಕದಲ್ಲಿ ಜನರೆಲ್ಲ ಕೇವಲ ಒಂದೇ ಹೊತ್ತು ಊಟ ಮಾಡುವಂತೆ ಕೈಲಾಸ ದೈವ ಪರಮೇಶ್ವರನ ಆಜ್ಞೆ" ಎಂದು ಭೂಲೋಕದ ಜನರಿಗೆಲ್ಲಾ ತಿಳಿಸಿ ಬಾ ಎಂದು ನಂದಿಗೆ ಆಜ್ಞೆ ಮಾಡಿ ಕಳುಹಿಸಿದನು. ಆದರೆ ನಂದಿ ಅದನ್ನು ನೆನಪಿನಲ್ಲಿಟ್ಟುಕೊಂಡು ಭೂಲೋಕಕ್ಕೆ ಬರುವಾಗ ದಾರಿಯಲ್ಲಿ ಒಂದು ನದಿ ಎದುರಾಯಿತು. ನದಿ ದಾಟುವ ಆತುರದಲ್ಲಿ ಪರಮೇಶ್ವರನು ಹೇಳಿದ್ದು ಮರೆತುಹೋಯಿತು. ನಂದಿ ಭೂಲೋಕಕ್ಕೆ ಹೋಗಿ "ಇನ್ನು ಮುಂದೆ ಭೂಲೋಕದ ಮಾನವರೆಲ್ಲ ದಿನಕ್ಕೆ ಮೂರುಹೊತ್ತು ಊಟ ಮಾಡಬೇಕಂತೆ" ಎಂದು ಡಂಗುರ ಹೊಡೆದು ಮರಳಿ ಕೈಲಾಸಕ್ಕೆ ಬಂದ. ನಂದಿಯನ್ನು ಪರಮೇಶ್ವರನು ಏನೆಂದು ಡಂಗುರ ಸಾರಿದೆ ಎಂದಾಗ ದಿನಕ್ಕೆ ಮೂರುಹೊತ್ತು ಉಣ್ಣುವಂತೆ ಡಂಗುರ ಸಾರಿದೆ ಎಂದಾಗ, ಶಿವ ಸಿಟ್ಟಾಗಿ "ನಾನು ಒಂದು ಹೊತ್ತು ಉಣ್ಣುವಂತೆ ಹೇಳಿದರೆ, ನೀನು ಮೂರು ಹೊತ್ತು ಎಂದಿರುವೆಯಲ್ಲ, ಅವನ ದುಡಿಮೆಗೆ ಆಧಾರವೇನು?" ತಪ್ಪು ಮಾಡಿದ ನೀನೇ ಮಾನವರಿಗೆಲ್ಲಾ ಆಧಾರವಾಗಿ ಅವನ ಜೊತೆಯಾಗಿ ಮೂರೂ ಹೊತ್ತು ಉಣ್ಣಲು ಸಹಾಯ ಮಾಡುವ ಬಸವನಾಗಿ ಭೂಲೋಕಕ್ಕೆ ಹೋಗು ಎಂದು ಶಾಪಕೊಟ್ಟನಂತೆ.

ಅಂದಿನಿಂದ ಹೋರಿ ಮನುಷ್ಯನ ವ್ಯವಸಾಯಕ್ಕೆ ಅಗತ್ಯವಾದ ಪ್ರಾಣಿಯಾಗಿ, ರೈತನ ಬಲಗೈಯಾಯಿತು. ರೈತನು ಮನೆಯ ಹಿರಿಯ ಮಗನ ಸ್ಥಾನವನ್ನು ಬಸವನಿಗೆ ನೀಡುತ್ತಾನೆ. ವಾರವಿಡೀ ರೈತನ ಜೊತೆಯಾಗಿ ದುಡಿಯುವ ಬಸವನಿಗೆ ವಾರದಲ್ಲಿ ಒಂದು ರಜೆ ಎಂಬಂತೆ ವಿರಾಮ ನೀಡುವುದನ್ನು ಜನಪದರು ಒಪ್ಪಿಕೊಂಡಿದ್ದಾರೆ. ಹಳ್ಳಿಗರೆಲ್ಲಾ ಇಂದಿಗೂ ಕೂಡ ಸೋಮವಾರ ಕೃಷಿ ಚಟುವಟಿಕೆಗಳಿಗೆ ರಜೆಯನ್ನು ನೀಡುವರು. ಅಂದು ಯಾರೂ ಎತ್ತುಗಳನ್ನು ಕೃಷಿ ಚಟುವಟಿಕೆಗಳಿಗೆ ಬಳಸುವುದಿಲ್ಲ. ಅಂದು ದನಕರುಗಳನ್ನು ಚೆನ್ನಾಗಿ ತೊಳೆದು, ಶುಚಿಗೊಳಿಸಿ, ಕೊಟ್ಟಿಗೆಯನ್ನು ಶುಚಿಮಾಡಿ, ಆ ದಿನವನ್ನು ಅವುಗಳ ಹೆಗಲಿಗೆ ನೊಗವನ್ನು ಹೂಡದೆ ಬಿಡುವು ನೀಡುತ್ತಾರೆ. ಈ ಆಚರಣೆಯನ್ನು ಇಂದಿಗೂ ಆಚರಿಸುತ್ತಿದ್ದಾರೆ.

**"ಬಾರೋ ಬಾರೋಯಪ್ಪ ಬಸವಣ್ಣ**
**ಬಂದ ಭಕ್ತರ ಮನಿ ಬಂಗಾರ**
**ಸೋಮವಾರ ನಿನ್ನ ಹೂಡುವರು**
**ಹೂಡಿದವರು ಹಾಳಾಗುವರು."**

ಎಂಬ ನಂಬಿಕೆಯ ಆಚರಣೆ ಜನಪದರದ್ದು.[೨] ಅಂತಹ ಬಸವನ ಬಲ ಯಾವ ಮನೆಯಲ್ಲಿ ಹೆಚ್ಚಾಗಿರುವುದೋ ಆ ಮನೆಯಲ್ಲಿ ಲಕ್ಷ್ಮಿ ನೆಲೆಸುತ್ತಾಳೆ. ಲಕ್ಷ್ಮಿ ಎಂದರೆ ಧನ–ದನಗಳ ಮೂಲಕ ಪ್ರಾಪ್ತಿ ಎಂಬಂತೆ ಸಕಲ ಋಣಗಳಿಂದ ಮುಕ್ತರಾಗಲು ಜೀವಧನ ಎನಿಸಿದ ದನಗಳು ಬೇಕೆಂಬ ಕಾರಣಕ್ಕಾಗಿಯೇ ಅವು ವಿನಿಮಯದ ವಸ್ತುಗಳಾಗಿ ಅನಿವಾರ್ಯವಾಗಿ ಚಲಾವಣೆಗೆ ಬಳಕೆಯಾದವು. ಗೋವಿನ ಉತ್ಪನ್ನಗಳಾದ ಹಾಲು, ಮೊಸರು, ಬೆಣ್ಣೆ, ತುಪ್ಪ ಮುಂತಾದವು ವಿನಿಮಯದಲ್ಲಿ ಮುಖ್ಯ ಸ್ಥಾನ ಪಡೆದವು. ಜನಪದರು ಹೆಣ್ಣು ಮಕ್ಕಳನ್ನು ತವರುಮನೆಯಿಂದ ಗಂಡನ ಮನೆಗೆ ಕಳಿಸುವಾಗಲೂ, ಎಮ್ಮೆ ಅಥವಾ ಹಸುವನ್ನು ಕೊಟ್ಟು ಕಳಿಸುವ ಸಂಪ್ರದಾಯವಿದೆ. ತನ್ನ ಮನೆಯಲ್ಲಿರುವ ಹಾಲು ಹೈನು ಮಗಳು ಹೋಗುತ್ತಿರುವ ಗಂಡನ ಮನೆಯಲ್ಲೂ ಇರಲಿ. ಅವರಿಗೆ ಹುಟ್ಟುವ ಮಕ್ಕಳಿಗೂ ಹೈನಿಗೆ ಕೊರತೆಯಾಗಬಾರದು. ಅವಳ ಗಂಡನ ಮನೆಯಲ್ಲಿ ಹಾಲಿನ ಹೊಳೆ ಹರಿಯಲಿ ಎಂಬ ಉದ್ದೇಶದಿಂದ ಹಸುಗಳನ್ನೋ ಅಥವಾ ಎಮ್ಮೆಗಳನ್ನೋ ಮಗಳಿಗೆ ಕೊಡುಗೆಯಾಗಿ ಕೊಡುತ್ತಿದ್ದರು. ಅಂಥಹ ಒಂದು ಜನಪದ ತ್ರಿಪದಿ ಈ ರೀತಿ ವರ್ಣಿಸಿದೆ.

**"ತೊಟ್ಟೀಲ ಹೊತ್ಕೊಂಡು ತೌರ್ಬಣ್ಣ ಉಟಗೊಂಡು**
**ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ತೌರೂರ**
**ತಿಟ್ಟತ್ತಿ ತಿರುಗಿ ನೋಡ್ಯಾಳ"**

ಎಂಬಲ್ಲಿ ಬಾಣಂತನವನ್ನು ಮುಗಿಸಿಕೊಂಡು ತನ್ನ ಮಗುವಿನೊಂದಿಗೆ ಗಂಡನ ಮನೆಗೆ ಹೋಗುವಾಗ ತೊಟ್ಟಿಲು ಮತ್ತು ಎಮ್ಮೆಯನ್ನು ಕೊಟ್ಟಿರುವುದು ಸ್ಪಷ್ಟವಾಗುತ್ತದೆ. ಮೊಮ್ಮಕ್ಕಳು ಹಾಲು ಹೈನು ಉಂಡು ಬೆಳೆಯಲಿ ಎಂಬ ಆಶಯ ಈ ಸಂಪ್ರದಾಯದ ಹಿಂದಿರುವುದನ್ನು ಗಮನಿಸಬಹುದು.

ಜನಪದ ಗೀತೆಗಳಲ್ಲಿ ಒಂದಾದ ಗೋವಿನ ಹಾಡು ಇಂದು ಮಾಧ್ಯಮಗಳ ಯುಗದಲ್ಲಿ ಬೇರೆ ಬೇರೆ ಕೋನಗಳಿಂದ ವಿಮರ್ಶೆಗೆ ಒಳಪಟ್ಟರೂ ಜನಪದರ ದೃಷ್ಟಿಯಲ್ಲಿ ಸತ್ಯವನ್ನು ಪ್ರತಿಪಾದಿಸುವ ಗೋಮಾತೆಯ ಕಥೆಯಾಗಿಯೇ ಸ್ಥಾನ ಪಡೆದಿದೆ. ಧರಣಿ ಮಂಡಲ ಮಧ್ಯದೊಳಗೆ ಹಾಡಿನಲ್ಲಿ "ಗೊಲ್ಲ" ಎಂಬ ಪದ ಬಳಕೆಯಾಗಿದೆ. ಗೊಲ್ಲ ಎಂದರೆ ಗೋಗಾಯಿ, ದನಗಾರ (ದನ ಮೇಯಿಸುವವನು) ಎಂಬ ಅರ್ಥವಿದೆ. ಗೊಲ್ಲರು ತಮ್ಮ ಆಕಳುಗಳ ಹಿಂಡನ್ನು ಕಟ್ಟಿಕೊಂಡು ಅವುಗಳ ಪಾಲನೆಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹುಲ್ಲುಗಾವಲು, ನೀರು ಮತ್ತು ಹವಾಮಾನದ ಅನುಕೂಲತೆಯಿದ್ದ ಸ್ಥಳಗಳನ್ನು ಹುಡುಕಿಕೊಂಡು ತಿರುಗುತ್ತಿದ್ದರು. ದನಗಳ ಹಿಂಡು ಸಂವರ್ಧನೆಗೊಂಡು ಹಿಂಡಿನ ಗಾತ್ರ ದೊಡ್ಡದಾದಂತೆ ಅವುಗಳ ಮೇಯಿಸುವಿಕೆಗಾಗಿ ಮನುಷ್ಯ ನೆಲೆ ನಿಲ್ಲುತ್ತಾ ಅಲ್ಲಿಯೇ ಮನೆಕಟ್ಟಿ, ಕೃಷಿ ಮಾಡತೊಡಗಿದ. ಇದರಿಂದ ಮನೆಯೇ ಹಟ್ಟಿಯಾಗಿ, ಹಟ್ಟಿಗಳೇ ಹಳ್ಳಿಗಳಾಗಿ, ಊರುಗಳಾಗಿ ರೂಪುಗೊಂಡಿವೆ. ಹೀಗೆ ದನಗಾರರು ಬರುಬರುತ್ತಾ ರೈತರಾಗಿರಬೇಕು. ಈ ರೈತರಿಗೆ ಜೊತೆಯಾದ ಗೋವಿನ ಉದ್ಭವ ಹೇಗಾಯಿತು ಎಂಬುದಕ್ಕೆ ಪುರಾಣಾಧಾರಿತ ಕಥೆಯೊಂದು ಜನಪದರಲ್ಲಿ ಬಳಕೆಯಲ್ಲಿದೆ.

ಹಿಂದೆ ಸುರರು-ಅಸುರರು ಕ್ಷೀರ ಸಮುದ್ರವನ್ನು ಕಡೆದಾಗ ಕಾಮಧೇನು ಉದ್ಭವಗೊಂಡಾಗ ಎಲ್ಲಾ ದೇವತೆಗಳು ಒಂದೊಂದು ಅಂಗದಲ್ಲಿ ನೆಲಿಸಿದರು. ಕಡೆಯಲ್ಲಿ ಗಂಗೆ ಮತ್ತು ಲಕ್ಷ್ಮಿಯು ಬರುವುದರಲ್ಲಿ ತಡವಾಗಿತ್ತು. ಅವರಿಗೆ ಗೋವಿನ ಯಾವ ಭಾಗದಲ್ಲೂ ಜಾಗವಿರಲಿಲ್ಲ. ಆಗ ಗಂಗೆ ಗೋಮೂತ್ರದಲ್ಲಿ, ಲಕ್ಷ್ಮಿಯು ಸಗಣಿಯಲ್ಲಿಯೂ ನೆಲಸುತ್ತಾರೆ. ಇಂದಿಗೂ ಗೋಮೂತ್ರ ಮತ್ತು ಸಗಣಿಯನ್ನು ಗಂಗೆ-ಲಕ್ಷ್ಮಿ ರೂಪದಲ್ಲಿ ಪೂಜಿಸಲ್ಪಡುತ್ತವೆ. ಸಗಣಿಯಲ್ಲಿ ಮನೆಯನ್ನು ಸಾರಿಸಿ ಗೋಮೂತ್ರವನ್ನು ಮನೆಗೆ ಚುಮುಕಿಸಿ ಶುದ್ಧಗೊಳಿಸುವ ಪದ್ಧತಿಯನ್ನು ಇಂದಿಗೂ ಅನುಸರಿಸಲಾಗುತ್ತಿದೆ. ಧಾರ್ಮಿಕ ಹಬ್ಬ ಬಲಿಪಾಡ್ಯಮಿ, ದೀಪಾವಳಿಯಲ್ಲಿ ತಿಪ್ಪೆ, ಕೊಟ್ಟಿಗೆ, ಗೋಧನಿ, ಹಟ್ಟಿಯ ಬಾಗಿಲು ಮತ್ತು ಗೋವುಗಳಿಗೆ ವಿಶೇಷವಾದ ಪೂಜೆ ನೆರವೇರಿಸುತ್ತಾರೆ. ಆನಂತರವೇ ತಿಪ್ಪೆಗೊಬ್ಬರ-ಗದ್ದೆಗಳಿಗೆ. ಗದ್ದೆಯಿಂದ ಬೆಳೆ, ಬೆಳೆಯಿಂದ ಧನ. ಇಂದಿಗೂ ಈ ಸಂಬಂಧಗಳು ಹಾಗೆಯೇ ಉಳಿದಿವೆ.[೩]

ರೈತರ ಅಥವಾ ಗ್ರಾಮ ಮುಖಂಡರ, ಜೀವಧನವಾದ ದನಗಳನ್ನು ಅಪಹರಿಸಿ ತಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳುವ ಅಥವಾ ಅವರನ್ನು ಕೆಣಕುವ, ಅವಮಾನಿಸುವ ಸಲುವಾಗಿ

ಗೋವುಗಳ ಅಪಹರಣ ಮಾಡುತ್ತಿದ್ದರು. ಇದರ ಬಗ್ಗೆ ಅನೇಕ ಕಥೆಗಳಿವೆ. ಗೋಗ್ರಹಣ ಪ್ರಸಂಗಗಳಲ್ಲಿ ಗೋವಿನ ರಕ್ಷಣೆಗಾಗಿ ಹೋರಾಡಿ, ಮಡಿದ ವೀರರಲ್ಲಿ ಹಲವರು ಸಾಂಸ್ಕೃತಿಕ ವೀರರಾಗಿ ಮತ್ತು ದೇವರಾಗಿ ಜನರಿಂದ ಪೂಜಿಸಲ್ಪಡುತ್ತಿದ್ದಾರೆ. ಜನಪದರ ಹೃದಯದ ಸ್ಫೂರ್ತಿಯ ಕಥೆಯಾಗಿದ್ದಾರೆ. ಅಂತಹ ಕೆಲವು ಕಥೆಗಳನ್ನು ಇಲ್ಲಿ ಗಮನಿಸಬಹುದು.[೪]

## ಗ್ವಾಲಣ್ಣನ ವೀರಗಾಥಾ

ತನ್ನ ತುರುಗಳಿಗಾಗಿ ಪ್ರಾಣವನ್ನೇ ಬಲಿಕೊಟ್ಟ ಪ್ರಸಂಗದ ಗ್ವಾಲಣ್ಣನ ಕಥೆ–ಬೆಳಗು ನದಿಯಲ್ಲಿ ಸ್ನಾನ ಮಾಡಿದ ಗ್ವಾಲ ಹರಿನಾಮ ಹಚ್ಚಿಕೊಂಡು ಗರಡಿಯ ಮನೆಗೆ ಹೋಗಿ ಸಾಮು–ಸಂಗತಿಯಲ್ಲಿ ತೊಡಗಿ ಹಿಂಗಾಣಿ–ಮುಂಗಾಣಿ ಕಸರತ್ತು ಮಾಡುತ್ತಿರುತ್ತಾನೆ. ಮಗ ಮನೆಗೆ ಬಾರದಿದ್ದಕ್ಕೆ ಆತನ ತಾಯಿ ಹುಡುಕುತ್ತಾ ದಾರಿಯಲ್ಲಿ ಕಂಡ ದನ ಕಾಯೋ ಹುಡುಗರನ್ನು ಅವರು, ಇವರನ್ನು ಕೇಳುತ್ತಾ ಅಡವಿಯಲ್ಲಿ ಮುನ್ನಡೆದು ಬರುವಷ್ಟರಲ್ಲಿ ಒಬ್ಬ ಕುರುಬರ ಹುಡುಗ ಗರಡೀ ಮನೆಯಲ್ಲಿ ಗ್ವಾಲಣ್ಣ ಇರುವ ಸುದ್ದಿ ಹೇಳುತ್ತಾನೆ. ಅಲ್ಲಿಂದ ನಡೆದು ಗರಡೀ ಮನೆಗೆ ಬಂದು ಹೊರಗೇನೆ ನಿಂತು, ಮಗನನ್ನು ಕರೆದು ಆರು ದಿನಗಳಿಂದ ತಮ್ಮ ದನಗಳು ಕೊಟ್ಟಿಗೆಗೆ ಬಂದಿಲ್ಲ, ಕಳುವಾಗಿ ಹೋಗಿರುವುದನ್ನು ತಿಳಿಸುತ್ತಾಳೆ. ದಿನಗಟ್ಟಳೆ ನೀನು ಗರಡೀ ಮನೆಯಲ್ಲಿ ಇದ್ದರೆ ಹೇಗೆ? ಸ್ವಲ್ಪನಾರಾ ಇಚಾರ ಇಲ್ಲಲ್ಲೋ ಅನ್ನುತ್ತಾಳೆ. ತಾಯಿ ಜೊತೆ ಗ್ವಾಲಣ್ಣ ಮನೆಗೆ ಬಂದು ಬುತ್ತಿ ಕಟ್ಟಿಕೊಂಡು ತಾಯಿಗೆ ಎರಗಿ ದನಗಳನ್ನು ಹುಡುಕುತ್ತಾ ಹೊರಟ. ಹನುಮ ದೇವರ ಗುಡಿಹೊಕ್ಕು, ನಮಸ್ಕರಿಸಿ ಹಿಂದಕ್ಕೆ ಸರಿದು, ಮುಂದಕ್ಕೆ ಸರಿದು 'ಹಿಂಗಾಣಿ–ಮುಂಗಾಣಿ' ಬಗೆದು ಮುನ್ನಡೆಯುತ್ತಾನೆ. ಅಗಸಿ ಬಾಗಲಲ್ಲಿ ಜೊತೆಗೆ ನಾವು ಬರ್ತೇವೆ ಎಂದ ಗೆಳೆಯರಿಗೆ ಚಿಗರಿ ಕಾಯೋ ನೆಪಹೇಳಿ ಬೇಕಾದರೆ ನೀವು ಹಿಂದ ಹಿಂದ ಬರ್ರಣ್ಣ ಎಂದು ಹೋಗುತ್ತಾನೆ. ಅರಣ್ಯ ಅಲೆದರೂ ದನಗಳ ಸುಳಿವಿಲ್ಲ. ಕಂಡ ಕಂಡವರನ್ನು ಕೇಳುತ್ತಲೇ ಹೋಗುತ್ತಾನೆ. ಒಬ್ಬ ಕುರಿಕಾಯೋ ಹುಡುಗ 'ಆ ಕುರಿಗುಡ್ಡದ ಬ್ಯಾಡರು ನಿಮ್ಮ ದನಗಳನ್ನು ಹೊಡೆದುಕೊಂಡು ಹೋದರು' ಎಂದು ಸುದ್ದಿ ಕೊಡುತ್ತಾನೆ. ಗ್ವಾಲಣ್ಣ ಕುರಿಗುಡ್ಡಕ್ಕೆ ಬರುತ್ತಲೇ ಬೇಡರ ಗುಂಪು ಲಡಾಯಿ ಮಾಡು ಎಂದು ಆಹ್ವಾನಿಸುತ್ತದೆ. ಅದಕ್ಕೆ ಸಿದ್ಧನಾದ ಗ್ವಾಲಣ್ಣ ಹಿಂದಕ್ಕೆ ಸರಿದು ಹಿಂಗಾಣಿ–ಮುಂಗಾಣಿ ಹೊಡೆದು ಬೇಡರ ದಂಡು ಹೊಕ್ಕು ಇಡೀ ಗುಂಪನ್ನು ನಿರ್ನಾಮವಾಗಿಸುತ್ತಾನೆ. ಅಲ್ಲಿದ್ದ ದನಗಳೆಲ್ಲಾ ಇವನ ಸುತ್ತ ಮುತ್ತಿ ಅಂಬಾ ಎಂದು ಕೂಗಿ ತಮ್ಮ ಪ್ರೀತಿ ಆತಂಕವನ್ನು ವ್ಯಕ್ತ ಮಾಡುತ್ತವೆ. ಸೆರೆಯಿಂದ ಗ್ವಾಲಣ್ಣ ದನಗಳನ್ನು ಬಿಡಿಸಿಕೊಂಡು ಹಳ್ಳದ ದಂಡೆಗೆ ಬರುತ್ತಾನೆ. ಮುಂದೆ ಗ್ವಾಲಣ್ಣ ಹಿಂದೆ ಹಿಂದೆ ದನಗಳು.

ಬೇಡರ ಇನ್ನೊಂದು ಗುಂಪಿನ ಸಣ್ಣಮಲ್ಲ-ದೊಡ್ಡಮಲ್ಲ ಎನ್ನುವವರು ಅದೇ ಹಾದಿಯ ಗುಡ್ಡಗಾಡಿನ ಕಂಬಿ ಸಾಲಲ್ಲಿ ಅಡಗಿ ಗ್ವಾಲಣ್ಣನನ್ನು ಕೊಲ್ಲುವ ಹೊಂಚು ಹಾಕುತ್ತಾರೆ. ತನ್ನ ಕಾಳಮ್ಮ-ಕರುಗುತ್ತಿಗೆ(ಒಂದು ಬಗೆಯ ಆಯುಧ) ನಾವು ಹೊಡೆದ ಗುರಿ ತಪ್ಪದೇ ಗ್ವಾಲಣ್ಣನಿಗೆ ಬೀಳೋಹಾಗೆ ಮಾಡು, ಗುರಿ ತಪ್ಪದಿದ್ರೆ ನಿನಗೆ ಕುರಿ-ಕ್ವಾಣ ಕಡಿತೀವಿ, ಎಂದು ಹರಕೆಯನ್ನು ಹೊತ್ತು ಕೂತಿರುತ್ತಾರೆ. ಗ್ವಾಲಣ್ಣ ತಾವು ಕಾದು ಕುಂತ ಹಳುವಿನ ಆಯಕಟ್ಟಿನ ಸ್ಥಳಕ್ಕೆ ಬರುತ್ತಲೇ ಗುರಿಯಿಟ್ಟು 'ಕಾಳಮ್ಮ'ನನ್ನು ಎಸೆಯುತ್ತಾರೆ. ಅದು ರಭಸದಿಂದ ಹಣೆಗೆ ಬಡಿಯಿತು. ಆ ಏಟಿಗೆ ಗ್ವಾಲಣ್ಣನಿಗೆ ಗಂಭೀರವಾದ ಗಾಯವಾಯಿತು. ತನ್ನ ವಸ್ತ್ರ ಹರಿದು ಗಾಯಕ್ಕೆ ಕಟ್ಟಿ ಬೇಡರನ್ನು ಬೆನ್ನಟ್ಟುತ್ತಾನೆ. ಹೇಡಿಗಳಾದ ಅವರನ್ನು ಸೀಳಿ, ಹೆಣ ಬೆನ್ನಿಗೆ ಹಾಕಿಕೊಂಡು ಹೊಲಕ್ಕೆ ಬಂದು ಅಲ್ಲಿದ್ದ ಕಾಯ್ ಕುಳ್ಳೆ ಆಯ್ದು ಕೂಡಿ ಹಾಕಿ ಅದರ ಮೇಲೆ ಹೆಣಗಳನ್ನು ಇಟ್ಟು ಕಿಚ್ಚು ಕಾಣಿಸಿ ಊರ ಕಡೆ ಸಾಗುತ್ತಾನೆ.

ಅಗಸೆಯ ಕಾವಲುಗಾರ "ಗೆಣೆದೋರು" 'ಯಾಕಪ್ಪ ಗ್ವಾಲಣ್ಣ ಮಾರೀನೆ ಬಾಡ್ಯಾದ' ಎಂದು ಕೇಳಿದರೆ, "ಬ್ಯಾಸಗಿ ಬಿಸಿಲಪ್ಪ ನೀರಡಕಿ ಜೋರಪ್ಪ" ಎಂದು ಹನುಮದೇವರ ಗುಡಿಗೆ ಬಂದು ನಮಸ್ಕರಿಸಿ ದನ ಹೊಡೆದುಕೊಂಡು ಮನೆಗೆ ಬಂದು ದೊಡ್ಡಿ ಹೋಗಿಸುತ್ತಾನೆ. ಆಗಲೇ ಅವನಿಗೆ ಗಾಯದಿಂದ ಬಹಳ ಸುಸ್ತು, ತಾಯಿಗೆ ಬಾನ ಮಾಡಲು ಹೇಳಿ, ಆಕೆಯ ಸೂಚನೆಯಂತೆ ತಾನು ಹಾಲು ಹಿಂಡುತ್ತಾನೆ. ಅಣ್ಣ ತಮ್ಮ, ಅಕ್ಕ ತಂಗಿ, ಬಂಧು ಬಳಗ, 'ಅಗಸಿ ಕಾಯೋ' ಗೆಣೆದೋರು ಎಲ್ಲರನ್ನೂ ತಾಯಿಗೆ ಹೇಳಿ ಕರೆಸುತ್ತಾನೆ. ಗ್ವಾಲಣ್ಣನ ಶಕ್ತಿಯು ಪೂರ್ಣ ಕುಗ್ಗುತ್ತದೆ. ತಾಯಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿ ಸುತ್ತಲೂ ನೋಡಿ ಕೊನೆಯುಸಿರೆಳೆಯುತ್ತಾನೆ.

ಘಟನೆಗಳನ್ನು ನೇರವಾಗಿ ಹೇಳುತ್ತಾ ಗ್ವಾಲಣ್ಣನ ಬದುಕು ರಂಜನೀಯವಾದರೂ ತನ್ನ ಬದುಕಿನುದ್ದಕ್ಕೂ ಹೆಣಗಾಡುತ್ತಲೇ ಸಾಯುತ್ತಾನೆ. ಗೊಲ್ಲರು ತಮ್ಮ ಜೀವದ ಹಂಗು ತೊರೆದು ಹೋರಾಡುತ್ತಿದ್ದರು ಎನ್ನುವುದಕ್ಕೆ ಪ್ರತೀಕ ಎನ್ನುವಂತೆ ಈ ಕಥೆ ಮೂಡಿಬಂದಿದೆ.[೫] ಗೋಗ್ರಹಣ ಕದನದಲ್ಲಿ ಶತ್ರುಗಳನ್ನು ಪ್ರತಿಭಟಿಸಿ ವೀರ ಮರಣ ಹೊಂದಿ ದನಗಳ ಕಾಲ್ತುಳಿತಕ್ಕೆ ಸಾಯುವ ಲಂಕಣ್ಣ ಎಂಬ ಗೋವಳಿಗ ಸಾಯುವ ಸಂದರ್ಭದಲ್ಲಿ ತನ್ನ ಈ ಸ್ಥಿತಿಗೆ ಕಾರಣವನ್ನು "ಬ್ರಹ್ಮನಾಯುಡುಗೆ ಹೇಳುತ್ತಾನೆ. ಲಂಕಣ್ಣನ ಮಾತುಗಳು ಗೋವುಗಳ ಕುರಿತು ಅಂದಿನ ಸಮಾಜದಲ್ಲಿ ಇದ್ದ ನಂಬಿಕೆಗಳಿಗೆ ಸಾಕ್ಷಿಯಾಗಿದೆ. ನಾಯುಡು ಆ ದಿವಸ ಪೆಂದೋಟದಲ್ಲಿ ಹಸುಬೆಯನ್ನು ಹೋರುವ ಹೋರಿಯನ್ನು ಹಿಡಿದ ಹುಲಿಯನ್ನು ನಾನು ಕೊಲ್ಲದ್ದಕ್ಕೆ ಬೈದಿದ್ದೆ. ಗಂಡಸುತನವಿಲ್ಲವೇ, ಸ್ತ್ರೀ ವೇಷ ಧರಿಸಿಕೊಂಡು ಮಂದೆಯೊಡನೆ ಇರು ಎಂದು ನೀನು ಆಜ್ಞಾಪಿಸಿದ್ದೆ. ಅಂದಿನಿಂದ ನಾನು ಹಾಗೆಯೇ ಇದ್ದೇನೆ. ಪಶುಗಳಿಗೆ ಅಂಟು ರೋಗ ಬಂದಾಗ,

ಅಮ್ಮನವರಿಗೆ ಎಷ್ಟೋ ಹರಕೆಯನ್ನು ಹೊತ್ತೆ, ಎಷ್ಟೋ ಪೂಜೆಗಳನ್ನು ಮಾಡಿದೆ. ಹಸಿರು ಹುಲ್ಲು ಇಲ್ಲದ ಸಮಯದಲ್ಲಿ ಯಾವ ಯಾವುದೋ ಎಲೆಗಳನ್ನು ತಂದು ಹಾಕಿ ಆಕಳನ್ನು ಬದುಕಿಸಿದೆ. ಮಳೆಯಿಲ್ಲದೇ, ತೊರೆಗಳು ಬತ್ತಿ ಭಯಂಕರ ಕ್ಷಾಮ ಬಂದಾಗ ಬಾವಿಗಳಿಂದ ನೀರು ತಂದುಕೊಟ್ಟು ಪಶುಗಳನ್ನು ಕಾಪಾಡಿದೆ. ಗೋವುಗಳನ್ನು ಈ ರೀತಿಯಾಗಿ ಸಂರಕ್ಷಿಸಿದೆ. ನನ್ನ ಮಾನಸಿಕ ಕ್ಷೇಷಗಳಿಗೆ ಗಂಡಾಗಿಯೂ ಹೆಣ್ಣು ವೇಷತೊಟ್ಟು ಬದುಕುವ ಪರಿಸ್ಥಿತಿಗೆ, ನನ್ನ ಈ ಪಾಪಕ್ಕೆ ಪರಿಹಾರವೇನು ಎಂದು ಒಬ್ಬ ಬ್ರಾಹ್ಮಣನನ್ನು ಕೇಳಿದೆ. ಆತ ಹೇಳಿದ ಒಂದು ಎತ್ತನ್ನು ಹುಲಿ ಕೊಲ್ಲುತ್ತಿರುವಾಗ ನೀನು ನೋಡುತ್ತಾ ಸುಮ್ಮನಿದುದಕ್ಕೆ ನಿನಗೆ ಈ ಪಾಪ ಬಂದಿದೆಯೆಂದು. ದನಗಳನ್ನು ರಕ್ಷಿಸುವುದಕ್ಕಾಗಿ ನೀನು ಪ್ರಾಣವನ್ನು ಅರ್ಪಿಸಿ ನೆಲಕ್ಕೊರಗಿದಾಗ, ಗೋವುಗಳು ಯಾವಾಗ ನಿನ್ನನ್ನು ತುಳಿದುಕೊಂಡು ಹೋಗುತ್ತವೆಯೋ ಅಂದು ನಿನ್ನ ಪಾಪ ಪರಿಹಾರವಾಗುತ್ತದೆ, ಎಂದು ಆ ಬ್ರಾಹ್ಮಣ ನನಗೆ ಹೇಳಿದ್ದನು.ಈ ದಿವಸ ನನ್ನ ಪಾಪ ಪರಿಹಾರವಾಯಿತು ಎಂದು ಮಡಿಯುತ್ತಾನೆ. ಎಂಬ ಮಾತುಗಳು ಅಂದಿನ ನಂಬಿಕೆಯ ದ್ಯೋತಕವಾಗಿದೆ. ದನಗಳನ್ನು ಕಾಡು ಪ್ರಾಣಿಗಳಿಂದ ರಕ್ಷಿಸುವುದೂ ಅಂದಿನ ಪುರುಷರ ಮೌಲ್ಯವಾಗಿತ್ತು. ಕ್ರೂರ ಪ್ರಾಣಿಗಳ ದಾಳಿ ತುರುಮಂದೆಯ ಮೇಲೆ ನಡೆದಾಗ ಸುಮ್ಮನೆ ಕೈಚೆಲ್ಲಿ ಕೂರುವವನಿಗೆ ಪಾಪ ಬರುತ್ತದೆ. ಇಂಥಹ ಪಾಪವನ್ನು ಲಂಕಣ್ಣ ಅನುಭವಿಸುತ್ತಾನೆ. ಗಂಡಾಗಿಯೂ ಹೆಣ್ಣು ವೇಷದಲ್ಲಿ ಬದುಕಿದ ಲಂಕಣ್ಣನ ಕಥೆಯ ಮೂಲಕ ಪುರುಷರು ದನಗಳ ರಕ್ಷಣೆ ಮಾಡುವುದು ಪರಮ ಕರ್ತವ್ಯ ಎಂಬುದನ್ನು ತಿಳಿಸಲಾಗುತ್ತದೆ. ಹೀಗೆಯೆ ಸಾಂಸ್ಕೃತಿಕ ವೀರನಾದ ಇನ್ನೊಬ್ಬ ಜನಪದ ವೀರ ಗಾದರಿಪಾಲ ನಾಯಕ

**ಗಾದರಿ ಪಾಲನಾಯಕ**

ಚಿತ್ರದುರ್ಗ ತಾಲ್ಲೂಕಿನ ಸಿರಿಗೆರೆ ಮಂಚೆರಿ ಅರಣ್ಯ ಪ್ರದೇಶದಲ್ಲಿದ್ದ ಗಾದರಿಪಾಲನಾಯಕನು ಒಂದು ಲಕ್ಷ ಬಣ್ಣ ಬಣ್ಣದ ಗೋವುಗಳನ್ನು ಸಾಕುತ್ತಿದ್ದನೆಂಬ ಕಥೆ ಇದೆ.[೬] ಈ ಗಾದರಿಪಾಲ ನಾಯಕ ಇಂದು ಮ್ಯಾಸ ಬೇಡರ ಸಾಂಸ್ಕೃತಿಕ ವೀರನಾಗಿ ಪರಿವರ್ತಿತನಾಗಿದ್ದಾನೆ. ಇದೇ ರೀತಿ ಕರ್ನಾಟಕಾದಾದ್ಯಂತ ಅನೇಕ ಬುಡಕಟ್ಟು ವೀರರ ಕಥೆಗಳಲ್ಲಿ ಪಶುಪಾಲನೆಯ ಮತ್ತು ಪಶು ರಕ್ಷಣೆಯಲ್ಲಿ ಪ್ರಾಣ ತ್ಯಾಗ ಮಾಡಿದ ವೀರರು ಕಂಡುಬರುತ್ತಾರೆ.[೭] ಕುಂಚಿಟಿಗ ಜನಾಂಗಕ್ಕೆ ಸೇರಿದ ಈರಬಡಪ್ಪನು ಕಳ್ಳರಿಂದ ತುರುಮಂದೆಯನ್ನು ಬಿಡಿಸಿಕೊಂಡು ತರುವ ಜನಪದ ಕಥೆ ಇದೆ. ಬೇಡ ನಾಯಕರು ಮೋಸದಿಂದ ಬೋರಮ್ಮ ಎಂಬ ಸೂಳೆಯನ್ನು ಕಳುಹಿಸಿ ಈರಬುಡಪ್ಪನನ್ನು ಕೊಲ್ಲಿಸುವರು. ಈ ಪ್ರಸಂಗ ಜನಪದ ಗೀತೆಗಳಲ್ಲಿ ಬಹಳ ಸುಂದರವಾಗಿ ಮೂಡಿ ಬಂದಿದೆ. ಕಳ್ಳರು ದನಗಳನ್ನು ಹೊಡೆದುಕೊಂಡು ಹೋದಾಗ ಹಟ್ಟಿಯ ಹೆಂಗಳೆಯರು

"ನಾಳೆಮ್ಮ ಬುದುವಾರ ನಾಡದ್ದು ಬೇಸ್ತ್ವಾರ
ಬಾಗಲು ಬಳಿಯಾಕೆ ಸೆಗಣಿಲ್ಲ-ಗಿರಿಯಮ್ಮಾನ
ಬಾಲಮ್ಮ ತುರುವಾ ತರಲೋದ"

ಎಂದು ಹಲುಬುತ್ತಾರೆ. ಈರ ಬುಡಪ್ಪನು ದನಗಳನ್ನು ಕಳ್ಳರಿಂದ ತಡೆದು ನಿಲ್ಲಿಸಿದ್ದನ್ನು ಒಂದು ಗೀತೆ "ತುರುಗಾಳು ವಡಕಂಡು ತುರುಮಂದಿ ನಿಲಿಸ್ಯಾನೆ

ಬಿರುದಿನೆಗ್ಗಾಳೆ ಇಡಿಸ್ಯಾನೆ- ಬೆಳ್ಳನಾರು
ಬಾಲಾಗೆ ಈ ಬಿರುದು ಸಲುವೋರು

ಎಂದು ಮನನೀಯವಾಗಿ ಹೇಳುತ್ತದೆ. ಆ ವೀರನ ಸಾವನ್ನು ಕುರಿತು

ಸತ್ತನಲ್ಲೇ ಈರ ಸತ್ತನಲ್ಲೇ ಸೂರ
ಸತ್ತು ಬೆಳ್ಳಿನೋರ ಮನನೀರ ಬ್ಯಾಡಣ್ಣ
ಸತ್ತು ಕೀರುತಿಯ ಪಡೆದಾನೆ"

ಎಂದು ಹೇಳುವ ಈ ಜನಪದ ಗೀತೆಗಳು ತುರುಗಳ ರಕ್ಷಣೆಗಾಗಿ ಪ್ರಾಣತೆತ್ತ ಮುಗ್ದ ಜನಗಳ ಪ್ರೀತಿಯ ಕಥೆಯನ್ನು ನವಿರಾಗಿ ಹೇಳುತ್ತಿದೆ.[೮] ಪಶುಪಾಲನೆಯಲ್ಲಿ ಪ್ರಾಣತೆತ್ತ ಕಾಡುಗೊಲ್ಲರ ಅನೇಕ ವೀರರಿದ್ದಾರೆ. ಆದರೆ ಅವರ್ಯಾರಿಗೂ ಸ್ಮಾರಕಗಳಿಲ್ಲ. **'ಶಿಷ್ಟಸಂಸ್ಕೃತಿ'** ಶಾಸನಗಳನ್ನು ಕೆತ್ತಿಸಿದರೆ **'ಜನಪದ ಸಂಸ್ಕೃತಿ'** ಆ ವೀರರ ಹೆಸರಿನಲ್ಲಿ ಅಲಗುಗಳನ್ನು ಹಾಕಿಸಿದ್ದು ಈ ಬಗೆಯ ವೀರರನು 'ಈರಗಾರರು, ಅಲಗುವೀರರು' ಎಂದು ಕರೆಯುತ್ತಾರೆ.[೯]

**ಆ.ಗೋ ಸಂಬಂಧಿ ಲಾವಣಿ ಹಾಗೂ ಜನಪದ ಹಾಡುಗಳು**

**೧. ಗೋವಿನ ಹಾಡು**

ಕನ್ನಡ ನಾಡಿನ ಬಾಲಕರಿಂದ ಹಿಡಿದು ವೃದ್ಧರವರೆಗೆ ಅತ್ಯಂತ ಪರಿಚಿತವೂ, ಪ್ರಿಯವೂ ಆಗಿರುವ ಕಥನ ಕವನವೆಂದರೆ ಗೋವಿನ ಹಾಡು. ಈ ಹಾಡನ್ನು ರಚಿಸಿದ ಕವಿಯಾಗಲೀ ಅವನ ಕಾಲವಾಗಲೀ ತಿಳಿದು ಬಂದಿಲ್ಲ. ಹಾಡಿನ ಅಂತ್ಯದಲ್ಲಿ ಮುದ್ದೂರಿನ ನರಸಿಂಹ ದೇವರ ಹೆಸರಿರುವುದರಿಂದ ಇದನ್ನು ಕಟ್ಟಿದ ಕವಿ ಆ ಊರಿನವನೋ ಅಥವಾ ಆ ದೇವರ ಒಕ್ಕಲಿನವನೋ ಆಗಿರಬೇಕು, ಎಂದು ಊಹಿಸಿದ್ದಾರೆ. ಇದರ ಕಾಲವನ್ನು ಸುಮಾರು ೧೮೦೦ ಕ್ಕಿಂತ ಹಿಂದೆ ಇದು ಹುಟ್ಟಿರಲಾರದೆಂದು ಊಹಿಸಲಾಗಿದೆ.

ಈ ಗೋವಿನ ಹಾಡಿನಲ್ಲಿ ೧೩೭ ಪದ್ಯಗಳಿದ್ದು, ೧೧೪ ಪದ್ಯಗಳನ್ನು ಮೂಲ ಪದ್ಯಗಳೆಂದು ಗುರುತಿಸುತ್ತಾರೆ. "ಧರಣಿ ಮಂಡಲ ಮಧ್ಯದೊಳಗೆ" ಎಂದು ಆರಂಭವಾಗುವ ಪದ್ಯ ಕಾಡಿನ

ಅಂಚಿನ ಅರುಣಾದ್ರಿಗಿರಿಯ ವನಸಂಪತ್ತನ್ನು, ಪ್ರಾಣಿ ಸಂಪತ್ತನ್ನು, ಕಾಳಿಂಗ ಎಂಬ ಗೊಲ್ಲನ ಗೋಸಂಪತ್ತನ್ನು, ಗೊಲ್ಲನ ಆಭರಣಗಳನ್ನು, ಉಡುಗೆ ತೊಡುಗೆಗಳನ್ನು, ವರ್ಣಿಸುತ್ತವೆ. ಬೆಳಗಿನ ಜಾವದಿ ಏಳುವ ಗೊಲ್ಲನ ಹಸುಗಳ ಹೆಸರುಗಳು ಆಕರ್ಷಕವಾಗಿವೆ. ಗಂಗೆ, ಗೌರಿ, ತುಂಗ, ಭದ್ರೆ, ಅಂಗನಾಮಣಿ, ರಂಗನಾಯಕಿ, ರಘುಕುಲೋತ್ತಮೆ, ಶೃಂಗಾರಸೊಬಗಿ, ಪುಣ್ಯಕೋಟಿ, ಪುಣ್ಯವಾಹಿನಿ, ಪೂರ್ಣಗುಣಸಂಪನ್ನೆ, ಕಾಮಧೇನು, ಭೂಮಿದೇವಿ, ರಾಮನರಗಿಣಿ, ಭಾಗ್ಯಲಕ್ಷ್ಮೀ, ಭಾಗ್ಯಗುಣಿ, ಮತ್ತು ಯೋಗವತಿ ಮುಂತಾದ ಹೆಸರುಗಳ ಹಸುಗಳ ಮಂದೆಯಲ್ಲಿ ಪುಣ್ಯಕೋಟಿಯ ಕಥೆಯನ್ನು ಹೇಳತೊಡಗುತ್ತಾನೆ. ಆ ಕಾಡಿನ ಮಧ್ಯದಲ್ಲಿ ಅರ್ಭುದ ಎಂಬ ವ್ಯಾಘ್ರನ ಕೈಗೆ ಸಿಕ್ಕ ಪುಣ್ಯಕೋಟಿ

**"ನಾನು ಮೆಟ್ಟಿದ ಭೂಮಿ ಬೆಳೆವುದು,**
**ಧಾನ್ಯ ಧನಗಳುಂಟು ಮಾಡುವೆ**
**.ಶಾನೆ ಕ್ಷೀರವ ಕೊಡುವೆ ನಿತ್ಯವು**
**ಮಾನವರಿಗುಪಕಾರಿಯು"**

ಎಂದು ತನ್ನ ಗುಣವನ್ನು ಹೇಳುತ್ತದೆ. ಆದರೆ ಅದರ ಗುಣವನ್ನು ಹುಲಿ ಕೇಳುವುದಿಲ್ಲ. ಹುಲಿ ಕೇಳದಾದಾಗ, ತನ್ನ ಕರುವಿಗೆ ಹಾಲುಣಿಸಿ ಮರಳಿ ಬರುವುದಾಗಿ ವಚನವಿತ್ತು, ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಕರುವಿನ ಮಾತನ್ನೂ, ಮಮತೆಯನ್ನೂ ಸರಿಸಿ ಸಾವನ್ನೇ ಎದುರುಗೊಳ್ಳಲು ಅರ್ಭುದ ಎಂಬ ಹುಲಿಯ ಎದುರು ಬರುತ್ತದೆ. ನನ್ನನ್ನು ಕೊಂದು ನಿನ್ನ ಹಸಿವನ್ನು ತೀರಿಸಿಕೋ ಎಂದಾಗ, ಹುಲಿಯ ಮನಸ್ಸು ಪರಿವರ್ತನೆಯಾಗಿ, ಬೆಟ್ಟದಿಂದ ಹಾರಿ ತನ್ನ ಪ್ರಾಣವನ್ನೇ ಅರ್ಪಿಸುತ್ತದೆ. **"ಸತ್ಯ ವಾಕ್ಯಕೆ ತಪ್ಪಿನಡೆದರೆ ಮೆಚ್ಚನಾ ಪರಮಾತ್ಮನು"** ಎಂಬ ವಾಕ್ಯವನ್ನು ಜನರ ಮನಸ್ಸಿನಲ್ಲಿ ಬಿತ್ತುವಲ್ಲಿ ಗೋವಿನ ಹಾಡು ಯಶಸ್ವಿಯಾಗುತ್ತದೆ.

**೨. ಆಕಳ ಹಾಡು**

ಇದು ದ್ವಿಪದಿ ರೀತಿಯ ಜನಪದಗೀತೆ. ಕಾಪಸೆ ರೇವಣಪ್ಪ ಮಲ್ಲಿಗೆ ದಂಡೆ ಕೃತಿಯಲ್ಲಿ ೧೯೩೫ ರಲ್ಲಿ ಸಂಗ್ರಹಿಸಿದ್ದಾರೆ. ಆರಂಭದಲ್ಲಿ ಗಂಡು ಕರುವನ್ನು ಹೆತ್ತವರ್ಣನೆ ಬರುತ್ತದೆ. ತಾಯಿ ಹಸುವಿಗೆ ಮುತ್ತಿನ ಆರತಿ ಎತ್ತಿ ಬನದಲ್ಲಿ ಮೇಯಲು ಕಳುಹಿಸಿದರು. ಆಗಲೇ ಅದು ಹುಲಿಗೆ ಸಿಕ್ಕು ಕರುವಿಗೆ ಹಾಲು ಕೊಟ್ಟು ಬರುವುದಾಗಿ ಬಿಡಿಸಿಕೊಂಡು ಹೋಗಿ ಹಾಲು ಕೊಟ್ಟು ಪುನಃ ಹುಲಿಯ ಬಳಿಗೆ ಬಂದು ಮಲಗಿದ ಹುಲಿಯನ್ನು ಎಬ್ಬಿಸಿ ತನ್ನನ್ನು ತಿನ್ನಲು ಹೇಳುತ್ತದೆ. ಸತ್ಯವಂತೆ ಹಸು ನೀನು, ನಿನ್ನನ್ನು ತಿನ್ನುವುದಿಲ್ಲ ಎಂದು ಹುಲಿ ಮಾತನಾಡುವ ಹೊತ್ತಿಗೆ ದೇವತೆಗಳು ಹೂಮಳೆಗರೆಯುತ್ತಾರೆ. ಇಲ್ಲಿ ಹುಲಿಯು ಅಂತ್ಯದಲ್ಲಿ ಪ್ರಾಣತ್ಯಾಗ ಮಾಡಿದ

ಸೂಚನೆಗಳು ಕಂಡುಬರುವುದಿಲ್ಲ. ಎನ್ನುವ ಅಂಶಗಳು ಗೋವಿನ ಹಾಡು ಕೂಡಾ ಕಾಲಾಂತರದಲ್ಲಿ ಬೇರೆ ಬೇರೆ ರೀತಿಯಲ್ಲಿ ಬದಲಾಗಿರುವುದನ್ನು ಗುರುತಿಸಬಹುದು.[೯೮]

**೩. ಕವುಲಿ ಹಾಡು**

ಈ ಹಾಡನ್ನು ಕೇಶವ ಭಟ್ಟರು ಸಾಗರ ತಾಲ್ಲೂಕಿನಲ್ಲಿ ಸಂಗ್ರಹಿಸಿದ್ದು. ಕವುಲಿ ಹಾಡಿ(ಕಪಿಲೆ–ಗೋವು)ನಲ್ಲಿ ಮನೆಯ ಯಜಮಾನಿ ಹಸುಗೆ “ಮುರವು” (ನುಚ್ಚು, ಹಿಟ್ಟು, ಇತ್ಯಾದಿ ಕಲಸಿ ಮಾಡಿದ ಆಹಾರ) ನೀಡಿ, ಕರುವನ್ನು ಕೆಚ್ಚಲಿಗೆ ಬಿಡುತ್ತಾಳೆ. ಅದು ಸರಿಯಾಗಿ ಹಾಲನ್ನು ಕುಡಿಯುವ ಮೊದಲೇ ಅದನ್ನು ಬಿಡಿಸಿ ಹಾಲು ಕರೆಯಲು ಆರಂಭಿಸಿದಾಗ ಹಸು ಯಜಮಾನಿಗೆ ಒದೆಯುತ್ತದೆ. ಆಗ ಯಜಮಾನಿ ಹಾಲು ಕರೆಯುವ ಚಂಬಲ್ಲಿ ಅದಕ್ಕೆ ಕುಟ್ಟಿ “ನಿನ್ನನ್ನು ಹುಲಿ ತಿನ್ನಲಿ” ಎಂದು ಶಾಪ ಹಾಕುವ ವಿವರಣೆ ದೊರೆಯುತ್ತದೆ. ಆ ಶಾಪದ ಕಾರಣ ಆ ಹಸು ಹುಲಿಗೆ ಸಿಗುತ್ತದೆ. ಇಲ್ಲಿ ಹುಲಿ ಹಸುವನ್ನು ತಿನ್ನುವುದಿಲ್ಲ ಎಂದು ಕೊನೆಯಲ್ಲಿ ಹೇಳುತ್ತದೆ. ಇದರಲ್ಲಿಯೂ ಹುಲಿ ಪ್ರಾಣ ಬಿಡುವ ವಿಷಯ ಬರುವುದಿಲ್ಲ.

**೪. ಎಸ್.ಜಿ. ನರಸಿಂಹಾಚಾರ್ಯರು ಈ ಗೀತೆಯನ್ನು ರಚಿಸಿದ್ದಾರೆ ಎಂಬ ಉಲ್ಲೇಖವು** ದೊರೆತರೂ ಈ ಗೀತೆಯನ್ನು ಅನೇಕರು ಈವರೆಗೆ ಜನಪದ ಎಂದೇ ಒಪ್ಪಿ ಬಳಸುತ್ತಿದ್ದಾರೆ. ಹಸುವು ಯಾವ ಯಾವ ರೀತಿಯಲ್ಲಿ ಮಾನವನಿಗೆ ಉಪಯುಕ್ತ ಎಂಬುದನ್ನು ಈ ಗೀತೆಯಲ್ಲಿ ಮಾನವನಿಗೆ ಪ್ರಶ್ನೆ ಕೇಳುತ್ತಲೇ ಹಸುವು ಯಾವ ಯಾವ ರೀತಿಯಲ್ಲಿ ಉಪಯುಕ್ತ ಎಂದು ಹೇಳುವ ರೀತಿ ಆಕರ್ಷಣೀಯವಾಗಿದೆ.

**ಕಣ್ಣಿಯನು ಬಿಚಿಕೊಳ್ಳಲು ಅರಿಯೆ**
**ಹೊಟ್ಟೆಗೆ ಬೇಕೆಂದು ಕೇಳಲರಿಯೆ**
**ಪುಟ್ಟ ಕರು ಇಲ್ಲದಿರೆ ಕರೆದು ತಾರೆನಲರಿಯೆ**
**ನೀನಾರಿಗಾದೆಯೋ ಎಲೆ ಮಾನವಾ । ಹರಿ ಹರಿ ಗೋವು ನಾನು॥**
**ಇಟ್ಟರೆ ಸಗಣಿಯಾದೆ ತಟ್ಟಿದರೆ ಕುರುಳಾದೆ**
**ಸುಟ್ಟರೆ ನೊಸಲ ವಿಭೂತಿಯಾದೆ**
**ತಟ್ಟದೆ ಹಾಕಿದರೆ ಮೇಲು ಗೊಬ್ಬರವಾದೆ**
**ನೀನಾರಿಗಾದೆಯೋ ಎಲೆ ಮಾನವಾ॥**
**ಹಾಲಾದೆ ಕರೆದರೆ, ಮೊಸರಾದೆ ಹೆತ್ತರೆ**
**ಮೇಲ್ಗೆನೆಯ ಕಡೆದರೆ ಬೆಣ್ಣೆಯಾದೆ**
**ಮೇಲಾದ ತುಪ್ಪವು ನಾನಾದೆ ಕಾಸಿದರೆ**

ನೀನಾರಿಗಾದೆಯೋ ಎಲೆ ಮಾನವಾ॥

ಹಾದಿ ಬೀದಿಯಲಿರುವ ಕಸದ ಹುಲ್ಲನು ಮೇದು

ಬಂದು ಮನೆಗೆ ನಾನು ಅಮೃತವೀವೆ,

ಅದನುಂಡು ನನಗೆರಡ ಬಗೆವ ಮಾನವ

ನೀನಾರಿಗಾದೆಯೋ॥

ಹಾಯೆ ಹರಿಗೋಲಾದೆ, ರಾಯಭೇರಿಗೆಯಾದೆ

ರಾಯರಾ ಕಾಲಿಗೆ ಮುಳ್ಮೊತ್ತು ಆದೆ.

ಆಯವರಿತು ಹೊಡೆಯೆ ಒಳ್ಳೆಗಾನಕೆ ಆದೆ

ನೀನಾರಿಗಾದೆಯೋ॥

ದೇಹ ಶುದ್ಧಿಗೆ ನಾನು ಪಂಚಗವ್ಯವ ನೀವೆ,

ವಾಹನಕೆ ಆಗುವನು ಎನ್ನ ಮಗನು.

ಊಹೆಗಸದಳವಹುದು ನನ್ನ ಉಪಕಾರಗಳು

ನೀನಾರಿಗಾದೆಯೋ॥

ಉಳುವೆ ನಾ ಭೂಮಿಯನು, ಹೊರುವೆ ನಾ ಹೇರನ್ನು

ತುಳಿದು ಕಡ್ಡಿಯ ಕಾಳ ವಿಂಗಡಿಸುವೆ.

ಕಳಪೆಯಾಗಿಹ ನೆಲವ ನಗುವ ತೊಪನುಮಾಳ್ಪೆ

ನೀನಾರಿಗಾದೆಯೋ॥

ಕರುಸತ್ತ ಬೇಗೆಯಲಿ ನಾ ಬೇಯುತ್ತಿದ್ದರೆ

ಮರುಕವಿಲ್ಲದೆ, ಸತ್ತ ಕರುವ ತಂದು

ತಿರು ತಿರುಗಿ ಮುಂದಿಟ್ಟು ಹಾಲುಕರೆವ ಮಾನವಾ

ನೀನಾರಿಗಾದೆಯೋ॥

ಎಂಬ ಹಾಡು ಮಾನವನಿಗೆ ಅನೇಕ ಪ್ರಶ್ನೆಗಳನ್ನು ಕೇಳುತ್ತಲೇ ಗೋವು ಮಾನವನಿಗೆ ಯಾವ ಯಾವ ರೀತಿ ಉಪಯುಕ್ತ ಎಂಬುದನ್ನು ತಿಳಿಸುತ್ತದೆ.ಇಲ್ಲಿ ಕೊನೆಯ ಪ್ಯಾರಾವನ್ನು ಆಧುನಿಕ ಡೈರಿ ಕಲ್ಪನೆಯ ವಿಚಾರದಿಂದ ಪ್ರೇರಣೆ ಪಡೆದು ಸೇರಿಸಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಆದರೂ ಇಡೀ ಜನಪದ ಹಾಡು ಗೋವಾಗಿ ನಾನು ಉಪಯುಕ್ತವಾಗಿರುವೆ ಆದರೆ ಮಾನವ ನೀನು ಬದುಕಿದ್ದಾಗ ಮತ್ತು ಸತ್ತಾಗ ಯಾವ ಯಾವ ವಿಚಾರಕ್ಕೆ ಉಪಯೋಗಕ್ಕೆ ಬರುತ್ತೀಯ? ಎಂದು ಪ್ರಶ್ನಿಸುವ ಮೂಲಕ ತನ್ನ ನೋವನ್ನು ತೋಡಿಕೊಂಡಿದೆ.

### ಇ. ಗೋಸಂಬಂಧಿ ಗ್ರಾಮೀಣ ಆಚರಣೆಗಳು

ಭಾರತ ಹಳ್ಳಿಗಳ ದೇಶ. ಹಳ್ಳಿಗಳ ಬದಲಾವಣೆ ದೇಶದ ಬದಲಾವಣೆ ಎನ್ನುವಂತಿರುವ ನಮ್ಮ ಗ್ರಾಮೀಣ ಪ್ರದೇಶಗಳು ಇಂದಿಗೂ ಕೃಷಿಯನ್ನೇ ಅವಲಂಭಿಸಿವೆ. ಕೃಷಿ ಆಧಾರಿತ ಕುಟುಂಬಗಳಲ್ಲಿ ಪಶುಪಾಲನೆಯು ಮಾನವನು ಸ್ಥಿರ ಜೀವನ ಆರಂಭಿಸಿದ ಅಂದಿನಿಂದಲೂ ಜೊತೆ ಜೊತೆಯಾಗಿಯೇ ನಡೆದುಕೊಂಡು ಬಂದಿವೆ. ಆಧುನಿಕ ಯಂತ್ರಗಳ ಸಂಶೋಧನೆ ಆಗುವವರೆಗೂ, ಸರಕು ಸಾಗಾಣಿಕೆ ಮತ್ತು ಕೃಷಿಯನ್ನು ಪಶುಗಳೇ ನಿರ್ವಹಿಸುತ್ತಿದ್ದವು. ಹಾಗಾಗಿಯೇ ಗೋವುಗಳಿಗೂ ಮತ್ತು ಎತ್ತುಗಳಿಗೂ ಮನೆಯ ಹಿರಿಯ ಸದಸ್ಯರ ಸ್ಥಾನವನ್ನು ನಮ್ಮ ಜನಪದರು ನೀಡಿದ್ದಾರೆ.

ಜನಪದ ಅಂದರೆ ಜನರಾಡುವ ಪದಗಳು. ಇಲ್ಲಿ ಜನ ಎಂದರೆ ಮನುಷ್ಯರೆಂದೂ, ಪದ ಎಂದರೆ ಹಾಡು, ಮಾತು, ವಾಕ್ಯ ಎಂಬರ್ಥವನ್ನು ಕೊಡುತ್ತದೆ. ಜನಪದರ ಅನುಭವವೇ ಹಾಡು, ಕಥೆ, ಕಾವ್ಯಗಳಾಗಿ ಅವರ ಶ್ರಮ ಪರಿಹಾರದ ಸಾಧನಗಳಾಗಿವೆ. ಗ್ರಾಮೀಣ ಜನರು ಕೇಳಿಸಿಕೊಳ್ಳುವ ಮತ್ತು ತಿಳಿದಿದ್ದನ್ನು ಇತರರಿಗೆ ಹೇಳುವ ಮೂಲಕ ಅದಕ್ಕೊಂದು ರಾಗ, ಶೈಲಿ, ವಿಧಾನವನ್ನು ತಲತಲಾಂತರದಿಂದ ಮೌಖಿಕ ಪರಂಪರೆಯಲ್ಲಿ ಉಳಿಸಿಕೊಂಡು ಬಂದಿದ್ದಾರೆ.

ನಿಸರ್ಗದಲ್ಲಿ ನಡೆಯುವ ಸಹಜ ಬದಲಾವಣೆಗಳಾದ ಸೂರ್ಯೋದಯ, ಚಂದ್ರೋದಯ, ಗುಡುಗು, ಸಿಡಿಲು, ಚಂಡಮಾರುತ, ಪ್ರಾಣಿ–ಪಕ್ಷಿಗಳ ಭಯವೇ ಅವುಗಳಿಗೆ ದೈವತ್ವವನ್ನು ನೀಡಿದೆ. ಮನುಷ್ಯನಿಗೆ ಉಪಕಾರಿಯಾದ ಪ್ರಾಣಿ, ಪಕ್ಷಿ, ಸಸ್ಯ ಹಾಗೂ ಪ್ರಾಕೃತಿಕ ವಸ್ತುಗಳನ್ನು ಪೂಜ್ಯನೀಯವಾಗಿ ಕಾಣಲಾಗಿದೆ. ಆ ಉಪಯುಕ್ತ ಪ್ರಾಣಿ, ವಸ್ತು, ಸಸ್ಯ, ಪ್ರಾಕೃತಿಕ ವಸ್ತುಗಳು ನಾಶವಾಗದಂತೆ ಮತ್ತು ಅವುಗಳನ್ನು ಸಂರಕ್ಷಿಸಿ ಇಟ್ಟುಕೊಳ್ಳಲು, ಕೆಲವು ಆಚರಣೆಗಳಲ್ಲಿ ಪ್ರಕೃತಿಯ ಕೆಲವು ಗಿಡ, ಹೂವು, ಬಳ್ಳಿ, ಬೇರು, ಮುಂತಾದ ಅನೇಕ ವಸ್ತುಗಳು ಇರಲೇಬೇಕು, ಎಂದು ಆ ಪ್ರಕೃತಿಕ ವಸ್ತುಗಳ ಪ್ರಾಮುಖ್ಯತೆ ಉಳಿಸಿದ್ದಾರೆ. ಆಗಾಗ ಅವುಗಳನ್ನು ನೆನಸಿಕೊಳ್ಳಲು, ಅನೇಕ ಆಚರಣೆಗಳನ್ನು, ಕಥೆ, ಕಾವ್ಯ, ಗೀತೆಗಳನ್ನು ಹಾಡುತ್ತಾ ಅವುಗಳ ಮಹತ್ವವನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯಲು ಜನಪದರು ಅನೇಕ ಸಂಪ್ರದಾಯ ಕಟ್ಟಳೆಗಳನ್ನು ರೂಪಿಸಿಕೊಂಡರು.

ಮಾನವನಿಗೆ ಅಪಾಯ ಒಡ್ಡುವ, ಮತ್ತು ಉಪಕಾರಿ ನೆಲೆಯಲ್ಲಿ ವಸ್ತುಗಳನ್ನು, ಪ್ರಾಣಿಗಳನ್ನು, ಜಲಚರಗಳನ್ನು, ಪ್ರಕೃತಿಯನ್ನು ವಿಭಾಗಿಸಿಕೊಂಡು ಆರಾಧಿಸುತ್ತಿದ್ದಾರೆ. ಆಹಾರ ನೀಡುವ ಭೂಮಿಯನ್ನು ಉಪಕಾರಿ ನೆಲೆಯಲ್ಲಿಯೂ ಅಥವಾ ಅವುಗಳಿಂದ ಯಾವುದೇ ಅಪಾಯ ಆಗಬಾರದೆಂದು ಪೂಜನೀಯ ಆಗಿರುವುದನ್ನು ನಾವು ಕಾಣಬಹುದು. ಹಸು ಉಪಕಾರಿ

ನೆಲೆಯಿಂದ ಪೂಜ್ಯನೀಯವಾಗಿದೆ. ಹಸುವನ್ನು ದಿನವೂ ಪೂಜಿಸುವುದಲ್ಲದೆ ವಿಶೇಷವಾಗಿ ದೀಪಾವಳಿ, ಸಂಕ್ರಾಂತಿ, ಮತ್ತು ಕಾರಹುಣ್ಣಿಮೆ ಇತ್ಯಾದಿ ಹಬ್ಬಗಳಲ್ಲಿ ಪೂಜಿಸಲಾಗುತ್ತದೆ. ಹತ್ತಾರುಐತಿಹ್ಯ, ಪುರಾಣ, ಕಥೆಗಳು ಸೃಷ್ಟಿಯಾಗಿ ಸದಾ ಕಾಲ ಹಸುವನ್ನು ಭಕ್ತಿಯ ನೆಲೆಯಿಂದಲೇ ಕಾಣುವಂತೆ ಮಾಡಿದೆ. ಬಹು ಉಪಯೋಗಿ ಸಾಕು ಪ್ರಾಣಿಗಳನ್ನು ಅವುಗಳ ಆಕ್ರಮಣಶೀಲತೆ ಮರೆಸುವ ದೃಷ್ಟಿಯಿಂದ ಪೂಜ್ಯನೀಯವಾಗಿವೆ.

ಪ್ರಾಚೀನ ಕಾಲದಲ್ಲಿ ಜನಪದರಿಗಿದ್ದ ಜೀವನಾಧಾರ ಆಕರಗಳು, ತುಂಬಾ ಪರಿಮಿತ. ಬೇಟೆಯಾಡುತ್ತಾ ನಿಸರ್ಗವನ್ನು ತಮ್ಮ ಬದುಕಿಗೆ ಒಗ್ಗಿಸಿ ಸುತ್ತಮುತ್ತ ಯಾವ ಸಮಯದಲ್ಲಾದರೂ ದಾಳಿ ಮಾಡಬಹುದಾದ ಪ್ರಾಣಿ ಸಮೂಹ. ಅವುಗಳಲ್ಲಿ ಇವರನ್ನು ಗುದ್ದಿ, ಇರಿದು ಕೊಲ್ಲಬಹುದಾಗಿದ್ದ ಪಶುಗಳನ್ನು ತಮ್ಮ ಶಕ್ತಿ–ಯುಕ್ತಿಗಳಿಂದ ಪಳಗಿಸಿ ಕೃಷಿ ಕಾರ್ಯಕ್ಕೆ ಬಳಸಿಕೊಂಡರು. ಭೂಮಿಯ ಒಡೆಯರಾಗುವ ಮೂಲಕ ಕೃಷಿಕರಾದರು. ಇಂತಹ ಚಿಕ್ಕ ಚಿಕ್ಕ ಗುಂಪುಗಳು ತಾವು ಪಳಗಿಸಿದ ಸಾಕು ಪಶುಗಳೊಂದಿಗೆ ತಾವು ನೆಲೆಸಬಹುದಾದ ನೆಲೆ ಹುಡುಕುತ್ತಾ ಮುನ್ನಡೆದವು. ಹುಲ್ಲುಗಾವಲು ಕಂಡಲ್ಲಿ ನೆಲೆನಿಂತು, ನದಿ ಕಂಡಲ್ಲಿ ಜೋಪಡಿ ಕಟ್ಟಿ, ಜೋಪಡಿಯ ಬದಿಯಲ್ಲಿಯೇ ಹಟ್ಟಿ ನಿರ್ಮಿಸಿ ಬದುಕತೊಡಗಿದರು. ಕೃಷಿಯನ್ನೇ ನಂಬಿ ಬದುಕುವವರಿಗೆ ಭೂಮಿಯೇ ಸಂಪತ್ತಿನ ಕುರುಹಾಯಿತು. ಭೂಮಿ ದಕ್ಕದೆ ಇದ್ದ ವಿವಿಧ ಗುಂಪುಗಳು ತಮ್ಮ ಜೀವನ ನಿರ್ವಹಣೆಗೆ ತಾವು ಪಳಗಿಸಿದ ಪಶುಗಳನ್ನೇ ಅವಲಂಬಿಸಿದರು. ಅವರಿಗೆ ತುರುಮಂದೆಯೇ ಸಂಪತ್ತಿನ ಸೂಚಕವಾಯಿತು. ಕೃಷಿಯಲ್ಲಿ ಹೋರಿಗಳ ಪಾತ್ರ ಬಹಳ ಮುಖ್ಯ. ಏಕೆಂದರೆ ನೆಲವನ್ನು ಉಳುಮೆ ಮಾಡಲು ಎತ್ತುಗಳ ಬಲ ಬಹಳ ಮುಖ್ಯ ಸ್ಥಾನವನ್ನು ಪಡೆಯಿತು.

ಸಿದ್ಧಗಂಗಾ ಶ್ರೀಗಳು ತಮ್ಮ ಲೇಖನ ಒಂದರಲ್ಲಿ ರೈತ ಮತ್ತು ಗೋವಿನ ಬಗ್ಗೆ 'ಹಿಂದೆ ಕೊಟ್ಟಿಗೆಯ ಬಳಿ ತಿಪ್ಪೆಯನ್ನು ನೋಡಿ ನೆಂಟಸ್ತಿಕೆ ಬೆಳೆಸುವ ಸಂಪ್ರದಾಯವಿತ್ತು. ಮನೆಯ ಯಜಮಾನ ದನಕಕರುಗಳಿಗೆ ಹುಲ್ಲು, ನೀರು ಹಾಕಿದ ಮೇಲೆಯೇ ಊಟ ಮಾಡುತ್ತಿದ್ದ. ಎದ್ದ ತಕ್ಷಣ ಒಮ್ಮೆ ಅವುಗಳನ್ನು ನೋಡಿಯೇ ದಿನದ ಕೆಲಸವನ್ನು ಆರಂಭಿಸುತ್ತಿದ್ದ. ಅವುಗಳಿಗೆ ಕಾಯಿಲೆ ಬಂದರೆ ಮರುಗುತ್ತಿದ್ದ. ತೀರಿಕೊಂಡರೆ ಹೊಲದಲ್ಲಿ ಸಮಾಧಿ ಮಾಡುತ್ತಿದ್ದ. ದುಡಿಯುವ ಹೋರಿಯನ್ನು ಸ್ವಂತ ಮಗನೆಂದೇ ಭಾವಿಸಿದ್ದ. ಹೋರಿಗಳ ಕೋಡಿಗೆ ಕಳಸ, ಕೊರಳಿಗೆ ಗೆಜ್ಜೆ ಕಟ್ಟಿ ಸಂಭ್ರಮಿಸುತ್ತಿದ್ದ.'' ಆ ಸಂಪ್ರದಾಯ ಇಂದೂ ಜನಪದರಲ್ಲಿ ಉಳಿದುಕೊಂಡಿವೆ.ಅಂಥ ಗೋಸಂಬಂಧಿ ಆಚರಣೆಗಳನ್ನು ನಡೆಸುವ ಸಂಪ್ರದಾಯವನ್ನು ಮನುಷ್ಯ ಶತಶತಮಾನಗಳಿಂದ ನಡೆಸಿಕೊಂಡು ಬಂದಿದ್ದಾನೆ. ಮಾನವ ಕೃಷಿಯನ್ನು ಆರಂಭಿಸಿದಂದಿನಿಂದ ಯಂತ್ರಯುಗ

ಆರಂಭವಾಗುವ ಮೊದಲು ಅಥವಾ ಇಂಧನ ಚಾಲಿತ ಯಂತ್ರಗಳ ಅನ್ವೇಷಣೆಗೆ ಮೊದಲು ಯಂತ್ರಗಳ ಅಥವಾ ಸಾರಿಗೆಯ ಚಕ್ರ ತಿರುಗಿಸುವ ಶಕ್ತಿ ಎತ್ತುಗಳೇ ಆಗಿದ್ದವು. ನೆಲ ಉಳುವುದರಿಂದ ಧಾನ್ಯವನ್ನು ಕಣಜಕ್ಕೆ ತಂದು ಹಾಕುವಲ್ಲಿ, ಧಾನ್ಯಗಳನ್ನು ಗಿಡಗಳಿಂದ ಬೇರ್ಪಡಿಸುವಲ್ಲಿ ಧಾನ್ಯಗಳನ್ನು ಪೇಟೆಗೆ ಸಾಗಿಸುವವರೆಗೂ ಎತ್ತುಗಳು ನಿರ್ಣಾಯಕ ಪಾತ್ರವನ್ನು ವಹಿಸಿವೆ. ಹಾಗೆಯೇ ಮನೆಯ ಅರ್ಥವ್ಯವಸ್ಥೆ ಮತ್ತು ಆರೋಗ್ಯವನ್ನು ಹಸುಗಳು ನೋಡಿಕೊಂಡಿವೆ. ಮಗು ಹುಟ್ಟಿ ತಾಯಿಯ ಎದೆಹಾಲು ಬಿಟ್ಟ ನಂತರ ಆ ಮಗುವಿನ ಆರೋಗ್ಯಕ್ಕೆ ಆಕಳ ಹಾಲೇ ಮುಖ್ಯ. ಹಾಗೆಯೇ ಆಕಳ ಕರು ಹುಟ್ಟಿದರೂ ರೈತರ ಮನೆಯಲ್ಲಿ ವಿಶೇಷ. ಕರು ಹಾಕಿದ ಆಕಳ ಹಾಲಿನಿಂದ ತಯಾರಿಸುವ ಗಿಣ್ಣ(ಒಂದು ಬಗೆಯ ವಿಶೇಷ ಸಿಹಿ)ವನ್ನು ಸಂಬಂಧಿಕರಿಗೆಲ್ಲ ಹಂಚಿ ಸಂತೋಷಪಡುತ್ತಾರೆ. ಅದರಲ್ಲೂ ಹುಟ್ಟಿದ ಕರು ಹೆಣ್ಣಾಗಿದ್ದರಂತೂ ಈ ಸಂಭ್ರಮ ದುಪ್ಪಟ್ಟಾಗಿರುತ್ತದೆ.

ರೈತರ ಪ್ರತಿಯೊಂದು ಚಟುವಟಿಕೆಗಳೂ ಬೆಳಗ್ಗೆ ಬಸವನಿಂದಲೇ ಆರಂಭವಾಗುತ್ತವೆ. ಅವನ ಪ್ರತಿಯೊಂದು ಸಂಭ್ರಮ, ಕೆಲಸಗಳಲ್ಲೂ ಎತ್ತುಗಳ ಪಾತ್ರ, ಹಸುಗಳ ಪಾತ್ರ ಮುಖ್ಯವಾಗುತ್ತದೆ. ಆದ್ದರಿಂದಲೇ ದನಗಳಿಗೆ ದೇವರ ಸ್ಥಾನವನ್ನು ನೀಡಿದನು. ದೈವ ಸ್ವರೂಪಿಯಾದ ಗೋವುಗಳ ಅಪಹರಣವನ್ನು ವೈಭವೀಕರಿಸುವುದು ಭಾವನಾತ್ಮಕವಾಗಿ ಅವುಗಳ ದೈವತ್ವವನ್ನು ಪ್ರಶ್ನಿಸುವಂತಾಗುತ್ತದೆ ಎಂಬ ಭಾವದಿಂದ ಗೋವುಗಳ ಗೋಗ್ರಹಣದ ಕಥೆಗಳು ಕಡಿಮೆ ಎಂದೇ ಹೇಳಬೇಕು. ಏಕೆಂದರೆ ಗೋಗ್ರಹಣಗಳು ಅತೀ ಹೆಚ್ಚು ನಡೆಯುವ ಕಾಲದಲ್ಲಿ ವೀರಗಲ್ಲುಗಳನ್ನೇ ನಿಲ್ಲಿಸುತ್ತಿದ್ದರಿಂದ ಅದರ ಬಗ್ಗೆ ಹಾಡುಗಳು ಕಡಿಮೆ ಆಗಿವೆ. ಆದರೆ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಲಾವಣಿ ಪ್ರಕಾರ ಹೆಚ್ಚು ಜನಪ್ರಿಯತೆ ಪಡೆಯಿತು. ಮಹಾಭಾರತದ ಉತ್ತರ, ದಕ್ಷಿಣ ಗೋಗ್ರಹಣದ ಕತೆಯನ್ನು ಹೇಳುತ್ತಾರೆ. ಆ ಭಾಗವನ್ನು ಅಧ್ಯಾಯ ೩ ರಲ್ಲಿ ಚರ್ಚಿಸುವುದರಿಂದ ಇಲ್ಲಿ ಕಥಾ ಪ್ರಕಾರ, ಗಾದೆಗಳು, ಹಾಡುಗಳು, ಗೋಸಂಬಂಧಿ ಗ್ರಾಮೀಣ ಆಚರಣೆಗಳನ್ನು ಮಾತ್ರ ಗಮನಿಸಲಾಗುತ್ತಿದೆ.

ಕೃಷಿ ಚಟುವಟಿಕೆಗಳು ಅಂದಿನ ಜನಜೀವನದಲ್ಲಿ ಪ್ರಾಮುಖ್ಯತೆ ಪಡೆಯುವುದರೊಂದಿಗೆ ಹಸುಗಳ ಮಹತ್ವವು ಹೆಚ್ಚಿತು. ಹಸು ಪೂಜ್ಯನೀಯವಾಗಿ ಆದಾಯದ ಮೂಲವಾಗಿ, ಸ್ಥಾನ ಪಡೆದಂತೆ ಹೋರಿಯೂ ತನ್ನ ಮಹತ್ವನ್ನು ಉಳಿಸಿಕೊಂಡಿದೆ. ಹೋರಿಯು ದುಡಿಯಲು, ಹೋರಿಗಳು ಹೆಚ್ಚು ಇದ್ದಷ್ಟೂ ಆ ರೈತರು ಶ್ರೀಮಂತರಾಗಿ ಹೆಚ್ಚು ಜಮೀನಿನ ಒಡೆಯರಾದರು. ಹೋರಿಯು ದುಡಿತಕ್ಕೆ ರೈತನಿಗೆ ಹೆಗಲುನೀಡಿ, ವ್ಯವಸಾಯದ ಬೆನ್ನೆಲುಬಾಗಿ ರೈತನ ಜೊತೆಗೂಡಿದೆ. ಈ ಹೋರಿಗಳನ್ನು, ಎತ್ತುಗಳನ್ನು, ಹಸುಗಳನ್ನು ಕೇಂದ್ರವಾಗಿರಿಸಿ ಆಚರಿಸುವ ಅನೇಕ ಜನಪದ

ಆಚರಣೆಗಳು ಹಳ್ಳಿಗಳಲ್ಲಿ ಇಂದಿಗೂ ಪ್ರಸ್ತುತವಾಗಿವೆ. ಸುಖಃ, ದುಃಖ, ದುಡಿಮೆಯಲ್ಲಿ ಮಾನವನ ಜೊತೆಯಾದ ಪಶು ಸಂಪತ್ತು, ಅವನ ಎಲ್ಲಾ ಆಚರಣೆಗಳ ಭಾಗವಾಗಿ, ರೈತನ ಮನೆಯ ಸದಸ್ಯರಂತೆ ಬದುಕತೊಡಗಿದವು. ಸಂಭ್ರಮಾಚರಣೆಗಳಲ್ಲಿ ಮುಖ್ಯವಾದ ಅಲಂಕಾರ, ಪೂಜೆಗಳು ಮನೆಯ ಲಕ್ಷ್ಮೀ ಎನಿಸಿದ ಪಶುಗಳಿಗೆ ಸಲ್ಲುತ್ತವೆ. ವಾರದಲ್ಲೊಂದು ದಿನ ಬಸವನಿಗೆ(ಸೋಮವಾರ) ರಜೆ ನೀಡುತ್ತಾರೆ. ಮುಂದಿನ ಕೃಷಿ ಚಟುವಟಿಕೆಗಳಿಗೆ ಬೇಕಾದ ಸಲಕರಣೆಗಳು ಅಂದರೆ ಕುಳ ಹಣಿಯೋದು, ಹಗ್ಗ ಹೊಸೆಯೋದು, ಕುಡುಗೋಲು, ಸಲಿಕೆಗಳಿಗೆ ಕಾವು ಹಾಕುವುದು, ಮಸೆಯುವುದು, ಇತ್ಯಾದಿ ಕೃಷಿ ಉಪಕರಣಗಳನ್ನು ದುರಸ್ತಿ ಮಾಡಿಕೊಳ್ಳಲು ಆ ದಿನವನ್ನು ಸೂಕ್ತವಾಗಿ ಬಳಸಿಕೊಳ್ಳುತ್ತಾರೆ. ಹಳ್ಳಿಗಳಲ್ಲಿ ಇಂದಿಗೂ ಪ್ರಸ್ತುತವಾಗಿರುವ ಪಶು ಸಂಬಂಧಿ ಜನಪದ ಆಚರಣೆಗಳನ್ನು ಈ ಭಾಗದಲ್ಲಿ ಗಮನಿಸಬಹುದು.

ಗೋ ಸಂಬಂಧಿ ಗ್ರಾಮೀಣ ಆಚರಣೆಗಳು ಗ್ರಾಮೀಣ ಜನರ ಸಂಭ್ರಮ, ನಿಯಮ, ಹಾಗೂ ದಣಿದ ಜೀವಗಳಿಗೆ ವಿರಾಮ ಹಾಗೂ ದುಡಿದ ಬಸವ(ಎತ್ತು)ಗಳ ಜೀವಕ್ಕೆ ಗೌರವ ಹಾಗೂ ತನ್ನ ಮನೆತನದ ಸಿರಿತನ ಹೆಚ್ಚಿಸಲು ಕಾರಣವಾದ ಗೋಸಂತತಿಯನ್ನು ದಿನನಿತ್ಯ ಹಾಗೂ ವಿಶೇಷ ಸಂದರ್ಭಗಳಲ್ಲಿ ಗ್ರಾಮೀಣ ಕೃಷಿ ಸಮುದಾಯ ನೆನಪಿಸಿಕೊಳ್ಳುತ್ತಾ, ಗೌರವಿಸುತ್ತಾ ಹಾಗೂ ಆ ಗೋವುಗಳನ್ನು ಮನೆಯ ಸದಸ್ಯರಂತೆಯೇ ಭಾವಿಸಿದೆ. ಅವುಗಳ ಪ್ರತಿ ಉಸಿರು, ಅವುಗಳ ಧ್ವನಿಗೂ(ವಿಶೇಷ ಅರ್ಥ, ಎಚ್ಚರಿಕೆ, ಆಗಂತಕರ ಆಗಮನಗಳು.) ಅರ್ಥವನ್ನು ರೈತರು ಕಲ್ಪಿಸಿಕೊಂಡು, ಅವುಗಳ ಜೊತೆ ಮಾನವರ ಜೊತೆಗೆ ಮಾತನಾಡುವಂತೆಯೇ ಮಾತನಾಡುತ್ತಾರೆ. ಅನೇಕರು ಕೊಟ್ಟಿಗೆಯಲ್ಲಿ ಮಲಗುತ್ತಾರೆ, ಅವುಗಳಿಗೆ ಹೊತ್ತು ಹೊತ್ತಿಗೆ ಹುಲ್ಲು, ಮೇವು ನೋಡಿಕೊಳ್ಳಲು, ನೀರು ಕುಡಿಸಲು, ಇಂದಿಗೂ ದನಗಳು ಇರುವ ಮನೆಯವರು ಎಂದೂ ಬೀಗ ಹಾಕಿ ಹೊರಗೆ ಹೋಗುವುದಿಲ್ಲ. ಅವುಗಳ ಚಾಕರಿಗೆ, ಮನೆಯ ಯಾರಾದರೂ ಇದ್ದೇ ಇರುತ್ತಾರೆ. ಒಂದು ವೇಳೆ ಹೋಗಲೇಬೇಕಾದ ಸಂದರ್ಭ ರೈತರಿಗೆ ಎದುರಾದರೆ, ತಮ್ಮ ಆಪ್ತರಿಗೆ ಅವುಗಳನ್ನು ನೋಡಿಕೊಳ್ಳಲು ಹೇಳಿ ಹೋಗುತ್ತಾರೆ. ಇಷ್ಟೊಂದು ಪ್ರೀತಿಯಿಂದ ನೋಡಿಕೊಳ್ಳುವ ಗೋವುಗಳ ಬಗೆಗಿನ ಗ್ರಾಮೀಣ ಆಚರಣೆಗಳು ವಿಶಿಷ್ಟ ಮತ್ತು ಕುತೂಹಲ ಸಂಭ್ರಮದ ಕೇಂದ್ರ ಬಿಂದು. ಅಂತಹ ಆಚರಣೆಗಳನ್ನು ಮುಂದಿನ ಭಾಗದಲ್ಲಿ ಗಮನಿಸಬಹುದು.

**ಇ. ಗೋಸಂಬಂಧಿ ಗ್ರಾಮೀಣ ಆಚರಣೆಗಳು**

೧. ಜಾತ್ರೆ

೨. ಅಂಟಿಗೆ-ಪಂಟಿಗೆ

೩. ಕಂಬಳ

೪. ಕಾರಹುಣ್ಣಿಮೆ

೫. ಹೊನ್ನಾರ

೬. ದನಗಳ ಗುಡಿ ಸುತ್ತುವ ಸೇವೆ

೭. ದೊಡ್ಡಹಬ್ಬ

೮. ಬಂಡಿಹರಕೆ

೯. ಬುಲ್

೧೦. ಶಕ್ಕುದಾರ

೧೧. ಸಂಕ್ರಾಂತಿ

೧೨. ಹಾಲರಬಿ ಸೇವೆ

೧೩. ಹಟ್ಟಿಹಬ್ಬ/ಹೋರಿಹಬ್ಬ

೧೪. ಹಂದರಗೋಳು.

೧೫ ಕೋಲೆ ಬಸವ

ಮುಖ್ಯವಾಗಿವೆ. ದೈವ ಸ್ವರೂಪಿಯಾದ ಗೋವುಗಳು ಮಾನವನ ಜೀವನದ ಅವಿಭಾಜ್ಯ ಅಂಗವಾಗಿರುವ, ಮಾನವನ ಏಳಿಗೆಗೆ, ರೈತರ ಏಳಿಗೆಗೆ ದುಡಿಯುವ ಮೂಕಬಸವನ ಸ್ಮರಣೆ ರೈತ ಜಗತ್ತಿನ ಆದ್ಯ ಕರ್ತವ್ಯ, ಎಂದು ಭಾವಿಸಿ ನಡೆಸುವ ಈ ಆಚರಣೆಗಳ ವಿವರಗಳನ್ನು ಗಮನಿಸಬಹುದು.

### ೧. ಜಾತ್ರೆ

ಗ್ರಾಮೀಣರ ಬಹಳ ದೊಡ್ಡ ಸಂಭ್ರಮ ಈ ಜಾತ್ರೆಗಳಾಗಿದ್ದವು. ಜಾತ್ರೆಗಳು ಮನೆದೇವರ ಉತ್ಸವವಾಗಿ, ಧಾರ್ಮಿಕ ಭಾಗವಾದರೆ ಕೃಷಿ ಚಟುವಟಿಕೆ ಹಾಗೂ ಅಗತ್ಯ ಧಾನ್ಯ, ವಸ್ತುಗಳನ್ನು–ಕೊಡು ಕೊಳ್ಳುವಿಕೆಗೆ ವೇದಿಕೆಯಾಗಿ ಇಂದಿನ ಸೂಪರ್ ಮಾರ್ಕೆಟ್ ಸಂಸ್ಕೃತಿಯ ಸ್ಥಾನವನ್ನು ಈ ಜಾತ್ರೆಗಳು ನಿರ್ವಹಿಸಿವೆ.

ಪ್ರತಿಯೊಂದು ಮನೆಯವರಿಗೂ ಅವರ ವೃತ್ತಿಧರ್ಮಗಳಿಗೆ ಅನುಗುಣವಾಗಿ ಭಿನ್ನ ಭಿನ್ನ ಮನೆದೇವರು, ಭಿನ್ನ ಭಿನ್ನ ಆಚರಣೆಗಳನ್ನು ರೂಢಿಸಿಕೊಂಡು ಬಂದಿದ್ದಾರೆ. ತಮ್ಮ ಕುಲದ ಆದ್ಯ ದೇವರನ್ನು ಮನೆದೇವರು ಎಂದಿದ್ದಾರೆ. ಈ ಮನೆದೇವರ ಉತ್ಸವವನ್ನೇ ಜಾತ್ರೆ, ಪರಾವು, ಎಂಬ ಹೆಸರುಗಳಿಂದ ಕರಸಿಕೊಂಡಿವೆ. ರೈತನ ಕೃಷಿ ಚಟುವಟಿಕೆಗಳು ನವಂಬರ್ ವೇಳೆಗೆ ಅಥವಾ ದೀಪಾವಳಿ ವೇಳೆಗೆ ಮುಗಿಯುತ್ತವೆ. ಆ ವರ್ಷದ ತಪ್ಪು, ಒಪ್ಪು ದುಡಿಮೆ ಸಾಂಘವಾಗಿ ಸಾಗಿದ್ದನ್ನು ತಮ್ಮ ಕುಲದೇವತೆಗೆ ತಿಳಿಸಿ, ತಮ್ಮ ಕೋರಿಕೆ ಸಂಕಲ್ಪಗಳನ್ನು ಈಡೇರಿಸಿಕೊಳ್ಳಲು

ಮನೆದೇವರ ಜಾತ್ರೆಗಳು ನಡೆಯುತ್ತವೆ. ಈ ಜಾತ್ರೆಗಳೂ ನಿಗದಿತ ನಕ್ಷತ್ರಕ್ಕೆ, ಅಥವಾ ನಿಗದಿತ ಹುಣ್ಣಿಮೆ ಅಥವಾ ಅಮವಾಸ್ಯೆಗಳಂದೇ ನಡೆಸಲು ನಿಶ್ಚಯಿಸಿರುತ್ತಾರೆ. ನವೆಂಬರ್‌ನಿಂದ – ಮಾರ್ಚ್ ಆರಂಭ ಅಥವಾ ಯುಗಾದಿಯವರೆಗೆ ಸಾಮಾನ್ಯವಾಗಿ ಜಾತ್ರೆಗಳು ನಡೆಯುತ್ತವೆ.

ಈ ದೂರದ ಮನೆದೇವರ ಕ್ಷೇತ್ರಕ್ಕೆ ಸಾಗಲು ಅಂದಿನ ಎತ್ತಿನ ಗಾಡಿಗಳೇ ವಾಹನಗಳಾಗಿ, ಎತ್ತುಗಳೇ, ಯಂತ್ರಗಳಂತೆ ಬಳಕೆಯಾಗುತ್ತಿದ್ದವು. ಜಾತ್ರೆಗೆ ಹೊರಡಲು ಎತ್ತಿನ ಗಾಡಿಯನ್ನು ಬಿದಿರಿನ ಕಮಾನುಕಟ್ಟಿ, ನೆರಳು ಮಾಡಿಕೊಂಡು, ದಾರಿಯ ಮಧ್ಯೆ ಆಹಾರ ಪದಾರ್ಥಗಳನ್ನು ಬೇಯಿಸಲು, ಕಟ್ಟಿಗೆ, ಹಾಗೂ ಕಟ್ಟಿಗೆ ಕಡಿಯಲು ಅಗತ್ಯ ಪರಿಕರಗಳನ್ನು, ನೀರು, ಆಹಾರ ಇತ್ಯಾದಿಗಳನ್ನು ಗಾಡಿಯಲ್ಲಿ ಇಟ್ಟು ಎತ್ತುಗಳಿಗೂ ವಿಶೇಷ ಜೂಲ (ಎತ್ತಿನ ಮೈಮೇಲೆ ಹೊದಿಸುವ ಅಲಂಕೃತ ಬಟ್ಟೆ) ಹೊದಿಸಿ, ಅವುಗಳ ಕೊರಳಿಗೆ ಗೆಜ್ಜೆ, ಕೊಂಬಿಗೆ ಕಳಸ ಹಾಕಿ, ಸಿಂಗರಿಸಿದ ಗಾಡಿಗೆ **ಕೊಲ್ಲಾರಿ** ಎಂಬ ಹೆಸರಿನಲ್ಲಿ ಕರೆಯುತ್ತಾರೆ. ಈ ಕೊಲ್ಲಾರಿ ಬಂಡಿಗಳ ಮುಂಭಾಗದಲ್ಲೂ ಕಳಸಗಳನ್ನು ಹಾಕಿಸಿರುತ್ತಾರೆ. ಅಲ್ಲದೆ ಬಂಡಿಯ ಗಾಲಿಯ ಕಡೆಗೀಲುಗಳಿಗೂ ಲೋಹದ ಬಿಲ್ಲೆಗಳಿಂದ ನಾದ ಬರುವಂತೆ ಮಾಡಿರುತ್ತಾರೆ. ಗಾಡಿಯ ಲಯಕ್ಕೆ ತಕ್ಕಂತೆ ಈ ಕೀಲುಗಳೂ ನಾದ ಮಾಡುವುದರಿಂದ ಯಾತ್ರೆಯು ಸಂಗೀತಮಯವಾಗಿರುತ್ತದೆ. ಈ ಕೊಲ್ಲಾರಿ ಬಂಡಿಗಳು ಸಂಭ್ರಮದ ಸಂಕೇತಗಳಾಗಿ, ಅಕ್ಕಪಕ್ಕದವರ ನೋವು–ನಲಿವುಗಳನ್ನು ಹಂಚಿಕೊಳ್ಳಲು ವೇದಿಕೆಯಾಗಿವೆ. ಅವುಗಳ ಸಿಂಗಾರ ಅವರವರ ಮನೆತನದ ಸಿರಿತನಕ್ಕೆ ಸಾಕ್ಷಿಯಾಗಿ ಜನಪದರಲ್ಲಿ ಸ್ಥಾನ ಪಡೆದಿವೆ. ಮನೆದೇವರ ಉತ್ಸವ ಮುಗಿದ ಮೇಲೆ ಮನೆಗೆ ಅಗತ್ಯ ವಸ್ತುಗಳೂ ಜಾತ್ರೆಯಲ್ಲಿ ದೊರೆಯುತ್ತಿದ್ದವು. ತಮ್ಮ ವಸ್ತುಗಳನ್ನು ಕಾಳು, ಬೇಳೆಗಳನ್ನು ಮಾರಲು ಮತ್ತು ಹೊಸ ಪರಿಕರಗಳನ್ನು, ಮುಂದೆ ತಾವು ಏನು ಬೆಳೆ ಹಾಕಬೇಕು,ಅವುಗಳಿಗೆ ಸಂಬಂಧಿಸಿದ ಬೀಜಗಳನ್ನು ಕೊಳ್ಳಲು ಜಾತ್ರೆಗಳು ವೇದಿಕೆಗಳಾಗಿದ್ದವು.ವಿವಿಧ ಧಾನ್ಯಗಳ ಬೀಜಗಳ ಸಂಗ್ರಹವೂ ರೈತರ ಬದುಕಿನಲ್ಲಿ ಮಹತ್ವದ ಅಂಶವಾಗಿದೆ.

ಇನ್ನೊಂದು ಅರ್ಥದಲ್ಲಿ ಮನೆಯ ಮದುವೆಗಳಿಗೆ, ಮನೆಗೆ, ಬೇಕಾದ ಪ್ರತಿಯೊಂದು ವಸ್ತುಗಳೂ ಈ ಜಾತ್ರೆಯಲ್ಲಿ ಸಿಗುತ್ತಿದ್ದವು. ಪುಗ್ಗ, ಪೀಪಿ, ಆಟದಸಾಮಾನು, ಬೆಂಡು–ಬೆತ್ತಾಸುಗಳು, ಮಂಡಕ್ಕಿ, ಖಾರ, ಬಣ್ಣದ ಪಾನಕಗಳು ಮಕ್ಕಳನ್ನು ಆಕರ್ಷಿಸಿದರೆ, ಹಿರಿಯರಿಗೆ ಮಡಿಕೆ, ಕುಡಿಕೆಗಳು, ಕಬ್ಬಿಣದ ಕೃಷಿ ಪರಿಕರಗಳು, ಕಾಳು–ಬೇಳೆಗಳು, ಸಾಂಬಾರ ಪದಾರ್ಥಗಳು, ಬಟ್ಟೆ, ಬಣ್ಣ, ಸುಣ್ಣ, ಹಗ್ಗ, ಎಲ್ಲ ವಸ್ತುಗಳನ್ನು ಕೊಳ್ಳಲು ಹಾಗೂ ಮಾರಲು ಜಾತ್ರೆಯೇ ವೇದಿಕೆ. ಜಾತ್ರೆಯ ಎಲ್ಲಾ ಅಂಗಡಿ ಸಾಮಾನುಗಳನ್ನು, ಜನರನ್ನು ಜಾತ್ರೆಗೆ ಹಾಗೂ ಜಾತ್ರೆ ಮುಗಿದ ಮೇಲೆ ಮನೆಗೆ ತಲುಪಿಸಲು ಎತ್ತುಗಳು ಪ್ರಮುಖ ಪಾತ್ರ ವಹಿಸುತ್ತಿದ್ದವು. ಕಾಲ ಬದಲಾದಂತೆ ಜಾತ್ರೆಯ ಪರಿಭಾಷೆಗಳು ಬದಲಾಗಿವೆ. ಹೊಸ ಹೊಸ ವಾಹನಗಳು ಮಾನವನಿಗೆ

ಲಭ್ಯವಾದಂತೆ, ಕೊಲ್ಲಾರಿ ಪ್ರಾಮುಖ್ಯತೆ ಕಳೆದುಕೊಳ್ಳುವುದಷ್ಟೇ ಅಲ್ಲ, ಮಾನವ ಮಾತುಗಳನ್ನೂ ಕಳೆದುಕೊಂಡಿದ್ದಾನೆ. ಅಕ್ಕಪಕ್ಕದವರನ್ನೂ ತಮ್ಮ ಮನೆಯ ಜಾತ್ರೆಗೆ ಕರೆದುಕೊಂಡು ಹೋಗುತ್ತಿದ್ದದ್ದರಿಂದ ಪರಸ್ಪರ ಬಾಂಧವ್ಯದ ವೃದ್ಧಿಗೂ ಕಾರಣವಾಗಿತ್ತು. ಎಂಬುದನ್ನು ಜಾತ್ರೆಗಳ ಹಿನ್ನೆಲೆಯಲ್ಲಿ ಗಮನಿಸುವುದು ಸೂಕ್ತ.

**೨. ಅಂಟಿಗೆ ಪಂಟಿಗೆ**

ಕರ್ನಾಟಕ ರಾಜ್ಯದ ಮಲೆನಾಡು ಭಾಗದಲ್ಲಿ ರೂಢಿಯಲ್ಲಿರುವ ಜನಪದ ಸಂಪ್ರದಾಯ. ನರಕಚತುರ್ದಶಿಯಂದು ಹಬ್ಬದ ಆರಂಭ. ಹಬ್ಬದ ಎರಡನೆಯ ದಿನ ಬಲಿಪಾಡ್ಯಮಿ. ಮನೆಮಂದಿಯೆಲ್ಲಾ ಎಣ್ಣೆ ಹಚ್ಚಿ, ಅಭ್ಯಂಜನ ಮಾಡಿ, ಹಸು ಕರುಗಳ ಮೈ ತೊಳೆದು, ಜೇಡಿ, ಕೆಮ್ಮಣ್ಣು, ಉಗನೆಸರ, ಗೋಮಾಲೆ, ಚಂಡುಹೂವಿನ ಸರಗಳ ಅಲಂಕಾರ, ದೀಪಾವಳಿಯ ಗೋಪೂಜೆಯಲ್ಲಿ ಉಗನೆ ಎಂಬ ಬಳ್ಳಿಯಲ್ಲಿ ಬಿಡುವ ಹಳದಿ ಕಾಯಿಗಳನ್ನು ಅಲಂಕಾರಕ್ಕಾಗಿ ಸರಮಾಡಿ ಹಾಕುತ್ತಾರೆ. ವೀಳೆದೆಲೆಯಲ್ಲಿ, ಬಾಳೆಹಣ್ಣು, ಸಿಂಗಾರ, ಪಚ್ಚೆತೆನೆ, ಉತ್ತರಾಣಿ ಗಿಡಗಳನ್ನು ಹಾರಮಾಡಿ ಅದರೊಂದಿಗೆ ಸಣ್ಣ ಸಣ್ಣ ರೊಟ್ಟಿಗಳನ್ನು ತೂತು ಮಾಡಿ ಪೋಣಿಸಿ ಗೋವುಗಳ ಕೊರಳಿಗೆ ಕಟ್ಟುತ್ತಾರೆ. ಇದಕ್ಕೆ ಗೋಮಾಲೆ ಎಂದು ಕರೆಯುತ್ತಾರೆ. ಗೋಪೂಜೆ, ಕಾಲುಪೂಜೆ, ಸಂಭ್ರಮದಿಂದ ನಡೆಯುತ್ತದೆ. ಊರ ಜಾನುವಾರುಗಳನ್ನೆಲ್ಲ ಗುಂಪುಗೂಡಿಸಿ, ಚೆನ್ನಾಗಿ ಅಲಂಕರಿಸಿ ಮೆರವಣಿಗೆ ನಡೆಸುವುದೂ ಇದೆ. ಸಾಯಂಕಾಲ ಕೊಟ್ಟಿಗೆಗೆ ಹಿಂದಿರುಗಿದ ಗೋವುಗಳಿಗೆ ದೃಷ್ಟಿ ಪರಿಹಾರಕ್ಕಾಗಿ ಓಕಳಿ, ಹಾಲು ತುಪ್ಪ ಪ್ರೋಕ್ಷಣೆ ನಡೆಯುತ್ತದೆ. ಹೆಣ್ಣು ಮಕ್ಕಳು ಆರತಿ ಬೆಳಗಿ ಜಾನುವಾರುಗಳನ್ನು ಮನೆದುಂಬಿಸಿಕೊಳ್ಳುತ್ತಾರೆ. ಸಂಜೆ ದೀಪವನ್ನು ಹಿಡಿದು ಬೆಳಕನ್ನು ಮನೆ ಮನೆಗೊಯ್ದು, ಅವರ ಮನೆಯ ದೀಪವನ್ನು ಬೆಳಗಿಸಿ ಅವರಿಗೆ ಶುಭವಾಗಲಿ ಎಂದು ಹರಸುತ್ತಾರೆ. ಆ ವೇಳೆಯಲ್ಲಿ ಹಾಡುವ ಹಾಡುಗಳನ್ನು ಅಂಟಿಗೆ ಪಂಟಿಗೆ ಪದಗಳೆಂದೇ ಕರೆಯುವರು.

**ಮಣ್ಣಲ್ಲಿ ಹುಟ್ಟೋಳೆ ಮಣ್ಣಲ್ಲಿ ಬೆಳೆಯೋಳೆ**
**ಮಣ್ಣಲ್ಲಿ ಕಣ್ಣಾ ಬಿಡುವೋಳೆ ಜಗಜ್ಯೋತಿ**
**ಸತ್ಯದಿಂದುರಿಯೇ ನಮಗಾಗಿ॥**

ಎನ್ನುತ್ತಾ ಮನೆ ಮನೆಗೆ ಬಂದು

**ಮುಳ್ಳಾಗೆ ಕಲ್ಲಾಗೆ ಬಂದೆವಯ್ಯ। ತಂದೇವಿ ದೀಪಾನ ಕೊಳ್ಳಿರಯ್ಯ**
**ಕತ್ತಾಲ ಹಾದ್ಯಾಗೆ ಬಂದೇವಯ್ಯ । ತಂದೇವಿ ದೀಪಾನ ಕೊಳ್ಳಿರಯ್ಯ**
**ಗುಡ್ಡ ಬೆಟ್ಟ ಹತ್ತಿ ಬಂದೇವಯ್ಯ । ತಂದೇವಿ ದೀಪಾನ ಕೊಳ್ಳಿರಯ್ಯ**

ಎಂದು ಹಾಡುವರು. ಮನೆಯವರು ಬಂದು ಅವರನ್ನು ಇದಿರುಗೊಂಡು ತಮ್ಮ ಮನೆಯ ದೀಪವನ್ನು ಬೆಳಗಿಸಿಕೊಳ್ಳುವರು. ಈ ಪೀಠಿಕಾ ಭಾಗದ ಹಾಡುಗಳು ಮುಗಿದ ಮೇಲೆ ಗೋವುಗಳಿಗೆ ಸಂಬಂಧಿಸಿದ ಮತ್ತು ಬೇರೆ ಬೇರೆ ಮತಸ್ಥರ ಮನೆಗೆ ಹೋದಾಗ ಅವರವರ ವಿಚಾರ, ಸಂಪ್ರದಾಯಗಳ ಕುರಿತಾದ ಹಾಡುಗಳನ್ನು ಹಾಡುತ್ತಾರೆ. ಸ್ವಲ್ಪ ಕಾಲ ಅಲ್ಲಿ ನೀತಿ,ಪುರಾಣ, ಕಥೆ,ಆಚರಣೆಗಳ ಕುರಿತು ರಾಗವಾಗಿ ಹಾಡಿ ಅವರು ಕೊಟ್ಟ ತಿಂಡಿ, ಧಾನ್ಯ, ಕಾಣಿಕೆಗಳನ್ನು ಪಡೆದು ಹೊರಡುತ್ತಾರೆ. ಹೀಗೆ ಮನೆ ಮನೆಯಿಂದ ಸಂಗ್ರಹವಾದ ಧನ–ಧಾನ್ಯಗಳನ್ನೆಲ್ಲ ಸೇರಿಸಿ ಊರಿನ ಸಮಸ್ಥರನ್ನೂ ಆಹ್ವಾನಿಸಿ ಹಾಡುಗಳನ್ನು ಮತ್ತೊಮ್ಮೆ ಹೇಳಿ ಸಾಮೋಹಿಕ ಬೋಜನವನ್ನು ನಡೆಸುತ್ತಾರೆ. ಈ ಸಮಾರಂಭವನ್ನು ಅಂಟಿಗೆ–ಪಂಟಿಗೆ "ಔತ್ಲ" ಎಂದು ಕರೆಯುತ್ತಾರೆ. ಹಣವೇನಾದರೂ ಉಳಿದರೆ ಮುಂದಿನ ವರ್ಷದ ಔತ್ಲಕ್ಕೆ ಬಳಸುತ್ತಾರೆ.[೧೧]

**೩. ಕಂಬಳ**

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಪ್ರಮುಖ ಜನಪದ ವಿನೋದಗಳಲ್ಲಿ ಒಂದಾದ ಕೋಣಗಳ ಓಟದ ಸ್ಪರ್ಧೆ. ಎರಡು ಕೋಣಗಳನ್ನು ನಿಗದಿಪಡಿಸಿದ ಕೆಸರು ಗದ್ದೆಯಲ್ಲಿ ಓಡಿಸಿ ಸಂತೋಷಪಡುತ್ತಾರೆ. ಸುಮಾರು ೪.೫೭ ಮೀಟರ್ ಅಗಲಕ್ಕೆ ಕೆರೆ ಕಡಿದು ಸಿದ್ಧಪಡಿಸಿದ ಕೆಸರುಗದ್ದೆಯಲ್ಲಿ ಕೋಣಗಳನ್ನು ಸಿಂಗರಿಸಿ ವಾದ್ಯಘೋಷ, ಕುಣಿತ, ಹಾಡು, ಸಿಡಿಮದ್ದು ಸಿಡಿಸುತ್ತಾ ಸಂಭ್ರಮದಿಂದ ಕಂಬಳದ ಗದ್ದೆ ಬಳಿ ತರುತ್ತಾರೆ. ಕೋಣಗಳಿಗೆ ಕಟ್ಟಿದ ಹಗುರ ಹಲಗೆ (ಗೋರು ಹಲಗೆ) ಮೇಲೆ ನಿಂತು ಓಡುತ್ತಾ ಸೊಕ್ಕಿದ ಕೋಣಗಳನ್ನು ನಿಯಂತ್ರಿಸಲು ಪ್ರಯತ್ನಿಸುತ್ತಾ ಗುರಿಯ ಕಡೆಗೆ ಸಾಗುತ್ತಾರೆ. ಕಂಬಳದ ಕೊನೆಯ ತುದಿಗೆ ಮುಚೊಟ್ಟಿ ಎನ್ನುತ್ತಾರೆ.

ಕಂಬಳದ ಕೆರೆಯಲ್ಲಿ ಒಂದೋ–ಎರಡೋ ಸುಮಾರು ೭ ಮೀಟರ್ ಎತ್ತರದಲ್ಲಿ ಅಡ್ಡವಾಗಿ ಕಟ್ಟುವ ನಿಷಾನೆ ಬಟ್ಟೆ ಅಥವಾ ಹಲಗೆಗೆ ನಿಷಾನೆಗೆ ಕೆಸರು ಸಿಡಿಯುವಂತೆ ಕೋಣಗಳನ್ನು ಓಡಿಸಲಾಗುತ್ತದೆ. ಎಷ್ಟು ಎತ್ತರಕ್ಕೆ ಕೆಸರು ಚಿಮ್ಮಿ ಒದ್ದೆಯಾಯಿತು ಎಂಬುದರ ಮೇಲೆ ಪ್ರಥಮ–ದ್ವಿತೀಯ ಬಹುಮಾನ ನಿರ್ಧಾರವಾಗುತ್ತದೆ. ಗೆಲ್ಲುವ ಕೋಣದ ಮೇಲೆ ಬಾಜಿ ಕಟ್ಟುವ ಪರಿಪಾಟ ಇತ್ತೀಚೆಗೆ ಬೆಳೆದಿದೆ. ಅಲ್ಲದೆ ಈ ಕಂಬಳಕ್ಕಾಗಿಯೇ ವಿಶೇಷವಾಗಿ ಕೋಣಗಳನ್ನು ಮೇಯಿಸುತ್ತಾರೆ. ಕೆಲವು ಗ್ರಾಮಗಳಲ್ಲಿ ಕಂಬಳದ ಕೋಣವನ್ನು ಸಾಕುವುದು ಆ ಮನೆತನದ ಪ್ರತಿಷ್ಠೆಯ ಸಂಕೇತವಾಗಿದೆ.[೧೨]

**೪. ಕಾರಹುಣ್ಣಿಮೆ**

ಗ್ರಾಮೀಣ ಪ್ರದೇಶಗಳಲ್ಲಿ ಆಚರಿಸುವ ಹುಣ್ಣಿಮೆಗಳಲ್ಲಿ ಕಾರ ಹುಣ್ಣಿಮೆಗೆ ಮುಖ್ಯ ಸ್ಥಾನವಿದೆ. ಮಳೆಗಾಲ ಆರಂಭದ ಮೊದಲ ಹುಣ್ಣಿಮೆಯನ್ನು ಕಾರಹುಣ್ಣಿಮೆ ಎನ್ನುವರು. ಮಳೆಗಾಲ

ಆರಂಭವಾದರೆ ಪುನಃ ದೀಪಾವಳಿಯವರೆಗೆ ರೈತರ ಕೃಷಿ ಚಟುವಟಿಕೆಗಳಿಗೆ ಬಿಡುವಿರುವುದಿಲ್ಲ. ಹಾಗಾಗಿ ಮನೆ ಸಿಂಗರಿಸಿ, ಕೃಷಿಪರಿಕರಗಳನ್ನು ಗಮನಿಸಿ ಅವುಗಳ ದುರಸ್ತಿ ಮಾಡಿ, ವ್ಯವಸಾಯಕ್ಕೆ ಯೋಗ್ಯ ಸ್ಥಿತಿಯಲ್ಲಿ ಪೂಜೆಗೆ ಇಡುತ್ತಾರೆ. ಇದಕ್ಕೆ **"ಎತ್ತಿನ ಹುಣ್ಣಿಮೆ"** ಎಂದೂ ಕರೆಯುವರು. ಬಯಲು ನಾಡಿನಲ್ಲಿ ಈ ಹಬ್ಬ ಪ್ರಾಮುಖ್ಯತೆ ಪಡೆದಷ್ಟು ಮಲೆನಾಡು ಪ್ರದೇಶಗಳಲ್ಲಿ ಈ ಹಬ್ಬ ಅಷ್ಟೊಂದು ಪ್ರಭಾವಶಾಲಿಯಾಗಿ ಕಂಡುಬರುವುದಿಲ್ಲ. ಇದಕ್ಕೆ ಭೌಗೋಳಿಕ ವ್ಯತ್ಯಾಸಗಳು ಕಾರಣವಾಗಿವೆ. ಕೃಷಿಕರಲ್ಲದವರೂ ಮಣ್ಣಿನ ಎತ್ತುಗಳನ್ನು ಮಾಡಿ, ಪೂಜಿಸಿ ನೈವೇದ್ಯ ನೀಡುತ್ತಾರೆ.

ಈ ಹಬ್ಬವನ್ನು ವಟಸಾವಿತ್ರಿ ವ್ರತ ಎಂದೂ ಸಹ ಕರೆಯುವರು. ಕೆಲವರು ದೇವಿಯ ಸಾನಿಧ್ಯವೆಂದು, ಆಲದ ಮರವನ್ನು ಪೂಜಿಸುವರು. ಕೆಲವರು ದೇವಿಯ ಪಠವನ್ನಿರಿಸಿ(ಪೋಟೋ) ಪೂಜಿಸಿ ದೇವಿಯ ಕಥೆ ಹೇಳಿಸುವರು. ಈ ಹಬ್ಬ ಆಷಾಢ ಮಾಸದ ಪ್ರತಿ ಮಂಗಳವಾರ ನಡೆಯಲಿದ್ದು ಹಳ್ಳಿಗರ ಮನೆಯಲ್ಲೂ ಸಾರ್ವಜನಿಕವಾಗಿ ಗುಳ್ಳವ್ವನ ಪೂಜೆ, ಮಣ್ಣಿನ ಪೂಜೆ, ಅವರ ನೆಲದಮ್ಮನ ಪೂಜೆಯು ನಡೆಯುತ್ತದೆ.

ಕಾರ ಹುಣ್ಣಿಮೆಯ ಕಾರ್ಯ ಕಲಾಪಗಳು ಎರಡು ದಿನ ನಡೆಯುವುವು. ಜೇಷ್ಠ ಶುದ್ಧ ಚತುರ್ದಶಿ ಕಾರಹಬ್ಬದ ಪೂರ್ವಾಂಗ ದಿನವಾಗಿರುವುದು. ಉತ್ತರಾಂಗ ದಿನ ಹುಣ್ಣಿಮೆ. ಈ ಚತುರ್ದಶಿಗೆ **ಹೊನ್ನ ಹುಗ್ಗೆ ಅಥವಾ ಹೊನ್ನುಗ್ಗಿ**ಎಂದೂ ಸಹ ಕರೆಯುವರು. ಕೆಲವು ಕಡೆ ಹೊನ್ನುಕ್ಕೆ ಎಂಬ ಹೆಸರೂ ಇದೆ. ಹೊನ್ನುಗ್ಗೆಯ ದಿನ ಹಳ್ಳಿಗರೆಲ್ಲರೂ ತಮ್ಮ ತಮ್ಮ ಮನೆಯ ಎತ್ತು, ಹೋರಿಗಳನ್ನು ಮೈ ತೊಳೆದು ಮೀಯಿಸುವರು. ಕೊಂಬುಗಳಿಗೆ ಚೆಂದವಾದ ಬಣ್ಣವನ್ನು ಕೊಂಬಿನ ಕಳಸವನ್ನು ಹಾಕುವರು. ಮೈಮೇಲೆ ಅಂದವಾಗಿ ಕಾಣಲು ಕುಂಟೆಯ ಬಳೆಗಳಿಂದ ಬೇರೆ ಬೇರೆ ಬಣ್ಣಗಳ ಮುದ್ರೆಗಳನ್ನು ಒತ್ತುವರು.ತುದಿ ಕೊಂಬುಗಳಿಗೆ ಮಿರುಗುವ ಕೊಂಬಣಸುಗಳನ್ನು ತೊಡಿಸುವರು. ಕೊರಳಿಗೆ ಹುರಿಗೆಜ್ಜೆ, ಕಿರುಗಂಟೆ, ಸರಗಳನ್ನು ಹಾಕುವರು. ಹಣೆಗೆ ಕನ್ನಡಿ ಇರುವ ಹಣೆಪಟ್ಟಿಗಳನ್ನು ಕಟ್ಟುವರು. ಕೊಟ್ಟಿಗೆಯನ್ನು ಗುಡಿಸಿ, ಸಾರಿಸಿ, ಹಸನುಗೊಳಿಸಿದ ಕೊಟ್ಟಿಗೆಯಲ್ಲಿ ಎತ್ತುಗಳನ್ನು ಕಟ್ಟುವರು. ಅಂದಿನ ಮುನ್ನಿರುಳಲ್ಲಿ ಎಲ್ಲಾ ಎತ್ತು, ಹೋರಿಗಳನ್ನು ಪೂಜಿಸಲಾಗುವುದು. ಮುತ್ತೈದೆಯರು ಎತ್ತು ಹೋರಿಗಳಿಗೆ ಕಲಶದಾರತಿ ಎತ್ತುವರು. ನೈವೇದ್ಯಕ್ಕೆ ಜೋಳ ಕುಟ್ಟಿ, ಜೋಳದಕ್ಕಿಯಿಂದ ತಯಾರಿಸಿದ ಹುಗ್ಗಿಯನ್ನು(ಕಿಚಡಿ) ಅಂಬಲಿಯನ್ನು ಎತ್ತುಗಳಿಗೆ ತಿನ್ನಿಸುವರು. ಎತ್ತುಗಳ ಊಟವಾದ ಮೇಲೆಯೇ ಮನೆಯವರ ಊಟ ನಡೆಯುವುದು. ಈ ದಿನದ ಹುಗ್ಗಿಯೇ ಹೊನ್ನುಗ್ಗಿ ಎಂದು ಹೆಸರು ಪಡೆದಿದೆ. ವೈಚಾರಿವಾಗಿ ನೋಡಿದಾಗ ರೈತರು ಮಳೆಗಾಲ ಆರಂಭಕ್ಕೆ ಮುನ್ನ ಕೃಷಿ ಪರಿಕರಗಳನ್ನು ಸರಿಪಡಿಸಿಕೊಳ್ಳುವುದು ಕೃಷಿ ಕಾರ್ಯಕ್ಕೆ

ಅನುಕೋಲವಾದರೆ ಹವಾಮಾನ ಬದಲಾವಣೆಯಿಂದ ಮನೆಯಲ್ಲಿ ಆಗಿರುವ ಕ್ರಿಮಿ, ಕೀಟಗಳೆಲ್ಲ (ತಗಣಿ, ಸೀರು, ಗೆದ್ದಲು, ಇತ್ಯಾದಿ) ವಾಸವಾಗಿರುವ ಮಂಚ, ದಿಂಬು, ಗೃಹಬಳಕೆಯ ವಸ್ತುಗಳನ್ನು ಬಿಸಿಲಿನಲ್ಲಿ ಒಣಗಿಸುವ, ಹಾಗೂ ತೊಳೆಯುವ ಮೂಲಕ ಅವುಗಳನ್ನು ನಾಶಪಡಿಸುವ ಉದ್ದೇಶವೂ ಈ ಕ್ರಿಯೆಯಲ್ಲಿ ಅಡಕವಾಗಿದೆ. ಇಡೀ ಮನೆಯನ್ನು ಗೋಮೂತ್ರ ಚುಮುಕಿಸಿ, ಸಗಣಿಯಿಂದ ನೆಲವನ್ನು ಸಾರಿಸಿ ಶುದ್ಧಗೊಳಿಸುವುದು ಮಳೆಗಾಲದಲ್ಲಿ ಮನೆಯ ಸದಸ್ಯರಿಗೆ ಅನಾರೋಗ್ಯ ಬೀಳುವುದನ್ನು ತಪ್ಪಿಸುತ್ತದೆ.ಇದರಿಂದ ರೈತರು ಆರೋಗ್ಯಕರವಾಗಿ ಕೃಷಿ ಚಟುವಟಿಕೆಯಲ್ಲಿ ತೊಡಗಲು ಸಾಧ್ಯವಾಗುತ್ತದೆ.ಇದರಿಂದ ಬಿಡುವಿರದ ರೈತ ಸಂಪ್ರದಾಯದಿಂದ ಆಚರಿಸುವ ಕಾರಹುಣ್ಣಿಮೆ, ರೈತರಿಗೆ ಉತ್ಸಾಹ ಹಾಗೂ ಕೃಷಿ ಚಟುವಟಿಕೆಗಳಿಗೆ ನಿಗದಿತ ಆರಂಭವನ್ನು ಒದಗಿಸುತ್ತದೆ.[೧೩]

**೫. ಹೊನ್ನಾರು(ಹೊನ್ನಿನ ಆರು)**

ಮೈಸೂರು, ಹಾಸನ, ಹಾಗೂ ಕೊಡಗಿನ ಗಡಿ ಭಾಗಗಳಲ್ಲಿ ಈ ಆಚರಣೆಯು ಕಂಡುಬರುತ್ತದೆ. ಇದು ಕೃಷಿ ಚಟುವಟಿಕೆಗಳನ್ನು ಆರಂಭಿಸುವ ಮೊದಲ ದಿನ. ಯುಗಾದಿ ಹಬ್ಬದಂದು ರೈತರು ಸಂಭ್ರಮ ಸಡಗರದಿಂದ **"ಹೊನ್ನಾರು"**ಉಳುಮೆ ಆರಂಭಿಸಿ **"ಹೊನ್ನಿನ ಬೆಳೆನೀಡು"**ಎಂದು ಭೂದೇವಿಯನ್ನು ಪ್ರಾರ್ಥಿಸಿಕೊಳ್ಳುತ್ತಾರೆ. ಇದು ಸಮೂಹಿಕವಾಗಿ ಆಚರಿಸುವ ಆಚರಣೆ. ಹೊನ್ನಾರು ವೈಶಿಷ್ಟ್ಯ ಪೂರ್ಣವಾದ ಆಚರಣೆಯಾಗಿದ್ದು ಹೊಸ ವರ್ಷದ ಆರಂಭದಂದೇ ನಡೆಯುತ್ತದೆ. ಗ್ರಾಮಸ್ಥರೆಲ್ಲಾ ಒಂದೆಡೆ ಸೇರಿ ಆ ವರ್ಷ "ಹೊನ್ನಾರು" ಯಾವ ರೈತನ ಹೆಸರಿನಲ್ಲಿ ಬರುತ್ತದೆ ಎಂದು ಪಂಚಾಂಗದಿಂದ ನಿರ್ಧರಿಸುತ್ತಾರೆ. ಅಂದು ರೈತರು ತಮ್ಮ ಹಸು, ಕರು ಎತ್ತುಗಳನ್ನು ತೊಳೆದು ಸಿಂಗರಿಸಿ, ಕೃಷಿ ಉಪಕರಣಗಳನ್ನು ಒಪ್ಪವಾಗಿ ಜೋಡಿಸಿ ಪೂಜಿಸಿ, ಹೋಳಿಗೆ ಹಾಗೂ ವಿಶೇಷ ಭಕ್ಷ್ಯಗಳನ್ನು ತಯಾರಿಸಿ ಎಡೆಮಾಡುತ್ತಾರೆ. ಮನೆಯ ಮುಂದೆ ಎತ್ತು ಹಾಗೂ ಜಾನುವಾರುಗಳನ್ನು ಸಿಂಗರಿಸಿದ ರೈತರು ಗ್ರಾಮದ ಬಸವೇಶ್ವರ ದೇವಸ್ಥಾನದ ಬಳಿ ಸೇರುತ್ತಾರೆ. ದೇವಸ್ಥಾನಕ್ಕೆ ಸೇರಿದ ಜಮೀನಿನಲ್ಲಿ "ಹೊನ್ನಾರು" ಉಳುಮೆಗೆ ಚಾಲನೆ ನೀಡುತ್ತಾರೆ. ನಂತರ ಅಲ್ಲಿಂದ ರೈತರು ತಮ್ಮ ತಮ್ಮ ಹೊಲಗಳಿಗೆ ಹೋಗಿ ಸಾಂಕೇತಿಕವಾಗಿ ನೇಗಿಲನ್ನು ಹೂಡಿ "ಹೊನ್ನಾರು" ಉಳುಮೆ ಆರಂಭಿಸುತ್ತಾರೆ.ಇಲ್ಲಿ ಪಂಚಾಂಗದ ಮೂಲಕ ನಿಗಧಿಯಾದ ದಿನದಂದೇ ಇಡೀ ಊರು ದೈವಾನುಗ್ರಹ ಪಡೆದು, ಕೃಷಿ ಚಟುವಟಿಕೆ ಆರಂಭಿಸುತ್ತಾರೆ. ನಾಲ್ಕೈದು ಗುಣಿಯನ್ನಾದರೂ ಬಿತ್ತಿಬರುತ್ತಾರೆ. ಇದರಿಂದ ಆ ಬೆಳೆಗೆ ರೋಗ-ಕ್ರಿಮಿ, ಕೀಟಗಳ ಬಾಧೆ ಕಡಿಮೆ ಆಗಿ ಬೆಳೆ ಚೆನ್ನಾಗಿ ಬರುತ್ತದೆ. ಎಂಬ ನಂಬಿಕೆ ಇದೆ.[೧೪]

**೬. ದನಗಳ ಗುಡಿ ಸುತ್ತುವ ಸೇವೆ**

ಗದಗ ಜಿಲ್ಲೆಯ ನರಗುಂದ ತಾಲ್ಲೂಕಿನ ಕಲ್ಲಾಪುರದ ಬಸವನಗುಡಿ ಬಳಿ ನಡೆಯುತ್ತದೆ. ಅಲ್ಲಿಯ ಗುಡಿಯನ್ನು ಎತ್ತುಗಳನ್ನು ಸುತ್ತಿಸಿ ತಮ್ಮ ದನಗಳ ತೊಂದರೆಗೆ ಪರಿಹಾರ ಹುಡುಕುತ್ತಾರೆ. ಅದರಲ್ಲೂ ಕೊಟ್ಟಿಗೆಯಲ್ಲಿರುವ ದನಗಳು ಬಯಲಿಗೆ ಬಂದಾಗ, ಹಲವಾರು ಜನ ಜಾನುವಾರುಗಳ ಬಗ್ಗೆ ತಿಳಿದ ಅನುಭವಸ್ಥರು ಅವುಗಳನ್ನು ನೋಡುವುದರಿಂದ ಅವುಗಳ ದೈಹಿಕ ಊನಗಳು,ಅಥವಾ ಬರಲಿರುವ ಕಾಯಿಲೆಯ ಲಕ್ಷಣಗಳನ್ನು ಗುರುತಿಸಿ, ಪರಿಹಾರ ಕಂಡುಕೊಳ್ಳಲು ನೆರವಾಗುತ್ತದೆ. ಪಶುಗಳ ಎಲ್ಲಾ ಬಗೆಯ ಕಾಯಿಲೆಗಳಿಗೂ ಇಲ್ಲಿ ಔಷಧಿ ಹಾಕುತ್ತಾರೆ. ಪ್ರತಿ ಅಮವಾಸ್ಯೆಯಂದು ಇಲ್ಲಿ ವಿಶೇಷ ಪೂಜೆ ದಾಸೋಹ ನಡೆಯುತ್ತದೆ. ಇವೆಲ್ಲ ಸಹಜ ಕೃಷಿಯ ಕುರುಹು. ವೈಜ್ಞಾನಿಕ ಕೃಷಿ ಹೆಸರಿನಲ್ಲಿ ಸರ್ಕಾರ ರೈತರನ್ನು ದಾರಿ ತಪ್ಪಿಸಿದ ಈ ಹೊತ್ತಿನಲ್ಲಿ ದನ, ಗಾಣ, ಮೇಟಿ, ಕಣ, ಇತ್ಯಾದಿಗಳನ್ನು ನೆನಪಿಗೆ ತರುವ ಆಚರಣೆಗಳು ರೈತರು ಜಾನುವಾರುಗಳ ಬಗೆಗಿನ ಕಾಳಜಿಯನ್ನು ಜೀವನಮುಖಿ ಆಗಿಸಿವೆ.[೧೫]

**೭. ದೊಡ್ಡ ಹಬ್ಬ**

ಉತ್ತರ ಕನ್ನಡ ಜಿಲ್ಲೆಯ ದೀಪಾವಳಿ ಹಬ್ಬವನ್ನು ದೊಡ್ಡ ಹಬ್ಬ ಎಂಬ ಹೆಸರಿನಿಂದ ಕರೆಯುತ್ತಾರೆ. ಮನೆ ಮುಂದೆ ದೀಪಗಳನ್ನು ಉರಿಸಿ, ಹಬ್ಬದ ಮೂರು ದಿನ ಮೊದಲೇ ಗೋವುಗಳ ಸಿಂಗಾರಕ್ಕೆ ಬಾಸಿಂಗ ತಯಾರಿಸುತ್ತಾರೆ. ಹಬ್ಬದ ದಿನ ಗೋವುಗಳನ್ನು ತೊಳೆದು, ಗೆಜ್ಜೆ, ಗಂಟೆ, ಡಾಬು, ಶೃಂಗರಿಸಿ, ಅಡಿಕೆ ಹೂ, ಗೋಟಡಿಕೆ, ಪಚ್ಚೆತೆನೆ, ಹೂವು ಹಣ್ಣುಗಳು, ವಿಳ್ಯಾದೆಲೆ, ಕೊಂಬಿಗೆ ಬಣ್ಣ, ತಲೆಗೆ ಬಾಸಿಂಗ, ಬೆಳ್ಳಿ, ಚಿನ್ನದ ಆಭರಣಗಳು, ನೋಟುಗಳನ್ನು ಕಟ್ಟಿ, ಆರತಿ ಬೆಳಗಿ, ನೈವೇಧ್ಯ ನೀಡುತ್ತಾರೆ. ಸಂಜೆ ಊಟದ ನಂತರ ಊರಿನ ಬಯಲಿಗೆ ತಂದು ಅನೇಕ ಆಟಗಳನ್ನಾಡಿ, ಭೂತದ ಪೂಜೆ ಮಾಡಿ, ಜಾಗಟೆ ಬಾರಿಸಿ ದನಗಳನ್ನು ಅಟ್ಟಿಸಿ ಓಡಿಸುತ್ತಾರೆ. ಕೊರಳಿಗೆ ಕಟ್ಟಿದ ವಸ್ತುಗಳಲ್ಲಿ ಯಾವ ವಸ್ತುವನ್ನು ಕಟ್ಟಿದ ಮಾಲೆಯಲ್ಲಿ ಉಳಿಸಿಕೊಂಡು ಎತ್ತು ಮನೆಗೆ ತರುತ್ತದೆಯೋ ಎಂದು ಕಾದು ನೋಡುತ್ತಾರೆ. ಆ ಕಟ್ಟಿದ ವಸ್ತು ಯಾವುದು ಮನೆಗೆ ಬರುತ್ತದೋ ಅದರ ಮೇಲೆ ಆ ವರ್ಷದ ಶುಭ-ಅಶುಭಗಳನ್ನು ಅಂದಾಜಿಸುತ್ತಾರೆ.[೧೬]

**೮. ಬಂಡಿ ಹರಕೆ**

ಚಾಮರಾಜ ಜಿಲ್ಲೆಯಲ್ಲಿ ಕಂಡುಬರುವಂತಹ ಒಂದು ವಿಶಿಷ್ಟವಾದ ಆಚರಣೆ. ಆದಿ ದೈವಗಳಾದ ದೇವಮ್ಮ, ಮಾದೇಶ್ವರ ಮತ್ತು ಬಸವಣ್ಣ ದೈವಗಳ ಮುಂದೆ ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಬಂಡಿ ಹರಕೆ ಒಪ್ಪಿಸುವ ಪದ್ಧತಿ ಚಲಾವಣೆಯಲ್ಲಿದೆ. ಹರಕೆ ಹೊತ್ತವರ ಇಷ್ಟಾರ್ಥಗಳು

ಈಡೇರಿದಾಗ ಹರಕೆ ಒಪ್ಪಿಸುವುದಾಗಿ ಬೇಡಿಕೊಂಡ ಪದಾರ್ಥಗಳನ್ನು ಬಂಡಿಯಲ್ಲಿ ತುಂಬಿಕೊಂಡು ಒಪ್ಪಿಸುವ ಒಂದು ವಿಶಿಷ್ಟವಾದ ಆಚರಣೆ. ಇದನ್ನು ನೆರವೇರಿಸುವುದು ವ್ಯಚ್ಛದಾಯಕ ಆಗಿರುವುದರಿಂದ, ದೇವಸ್ಥಾನದಲ್ಲೇ ಸಿಂಗರಿಸಿದ ಒಂದು ಬಂಡಿಗೆ ತಮ್ಮ ಎತ್ತುಗಳನ್ನು ಕಟ್ಟಿಯೂ ಈ ಹರಕೆ ತೀರಿಸುತ್ತಾರೆ. ಬಂಡಿಯನ್ನು ಅಲಂಕರಿಸುವುದು ಪ್ರತಿಷ್ಠೆಯ ವಿಷಯವಾಗುತ್ತದೆ. ಹಾಗೂ ಬಂಡಿಯ ಅಲಂಕಾರದ ಕುಶಲತೆ ಜನರ ಉದ್ಗಾರಕ್ಕೆ ಕಾರಣವಾಗುತ್ತದೆ.[೧೭]

**೯. ಬುಲ್**

ಈ ಆಚರಣೆಯು ಕೊಪ್ಪಳ ಜಿಲ್ಲೆಯ **"ಹಿರೇಬನ್ನಿಗೋಳ"** ಊರಿನಲ್ಲಿ ನಡೆಯುವ ವಿಚಿತ್ರ ಹಾಗೂ ದ್ವಂಧ್ವ ಮತ್ತು ಭಯಾನಕ ಆಚರಣೆ. ಈ ಆಚರಣೆಯು ಯುಗಾದಿಯ ಅಮವಾಸ್ಯೆ ದಿನ ನಡೆಯುವ ಪಶು ಸಂಬಂಧಿ ಆಚರಣೆ. ಊರಿನ ಅಗಸೆ ಬಾಗಿಲಿನಲ್ಲಿ ಜೀವಂತ ಹಂದಿಯೊಂದನ್ನು ಕುತ್ತಿಗೆಯವರೆಗೆ ನೆಲದಲ್ಲಿ ಹುಗಿಯುತ್ತಾರೆ. ಆನಂತರ ಸಮೀಪದಲ್ಲಿ ಬೆಂಕಿ ಹಾಕಿ ಕುಂಟೆಯ(ಕೃಷಿ ಉಪಕರಣ) ಬಳೆಯೊಂದನ್ನು ಆ ಬೆಂಕಿಯಲ್ಲಿ ಚೆನ್ನಾಗಿ ಕಾಯಿಸಿ ಆ ಬಳೆಯನ್ನು ಮೊದಲು ಹಂದಿಯ ತಲೆಯ ಮೇಲಿಟ್ಟು, ಅದೇ ಬಳೆಯಿಂದ ಪಕ್ಕ ನಿಂತ ಎತ್ತುಗಳ ಬೆನ್ನಿನ ಮೇಲೆ ಬರೆ ಹಾಕುತ್ತಾರೆ. ಇದನ್ನೇ ಬುಲ್ ಕೊಡುವುದು (ಗುಲ್ಲು ಕೊಡುವುದು) ಎನ್ನುತ್ತಾರೆ. ಎಲ್ಲಾ ಎತ್ತುಗಳಿಗೆ ಬುಲ್ ಕೊಟ್ಟ ನಂತರ ಹಂದಿಯನ್ನು ಪೂರ್ಣ ಸಮಾಧಿ ಮಾಡಿ ಮೂರು ದಿನ ಕಾಯುತ್ತಾರೆ. ಆ ಸ್ಥಳ ಊರಿನವರಿಗೆ ಲಕ್ಷ್ಮೀಯ ಆವಾಸ ಸ್ಥಾನ ಎನಿಸುತ್ತದೆ. ಈ ಪದ್ಧತಿಯು ಕ್ರೂರ ಅನ್ನಿಸಿದರೂ ತಲ ತಲಂತರದಿಂದ ನಡೆದುಕೊಂಡು ಬಂದ ಆಚರಣೆ.ಕೃಷಿಗೆ ತೊಂದರೆ ಕೊಡುವ ಪ್ರಾಣಿಗಳಲ್ಲಿ ಹಂದಿಯೂ ಒಂದು. ಆದ್ದರಿಂದ ಅವುಗಳ ಸಂತತಿಗೆ ಇದು ಎಚ್ಚರಿಕೆ ಎನ್ನುವಂತೆ ಈ ಆಚರಣೆಯ ಪೂರ್ವಾಪರಗಳನ್ನು ಊಹಿಸಬಹುದು.[೧೮]

**೧೦. ಶಕ್ಕುದಾರ**

ಮಲೆನಾಡಿನಲ್ಲಿ ಕಂಡುಬರುವ ಒಂದು ವಿಶಿಷ್ಟ ಆಚರಣೆ. ಇದೂ ಕೂಡ ಕೃಷಿ ಚಟುವಟಿಕೆಗಳನ್ನು ಆರಂಭಿಸುವ ಮೊದಲ ದಿನದ ಆಚರಣೆ. ಶಕುನ ನೋಡಿ ನೇಗಿಲು ಕಟ್ಟುವುದಕ್ಕೆ ಶಕ್ಕುದಾರ ಎಂದು ಕರೆಯುತ್ತಾರೆ. ಯುಗಾದಿ ಹಬ್ಬದ ನಂತರದ ಗುರುವಾರ ಅಥವಾ ಭಾನುವಾರಗಳಂದು ಗ್ರಾಮದೇವತೆಗೆ ಹಣ್ಣುಕಾಯಿ ಕೊಟ್ಟು, ಪುರೋಹಿತರು ಸೂಚಿಸಿದ ಸಮಯಕ್ಕೆ ಸರಿಯಾಗಿ ಎತ್ತುಗಳನ್ನು ಮೂಡು ಮುಖವಾಗಿ ನಿಲ್ಲಿಸಿ ನೇಗಿಲನ್ನು ಕಟ್ಟುತ್ತಾರೆ. ಎತ್ತುಗಳ ಕಾಲು ತೊಳೆದು ಅರಿಷಿಣ, ಕುಂಕುಮ, ಹೂಗಳಿಂದ ಶೃಂಗರಿಸಿ ಹಾಲು ಎರೆದು, ಕಾಯಿ ಒಡೆದು ಆರತಿ ಬೆಳಗುತ್ತಾರೆ. ಈ ಸಮಯದಲ್ಲಿ ನೇಗಿಲು ಹಾಗೂ ಎತ್ತುಗಳು

ಹೋರುವ ನೊಗವನ್ನು ವಿಶೇಷವಾಗಿ ಪೂಜಿಸುತ್ತಾರೆ. ಪೂಜೆಯನ್ನು ಪೂರ್ಣಗೊಳಿಸಿದ ನಂತರ ನೇಗಿಲು ಹಿಡಿದ ವ್ಯಕ್ತಿ ತಲೆಗೆ ಟವೆಲ್ ಸುತ್ತಿಕೊಂಡು ಗದ್ದೆಯನ್ನು ಮೂರು ಸುತ್ತು ಊಳುತ್ತಾನೆ. ಶಕ್ಕುದಾರ ಆಚರಣೆಯ ನಂತರ ಯಾವಾಗ ಬೇಕಾದರೂ ವ್ಯವಸಾಯ ಆರಂಭಿಸಬಹುದು.

### ೧೧. ಸಂಕ್ರಾಂತಿ

ಇದು ಕೃಷಿ ಸಂಬಂಧಿ ಸಮೃದ್ಧಿಯ ಹಬ್ಬ. ದೇಶಾದ್ಯಂತ ಆಚರಣೆಗೊಳ್ಳುವ ದೊಡ್ಡ ಹಬ್ಬ. ಪ್ರತಿವರ್ಷ ಮಾರ್ಗಶಿರ ಪುಷ್ಯ ಮಾಸದ ಚತುರ್ಥಿಯ ದಿನ ಈ ಹಬ್ಬವನ್ನು ಆಚರಿಸುತ್ತಾರೆ. ಸೂರ್ಯದೇವನು ಮಕರ ರಾಶಿಗೆ ಪ್ರವೇಶಮಾಡುವ ಈ ದಿನವನ್ನು ಉತ್ತರಾಯಣ ಪುಣ್ಯಕಾಲ ಎಂದು ಕರೆಯುತ್ತಾರೆ. ಹಬ್ಬವನ್ನು ವೈಯಕ್ತಿಕ ಹಾಗೂ ಊರೊಟ್ಟಿನ ಹಬ್ಬವಾಗಿಯೂ ಆಚರಿಸುವ ಪದ್ಧತಿ ಇದೆ. ಇಡೀ ಊರಿಗೆ ಊರೇ ಆಚರಿಸುವ ಈ ಹಬ್ಬದಲ್ಲಿ ಜಾತಿ ಮತ ಕುಲಗೋತ್ರಗಳ ಬೇಧ ಇಲ್ಲದೇ ಎಲ್ಲರೂ ಭಾಗವಹಿಸಿ, ಸಮೂಹದ ಕ್ಷೇಮ-ಹಿತಗಳಿಗಾಗಿ ಬೇಡಿಕೊಳ್ಳುತ್ತಾರೆ. ಉತ್ತರಾಯಣ ಕಾಲದಲ್ಲಿ ಸ್ವರ್ಗದ ಬಾಗಿಲು ತೆರೆದಿರುತ್ತದೆ ಎಂಬ ನಂಬಿಕೆ ಇದೆ.

ಚಳಿ ಸಂಕ್ರಾಂತಿಯ ವೇಳೆಗೆ ಕಡಿಮೆ ಆಗುತ್ತದೆ. ರೈತರ ಮೊಗದಲ್ಲಿ ಸಂತಸ. ಏಕೆಂದರೆ ಚಿಂತೆಗಳು ದೂರವಾಗಿ ಎಲ್ಲರ ಮನೆಯಲ್ಲೂ ಎಷ್ಟೆಷ್ಟು ಹೊಸ ಬೆಳೆ ತುಂಬಿ ತುಳುಕಾಡುತ್ತವೆ ಎಂಬುದು ಗದ್ದೆಯಲ್ಲಿ ಬೆಳೆದ ಫಸಲು ಸೂಚಿಸುತ್ತದೆ. ಈ ವೇಳೆಗೆ ಕೃಷಿ ಚಟುವಟಿಕೆಗಳಿಗೆ ಸ್ವಲ್ಪ ಬಿಡುವು ದೊರೆಯುವುದರಿಂದ ಮನೆ, ಮದುವೆ, ಗಂಡು-ಹೆಣ್ಣು ಹುಡುಕಾಟ ಇತ್ಯಾದಿ ಕಾರ್ಯದಲ್ಲಿ ತೊಡಗುತ್ತಾರೆ.

ಸಂಕ್ರಾಂತಿಯಲ್ಲಿ ದನಕರುಗಳಿಗೆ ಕಿಚ್ಚು ಹಾಯಿಸುವ ಆಚರಣೆ ಬಹಳ ವಿಶೇಷವಾದದ್ದು. ರೈತರ ಜೀವನದ ಉಸಿರಾದ ದನಕರುಗಳ ಹಬ್ಬ ಸಂಕ್ರಾಂತಿ. ಈ ದಿನಗಳಲ್ಲಿ ಸೂರ್ಯ ಸಂಕ್ರಾಂತಿಯಿಂದ ಶಿವರಾತ್ರಿಯವರೆಗೆ ಹುಲ್ಲೆ ಕರುವಿನ ಮೇಲೆಯೂ, ಶಿವರಾತ್ರಿಯಿಂದ ಗೌರಿ ಹಬ್ಬದವರೆಗೆ ಬಸವನ ಮೇಲೆಯೂ, ಪ್ರಯಾಣ ಮಾಡುತ್ತಾನೆಂದು ನಂಬುತ್ತಾರೆ. ಸಂಕ್ರಾಂತಿಯ ಒಂದು ತಿಂಗಳ ಮೊದಲು ಧನುರ್ಮಾಸ ಆರಂಭ ಆಗುವುದರಿಂದ ಊರಿನ ದೇವಾಲಯಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತವೆ. ಒಂದು ತಿಂಗಳ ಕಾಲ ತಮಟೆ ವಾದ್ಯಗಳ ಸಹಿತ ವಿಶೇಷ ಪೂಜೆ ಮಾಡಿ, ನೈವೇದ್ಯ ಅರ್ಪಿಸುವುದನ್ನು **"ತಳಿಗೆ ಸೇವೆ"** ಎಂದು ಕರೆಯುತ್ತಾರೆ. ಇದನ್ನು ದಕ್ಷಿಣ ಕರ್ನಾಟಕದ ಭಾಗಗಳಲ್ಲಿ ವಿಶೇಷವಾಗಿ ಕಾಣಬಹುದು.

ಸಂಕ್ರಾಂತಿಗೆ ಊರಿಗೇ ಊರೇ ಸಿಂಗಾರಗೊಂಡಿರುತ್ತದೆ. ಮನೆ, ದೇವಾಲಯಗಳಿಗೆ, ಕೊಟ್ಟಿಗೆಗಳನ್ನು ಶುಚಿಗೊಳಿಸುವ, ಸುಣ್ಣ-ಬಣ್ಣ ಬಳಿಯುವ ಕಾರ್ಯವನ್ನು ಪೂರೈಸಿ ಹಬ್ಬಕ್ಕೆ

ಅಣಿಯಾಗುತ್ತಾರೆ. ವ್ಯವಸಾಯ ಸಂಬಂಧಿ ವಸ್ತುಗಳಾದ ಕುಂಟೆ, ಕೊರಡು, ನೇಗಿಲು, ನೊಗ ಇತ್ಯಾದಿಗಳನ್ನು ತೊಳೆದು ಮನೆಯ ಮತ್ತು ಹಟ್ಟಿಯ ಬಾಗಿಲನ್ನು ತಳಿರು ತೋರಣಗಳಿಂದ ಸಿಂಗರಿಸುತ್ತಾರೆ. ದನಕರು ಎತ್ತುಗಳನ್ನು ಸ್ನಾನ ಮಾಡಿಸಿ ಕೋಡುಗಳಿಗೆ ಗೋಪಿಚಂದನ ಬಳಿದು, ಬಣ್ಣದ ಹಾಳೆಯನ್ನು ಅಂಟಿಸಿ, ಮೈಗೆ ಜೂಲವನ್ನು ಹೊದಿಸಿ, ಕೊರಳಿಗೆ ಗಂಟೆ, ಹೂಮಾಲೆ ಹಾಕಿ ಅಲಂಕರಿಸುತ್ತಾರೆ. ಹೀಗೆ ಸರ್ವಾಲಂಕಾರ ಮಾಡಿದ ರಾಸುಗಳನ್ನು ತಮ್ಮ ಗದ್ದೆಯ ನಿಗದಿತ ಸ್ಥಳಕ್ಕೆ ಕರೆದುಕೊಂಡು ಹೋಗಿ, ಅಲ್ಲಿಯೇ ಒಲೆ ಹೂಡಿ, ಕಿಚಡಿ ತಯಾರಿಸುತ್ತಾರೆ. ಗದ್ದೆಯಲ್ಲಿರುವ ಹುತ್ತ ಅಥವಾ ನಾಗದೇವತೆಯ ಪೂಜೆ ನೆರವೇರಿಸಿದ ನಂತರ ರಾಸುಗಳ ಪೂಜೆ ನಡೆಯುತ್ತದೆ. ದನಗಳ ಮೈಮೇಲಿನ ನಾಲ್ಕಾರು ಉಣ್ಣಿಗಳನ್ನು ಕಿಚಡಿಗೆ ಸೇರಿಸಿ ರಾಸುಗಳ ಮೇಲೆ ಎರಚುತ್ತಾರೆ. ಕೆಲವು ಕಡೆ ಉಣ್ಣಿ ಬೆರೆಸಿದ ರೊಟ್ಟಿಯನ್ನು ತಯಾರಿಸಿ ನೈವೇದ್ಯ ಮಾಡುತ್ತಾರೆ. ಉಣ್ಣೆ ರೊಟ್ಟಿಯನ್ನು ಪಂಜು ಹಿಡಿದ ಹುಡುಗರು ತಮ್ಮ ಊರಿನಗಡಿಗೆ ತೆಗೆದುಕೊಂಡು ಹೋಗಿ ಪಂಜಿನೊಂದಿಗೆ ಉಣ್ಣೆ ರೊಟ್ಟಿಯನ್ನು ಸುಟ್ಟು "ನೆರೆ ಊರಿನ ಗೌಡನ ಮಗ ಸತ್ತೋದ" ಎನ್ನುತ್ತಾ ಊರಕಡೆ ಓಡಿ ಬರುತ್ತಾರೆ. ರಾಸುಗಳು ತಿಂದು ಬಿಟ್ಟ ಎಂಜಲನ್ನು ಪ್ರಸಾದವಾಗಿ ಸ್ವೀಕರಿಸುತ್ತಾರೆ. ಅಂದು ತೀರ್ಥವಾಗಿ ಗಂಜಳವನ್ನು ಸ್ವೀಕರಿಸುತ್ತಾರೆ.

**ತುಪ್ಪವನ್ನುಂಡು ಪಟ್ಟಸಾಲೆಯ ಸುತ್ತಿ**
**ಹೂವಿನ ಹಣ್ಣಿಯಗ್ಗ ಬಲಗೈಲಿ ತಕ್ಕೊಂಡು**
**ಹೋರಿ ಮೈ ತೊಳೆಯೋರು ಹೊರಟಾರು**

ಎಂಬ ಗೀತೆಗಳು, ದನಕರುಗಳನ್ನು ತೊಳೆದುಕೊಂಡು ಬರಲು ಹೊರಟ ರೈತರ ಹಬ್ಬದ ಸಂಭ್ರಮವನ್ನು ವರ್ಣಿಸುತ್ತದೆ. ಕಿಚ್ಚು ಹಾಯ್ದು ಬಂದ ದನಗಳಿಗೆ ಪೂಜಿಸಿ ಓಕಳಿ ತೆಗೆಯುವ ಸಂದರ್ಭದಲ್ಲಿಯೂ

**'ಸುವ್ವಿರೋ ಸಂಗಯ್ಯ ಸುವ್ವಿರೋ ಲಿಂಗಯ್ಯ**
**ಸುವ್ವೆಂದು ಬಾರೋ ಬಸವಯ್ಯ ನೀನು**
**ಸುವ್ವೆಂದು ಬಾರೋ ಬಸವಯ್ಯ**

ಎಂದು ಹಾಡುತ್ತಾ ಕೊಟ್ಟಿಗೆಯ ಒಳಗೆ ಕರೆದುಕೊಳ್ಳುತ್ತಾರೆ.

ಕಿಚ್ಚು ಹಾಯಿಸಲು ಸಿಂಗಾರಗೊಂಡ ಊರಿನ ರಾಸುಗಳನ್ನು ಸಿಂಗರಿಸಿ ಊರಿಗೆ ಎದುರಾಗಿ ನಿಲ್ಲಿಸಲಾಗುತ್ತದೆ. ಬಸವನ ಮುಂದೆ ದಾರಿಗೆ ಅಡ್ಡಲಾಗಿ ಮೂರು ಸಾಲುಗಳಲ್ಲಿ ಕಬ್ಬಿನ ತರಗು ಅಥವಾ ಹುಲ್ಲು ರಾಶಿ ಹಾಕಿ ಬೆಂಕಿ ಹಚ್ಚುತ್ತಾರೆ. ಉರಿಯುತ್ತಿರುವ ಬೆಂಕಿಯಲ್ಲಿ ವಾದ್ಯಗಳೊಂದಿಗೆ ತಮ್ಮ ರಾಸುಗಳನ್ನು ದಾಟಿಸುತ್ತಾರೆ. ಕಿಚ್ಚು ಹಾಯ್ದ ರಾಸುಗಳು ಊರ ಮುಂದಿನ ದೇವಾಲಯದ

ಬಳಿ ಬಂದು ಸೇರುತ್ತವೆ. ಊರ ದೇವರನ್ನು ಪೂಜಿಸಿ ರಾಸುಗಳಿಗೆ ತೀರ್ಥವನ್ನು ಚುಮುಕಿಸಲಾಗುತ್ತದೆ. ಇದರಿಂದ ದನಗಳಿಗೆ ಯಾವುದಾದರೂ ಭೂತ-ಪ್ರೇತಗಳ ದೃಷ್ಟಿ ತಾಗಿದ್ದರೆ, ಮುಟ್ಟೆಟ್ಟು ಆಗಿದ್ದರೆ, ತೀರ್ಥ ಚುಮುಕಿಸುವುದರಿಂದ ಪರಿಹಾರ ಆಗುತ್ತದೆ. ಎಂಬ ನಂಬಿಕೆ ಇದೆ. ಅಲ್ಲಿಂದ ತಮ್ಮ ತಮ್ಮ ರಾಸುಗಳನ್ನು ತಮ್ಮ ಮನೆಗೆ ಕರೆತಂದು ಕೊಟ್ಟಿಗೆಯ ಬಾಗಿಲಲ್ಲಿ ಹೆಂಗಸರು ಗೋವುಗಳಿಗೆ ಪಾದ ಪೂಜೆ ನೆರವೇರಿಸುತ್ತಾರೆ. ಕೆಲವು ಪ್ರದೇಶಗಳಲ್ಲಿ ಒನಕೆಯನ್ನು ಬಾಗಿಲಲ್ಲಿ ಅಡ್ಡ ಇಟ್ಟು ಅದನ್ನು ದಾಟಿಸುವ ಪದ್ಧತಿಯೂ ಇದೆ.

ಊರಿನ ಹೆಣ್ಣು ಮಕ್ಕಳು ಸಂಕ್ರಾಂತಿಯಂದು ಶನಿಯನ್ನು ದೂರ ಮಾಡಿಕೊಳ್ಳಲು ಹಾಗೂ ಸಮೃದ್ಧಿ ಹೆಚ್ಚಲಿ ಎಂದು ಎಳ್ಳು ಬೆಲ್ಲ ಹಂಚುವ ಸಂಪ್ರದಾಯಗಳೂ ಇವೆ. ಸಂಕ್ರಾಂತಿ ಹಬ್ಬದ ಆಚರಣೆಯಲ್ಲಿ ಪ್ರದೇಶಗಳಿಂದ ಪ್ರದೇಶಗಳಿಗೆ ಅನೇಕ ವ್ಯತ್ಯಾಸಗಳನ್ನು ಕಾಣಬಹುದು. ಒಟ್ಟಾರೆ ಸಂಕ್ರಾಂತಿ ಹಬ್ಬದಲ್ಲಿ ಸೂರ್ಯಾರಾಧನೆ, ರಾಸುಗಳ ಆರಾಧನೆ, ಕೃಷಿ ಉಪಕರಣಗಳು, ಗೃಹೋಪಯೋಗಿ ವಸ್ತುಗಳು ಹಾಗೂ ಬೆಳೆಗಳ ಆರಾಧನೆಯಾಗಿದ್ದು, ರೈತರ ಪಾಲಿನ ದೊಡ್ಡ ಹಬ್ಬವಾಗಿದೆ.[೧೯]

**೧೨. ಹಂದರಗೋಳು**

ಮದುವೆಯ ಸಂಭ್ರಮದ ಒಂದು ವಿಶೇಷ ಆಚರಣೆ. ಇದು ಉತ್ತರ ಕರ್ನಾಟಕ ಭಾಗಗಳಲ್ಲಿ ಆಚರಣೆಯಲ್ಲಿದೆ. ಮದುವೆಯ ಮನೆಯ ಲಕ್ಷಣ, ಮದುವೆ ಚಟುವಟಿಕೆಗಳು ಆರಂಭ ಹಾಗೂ ವೇಗ ಪಡೆಯುವುದು ಹಂದರ ಹಾಕುವ ಪ್ರಕ್ರಿಯೆಯಿಂದಲೇ. ಹೊತ್ತು ಹುಟ್ಟುವ ವೇಳೆಗೆ ಮದುವೆ ಮನೆಯಿಂದ ಆರು ಜನ ಯುವಕರು ಸಿಂಗರಿಸಿದ ಹೋರಿ, ಬಂಡಿಯೊಂದಿಗೆ ಹಂದರ ಸೊಪ್ಪು ತರಲು ಸರ್ವರೂ ಪೂಜಿತಗೊಂಡು, ಪೂಜಾ ಸಾಮಗ್ರಿಗಳೊಂದಿಗೆ ಹಂದರ ಸೊಪ್ಪು ಸಿಗುವ ಕಾಡಿಗೆ ಹೋಗಿ ಸೂರ್ಯೋದಯದ ವೇಳೆಗೆ ತಲುಪಿ, ಕುಡುಗೊಲುಗಳಿಗೆ ಪೂಜೆ ಸಲ್ಲಿಸಿ ಹಂದರ ಸೊಪ್ಪು ತರುತ್ತಾರೆ. ಈ ಸಂಭ್ರಮದಲ್ಲಿ ಊರ ದೇವರ ಹೆಸರಿಗೆ ಒಂದೊಂದು ಕಟ್ಟು ಸೊಪ್ಪನ್ನು ಮೀಸಲಾಗಿಟ್ಟು ಪೂಜಿಸಿ ಕಾಡಿನಿಂದ ಅಗಸೀಬಾಗಿಲು ದಾಟುತ್ತಿದ್ದಂತೆ ಆ ಮೀಸಲು ಕಟ್ಟುಗಳನ್ನು ಆಯಾ ದೇವರ ಗುಡಿಗೆ ಹೋಗಿ ಅರ್ಪಿಸಿ ಆನಂತರ ಗಾಡಿ ಮದುವೆ ಮನೆ ತಲುಪಿ ಹಂದರ ಕಾರ್ಯ ಆರಂಭ ಆಗುತ್ತದೆ. ಆ ಗುಡಿಯಲ್ಲಿ ಮೀಸಲಿದ್ದ ಹಂದರ ಸೊಪ್ಪನ್ನು ಮುತ್ತೈದೆಯರು, ಐದು ಜನ ಮಾವಂದಿರು, ಊರಲ್ಲಿ ಮೆರವಣಿಗೆಯೊಂದಿಗೆ ಆ ಸೊಪ್ಪಿನ ಪೆಂಡಿಗಳನ್ನು ತಂದು ಒಟ್ಟಿಗೇ ಹಂದರದ ಮೇಲೆ ಎಸೆಯುತ್ತಾರೆ. ಕಳಸ ಹಿಡಿದ ಮುತ್ತೈದೆಯರು ಮದುವೆ ಮನೆ ಸೇರುತ್ತಾರೆ. ಹೀಗೆ ಹಂದರಗೋಳು ಮುಖ್ಯ ಆಕರ್ಷಕ ಆಚರಣೆಯಾಗಿ ನಡೆಯುತ್ತದೆ.[೨೦]

## ೧೩. ಹಟ್ಟಿ ಹಬ್ಬ/ಹೋರಿಹಬ್ಬ

ಶಿವಮೊಗ್ಗ, ಹಾವೇರಿ ಜಿಲ್ಲೆಗಳಲ್ಲಿ ಅತೀ ಹೆಚ್ಚು ಈ ಹಬ್ಬವನ್ನು ಆಚರಿಸಲಾಗುತ್ತದೆ. ದೀಪಾವಳಿ ಹಬ್ಬದ ಬೂರೇದ ಅಮವಾಸ್ಯೆ ಈ ಹಬ್ಬದ ಆರಂಭ. ಅಂದು ಕೊಟ್ಟಿಗೆಯನ್ನು ಶುಚಿಗೊಳಿಸಿ ರಾಸುಗಳನ್ನು ತೊಳೆದು, ಹಟ್ಟಿಗೆ ಸುಣ್ಣ ಹಾಗೂ ಉರಿಮಂಜು ಅಥವಾ ಕೆಮ್ಮಣ್ಣಿನಿಂದ ಕೊಟ್ಟಿಗೆ, ಪಳತ, ಎತ್ತಿನಗಾಡಿ, ಮನೆಬಾಗಿಲಿಗೆ ಚಿತ್ರ ಬಿಡಿಸುತ್ತಾರೆ. ಲಕ್ಷ್ಮೀ ದೇವಿಯ ಸ್ವರೂಪವೆಂದು ಅಂದು ತಿಪ್ಪೆಯ ಪೂಜೆಯನ್ನು ನೆರವೇರಿಸಲಾಗುತ್ತದೆ. ಕೊಟ್ಟಿಗೆಯಲ್ಲಿ ಮಳೆಗಾಲದಲ್ಲಿ ಕೆಲಸವಿಲ್ಲದೇ ನಿಂತು ಜಡ್ಡುಗಟ್ಟಿದ ಹೋರಿಗಳಿಗೆ ಬೂರೇದ ಅಮವಾಸ್ಯೆಯ ದಿನ ನೇಗಿಲ ಕುಳ ಕಾಸಿ ಗುಲ್ಲು (ಬರೆ)ಕೊಡುತ್ತಾರೆ. ಈ ಬರೆಯಿಂದ ಹೋರಿಗಳು ಬೆದರಿ ನಿಲ್ಲುತ್ತವೆ. ಅಂದು ಎತ್ತಿನ ಕೋಡಿಗೆ ಬಣ್ಣ ಹಚ್ಚಿ ಪೂಜಾ ಕಾರ್ಯಗಳು ಮುಗಿದ ನಂತರ ಹಸುಗಳನ್ನು ಮನೆ ತುಂಬಿಸಿ ಬಸವನ ಪಾದವನ್ನು ಬರೆದು ಆ ಹಸುಗಳಿಗೆ ಹೊಸಬಟ್ಟೆ ಏರಿಸಿ ಲಕ್ಷೀ ಸ್ವರೂಪವೆಂದು ಪೂಜಿಸುತ್ತಾರೆ. ಎಲ್ಲಾ ಪೂಜಾ ಕಾರ್ಯದ ನಂತರ ಹೋರಿಗಳಿಗೆ ಚಂದದ ರೇಷ್ಮೆಯ ಜೂಲವನ್ನು ಹೊದಿಸಿ ಎತ್ತಿನ ಕಾಲಿಗೆ ಗೆಜ್ಜೆ, ಬಣ್ಣ ಬಣ್ಣದ ಬಟ್ಟೆಗಳನ್ನು ಹೊದಿಸಿ, ಕೋಡಿಗೆ ಬಣ್ಣ ಬಣ್ಣದ ಬಲೂನುಗಳನ್ನು ಕಟ್ಟುತ್ತಾರೆ. ಎತ್ತುಗಳ ಕೊರಳಿಗೆ ಹಗ್ಗದಲ್ಲಿ ಪೋಣಿಸಿ ಸಿದ್ಧಪಡಿಸಿದ ಕೊಬ್ಬರಿ ಸರವನ್ನು ಹೆಚ್ಚಾಗಿ ಕಟ್ಟಿ ನಿಗದಿಯಾದ ಅಗಶೀಯಲ್ಲಿ ಅಗಶೀ ಬಾಗಿಲು ದಾಟಿಸುವ ಶಾಸ್ತ್ರವನ್ನು ಮಾಡಲಾಗುತ್ತದೆ. ಈ ದಿನ ಹೋರಿಗಳನ್ನು ಬೆದರಿಸುವುದು ಸಂತೋಷಕ್ಕಾಗಿ. ಇಲ್ಲಿ ಬಹುಮಾನಕ್ಕಿಂತ ಊರ ಅಗಶಿಯಲ್ಲಿ ತಮ್ಮೂರಿನ ಹೋರಿಗಳ ಪ್ರದರ್ಶನ ಎನ್ನಬಹುದು. ಕೆಲವೇ ಕೆಲವು ಊರುಗಳಲ್ಲಿ ಹಬ್ಬದ ದಿನವೇ ಬಹುಮಾನದ ಹಟ್ಟಿ ಹಬ್ಬ ಇಡುತ್ತಾರೆ. ಈ ಹಬ್ಬದಲ್ಲಿ ಎಲ್ಲಾ ಹಸುಗಳಿಗೂ ಹೊಸ ಮೂಗುದಾರ, ಕಣ್ಣಿಗಳನ್ನು ಹಾಕುತ್ತಾರೆ. ಹಳೆಯ ಹಗ್ಗವನ್ನು ಬದಲಿಸುತ್ತಾರೆ.

ಆದರೆ ಅನೇಕ ಹಳ್ಳಿಗಳಲ್ಲಿ ದೀಪಾವಳಿ ಹಬ್ಬದ ನಂತರ ಈ ಹಬ್ಬ ಹೊಸ ರಂಗು ಪಡೆಯುತ್ತದೆ. ಬಂಗಾರದ ಬಳೆ, ಬೆಳ್ಳಿ ಬಳೆ, ಚಿನ್ನದ ಉಂಗುರ, ಗಾದ್ರೇಜುಗಳು, ಕಲರ್ ಟಿವಿಗಳು, ಇತ್ತೀಚೆಗೆ ಫ್ರಿಜ್, ಹೀರೋಹೊಂಡ, ಬುಲೆಟ್, ಬೈಕುಗಳನ್ನು ಬಹುಮಾನವಾಗಿ ಇಡುತ್ತಾರೆ. ಈ ಹಬ್ಬದಲ್ಲಿ ಚೆನ್ನಾಗಿ ಮೇಯಿಸಿದ, ಸಿಂಗರಿಸಿ, ಕೊರಳಿಗೆ ಕೊಬ್ಬರಿ ಸರಗಳನ್ನು ಕಟ್ಟಿ,ತಲೆಗೆ ಪುಗ್ಗದ(ಬಲೂನುಗಳ)ಅಲಂಕಾರ ಮಾಡಿ, ಅಗಶಿಬಾಗಿಲಲ್ಲಿ ನಿಗದಿತ ಸ್ಥಳದಿಂದ ಈ ಹಬ್ಬದ ಹೋರಿಗಳ ಸೆರವಿ(ಹಗ್ಗ)ಕಳಚುತ್ತಾರೆ. ಆ ಹೋರಿಗಳು ಸಾಗಿ ಬರುವ ದಾರಿಯಲ್ಲಿ ನಿಗದಿತ ಸ್ಥಳದಲ್ಲಿ ಆ ಹೋರಿಗಳನ್ನು ಹಿಡಿದು ಕೊಬ್ಬರಿ ಹರಿಯಲು ಸಹಸ್ರ ಸಂಖ್ಯೆಯಲ್ಲಿ ಯುವಕರು ಜಮಾಯಿಸಿರುತ್ತಾರೆ. ಓಡಿ ಬರುವ ಹೋರಿಗಳಿಂದ ಆಗುವ ಅಪಾಯವನ್ನೂ ಲೆಕ್ಕಿಸದೇ ಆ ಹೋರಿಗಳನ್ನು ನಿಲ್ಲಿಸಿ ಕೊಬ್ಬರಿ ಸರಗಳನ್ನು ಹರಿದುಕೊಳ್ಳುತ್ತಾರೆ. ಹೀಗೆ ಹೆಚ್ಚಿನ

ಹೋರಿಗಳನ್ನು ಹಿಡಿದವರಿಗೂ ವಿಶೇಷ ಬಹುಮಾನಗಳನ್ನು ನೀಡುತ್ತಾರೆ. ಈ ಹಬ್ಬದಲ್ಲಿ ಅನೇಕರು ಹೋರಿ ಹಿಡಿಯಲು ಹೋಗಿ ಪ್ರಾಣವನ್ನೂ ಕಳೆದುಕೊಳ್ಳುವುದೂ ಉಂಟು. ಆದರೂ ರೈತರು ಸಾವಿಗೂ ಹೆದರದೇ ಅಖಾಡದಲ್ಲಿ ನಿಂತು ಹೆಸರಾದ ಹೋರಿಗಳನ್ನೇ, ಅತ್ಯಂತ ಅಪಾಯಕಾರಿ ಹೋರಿಗಳನ್ನೇ ಹಿಡಿದು ನಿಲ್ಲಿಸಲು ಬಯಸುತ್ತಾರೆ. ಇದು ಯುವಕರ ಸಾಹಸ ಪ್ರದರ್ಶನಕ್ಕೂ ವೇದಿಕೆ ಆಗುತ್ತದೆ.ಹಬ್ಬದಂದು ಹಬ್ಬನೋಡಲು ಹೋದ ಹಾಗೂ ಹೋರಿ ಹಿಡಿಯಲು ಹೋದ ಯಾರಿಗೇ ಅಪಾಯವಾದರೂ ತಕರಾರು ಮಾಡುವಂತಿಲ್ಲ. ಅಲ್ಲದೆ ಅಂದು ಜನ ತಮ್ಮ ಕಣ್ಣೆದುರಲ್ಲೇ ಹೋರಿಗಳ ತಿವಿತದಿಂದ ರಕ್ತ ಸುರಿದರೂ ಸಾವು ಸಂಭವಿಸಿದರೂ ಜನರು ಅಳುವ ಬದಲು ನಗುನಗುತ್ತಲೇ ಅದನ್ನು ಆನಂದಿಸುತ್ತಾರೆ. ಮನುಷ್ಯನ ಜೀವನ ಕ್ಷಣಿಕ ಎಂಬ ಸಂದೇಶವನ್ನು ಈ ಹಬ್ಬ ಸಂಭ್ರಮದೊಂದಿಗೇ ಸಾರುತ್ತದೆ.

ಈ ಹಬ್ಬಕ್ಕಾಗಿಯೇ ವಿಶೇಷ ಬೆದರುವ ಹೋರಿಗಳನ್ನು ಹಟ್ಟಿಯಿಂದ ಅಥವಾ ಬಲ್ಲವರಿಂದ ಕೊಂಡು ಕೊಂಡು ವರ್ಷಗಟ್ಟಲೆ ಮೇಸುತ್ತಾರೆ. ಆ ಹೋರಿಗಳು ಅವರ ಮನೆಯ ಗೌರವದ ಪ್ರತೀಕ. ಮಕ್ಕಳಿಗಿಂತ ಹೆಚ್ಚಾಗಿ ಅವುಗಳನ್ನು ಸಾಕುತ್ತಾರೆ. ಇಂತಹ ಹಬ್ಬ ಮಾಡುವ ಒಂದೇ ಹೋರಿಗೆ ಮೂವತ್ತ ಸಾವಿರದಿಂದ ಹತ್ತು ಲಕ್ಷದವರೆಗೂ ಬೆಲೆಗಳಿವೆ. ಒಂದೇ ಹಬ್ಬದಲ್ಲಿ ಅಂತಹ ಹೋರಿಯನ್ನು ಹಿಡಿದರೂ ಅವುಗಳ ಬೆಲೆಯೂ ಶೇಕಡ ಎಂಬತ್ತರಷ್ಟು ಕಡಿಮೆಯಾಗಿ ಬಿಡುತ್ತದೆ. ಬಹುಮಾನಗಳಿಗೆ ತಕ್ಕಂತೆ ಜನರು ಯಾವ ಹಬ್ಬ ಜೋರಾಗುತ್ತದೆ. ಅತೀ ಹೆಚ್ಚಿನ ಹೋರಿಗಳು ಎಲ್ಲಿಗೆ ಸೇರುತ್ತವೆ ಎಂಬುದರ ಆಧಾರದ ಮೇಲೆ ಆ ಊರಿನ ಹಬ್ಬಗಳು ವಿಶೇಷತೆ ಪಡೆಯುತ್ತವೆ. ಈ ಹಬ್ಬಗಳಲ್ಲಿ ಹೋರಿಗಳನ್ನು ಪೈಲ್ವಾನರು ಮುಟ್ಟಬಾರದೆಂದು ಕಟ್ಟುಮಾಡಿಸುವ, ಮಂತ್ರ, ತಂತ್ರ, ದೃಷ್ಟಿ ನಿವಾರಣೆಗಳ ಕೈ ಚಳಕದ ಕರಾಮತ್ತುಗಳೂ ತಲತಲಾಂತರದಿಂದ ನಡೆದುಕೊಂಡು ಬಂದಿದೆ. ಶಿಕಾರಿಪುರ, ಹುಲುಗಿನಕೊಪ್ಪ, ಹಿತ್ಲ, ಬಸವನಂದಿಹಳ್ಳಿ, ಹಾವೇರಿ ಜಿಲ್ಲೆಯ ಹಿರೇಕೆರೂರು, ಹಾನಗಲ್, ಬ್ಯಾಡಗಿ, ಮಾಸೂರು, ರಟ್ಟಿಹಳ್ಳಿ ಹಬ್ಬಗಳು ಹೆಸರುವಾಸಿಯಾಗಿವೆ. ಹಟ್ಟಿಹಬ್ಬವನ್ನು ಸರ್ಕಾರವು ಆಸಕ್ತಿ ತೋರಿಸಿ ವ್ಯವಸ್ಥಿತ ರೀತಿಯಲ್ಲಿ ಹಬ್ಬವನ್ನು ಆಯೋಜಿಸಿದರೆ ಪಾಶ್ಚಾತ್ಯ ದೇಶದ ಗೂಳಿಕಾಳಗಕ್ಕೂ ಹೆಚ್ಚು ಆಧಾಯ ದೊರಕಿಸಿಕೊಡುವ ಜನಪದ ಕ್ರೀಡೆಯಾಗುವುದರಲ್ಲಿ ಸಂದೇಹವಿಲ್ಲ.

**೧೪. ಕೋಲೇಬಸವ**

ವೃತ್ತಿ ಜೀವನದಲ್ಲಿ ಒಂದು ಕಲೆಯಾಗಿ ಮಾರ್ಪಾಟಾಗಿರುವ ಆಟ. ಸಾಮಾನ್ಯವಾಗಿ ತೀರಿಕೊಂಡವರ ಹೆಸರಿನಲ್ಲಿ ಹೆಣ್ಣುಕರು ಅಥವಾ ಗಂಡುಕರುವನ್ನು ಮುದ್ರೆ ಒತ್ತಿ ಬಿಡುವ ಸಂಪ್ರದಾಯ ಇಂದಿಗೂ ಗ್ರಾಮಾಂತರ ಪ್ರದೇಶದಲ್ಲಿ ಇಂದಿಗೂ ರೂಢಿಯಲ್ಲಿದೆ. ಇಂಥಹ

ದನಗಳಿಗೆ ಮಾತು ಕಲಿಸಿ ರಾಮಾಯಣದ ರಾಮ, ಸೀತೆ, ಕಲ್ಷ್ಮಣ ಪಾತ್ರಗಳನ್ನು ನೀಡಿ ಅವರ ಕಥೆಯನ್ನು ಜನರಿಗೆ ತಿಳಿಸಿ ಅವರು ನಿಡುವ ಧನ-ದಾನ್ಯಗಳನ್ನು ಪಡೆದು ಹಿಂದಿರುಗುತ್ತಾರೆ. ಕಪಿಲೆ-ಬಸವ ಎಂಬುದೇ ಕವಲೆ ಬಸವ, ಕೌಲೆ ಬಸವ, ಕೋಲೆ ಬಸವ ಎಂದಾಗಿದೆ. ಈ ಆಟದ ಸಂದರ್ಭದಲ್ಲಿ ಆಟವನ್ನಾಡಿಸುವವನು ಆಡುವ ಮಾತುಗಳಿಗೆ ತಲೆ ಆಡಿಸುವ ಮೂಲಕ ಸಂವಾಹನ ನಡೆಸಿ ಕಥೆಯನ್ನು ವಿವರಿಸುವ ರೀತಿ ಜನರ ಆಕರ್ಷಣೆಯಾಗುತ್ತದೆ.

ಗ್ರಾಮೀಣ ಪ್ರದೇಶದ ಎಲ್ಲಾ ಸಂಭ್ರಮಗಳೂ ಒಂದೂಂದು ಬಾಗದಲ್ಲಿ ಒಂದೊಂದು ರೀತಿಯಲ್ಲಿ ಜನರ ಉತ್ಸಾಹ ಹೆಚ್ಚಿಸುವ ಆಚರಣೆಗಳೇ ಆಗಿವೆ. ತನ್ನ ಒಡನಾಡಿಯಾಗಿ ದುಡಿದ ಎತ್ತು ದೈವ ಸ್ವರೂಪಿಯಾಗಿ, ತನ್ನ ಪ್ರತಿಷ್ಟೆಯ ಸಂಕೇತವಾಗಿ, ರೈತನ ಉಸಿರಿನಷ್ಟೇ ಮಹತ್ವವನ್ನು ದನಗಳು ಪಡೆದುಕೊಂಡಿವೆ. ಹೊಸ ಮನೆಯ ಗೃಹ ಪ್ರವೇಶದ ಸಂದರ್ಭದಲ್ಲಿ ಹಸು-ಕರುಗಳನ್ನು ಮನೆಯ ಒಳಗೆ ಮೊದಲು ಕಳಿಸಿ, ಅಲ್ಲಿಯೇ ಹಾಲು ಕರೆದು ಹಾಲುಕ್ಕಿಸುವ ಶಾಸ್ತ್ರ ಮಾಡುತ್ತಾರೆ.ಲ್ಲಿ ಸಗಣಿ ಹಾಕಿ ಕೊಟ್ಟ ಪ್ರಸಾದವನ್ನು ಹಸು ಸೇವಿಸಿದರೆ ಎಲ್ಲ ಶುಭವಾಗಿದೆ ಎಂದು ನಂಬುತ್ತಾರೆ. ಪೂಜೆ ಪುನಸ್ಕಾರಗಳಲ್ಲಿ ಗೋಮಾತೆ ಹೆಚ್ಚು ಪೂಜಿತವಾದರೆ, ಜನಪದ ಆಚರಣೆಗಳಲ್ಲಿ ಎತ್ತುಗಳು ಮಹತ್ವ ಪಡೆದಿರುವುದು ವಿಶೇಷ. ಜಾತ್ರೆಗಳಲ್ಲಿ ಕುಲ ದೈವವನ್ನು ಗೌರವಿಸುವ, ತಮ್ಮ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದು ಕಂಡುಬರುತ್ತದೆ. ಕೋಣಗಳ ಗೌರವ ದ್ಯೋತಕ ಕಂಬಳ ಆಚರಣೆ, ಮಾರೀಹಬ್ಬ ವಿಶೇಷವಾಗಿ ನಡೆಯುತ್ತವೆ. ಎಲ್ಲರೂ ಕಾರ ಹುಣ್ಣಿಮೆಗೆ ತಮ್ಮ ಎಲ್ಲಾ ಕೃಷಿ ಪರಿಕರಗಳನ್ನು ಸರಿಪಡಿಸಿಕೊಳ್ಳುವ, ಒಟ್ಟಾಗಿ ಉಳುಮೆಯನ್ನು ಆರಂಭಿಸುವ ಅನೇಕ ಆಚರಣೆಗಳು ಜನಪದರ ದೈನಂದಿನ ಬದುಕಿಗೆ ಉಪಯುಕ್ತವಾದ ವಸ್ತುಗಳನ್ನು ನಿಗದಿತ ಸಮಯಕ್ಕೆ ಸಿದ್ಧಪಡಿಸಿಕೊಳ್ಳಲೇ ಬೇಕು. ನಿಗದಿತ ಮಹೋರ್ತಕ್ಕೆ ಬಿತ್ತನೆ ಆರಂಭಿಸಲೇ ಬೇಕು ಎಂಬ ಸಂದೇಶವನ್ನು ಇವು ಸಾರುತ್ತವೆ. ಕಾರ್ಯ ಸಂಕಲ್ಪವನ್ನು ಆಂತರ್ಯದಲ್ಲಿ ಅಡಗಿಸಿಕೊಂಡಿರುವ ಈ ಆಚರಣೆಗಳು ಮೇಲು ನೋಟದಲ್ಲಿ ಕೇವಲ ಉತ್ಸವಗಳಾಗಿ ಕಾಣುತ್ತವೆ. ಆದರೆ ಹಬ್ಬಗಳ, ಆಚರಣೆಗಳ ತಾತ್ವಿಕತೆಗಳನ್ನು ಹುಡುಕಿ ನೋಡಿದಾಗ ಪ್ರತಿ ಹಬ್ಬದಲ್ಲಿ ಬಳಸುವ ವಸ್ತುಗಳೂ ದೈನಂದಿನ ಬದುಕಿಗೆ, ಕೃಷಿಗೆ, ಔಷಧಿಗೆ, ಅಗತ್ಯವಾದ ಸಸ್ಯ, ವಸ್ತುಗಳೇ ಆಗಿವೆ. ಜನಪದರು ಸೃಷ್ಟಿಯ ರಹಸ್ಯಗಳನ್ನು, ಗಿಡಗಳಲ್ಲಿನ ಔಷಧಿ ಗುಣಗಳನ್ನು, ಆ ವಸ್ತುಗಳ ಪ್ರಾಮುಖ್ಯತೆಯನ್ನು ವರ್ಷದಲ್ಲಿ ಒಮ್ಮೆ ಅವುಗಳನ್ನು ಈ ಆಚರಣೆಗಳ ಮೂಲಕ ನೆನೆಸುತ್ತಾರೆ. ಆ ಗಿಡ, ವಸ್ತುಗಳ ಬಗ್ಗೆ ಪೂಜ್ಯನೀಯ ಭಾವನೆ ಬರುವುದರಿಂದ ಮುಂದಿನ ವರ್ಷಕ್ಕೆ ಇವು ಬೇಕು ಎಂದು ಸಂರಕ್ಷಿಸುವ ಪಾಠಗಳನ್ನೂ ಈ ಆಚರಣೆಗಳು ಮಾನವನಿಗೆ ಕಲಿಸುತ್ತವೆ. ಜನರ ನಡುವಿನ ಒಗ್ಗಟ್ಟಿನ ರಹಸ್ಯಗಳನ್ನು, ಒಡೆದು ಹಾಳಾದ ಮನಸ್ಸನ್ನು

ಸರಿಪಡಿಸಿಕೊಳ್ಳಲು, ಒಂದು ಮಾಡಲು, ಶ್ರಮದ ಜೀವನಕ್ಕೆ ಬಿಡುವು ನೀಡುವುದರೊಂದಿಗೆ, ಮಾನವ ಉಲ್ಲಾಸಿತನಾಗಲೂ ಈ ಜನಪದ ಗೋಸಂಬಂಧಿ ಗ್ರಾಮೀಣ ಆಚರಣೆಗಳು ಕಾರಣ ವಾಗುತ್ತವೆ.

**ಈ. ಗೋಸಂಬಂಧಿ ಗಾದೆಗಳು**

ಗ್ರಾಮೀಣ ಭಾಗದ ಹಿರಿಯರ ತಲೆಮಾರಿನಿಂದಲೂ ಜನರ, ಬಾಯಿ ಇಂದ ಬಾಯಿಗೆ ಸಾಗಿ ಬಂದ ಗಾದೆಗಳು ಅನುಭವದ ಗಟ್ಟಿಗಳು. ವೇದ ಸುಳ್ಳಾದರೂ ಗಾದೆ ಸುಳ್ಳಾಗವು ಎಂಬ ಮಾತು ಗಾದೆಗಳ ಮಹತ್ವವನ್ನು ತಿಳಿಸುತ್ತದೆ. ಹತ್ತು ಸಾಲಿನಲ್ಲಿ ಹೇಳಬಹುದಾದದ್ದನ್ನು ಮತ್ತು ಹತ್ತು ವರ್ಷಗಳ ಜೀವನದಲ್ಲಿ ಅರ್ಥವಾಗದ್ದನ್ನು ಒಂದೇ ವಾಕ್ಯದಲ್ಲಿ ಅರ್ಥವಾಗುವಂತೆ ಮಾಡುವ ಶಕ್ತಿ ಗಾದೆಗಳಿಗಿದೆ. ಗೋವುಗಳ ಗುಣ, ಸಾಮರ್ಥ್ಯ, ಕಾಳಜಿ, ವಿರೋಧಾಬಾಸ ಇವುಗಳನ್ನು ಮಾನವನ ಗುಣಗಳಿಗೆ ಹೋಲಿಸಿ ಹೇಳುವ ಪ್ರಯತ್ನವನ್ನು ಈ ಗಾದೆಗಳು ಮಾಡುತ್ತವೆ. ಗಾದೆಗಳು ನುಡಿಗಟ್ಟುಗಳು ಮುಂದಿನ ಪೀಳಿಗೆಗೆ ಅನುಭವದ ಸಾರ ಸಂದೇಶವನ್ನು ರವಾನಿಸುತ್ತವೆ. ಬಸವನ ಗುಣಗಳನ್ನು, ಅವುಗಳಿಗೂ ಮನುಷ್ಯನಿಗೂ ನಡುವೆ ಇರುವ ವ್ಯತ್ಯಾಸಗಳನ್ನು, ಗ್ರಾಮೀಣ ಪ್ರದೇಶದ ನೀತಿಗಳನ್ನು, ಹೋಲಿಕೆಗಳನ್ನು ಈ ಗಾದೆಗಳಲ್ಲಿ ಕಾಣಬಹುದು. ನನ್ನ ಅಧ್ಯಯನಕ್ಕೆ ಪೂರಕವಾದ ಪಶು ಸಂಬಂಧಿ ಜನಪದ ಗಾದೆಗಳನ್ನು ಸಂಗ್ರಹಿಸಿ ವಿವರಣೆಯೊಂದಿಗೆ ನೀಡಿರುತ್ತೇನೆ. ಇಲ್ಲಿನ ಗಾದೆಗಳು ಒಂದಲ್ಲ ಒಂದು ರೀತಿಯಲ್ಲಿ ಗೋವುಗಳ ಕುರಿತೇ ಇದ್ದಾವೆ. ಎತ್ತನ್ನು ನಂಬಿ ಬೀಜ ಹಾಕ್ಬಾರ್ದು, ನೆಂಟ್ರನ್ನ ನಂಬಿ ಬದುಕಬಾರ್ದು. ಅನ್ನುವ ಗಾದೆಯು ಮೇಲ್ನೋಟಕ್ಕೆ ಆಶ್ಚರ್ಯವೆನಿಸಿದರೂ ಅದರ ಅಂತರ್ಯವನ್ನು ಗಮನಿಸಿದಾಗ ಬದುಕಿನ ತತ್ವಗಳ ವಾಸ್ತವದ ಸತ್ಯ ದರ್ಶನವಾಗುತ್ತದೆ.

ಇಡೀ ವಿಶ್ವದ ಅನೇಕ ದೇಶಗಳಲ್ಲಿ ಗಾದೆಗಳು ಸಿಗುತ್ತವೆ. ಪ್ರಾಣಿ, ಪಕ್ಷಿ, ಮನುಷ್ಯ ಸಂಬಂಧಗಳ, ನಿಸರ್ಗ, ವ್ಯವಹಾರ, ಜಾತಿ, ಮಕ್ಕಳು, ಗುರು-ಶಿಷ್ಯರು, ಕೋಪ, ಕುಲ, ಉಳುಮೆ, ಆಹಾರ, ಆರೋಗ್ಯ, ಆಡಂಬರ, ಹೇಡಿತನ, ಹೆದರಿಕೆ, ಸ್ನೇಹ, ಸೋಲು, ಗೆಲುವು, ಮುಂತಾದ ಮನುಷ್ಯನ ಒಳಗಿರುವ ಭಾವನೆಗಳು, ಗುಣಗಳು, ಹಾಗೂ ಲೋಕ ವ್ಯವಹಾರಗಳು, ಸಂಬಂಧಗಳ ಕುರಿತಾಗಿ ಗಾದೆಗಳು ಬೆಳಕು ಚೆಲ್ಲುತ್ತವೆ. ಅವುಗಳಲ್ಲಿ ಪಶು ಸಂಬಂಧಿತ ಗಾದೆಗಳನ್ನು ಇಲ್ಲಿ ಸಂಗ್ರಹಿಸಿರುವೆ ಮತ್ತು ವಿವರಣೆಯೊಂದಿಗೆ ಬಳಸಲಾಗಿದೆ.

**೧. ಉತ್ತಮೇಲೆ ಹೋರಿ ಚರ್ಬೆಲ್ಲೋ, ಹೆತ್ತ ಮೇಲೆ ಕೋರಿ ಚರ್ಬೆಲ್ಲೋ**

ಪ್ರಾಯದ ಹೋರಿಯನ್ನು ಹಿಡಿಯುವುದು ಕಷ್ಟದ ಕೆಲಸ. ಹತ್ತು ಜನ ಹಿಡಿದರೂ ಬಗ್ಗದ ಪ್ರಾಣಿ ಅದು. ಆದರೆ ಅದನ್ನು ಹೆಗಲು ಮಾಗಿ ಹೊಲ-ಗದ್ದೆ ಉಳುಮೆ ಮಾಡಲು

ಬಳಸಿದಾಗ ಅದರ ಗರ್ವ ಹೇಳ ಹೆಸರಿಲ್ಲದಂತಾಗುತ್ತದೆ. ಹಾಗೆಯೇ ಹೆಣ್ಣು (ಕೋರಿ) ಕೂಡಾ ಮದುವೆಗೆ ಮುಂಚೆ ಎಷ್ಟೇ ಧಿಮಾಕಿನಿಂದ ಪ್ರಾಯದಿಂದ ಸೊಕ್ಕಿದ್ದರೂ ಮದುವೆಯಾಗಿ ಒಂದೆರಡು ಮಕ್ಕಳಾದ ಕೂಡಲೇ ಆ ಧಿಮಾಕು ಮಾಯವಾಗುತ್ತದೆ.

**೨. ಹಾಲಿದ್ದಾಗ ಹಬ್ಬ ಮಾಡು, ಹಲ್ಲಿದ್ದಾಗ ಕಡ್ಲೆ ತಿನ್ನು**

ಹಬ್ಬ ಮಾಡಲು ಹಾಲು, ಮೊಸರು ಬೇಕು. ಏಕೆಂದರೆ ಅಂದು ಮಾಡುವ ಸಿಹಿ ತಿಂಡಿಗಳನ್ನು ತಯಾರಿಸಲು ಹಾಗೂ ಪೂಜಾ ಕಾರ್ಯಗಳಿಗೆ ಹಾಲು ಬೇಕೇ ಬೇಕು. ಮನೆಯಲ್ಲಿ ಅವು ಯಥೇಚ್ಛವಾಗಿ ಇದ್ದಾಗ ಅವುಗಳನ್ನು ಹಂಚಬಹುದು, ಅನುಭವಿಸಬಹುದು. ಕಡ್ಲೆ ಕಡಿಯಲು ಹಲ್ಲು ಬೇಕು. ಆಗ ಮಾತ್ರ ರುಚಿ ಸಿಗುವುದು.ವಯಸ್ಸಾದ ಮೇಲೆ ಹಲ್ಲು ಉದುರಿದಾಗ ಕಡ್ಲೆ ತಿನ್ನಲು ಹೋದರೆ ಆಗದು. ಎಲ್ಲದಕ್ಕೂ ಒಂದು ಸೂಕ್ತ ಕಾಲ ಇರುತ್ತದೆ. ಆಕಾಲದಲ್ಲೇ ಅವುಗಳನ್ನು ಆಚರಿಸಬೇಕು ಮತ್ತು ಅನುಭವಿಸಬೇಕು. ಎಂಬುದು ಗಾದೆಯ ಅಂತರ್ಯ.

**೩. ಹುಸಿನಗೆ ಊರಿಗೆ ಮೂಲ, ಕುಂಟೆತ್ತು ಹೊಲಕ್ಕೆ ಮೂಲ**

ಹುಸಿ ನಗು ಸಹಜವಲ್ಲದ್ದು, ಬಲಾತ್ಕಾರವಾಗಿ ತಂದುಕೊಳ್ಳುವ ನಗು ಯಾವುದೋ ಅಪಾಯವನ್ನು ಅಥವಾ ಗೂಡಾರ್ಥವನ್ನು ಇಟ್ಟುಕೊಂಡಿರುವುದು. ಹೀಗೆ ಆತ್ಮ ಶುದ್ಧವಿಲ್ಲದ ವ್ಯಕ್ತಿಯ ನಗು ಯಾವುದಾದರೂ ಅಪಾಯದ ಮುನ್ಸೂಚನೆಯನ್ನು ತಿಳಿಸುತ್ತದೆ, ಎಂಬುದನ್ನು ಗ್ರಾಮದ ಹಿರಿಯರು ಗಮನಿಸುತ್ತಾರೆ. ಹಾಗೆಯೇ ಎತ್ತು ಕೊಳ್ಳುವಾಗ ಅಥವಾ ಮನೆಯಲ್ಲಿನ ಎತ್ತು ಅನಾರೋಗ್ಯದಿಂದ ಕುಂಟುತ್ತಿದ್ದರೆ ಅಂಥ ಎತ್ತನ್ನು ನಂಬಿಕೊಂಡು ವ್ಯವಸಾಯ ಮಾಡಲು ನಿರ್ಧರಿಸಿದರೆ ಆ ದಿನವೇ ಅವನು ಹೊಲದ ಕೆಲಸದಲ್ಲಿ ಅರ್ಧ ಸೋತಂತೆ. ಕುಂಟೆತ್ತು ಹೋದ ಕೆಲಸಗಳನ್ನು ನಿಭಾಯಿಸಲು ಅಸಮರ್ಥವಾಗಿರುತ್ತವೆ. ಅದರಿಂದ ಅವನ ಹೊಲವೂ ಹಾಳು ಬೀಳುತ್ತದೆ ಎಂಬುದು ಗಾದೆಯ ಒಳಮರ್ಮ.

**೪. ಕಟ್ಟೋಕೆ ಎತ್ತಿಲ್ಲ, ಬಿತ್ತೋಕೆ ರಾಗಿ ಇಲ್ಲ, ಕೂರಿಗೆ ಹೊತ್ಕೊಂಡು ಕುಣೀತಾನೆ**

ನೇಗಿಲು ಹೂಡಲು ಜೊತೆ ಎತ್ತುಗಳಿಗೂ ಗತಿಯಿಲ್ಲ, ಬಿತ್ತಲು ಕಾಳುಗಳೂ ಇಲ್ಲ, ಬರೆ ಕೂರಿಗೆ ಹೊತು(ಉಳುವ ಸಾಧನ)ಕುಣಿಯುವವನ ಬದುಕು ನೆಗೆಪಾಟಲಾಗುತ್ತದೆ. ಅಂದರೆ ಬಾಯಿ ಮಾತಿನಿಂದ ವ್ಯವಸಾಯ ಆಗುವುದಿಲ್ಲ. ವ್ಯವಸಾಯ ನಡೆಸಲು, ಎತ್ತು, ಬೀಜ, ಗೊಬ್ಬರ, ಎಲ್ಲವೂ ಬೇಕು. ಆದರೆ ಇವು ಇಲ್ಲದೆ ಬರೇ ಹೊಸ ಕೂರಿಗೆ ತಂದ ಕುಷಿಯಲ್ಲಿ ಕುಣಿದ್ರ ವ್ಯವಸಾಯ ಆಗಲ್ಲ. ಎಂದು ವ್ಯಂಗ್ಯವಾಗಿ ಅಸಾಮರ್ಥ್ಯ ಹೊಂದಿಯೂ ಬಡಾಯಿ ಕೊಚ್ಚುವ ಗುಣದವರನ್ನು ಈ ಗಾದೆ ಟೀಕಿಸುತ್ತದೆ.

೫. ಉತ್ತರೆ ಮಳೇಲಿ ಉತ್ತೆತ್ತು ನೀರಿಗ್ಬಿತ್ತು

ಉತ್ತರೆ ನಕ್ಷತ್ರದ ಮಳೆಯ ಅವಧಿಯಲ್ಲಿ ಧಗೆ ಜಾಸ್ತಿ. ಹಾಗಾಗಿ ಉಳುವ ಎತ್ತುಗಳು ತಣ್ಣೀರಿಗಾಗಿ ತಹತಹಿಸುತ್ತವೆ. ಧಗೆಯನ್ನು ತಡೆಯಲಾರದೆ ಅವು ನೀರಿಗೆ ಬಿದ್ದು ದಣಿವಾರಿಸಿ ಕೊಳ್ಳುತ್ತವೆ. ಅದು ಬೇಸಾಯಕ್ಕೆ ಸೂಕ್ತವಾದ ಕಾಲ ಅಲ್ಲ. ಅಲ್ಲದೆ ನಂಬಿಕೊಂಡ ಎತ್ತನ್ನು ಯಾವ ವೇಳೆಯಲ್ಲಿ ಬಳಸಬೇಕು ಎಂಬುದನ್ನು ಈ ಗಾದೆ ತಿಳಿಸುತ್ತದೆ. ಒಂದು ವೇಳೆ ನಂಬಿದ ಎತ್ತೇ ಸೂಕ್ತ ಮುನ್ನೆಚ್ಚರಿಕೆ ಇಲ್ಲದೆ ನೋಡಿ ಕೊಂಡರೆ ಆ ಎತ್ತು ನೆಲ ಹಿಡಿದರೆ ಆ ಮನೆಯ ಕೃಷಿ ಸರ್ವನಾಶ ಆಗುತ್ತದೆ, ಎಂಬುದನ್ನು ಈ ಗಾದೆ ತಿಳಿಸುತ್ತದೆ.

೬. ಎತ್ತನ್ನು ನಂಬಿ ಬೀಜ ಹಾಕಬಾರದು, ನಂಟ್ರನ್ನ ನಂಬಿ ಬದುಕಬಾರದು

ವ್ಯವಸಾಯಕ್ಕೆ ಎತ್ತುಗಳು ಅಗತ್ಯವಾದರೂ ಅವುಗಳ ಆರೋಗ್ಯವೂ ಒಮ್ಮೆಲೇ ಕೆಡಬಹುದು. ಆಗ ಅವಶ್ಯಕ ಕೆಲಸಗಳು ಹಿಂದೆ ಬೀಳುತ್ತವೆ. ಅದಕ್ಕೆ ಬದಲಿ ವ್ಯವಸ್ಥೆ ಇಟ್ಟುಕೊಂಡಿರಬೇಕು. ಹಾಗೆಯೇ ತಿಂದು ಹೋಗುವಾಗ ನೆಂಟರು ಬಣ್ಣ ಬಣ್ಣದ ಮಾತುಗಳನ್ನಾಡುತ್ತಾರೆ. ಅವರು ಮಾತನಾಡುತ್ತಾರೆಯೇ ಹೊರತು ಸಹಾಯ ಮಾಡುವ ಮನಸ್ಸಿನವರಲ್ಲ. ಅವರನ್ನು ನಂಬಿ, ಅವರ ಸಹಾಯವನ್ನು ನಂಬಿ ಬದುಕಿದರೆ ಮುಖ್ಯ ಸನ್ನಿವೇಶಗಳಲ್ಲಿಯೇ ಅವರು ಕೈ ಕೊಡುತ್ತಾರೆ. ಆದ್ದರಿಂದ ಪರ್ಯಾಯ ದಾರಿಯೊಂದನ್ನು ಇಟ್ಟುಕೊಂಡಿರಬೇಕೆಂಬುದು ಗಾದೆಯ ಒಳ ಧ್ವನಿ.

೭. ಗಾಣಿಗನಿಗೆ ಎತ್ತಾಗಬಾರ್ದು, ಅಯ್ಯನಿಗೆ ಆಳಾಗಬಾರ್ದು

ಗಾಣಿಗ ಎಂದರೆ ಎಣ್ಣೆ ತೆಗೆಯುವವನು. ಅವರ ಎತ್ತುಗಳಿಗೆ ಬಿಡುವೇ ಇಲ್ಲ. ಏಕೆಂದರೆ ಗಾಣ ನಡೆದರೆ ಮಾತ್ರ ಅವನಿಗೆ ಲಾಭವಾಗುತ್ತದೆ. ಹಾಗೆಯೇ ಅಂದಿನ ಕಾಲದಲ್ಲಿ ಅಯ್ಯ(ಬ್ರಾಹ್ಮಣ)ಗೌರವಸ್ಥ ಕುಟುಂಬದ ಬುದ್ಧಿವಂತ. ಆತನು ಊರಿನ ಜವಾಬ್ದಾರಿಗಳನ್ನೆಲ್ಲ ಒಪ್ಪಿ ಕೊಂಡಿರುತ್ತಿದ್ದರಿಂದ ಅಯ್ಯನ ಆಳಾದವನಿಗೂ ಬಿಡುವು ಸಿಗುವುದಿಲ್ಲ ಎಂಬುದು ಧ್ವನಿ.

೮. ದಾಸಯ್ಯ ಎತ್ತ ದನಕರು ಎತ್ತ?

ದಾಸಯ್ಯ ಎಂದರೆ ಊರೂರು ಸುತ್ತುವವನು. ಅವನು ದನಕರುಗಳನ್ನು ನಿಗಾಮಾಡಲು ಸಾಧ್ಯವಿಲ್ಲ. ಅಡ್ಡಾಡುವ ದಾಸಯ್ಯ ಒಂದೆಡೆ ನಿಲ್ಲಲಾರನು. ದನಗಳನ್ನು ಸಾಕಲಾರನು, ದನಕರುಗಳಿಗೆ ನೀರು, ಹುಲ್ಲು, ಆಹಾರ, ಒದಗಿಸಲು ಮನೆಯಲ್ಲಿ ಒಂದೆಡೆ ಇರಬೇಕು. ಈಗಲೂ ಕೂಡಾ ದನಕರು ಇರುವ ಹಳ್ಳಿಯ ಮನೆಗಳಲ್ಲಿ ಬೀಗ ಹಾಕುವುದಿಲ್ಲ. ಯಾರಾದ್ರೂ ಒಬ್ಬರು ಇದ್ದೇ ಇರುತ್ತಾರೆ.ತಿರುಗುವ ಸ್ವಭಾವದವರು ಪಶು ಪಾಲನೆಯಲ್ಲಿ ಯಶಸ್ಸುಗಳಿಸಲಾರರು.

**೯. ಅಸಾದಿಗ್ಯಾಕೆ ಆರಂಭ, ದಾಸಯ್ಯನಿಗೆ ಏಕೆ ದನಕರು?**

ಮೋಹ ತ್ಯಜಿಸಿದ, ಬೇಡಿ ತಿನ್ನುವದನ್ನೇ ಕಾಯಕ ಮಾಡಿಕೊಂಡಿರುವ ಗ್ರಾಮದ ಉತ್ತಮ ದೇವತೆಗಳನ್ನು ಪೂಜಿಸುವ ಜಾತಿಯವರಿಗೆ ವ್ಯವಸಾಯ ಏಕೆ? ಅದರಲ್ಲೂ ಅಸಾಧಿ ದೇವರ ಸೇವೆಗೇ ಮೀಸಲಾದವರು. ಊರು ಸುತ್ತುವ ದಾಸಯ್ಯನಿಗೇಕೆ ದನಕರುಗಳ ನಿಗಾ ಏಕೆ? ಎಂಬುದನ್ನು ಗಾದೆ ಪ್ರಶ್ನಿಸುವಂತೆಯೇ ಈ ಗಾದೆಗಳು ವಿವರಣೆಯನ್ನೂ ನೀಡಿ ಬಿಡುತ್ತವೆ.

**೧೦. ಉಳೋ ಎತ್ತಾದರೆ ಇರೋ ಊರ್ನಲ್ಲಿ ಬೆಲೆಯಾಗದ?**

ಯೋಗ್ಯತೆ ಇರುವವರು ಎಲ್ಲಿದ್ದರೇನು? ಅದಕ್ಕಿರಬೇಕಾದ ಬೆಲೆ ಅದಕ್ಕೆ ಇದ್ದೇ ಇರುತ್ತದೆ. ದುಡಿಯುವ ಅರ್ಹತೆ ಇದ್ದರೆ, ಇದ್ದ ಕಡೆಯೇ ಅದಕ್ಕೆ ಬೆಲೆ ಇದ್ದೇ ಇರುತ್ತದೆ. ಕೆಲಸ ಮಾಡುವ ಶಕ್ತಿ ಇದ್ದರೆ ಎಲ್ಲಿದ್ದರೂ ದುಡಿಯುವವರಿಗೆ ಬೆಲೆ ಎಂದು ಗಾದೆ ತಿಳಿಸುತ್ತದೆ.

**೧೧. ಎಕ್ಕಡದಲ್ಲಿ ಹೊಡೆದರು ಬಸವನ ಚಕ್ಕಳ ಅಂದ್ಹಂಗೆ**

ಮಾನ ಮರ್ಯಾದೆ ಇಲ್ಲದವನು ಚಪ್ಪಲಿಯಲ್ಲಿ ಹೊಡೆದರೂ ಬಸವಣ್ಣನ ಚಕ್ಕಳ ಅಂತ ಅದನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ಅಂದರೆ ಗ್ರಾಮೀಣ ಪ್ರದೇಶದಲ್ಲಿ ಜಗಳ ಆಡುವ ಸಂದರ್ಭದಲ್ಲಿ, ಹಾಗೂ ಕಚ್ಚೆ, ಕೈ, ಬಾಯಿ, ಶುದ್ಧವಿಲ್ಲದವರನ್ನು ಕೆರ್ದಲ್ಲಿ ಹೊಡಿತೀವಿ ಅಂತಾರೆ. ಹೀಗೆ ಒಂದೊಮ್ಮೆ ಕೆರದಲ್ಲಿ ಹೊಡಿಸಿಕೊಂಡರು ಆತ ಸಮಾಜದ ಅನಾದರಕ್ಕೆ ಆತನ ಗೌರವ ಮಣ್ಣುಪಾಲಾಗುತ್ತದೆ. ಆದರೆ ತಪ್ಪಿನ ಮೇಲೆ ತಪ್ಪು ಮಾಡಿ ಅನೇಕ ಸಾರಿ ಶಿಕ್ಷೆಗೆ ಒಳಗಾಗಿ ಅದೇ ಗ್ರಾಮದಲ್ಲಿ ಜೀವಿಸುವ ಭಂಡ ಮಾತ್ರ ಚಪ್ಪಲಿಯಲ್ಲಿ ಹೊಡೆದ್ರೂ ಬಸವನ ಚಕ್ಕಳ ಅಂದನೆಂದರೆ ಆತನ ಭಂಡತನಕ್ಕೆ ಅವನೇ ಸಾಕ್ಷಿ ಎಂಬುದು ಗಾದೆಯ ಧ್ವನಿ.

**೧೨. ಎತ್ತಿಲ್ಲೋನಿಗೆ ಕೋಣಾನೇ ಸಂಜೀವ**

ಕೆಲವು ರೈತರ ಆರ್ಥಿಕ ಸ್ಥಿತಿ ಎತ್ತುಗಳನ್ನು ಕೊಳ್ಳಲು, ಮೇಯಿಸಲು ಸಾಧ್ಯವಾಗದವರು ಅವರ ಮನೆಯಲ್ಲಿರುವ ದನಗಳ ಗುಂಪಿನಲ್ಲಿರುವ ಕೋಣಗಳನ್ನೇ ವ್ಯವಸಾಯಕ್ಕೆ ಬಳಸುತ್ತಾರೆ. ಅವೇ ಅವರಿಗೆ ಸರ್ವಸ್ವ, ಏನೂ ಇಲ್ಲದೇ ಇರೋದಕ್ಕಿಂತ ವ್ಯವಸಾಯಕ್ಕೆ ಕೋಣನಾದ್ರೂ ಇದಾವಲ್ಲ ಅನ್ನೋದೇ ಒಂದು ಸಮಾದಾನ

**೧೩. ಎತ್ತು ಎಳಂದೂರಲ್ಲಿ, ಕಲಗಚ್ಚು ಕಂದೇಗಾಲದಲ್ಲಿ, ನಡುವೆ ನಿಂತು ಐಲಗೋ ಅಂದ್ರೆ ಬರ್ತದ?**

ಎಳಂದೂರು ಮತ್ತು ಕಂದೇಗಾಲಗಳು ದೂರ ದೂರ. ಒಂದೂರಲ್ಲಿ ಎತ್ತು, ಇನ್ನೊಂದು ಊರಲ್ಲಿ ಮುಸುರೆ ಇದ್ದರೆ ಕುಡಿಯಲು ಸಾಧ್ಯವೇ? ಮಾಡುವ ಕೆಲಸವನ್ನು ಸರಿಯಾಗಿ

ಮಾಡಬೇಕು. ಒಂದೇ ಕಡೆಯಲ್ಲಿ ದನಕರು, ಗದ್ದೆಗಳು ಇದ್ದರೆ ಮಾತ್ರ ಕೃಷಿ ಚೆನ್ನಾಗಿರುತ್ತದೆ. ಎಂಬುದು ತಾತ್ಪರ್ಯ

**೧೪. ಎತ್ತು ನೆಗೆಯೋ ಮೊದ್ಲು ಜೂಲ ನೆಗಿತಂತೆ**

ಎತ್ತುಗಳನ್ನು ಚಂದಗೊಳಿಸಲು ನಯವಾದ ಬಟ್ಟೆಯನ್ನು ಸಿಂಗಾರಕ್ಕಾಗಿ ಹಾಕುತ್ತಾರೆ. ಅದನ್ನು ಜೂಲ ಎನ್ನುತ್ತಾರೆ. ಸಾಹುಕಾರ ಎತ್ತು ಇದ್ದಂಗೆ ಸೇವಕ ಅದರ ಮೈಮೇಲಿನ ಬಟ್ಟೆ ಇದ್ದ ಹಾಗೆ. ಸಾಹುಕಾರನಿಗಿಂತ ಮುಂದೆ ಮುಂದೆ ಮಾತಾನಾಡುವವನನ್ನು ಜೂಲಕ್ಕೆ ಹೋಲಿಸಿದ್ದಾರೆ. ಯಾವುದೇ ಕೆಲಸದ ನೇತೃತ್ವ ವಹಿಸಿದವನಿಗಿಂತ ಅವನ ಸಹಚರರೇ ಹೆಚ್ಚು ತೋರಿಕೆಯ ಉತ್ಸಾಹವನ್ನು ಪ್ರದರ್ಶಿಸಿದರೆ, ಅವರ ನಡತೆಯನ್ನು ತಿದ್ದಿಕೊಳ್ಳಲು ಎಚ್ಚರಿಸುವ ಗಾದೆ.

**೧೫. ಎತ್ತು ಬಲ್ಲದ ಎಣ್ಣೆ ನೀರು ಮಜ್ಜನ, ಕತ್ತೆ ಬಲ್ಲದ ಕಸ್ತೂರಿ ಗಮಲ**

ಮೈಗೆಲ್ಲ ಎಣ್ಣೆ ಹಚ್ಚಿಕೊಂಡು ಮಾಡುವ ಸ್ನಾನವನ್ನು ಅಭ್ಯಂಜನ ಸ್ನಾನ ಎನ್ನುವರು. ಇಂಥ ಸ್ನಾನವನ್ನು ದುಡಿಯುವ ಎತ್ತುಗಳಿಗೆ ಯಾರು ಮಾಡಿಸುತ್ತಾರೆ. ಅದರ ಮಹಿಮೆ ಎತ್ತಿಗೆ ತಿಳಿಯದು. ಹಾಗೆಯೇ ಕಸ್ತೂರಿಯನ್ನು ಬೆಟ್ಟಗಳಿಂದ ಕತ್ತೆಯೇ ಹೊತ್ತು ಸಾಗಿಸಿದರೂ, ಆಸ್ವಾಧಿಸುವ ಭಾಗ್ಯ ಕತ್ತೆಗೆ ಎಲ್ಲಿಂದ ಬರಬೇಕು? ದುಡಿಯುವವರಿಗೆ ಈ ಭಾಗ್ಯಗಳು ದೊರೆಯುವುದಿಲ್ಲ ಎಂಬ ವ್ಯಂಗ್ಯ ಈ ಗಾದೆಯಲ್ಲಿ ಅಡಗಿದೆ.

**೧೬. ಪೋಲಿ ದನಕ್ಕೆ ಹಾಲು ಹೆಚ್ಚು ಕೂಲಿ ಹೆಣ್ಣಿಗೆ ನಾಲಿಗೆ ಹೆಚ್ಚು**

ಪೋಲಿ ದನ ಎಲ್ಲೆಂದರಲ್ಲಿ ಮೇಯುವ ಸ್ವಭಾವವನ್ನು ಹೊಂದಿರುತ್ತದೆ. ಚೆನ್ನಾಗಿದ್ದ ಕಡೆ ಹೋಗಿ ಹೋಗಿ ಮೇಯುವುದರಿಂದ ಸಹಜವಾಗಿಯೇ ಆ ಹಸುಗಳು ಹೆಚ್ಚು ಹಾಲನ್ನು ಕೊಡುತ್ತವೆ. ಅದೇ ರೀತಿ ಕೂಲಿ ಕೆಲಸ ಮಾಡುವ ಹೆಣ್ಣು ಎಲ್ಲೆಂದರಲ್ಲಿ ಕೆಲಸಕ್ಕೆ ಹೋಗುವುದರಿಂದ ಅವರಿಗೆ ಮುಜುಗರಗಳು ಇರುವುದಿಲ್ಲ. ಮಾತನಾಡುವ ಸ್ವಭಾವವೇ ಹೆಚ್ಚು. ಯಾರು, ಏನು ಎಂದು ವಿಚರಿಸದೆ ಮಾತನಾಡುತ್ತಾರೆ ಎಂಬುದು ತಾತ್ಪರ್ಯ.

**೧೭. ಎಳೀಲಾರದ ಎತ್ತು ಮೆಳೆ ಮೇಲೆ ಬಿತ್ತು**

ಕಳ್ಳಾಟ ಆಡುವುದನ್ನು ವ್ಯಂಗ್ಯ ಮಾಡುತ್ತಿದೆ ಈ ಗಾದೆ. ಮೆಳೆ ಎಂದರೆ ಗಿಡಗಳ ಗುಂಪು. ಉಳಲು ಶಕ್ತಿ ಇಲ್ಲದಿದ್ದರೆ ಆ ಎತ್ತು ಮೆಳೆಯ ಮೇಲೆ ಬಿತ್ತು ಎಂಬಲ್ಲಿ, ಕೈಲಾಗದ ದನಗಳು ಕಷ್ಟದ ಕೆಲಸಗಳಿಗೆ ಸಿಕ್ಕಿಕೊಂಡರೆ ತಪ್ಪಿಸಿಕೊಳ್ಳಲು ದನಗಳು ಕಳ್ಳಾಟ ಮಾಡುತ್ತವೆ. ಅದನ್ನೇ ಕೆಲಸ ಮಾಡಲು ಇಷ್ಟಪಡದ ಮೈಗಳ್ಳ ಮನುಷ್ಯನಿಗೆ ಹೋಲಿಸಿ ಹೇಳುತ್ತಾರೆ.

**೧೮. ಕಟುಕನ ಮುಂದೆ ಬಸವನ ಪುರಾಣ?**

ಕಟುಕನ ಕೆಲಸ ದನಗಳನ್ನು ಕೊಲ್ಲುವುದು. ದಯೆ, ದಾಕ್ಷಿಣ್ಯ ಇಲ್ಲದ ವ್ಯಕ್ತಿ ಅವನಾಗಿರುತ್ತಾನೆ. ಅವನ ಮುಂದೆ ಬಸವನ ಮಹಿಮೆ ಹೇಳಿದರೆ ಅವನ ಮನಸ್ಸು ಕರಗುವುದಿಲ್ಲ.

**೧೯. ಕರ ಕುಡಿಯೋಕೆ ಓಡ್ತು, ಹೋರಿ ಕೋಸಿಯೋಕ್ಕೋಡ್ತು**

ಕರು ತಾಯಿಯ ಬಳಿ ಹಾಲು ಕುಡಿಯಲು ಓಡುವುದು. ಹಾಗೆಯೇ ಹರೆಯಕ್ಕೆ ಬಂದ ಹೋರಿ ಹೆಣ್ಣು ಹಸುಗಳ ಬಳಿ ಮಿಲನಕ್ಕೆ ಓಡೋದು ಎರಡೂ ಪ್ರಕೃತಿಯ ನಿಯಮ. ವಯಸ್ಸಿಗೆ ಬಂದ ಗಂಡು ಹೆಣ್ಣಿನ ಹಿಂದೆ ಹೋಗುವುದನ್ನು ವ್ಯಂಗ್ಯವಾಗಿ ಗಾದೆ ಹೇಳುತ್ತದೆ.

**೨೦. ಕಂಡ ಮನೆ ಹೆಣ್ಣು ತರಬೇಕು. ಗುಡ್ಡಗಾಡಿನ ದನ ತರಬೇಕು**

ಸೊಸೆಯಾಗಿ ಬರುವವಳನ್ನು ಚೆನ್ನಾಗಿ ತಿಳಿದಿರುವ ಸಂಬಂಧಿಕರ ಮನೆಯಿಂದ ತರಬೇಕು. ಆಗ ಅವಳ ಗುಣಗಳು ಎಲ್ಲಾ ತಿಳಿದಿರುವುದರಿಂದ ಹೊಂದಾಣಿಕೆ ಚೆನ್ನಾಗಿ ಆಗುತ್ತದೆ. ಹಾಗೆಯೇ ಬೆಟ್ಟ ಗುಡ್ಡಗಳಲ್ಲಿ ಓಡಾಡಿ ಬೆಳೆದ ದನಗಳನ್ನು ತಂದರೆ ಅವುಗಳ ಶಕ್ತಿ, ಧೈರ್ಯ, ಸಾಮರ್ಥ್ಯ ಚೆನ್ನಾಗಿ ಇರುವುದರಿಂದ ವ್ಯವಸಾಯ ಉತ್ತಮವಾಗುತ್ತದೆ. ಇಲ್ಲಿ ಹೆಣ್ಣು, ದನ, ಎರೆಡೂ ಒಂದು ಮನೆಯ ಏಳಿಗೆಯ ಸಂಕೇತ. ಅವುಗಳನ್ನು ತರುವಲ್ಲಿ ಎಡವಿದರೆ ಮನೆತನ ಹಾಳಾಗುತ್ತದೆ. ಆದ್ದರಿಂದ ವ್ಯವಹಾರ ಮಾಡಿ ದನ ತರುವಾಗ ಹಾಗೂ ಮನೆತನಕ್ಕೆ ಹೆಣ್ಣು ತರುವಾಗ ಗುರ್ತು, ಪರಿಚಯ ಇರುವಲ್ಲಿಂದ ತರಬೇಕು. ಅವರ ಗುಣ ಯಾವ ರೀತಿ ನಿರ್ಧಾರವಾಗುತ್ತದೆ ಎಂಬುದನ್ನು ಗಾದೆ ತಿಳಿಸುತ್ತದೆ.

**೨೧. ಕುಂಟೆತ್ತಿಗೆ ಹುಲ್ಲುಗೇಡು, ಹರಕು ಬಟ್ಟೆಗೆ ನೂಲು ಗೇಡು**

ಕುಂಟುವ ಎತ್ತಿನಿಂದ ವ್ಯವಸಾಯ ಚೆನ್ನಾಗಿ ಆಗುವುದಿಲ್ಲ. ಹಾಗಾಗಿ ಅಂತಹ ಎತ್ತಿಗೆ ಹಾಕುವ ಹುಲ್ಲು ವ್ಯರ್ಥ. ಬಟ್ಟೆಯನ್ನು ಹಾಕಿ ಹಾಕಿ ಸವೆದ ಮೇಲೆ ಅಂತಹ ಬಟ್ಟೆಯನ್ನು ರಿಪೇರಿ ಮಾಡಿದರೂ ಬೇರೆಕಡೆ ಪಿಸಿಯುತ್ತದೆ(ಹರಿಯುವುದು) ಅಂತಹ ಬಟ್ಟೆ ರಿಪೇರಿಗೆ ಬಳಸುವ ನೂಲೂ ದಂಡ.

**೨೨. ಆಕಳು ಕಪ್ಪಾದರೆ ಹಾಲು ಕಪ್ಪೇ?**

ಕಪ್ಪು ಹಸುವೂ ಕರೆಯುವ ಹಾಲು ಬಿಳುಪಾಗಿಯೇ ಇರುತ್ತದೆ. ಬಣ್ಣಕ್ಕಿಂತ ಗುಣ ಮುಖ್ಯ ಎಂಬುದು ಈ ಗಾದೆಯ ಮರ್ಮ.

### ೨೩. ಎತ್ತು ಏರಿಗೆ ಕೋಣ ನೀರಿಗೆ

ಎತ್ತುಗಳು ನೀರಲ್ಲಿ ಆಡಲು ಬಯಸುವುದಿಲ್ಲ. ಆದರೆ ಕೋಣಗಳು(ಎಮ್ಮೆಗಳು) ನೀರಿನಲ್ಲಿಯೇ ಮಲಗಿ ಕಾಲ ಕಳೆಯಲು ಬಯಸುತ್ತವೆ. ಎರಡೂ ಜಾತಿಗಳದೂ ನೀರಿನ ಬಗ್ಗೆ ತದ್ವಿರುದ್ಧ ಭಾವನೆ. ವಿರುದ್ದ ದಿಕ್ಕಿನಲ್ಲಿ ನಡೆಯುವ ಗುಣ. ಈ ಗುಣವನ್ನೇ ಹೊಂದಾಣಿಕೆ ಇರದ ಎರೆಡು ವ್ಯಕ್ತಿಗಳ ನಡುವಿನ ವಿರುದ್ಧ ಭಾವನೆಗಳನ್ನು ಗಾದೆ ವಿಡಂಬಿಸುತ್ತದೆ.

### ೨೪. ಕೋಣ ಈತು ಅಂದ್ರೆ ಕೊಟ್ಟ್ಯಾಗೆ ಕಟ್ಟಾಕು ಅಂದ್ನಂತೆ

ಕೋಣ ಅಂದರೆ ಗಂಡು. ಎಲ್ಲಾದರೂ ಕರು ಹಾಕುತ್ತದೆಯೇ? ಮಾಲೀಕ ಮೂರ್ಖನಾಗಿದ್ದರೆ, ಸೇವಕ ಕೋಣ ಕರ ಹಾಕಿದ ಅಂದ್ರೆ, ಕೊಟ್ಟಿಗೇಲಿ ಕಟ್ಟಾಕು ಅಂದ್ನಂತೆ ಎಂಬಂತೆ ವರ್ತಿಸುವ ಮಾಲೀಕನ್ನು ಗೇಲಿ ಮಾಡುವ ಗಾದೆ. ಈ ಸಾಮಾನ್ಯ ಜ್ಞಾನವೂ ಇಲ್ಲದ ವ್ಯಕ್ತಿ ಈ ಮಾಲಿಕ ಎಂಬುದಕ್ಕೆ ಈ ಗಾದೆಯನ್ನು ಉದಾಹರಿಸಿ ಹೇಳುತ್ತಾರೆ.

### ೨೫. ಎತ್ತಿಗೆ ಬತ್ತದ, ಕತ್ತೆಗೆ ಬಣವೆ ಚಿಂತೆ ಯಾಕೆ

ಎತ್ತಿಗೆ ಬೇಕಾಗಿರುವುದು ಹುಲ್ಲು, ಅದು ಬಿಟ್ಟು ಹಾಕಿದ ಬತ್ತದ ರಾಶಿಯ ಚಿಂತೆ ಎತ್ತಿಗೆ ಬೇಕಿಲ್ಲ. ಕತ್ತೆ ಹಸಿರು ಹುಲ್ಲನ್ನು ಹುಡುಕಿಯೇ ತಿನ್ನಬೇಕು. ಅದರ ಗಮನ ಬಣವೆಯ ಕಡೆಗೆ ಹರಿಯುವುದಿಲ್ಲ. ದುಡಿದು ತಿನ್ನೋರಿಗೆ ಕೂಡಿಟ್ಟು ತಿನ್ನೋ ಆಸೆ ಏಕೆ? ಎಂಬುದು ಗಾದೆಯ ಒಳ ಧ್ವನಿ. ಮತ್ತು ನಿಮ್ಮ ನಿಮ್ಮ ಯೋಗ್ಯತೆಗಳಿಗೆ ತಕ್ಕಂತೆ ನಿಮ್ಮ ಆಹಾರಗಳು ನಿರ್ಧಾರವಾಗುತ್ತವೆ ಎಂಬುದು ಒಳಧ್ವನಿ.

### ೨೬. ಎಮ್ಮೆಗೊಂದು ಚಿಂತೆ ಸಮಗಾರನಿಗೊಂದು ಚಿಂತೆ

ಎಮ್ಮೆಗೆ ಯಾವಾಗಲೂ ಮೇಯುವ, ನೀರಿನಲ್ಲಿ ಹೊರಳಾಡುವ ಚಿಂತೆ ಇದ್ದರೆ, ಚಮ್ಮಾರನ ಆಲೋಚನೆಯೇ ಬೇರೆ. ಅವನಿಗೆ ಎಮ್ಮೆಯ ಸಾವು ಯಾವಾಗ ಆಗುತ್ತದೆ. ಅದನ್ನು ಸುಲಿದು ಅದರ ಚರ್ಮ ಯಾವಾಗ ಬಳಸಬಹುದು ಎಂಬ ಚಿಂತೆ.

### ೨೭. ಕೊಂಕಣಿಗರ ಎಮ್ಮೆಗೆ ಕೊಡತಿಯೇ ಮದ್ದು

ದಪ್ಪ ಪುಷ್ಟವಾಗಿ ಬೆಳೆದ ಈ ಎಮ್ಮೆಗಳಿಗೆ ಚಿಕ್ಕ ಕೋಲಿನಿಂದ ಹೊಡೆಯುವುದು ತಾಕುವುದೇ ಇಲ್ಲ. ಅವುಗಳನ್ನು ಹೆದರಿಸಬೇಕೆಂದರೆ ದೊಡ್ಡ ಗಾತ್ರದ ಬಡಗಿಯನ್ನು ಬಳಸಬೇಕು. ಭಂಡ ಜನರನರನ್ನು ಬಗ್ಗಿಸಲು ದೊಣ್ಣೆಯೇ ಮದ್ದು, ಎಂಬುದು ತಾತ್ಪರ್ಯ.

### ೨೮. ಗೋಣಿ ಬಲ್ಲುದೇ ಎತ್ತಿನ ದುಃಖವ?

ಭಾರ ಹೋರುವ, ತುಂಬಿದ ಚೀಲಗಳನ್ನು ಎಳೆಯುವ ಎತ್ತಿನ ನೋವು ಗೋಣಿ ಚೀಲಕ್ಕೆ ಹೇಗೆ ಗೊತ್ತಾಗಬೇಕು? ಮನುಷ್ಯ ಕೂಡಾ ಹೆಚ್ಚು ಭಾರವನ್ನು ಎತ್ತುಗಳ ಮೇಲೆ ಹೋರಿಸಿ ಗಳಿಸಲು ಬಯಸುತ್ತಾನೆ. ಆದರೆ ಎತ್ತಿನ ನೋವು ಯಾರಿಗೆ ಹೇಳುವುದು? ಚೀಲ ಎತ್ತಿನ ಮೇಲೇ ಇದ್ದರೂ ಅದಕ್ಕೆ ಎತ್ತಿನ ದುಃಖತಿಳಿಯುವುದಿಲ್ಲ. ಮತ್ತೊಬ್ಬರ ದುಃಖವನ್ನು ಅರ್ಥಮಾಡಿಕೊಳ್ಳದವರನ್ನು ಗೋಣಿ ಚೀಲಕ್ಕೆ ಹೋಲಿಸಲಾಗಿದೆ. ಇಲ್ಲಿ ಎತ್ತಿನ ಮೈ ಚರ್ಮಕ್ಕೆ ಅಂಟಿಕೊಂಡರೂ ಎತ್ತಿಗೆ ಆಗುತ್ತಿರುವ ಸಂಕಟ, ನೋವು ಗೋಣಿ ಚೀಲಕ್ಕೆ ಗೊತ್ತಾಗುವುದೇ ಇಲ್ಲ. ಹಾಗೆಯೇ ಕೆಲವರು ಎಷ್ಟೇ ಹತ್ತಿರದಲ್ಲಿ ದೈಹಿಕವಾಗಿದ್ದರೂ ಅವರ ಮಾನಸಿಕ ತೊಳಲಾಟಗಳು, ನೋವುಗಳು ಅವರಿಗೆ ಅರ್ಥವಾಗುವುದೇ ಇಲ್ಲ.

### ೨೯. ತೆನೆ ತಿಂದ ಎತ್ತು ತಿಟ್ಟ ಏರ್ತು

ತೆನೆಗಳ ತುಂಬ ಇರುವ ಕಾಳುಗಳನ್ನು ತಿಂದ ಎತ್ತು ಬಲಿಷ್ಠವಾಗಿರುತ್ತವೆ. ಹಾಗಾಗಿ ಬಲಿಷ್ಠವಾಗಿರುವುದರಿಂದ ಏರಿಯನ್ನು ಅನಾಯಾಸವಾಗಿ ಹತ್ತಬಲ್ಲವು. ಇನ್ನೊಂದು ಅರ್ಥದಲ್ಲಿ ಕದ್ದು ತಿಂದಾಗ ಮಾತ್ರ ಅವುಗಳಿಗೆ ತೆನೆ ಸಿಗಲು ಸಾಧ್ಯ. ಅಂಥ ತುಡುಗು ದನಗಳಿಗೆ ಶಕ್ತಿಯೂ ಹೆಚ್ಚು, ಕಳ್ಳಬುದ್ಧಿಯವರು ಏನು ಬೇಕಾದರೂ ಮಾಡುವ ಶಕ್ತಿಯನ್ನು ಹೊಂದಿರುತ್ತಾರೆ ಎಂಬುದು ತಾತ್ಪರ್ಯ.

### ೩೦. ಕರಿನ್ಮರೇಲೆ ಅಸ ಬದುಕ್ಕಂತು

ಕರುಗಳೆಂದರೆ ಎಲ್ಲರಿಗೂ ಇಷ್ಟ. ಅವು ಕುಣಿದಷ್ಟೂ ಮನೆಯವರಿಗೆ ಚೆಂದ. ಆ ಕರುಗಳು ಆರೋಗ್ಯದಿಂದ ಇರಬೇಕಾದರೆ, ಹಸು ಹೆಚ್ಚೆಚ್ಚು ಹಾಲು ಕುಡಿಸಬೇಕು. ಅದಕ್ಕಾಗಿ ಎಂದೂ ಇಲ್ಲದ ಕಾಳಜಿಯನ್ನು ಕರು ಹುಟ್ಟಿದಾಗ ಹಸುವಿಗೆ ಮಾಡಲಾಗುತ್ತದೆ. ಹಿಂಡಿ, ಭೂಸ, ತಾಯಿ ಹಸುವಿಗೆ ಹೆಚ್ಚೆಚ್ಚು ದೊರಕುತ್ತದೆ. ಅಲ್ಲದೆ ದೊಡ್ಡವರು ಮಾಡುವ ತಪ್ಪಿಗೆ ಶಿಕ್ಷೆ ಕೊಡುವ ಸಂದರ್ಭದಲ್ಲಿ ಮಕ್ಕಳ ಮುಖ ನೋಡಿ ಶಿಕ್ಷೆಯನ್ನು ಕೊಡದೆ ಬಿಡುವುದು. ಅಡ್ಡದಾರಿಯಲ್ಲಿ ಹೋಗಿ ಬೇರೆಯವರ ಹೊಲದಲ್ಲಿ ಮೇದು ತಪ್ಪು ಮಾಡಿದಾಗಲೂ ಕರುವಿನ ಕಾರಣದಿಂದ ಶಿಕ್ಷೆಗೆ ಒಳಗಾಗದೆ ತಪ್ಪಿಸಿಕೊಳ್ಳುತ್ತದೆ. ದೊಡ್ಡ ತಪ್ಪು ಮಾಡಿದಾಗ ಮಕ್ಕಳ ಮುಖ ನೋಡಿ ಶಿಕ್ಷೆಯಿಂದ ಪಾರಾಗುವಂತೆ ಎಂಬುದು, ತಾತ್ಪರ್ಯ.

### ೩೧. ಎಳೆಗರು ಎತ್ತಲ್ಲ, ದಳವಾಯಿ ದೊರೆಯಲ್ಲ

ಹಾಲು ಕುಡಿಯುವ ಕರುಗಳನ್ನು ಎಳೆಕರು ಎನ್ನುತ್ತೇವೆ. ಅವುಗಳನ್ನು ಎತ್ತು ಎಂದು ಪರಿಗಣಿಸಲಾಗುವುದಿಲ್ಲ. ಹಾಗೆಯೇ ಸೇವಕನನ್ನು ದೊರೆ ಎಂದು ಪರಿಗಣಿಸಲಾಗುವುದಿಲ್ಲ. ಅವನು ಎಂದೆದೂ ಜನರ ದೃಷ್ಟಿಯಲ್ಲಿ ರಾಜರ ಅಧೀನ ವ್ಯಕ್ತಿಯೇ ಆಗಿರುತ್ತಾನೆ.

**೩೨. ಬಡವ ಬಲ್ಲಿದನಾಗನೇ? ಎಳೆಗರು ಎತ್ತಾಗದೇ?**

ಅದೃಷ್ಟ ಮಾನವನಿಗೆ ಇದ್ದರೆ ಅವನ ದುಡಿತ ಬಡವನನ್ನು ಶ್ರೀಮಂತನನ್ನಾಗಿಸುತ್ತದೆ. ಸಣ್ಣ ಕರು ದಿನದಿನವೂ ಬೆಳೆದು ಒಂದಲ್ಲ ಒಂದು ದಿನ ದೊಡ್ಡ ಎತ್ತಾಗುತ್ತದೆ. ನಿನ್ನ ಸಾಮರ್ಥ್ಯದ ಬಗ್ಗೆ ಗಮನವಿಟ್ಟು ನೀನು ದುಡಿ, ಎಂಬ ಪ್ರೇರಣೆಯನ್ನು ಗಾದೆ ನೀಡುತ್ತದೆ. ಮನುಷ್ಯ ಮತ್ತು ಪ್ರಕೃತಿಯಲ್ಲಿ ಬದಲಾವಣೆ ಸಹಜ. ಪ್ರತಿಯೊಬ್ಬರಿಗೂ ಒಂದು ಒಳ್ಳೆ ಕಾಲ ಬಂದೇ ಬರುತ್ತದೆ, ಎಂಬುದು ತಾತ್ಪರ್ಯ.

**೩೩. ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದ್ರು**

ಮೂರ್ಖತನವನ್ನು ಸೂಚಿಸುವ ಮಾತಾಗಿದ್ದು, ಯಾರಿಗೆ ಸಮಸ್ಯೆ ಇದೆಯೋ ಅವರಿಗೆ ಚಿಕಿತ್ಸೆ ನೀಡಬೇಕು. ಅದು ಬಿಟ್ಟು ಬೇರೆಯವರಿಗೆ ನೀಡಿದರೆ ಅದು ಮೂರ್ಖ ವರ್ತನೆಯಾಗುತ್ತದೆ. ಅಲ್ಲದೆ ತಪ್ಪು ಮಾಡಿದ ದೊಡ್ಡವರನ್ನು ದಂಡಿಸದೆ ದುರ್ಬಲರನ್ನು ಹುಡುಕಿ ದಂಡಿಸುವ ಸಮಾಜವನ್ನು ಕರಿತು ವ್ಯಂಗ್ಯ ಧ್ವನಿಯನ್ನು ಗಾದೆ ವ್ಯಕ್ತಪಡಿಸುತ್ತದೆ. ಎಂಬುದು ತಾತ್ಪರ್ಯ.ಜ್ವರ ಬಂದಾಗ ಒಂದು ಬರೆ ಹಾಕಿದರೆ ಜ್ವರ ವಾಸಿಯಾಗುತ್ತದೆ ಎಂದು ಒಂದು ಗ್ರಾಮೀಣ ಚಿಕಿತ್ಸಾ ವಿಧಾನ.

**೩೪. ಎತ್ತು ಕದ್ದವ ಹಗ್ಗ ಮರೆತಾನೆಯೇ?**

ಅಪರಿಚಿತರು ಎತ್ತುಗಳ ಬಳಿ ಹೋಗಲು ಸಾಧ್ಯವಿಲ್ಲ. ಹಾಗಾಗಿ ಎತ್ತು ಕದಿಯಲು ಬರುವ ಕಳ್ಳ ಅವುಗಳನ್ನು ಬಗ್ಗಿಸಲು ಹಗ್ಗದ ಸಮೇತ ಕದಿಯುತ್ತಾನೆ. ಎತ್ತನ್ನೇ ಕದಿಯುವ ಧೈರ್ಯ ಮಡಿದವ ಹಗ್ಗ ಬಟ್ಟಾನಾ? ಎಂಬುದು ತಾತ್ಪರ್ಯ.ಅಲ್ಲದೆ ಎತ್ತುಗಳನ್ನು ನಿಯಂತ್ರಣದಲ್ಲಿಡುವಲ್ಲಿ ಹಗ್ಗದ ಪಾತ್ರ ಮಹತ್ವದ್ದು.

**೩೫. ನಂಬಿದ ಎಮ್ಮೆ ಕೋಣನನ್ನು ಹಾಕ್ತಂತೆ**

ನಂಬಿಕೆಯಿಂದ ಸಾಕಿದ ಹಾಲು ಕೊಡುವ ಎಮ್ಮೆ ಹೆಣ್ಣು ಕರುವನ್ನೇ ಹಾಕುತ್ತೆ ಅಂತ ಕಾಯುವಾಗ ಕೋಣವನ್ನ ಈದಂತೆ, ಅಂದರೆ ನಂಬಿಕೆಯನ್ನು ಹುಸಿಮಾಡಿದ ಹಾಗೆ. ನಂಬಿದವರು ಕೈ ಕೊಟ್ಟಾಗ ಇಂಥಹ ಮಾತುಗಳಿಂದ ಜನಪದರು ಟೀಕಿಸುವ ವಿಧಾನ. ಹೆಣ್ಣು ಕರು ಹಾಕಿದ್ದರೆ ಲಾಭ ಎಂದು ಪರಿಗಣಿಸುವ ಜನರು ಅದಕ್ಕೆ ವಿರುದ್ಧ ಫಲಿತಾಂಶ ಬಂದಾಗ ದುಃಖಿಸುತ್ತಾರೆ. ಮೋಸ ಹೋದ ವ್ಯಕ್ತಿಯನ್ನು ಈ ಗಾದೆ ತಿಳಿಸಿ ನಂಬಿಕೆ ಹುಸಿಯಾಗಬಹುದು. ಆದರೆ ಎಚ್ಚರಿಕೆ ಅಗತ್ಯ ಎಂಬ ಸಂದೇಶವನ್ನು ಗಾದೆ ತನ್ನೊಡಲಲ್ಲಿ ಅಡಗಿಸಿಕೊಂಡಿದೆ.

**೩೬. ಮಕ್ಕಳು ಮನೆಗೆ ಚೆಂದ –ಹಟ್ಟಿಗೆ ಕರು ಚೆಂದ**

ಆಡುವ ಮಕ್ಕಳಿದ್ದರೆ ಮನೆಗೆ ಕಳೆ. ಅಂತಹ ಮನೆಯಲ್ಲಿ ಸುಖ–ಸಂತೋಷಗಳು ನೆಲಸುತ್ತವೆ. ಅದೇ ರೀತಿ ಕರುಗಳಿರುವ ಕೊಟ್ಟಿಗೆ(ಹಟ್ಟಿ)ಯಲ್ಲಿ ಕರುಗಳ ಚಿನ್ನಾಟ, ಲವಲವಿಕೆ, ಆಕರ್ಷಣೀಯ. ಅಲ್ಲಿ ಹಾಲು, ಗಿಣ್ಣು, ಸಂಭ್ರಮ ಇರುವುದರಿಂದ ಎಲ್ಲವೂ ಚೆಂದ.

**೩೭. ಉಂಡು ಉಡಬೇಕಾದ್ರೆ ಎಮ್ಮೆ ಕಟ್ಟಬೇಕು**

ಅತಿ ಹೆಚ್ಚು ಕೊಬ್ಬಿನಾಂಶ ಹೊಂದಿರುವ ಹಾಲನ್ನು ಕೊಡುವ ಎಮ್ಮೆಗಳ ನಿರ್ವಹಣೆ ಸುಲಭ ಮತ್ತು ಉಣ್ಣಲು ಹಾಲು, ಮೊಸರು, ಬೆಣ್ಣೆ, ಮಜ್ಜಿಗೆ, ಸಮೃದ್ಧವಾಗಿ ತಿನ್ನಲು, ಉಳಿದಿದ್ದನ್ನು ಮಾರಲು, ಹಾಗೂ ಮಾರಿದ ಹಣದಿಂದ ಉಡಲು ಬೇಕಾದ ಬಟ್ಟೆಗಳನ್ನು ಕೊಳ್ಳಬಹುದು. ಎಮ್ಮೆ ಪಾಲನೆ ಲಾಭದಾಯಕ ಆದ್ದರಿಂದ ಎಮ್ಮೆ ಸಾಕಬೇಕು ಎಂಬುದು ಗಾದೆಯ ತಾತ್ಪರ್ಯ.

**೩೮. ಕೊಟ್ಟಿಗೆಗೆ ಕಟ್ಟಲು ಹಸುವಿಲ್ಲ, ಗುಂಡಿಗೆ ಹಾಕಲು ಗೊಬ್ಬರಿಲ್ಲ**

ರೈತನ ದುಸ್ಥಿತಿಯನ್ನು ಇದು ಸೂಚಿಸುತ್ತದೆ. ಕೊಟ್ಟಿಗೆ ಕಾಲಿ, ಹಸುಗಳನ್ನು ತರಲು ದುಡ್ಡಿಲ್ಲ, ಹಸುಗಳಿಲ್ಲದೇ ತಿಪ್ಪೆಗೆ ಗೊಬ್ಬರವಿಲ್ಲ. ಗೊಬ್ಬರ ಇಲ್ಲದೇ ಕೃಷಿ ಚಟುವಟಿಕೆ ಮಾಡಲು ಸಾಧ್ಯವಿಲ್ಲ. ಆದ್ರೂ ಮಾತಿಗೆ ಕಮ್ಮಿ ಇಲ್ಲ ಎಂಬುದನ್ನು ಗಾದೆ ತಿಳಿಸುತ್ತದೆ. ಇಂದು ಈ ಪರಿಸ್ಥಿತಿ ರಾಸಾಯನಿಕ ಗೊಬ್ಬರಗಳ ಬಳಕೆಯಿಂದ ಹಸುವಿನ ಅನಿವಾರ್ಯತೆಯನ್ನು ನಿರಾಕರಿಸಿವೆ

**೩೯. ದಾನ ಕೊಟ್ಟೆಮ್ಮೆ ಹಲ್ಲು ಹಿಡಿದು ನೋಡಿದ್ರು**

ಪಡೆದಿರುವುದೇ ಪುಗಸಟ್ಟೆ, ಅದನ್ನು ಸಂತೋಷದಿಂದ ಸ್ವೀಕರಿಸಬೇಕು, ಅದನ್ನು ಒರೆಗೆ ಹಚ್ಚಿ ಕೆದಕಿ ನೋಡಬಾರದು. ಹಲ್ಲು ದನಗಳ ವಯಸ್ಸನ್ನು ತಿಳಿಸುತ್ತದೆ. ದನಗಳು ಎಷ್ಟು ಹಲ್ಲು ಹೊಂದಿವೆ ಎಂದು ಪರೀಕ್ಷಿಸಿ ನೋಡುವುದು ಆ ದಾನವನ್ನು ವಿಮರ್ಶಿಸಿದಂತೆ.

**೪೦. ಗೆದ್ದೆತ್ತಿನ ಬಾಲ ಹಿಡಿದಂತೆ**

ಜನರು ಲಾಭ ಪಡೆಯಲು ಸೋತವರ ಪಾರ್ಟಿ ಬಿಟ್ಟು, ಗೆದ್ದವರ ಕಡೆಗೆ ವಾಲುವುದನ್ನು ಈ ಗಾದೆ ಸೂಚಿಸುತ್ತದೆ. ಸಮಾಜದಲ್ಲಿ ಗೆಲ್ಲುವ ಕುದುರೆಯನ್ನೇ ಎಲ್ಲರೂ ಬೆಂಬಲಿಸುವರು. ಹಾಗೆ ಬೇಸಾಯದಲ್ಲಿ, ಗೂಳಿಗಳ ಆಟದಲ್ಲಿ, ಹಬ್ಬದಲ್ಲಿ ಬಂಡಿ ಪಂದ್ಯಗಳಲ್ಲಿ, ಯಾವ ಎತ್ತಿನ ಜೋಡಿಗಳು ಗೆಲ್ಲುತ್ತವೋ ಅವುಗಳನ್ನೇ ನಿಧಾನವಾಗಿ ಸೋತ ಎತ್ತಿನ ಕಡೆಯವರೂ ಬೆಂಬಲಿಸುತ್ತಾರೆ. ಲಾಭ ಎಲ್ಲಿದೆಯೋ ಅಲ್ಲಿ ಜನ ಸೇರುತ್ತಾರೆ. ಎಂಬುದು ತಾತ್ಪರ್ಯ.

**೪೧. ಸುಂಕದವನು ಗೋದಾನ ಮಾಡಿದ ಹಾಗೆ!**

ಸುಂಕದವನ ಗುಣ ಕಠೋರತೆ. ಅವನು ಮೃದುವಾಗಿದ್ದರೆ ಕರ ವಸೂಲಿ ಮಾಡಲು ಸಾಧ್ಯವಾಗುವುದಿಲ್ಲ. ಆತನಿಗೆ ದಯೆ ದಾಕ್ಷಿಣ್ಯ ಇರಲು ಸಾಧ್ಯವಿಲ್ಲ. ಅಂತಹವನು ಹಸುಗಳನ್ನು ದಾನ ಮಾಡುವುದು ಎಲ್ಲಾದರೂ ಸಾಧ್ಯವೇ? ವ್ಯಂಗ್ಯ.

**೪೨. ಒಡ್ಡು ಇಲ್ಲದ ಹೊಲ ಗೊಡ್ಡೆಮ್ಮೆ ಇದ್ದಂತೆ**

ಗದ್ದೆಗಳಲ್ಲಿ ನೀರು ಇಂಗಲು ಬದುಗಳು ಮುಖ್ಯ. ಆದ್ದರಿಂದ ಎತ್ತರದ ಬದುಗಳು ಇದ್ದಲ್ಲಿ ಮಳೆನೀರು ಸಂಗ್ರಹ ಆಗುತ್ತದೆ. ಮಣ್ಣು ಕೊಚ್ಚಿ ಹೋಗುವುದಿಲ್ಲ. ಅಲ್ಲದೆ ಎತ್ತರದ ಪ್ರದೇಶದಿಂದ ಹರಿದು ಬರುವ ಕನಿಜ, ಹಾಗೂ ಪೋಷಕಾಂಶಗಳು ಉಳಿದು ಭೂಮಿ ಫಲವತ್ತಾಗುತ್ತದೆ. ಆ ಫಲವತ್ತತೆಯಿಂದ ಹಾಕಿದ ಬೆಳೆಯು ಇಳುವರಿ ನೀಡಿ ಲಾಭದಾಯಕ ಆಗುತ್ತದೆ. ಒಡ್ಡುಗಳಿಲ್ಲದಿದ್ದರೆ ಆ ಗದ್ದೆಯವನಿಗೆ ನಷ್ಟವಾಗುತ್ತದೆ. ಗೊಡ್ಡೆಮ್ಮೆಯ ರೀತಿ ಉತ್ಪಾದನೆ ಇಲ್ಲದ ಬೇಸಾಯವಾಗುತ್ತದೆ. ಇಂದಿನ ಅಂತರ್ಜಲ ಸಮಸ್ಯೆಗೆ ಈ ಗಾದೆಯೊಂದು ಪರಿಹಾರವಾಗಬಲ್ಲದು. ಚಿಕ್ಕ ಚಿಕ್ಕ ಬದುಗಳು ಹೆಚ್ಚು ನೀರನ್ನು ಇಂಗಿಸಲು ಸಹಾಯಕ ಆಗುತ್ತಿದ್ದವು. ಇಂದು ಆಧುನಿಕ ಯಂತ್ರಗಳ ಓಡಾಟಕ್ಕೆ ಅನುಕೂಲವಾಗಲು ಆ ಬದುಗಳನ್ನೇ ತೆಗೆಯಲಾಗಿದೆ. ಹಾಗೆ ಒಡ್ಡುಗಳು ಇಲ್ಲದ ಹೊಲದಲ್ಲಿ ಕ್ರಮೇಣ ನೀರಿನಪಸೆ ಆರಿ, ಇಳುವರಿ ಕುಂಟಿತವಾಗುತ್ತದೆ. ಆ ಜಮೀನು ಏನೂ ಉತ್ಪಾದನೆ ಕೊಡದ ಗೊಡ್ಡು ಬಿದ್ದ(ಗೊಡ್ಡು ಎಂದರೆ ಹಾಲು, ಹೈನು, ಕರು, ಯಾವುದನ್ನೂ ಕೊಡುವುದಿಲ್ಲ. ಕೇವಲ ತಿಂದು ಮಲಗುವುದೇ ಅದರ ಕಾಯಕ, ಅನುತ್ಪಾದಕ ಜಾನುವಾರು)ಜಮೀನಿನಂತೆ ಎಂಬ ಮುಖ್ಯ ಸಾಲುಗಳನ್ನು ಆಂತರ್ಯದಲ್ಲಿ ಅಡಗಿಸಿಕೊಂಡಿದೆ.

**೪೩. ಕರು ಹೊರೆತಿಂತು ಮಗು ಮುದ್ದೆ ತಿಂತು**

ಇಲ್ಲಿ ಕರು ಮತ್ತು ಮಗು ಬೆಳೆದಂತೆ ತಮ್ಮ ಆಹಾರ ಕ್ರಮದ ಬದಲಾವಣೆಗಳನ್ನು ಸೂಚಿಸುತ್ತದೆ. ಕರು ಬೆಳೆದಂತೆ ಹುಲ್ಲಿನ ಗರಿಯನ್ನು ಕಚ್ಚಿ ತಿನ್ನುತ್ತಿದ್ದದ್ದು ಕ್ರಮೇಣ ಬೆಳೆದಂತೆ ಹೊರೆ ಹುಲ್ಲು ತಿನ್ನುವುದು ಸಹಜ. ಮಗು ಬೆಳೆದಂತೆ ತಾಯಿಯ ಎದೆಹಾಲಿನ ಬದಲು ಮೆತ್ತಗಿನ ಮುದ್ದೆಯನ್ನು ತಿನ್ನುವಂತೆ, ಬೆಳವಣಿಗೆಯನ್ನು ತಿಳಿಸುತ್ತದೆ.

**೪೪. ದನವೇ ಇಂದಿನ ಧನ**

ಇಂದಿನ ಆಧುನಿಕ ಪ್ರಪಂಚಕ್ಕೆ ಹಣ ಚಲಾವಣೆ ಗೊತ್ತು. ಆದರೆ ಹಿಂದೆ ಏನಾದರೂ ಕೊಳ್ಳಲು ರೈತರು ಹಸುಗಳನ್ನು, ಹೈನು, ತುಪ್ಪ, ಬೆಣ್ಣೆಯನ್ನು ವಿನಿಮಯ ಪದ್ಧತಿಯಲ್ಲಿ ಬದಲಾವಣೆ ಮಾಡಿಕೊಳ್ಳುತ್ತಿದ್ದರು. ಹಾಗಾಗಿ ದನಗಳು ಇರುವ ಮನೆಯಲ್ಲಿ ಯಾವಾಗಲೂ

ಧನವಿದ್ದಂತೆ. ಒಂದು ವೇಳೆ ರೈತರಿಗೆ ಹಣದ ಅಗತ್ಯ ಬಿದ್ದಾಗ ತಮ್ಮ ಕೊಟ್ಟಿಗೆಯಲ್ಲಿರುವ ಹೆಚ್ಚುವರಿ ಹಸುಗಳನ್ನು ಮಾರಿ ತಮ್ಮ ಹಣದ ಅಗತ್ಯತೆಯನ್ನು ತೀರಿಸಿಕೊಳ್ಳುತ್ತಾರೆ. ಆದ್ದರಿಂದ ದನ ಇದ್ದ ಮನೆಯಲ್ಲಿ ತುರ್ತು ಅಗತ್ಯಕ್ಕೆ ಯಾವಾಗಲೂ ಹಣವಿರುವಂತೆ ಎಂದು ರೈತರು ತಿಳಿದು ನಡೆಸುತ್ತಾ ಬಂದಿದ್ದಾರೆ. ಅಂದರೆ ದನ ಇರುವ ಮನೆಯಲ್ಲಿ ಯಾವಾಗಲೂ ತುರ್ತಿಗೆ ಹಣ ಇದ್ದಂತೆ ಎಂಬುದು ತಾತ್ಪರ್ಯ.

**೪೫. ಹಾರುವನ ತೊತ್ತಾಗಬೇಡ ಗಾಣಿಗನಿಗೆ ಎತ್ತಾಗಬೇಡ**

ಗಾಣದವ ಮತ್ತು ಬ್ರಾಹ್ಮಣ ನಿರಂತರವಾಗಿ ದುಡಿಸಿಕೊಳ್ಳುವವರು ಒಬ್ಬ ಗಾಣಿಗ ಎತ್ತನ್ನು, ಬ್ರಾಹ್ಮಣ ಆಳನ್ನು ಬಿಡುವಿಲ್ಲದಂತೆ ದುಡಿಸಿಕೊಳ್ಳುವುದರಿಂದ ಅವರಿಗೆ ವಿರಾಮವೇ ಇಲ್ಲ.

**೪೬. ಹಸಿದ ಬ್ರಾಹ್ಮಣನನ್ನು ಕೆಣಕಬೇಡ, ಮೇದ ದನ ಕೆಣಕಬೇಡ**

ಬ್ರಾಹ್ಮಣ ಹಸಿವನ್ನು ಕಟ್ಟಲು ಸಾಧ್ಯವಿಲ್ಲ. ಹಸಿದಾಗ ಅವರಿಂದ ಸಮಾಧಾನದ ನಡವಳಿಕೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಹಾಗೆಯೇ ಮೇದ ದನಗಳಿಗೆ ಶಕ್ತಿ ಹೆಚ್ಚು. ಅವುಗಳ ಹೊಟ್ಟೆ ತುಂಬಿದ ಮೇಲೆ ಚೆನ್ನಾಟ ಆಡುತ್ತವೆ. ಅವುಗಳ ಆ ದೈನಂದಿನ ಆಹಾರದ ಅಗತ್ಯತೆ ಮುಗಿದಿರುವುದರಿಂದ ಸಂಭ್ರಮದಲ್ಲಿರುತ್ತವೆ. ಹೆಚ್ಚು ಆಹಾರ ದೊರೆತತದ್ದರಿಂದ ಅವುಗಳ ಶಕ್ತಿಯೂ ಹೆಚ್ಚು. ಅವುಗಳಿಗೆ ಕೆಣಕಿದರೆ ಅವುಗಳಿಂದ ಅಪಾಯ ಕಟ್ಟಿಟ್ಟ ಬುತ್ತಿ ಎಂಬುದು ತಾತ್ಪರ್ಯ.

**೪೭. ದನದ ಮುಂದೆ ಹೋಗ್ಬೇಡ–ಕುದುರೆ ಹಿಂದೆ ಹೋಗ್ಬೇಡ**

ದನ ಗುದ್ದುವುದು ಕೊಂಬಿನಿಂದ, ಹಾಗಾಗಿ ಮುಂಭಾಗ ಅಪಾಯಕಾರಿ, ಕುದುರೆ ಕಾಲಿನಿಂದ ಒದೆಯುತ್ತದೆ. ಅದಕ್ಕೆ ಹಿಂಭಾಗ ಅಪಾಯಕಾರಿ. ಒಂದು ಎಚ್ಚರಿಕೆಯ ಸಂದೇಶವನ್ನು ಗಾದೆ ತಲ ತಲಾಂತರದಿಂದ ಮುಂದಿನ ಜನಾಂಗಕ್ಕೆ ತಿಳಿಸುತ್ತಾ ಬಂದಿದೆ. ಕುದುರೆ, ಹಾಗೂ ದನಗಳ ಜೊತೆಗೆ ಯಾವರೀತಿ ನಡೆದುಕೊಳ್ಳಬೇಕು ಎಂಬುದನ್ನು ತಿಳಿಸುತ್ತದೆ. ಪೆಟ್ಟು ತಿಂದವನಿಗೆ ಗೊತ್ತಿದ್ದೂ ಗೊತ್ತಿದ್ದೂ ಹೋಗಿ ಒದೆ ತೀದು, ಗುದ್ದುಸ್ಕೊಂಡು ಬಂದೀಯಲ್ಲ ಎಂಬುದು ಸಂದೇಶ.

**೪೮. ಎಡೆಯಗೆ ಎತ್ತು ಹೊಡಿಬಾರ್ದು,**<br>
**ಅಡವ್ಯಾಗೆ ಅಡಿಕೆ ಬಡಿಬಾರ್ದು,**<br>
**ತೌರಲ್ಲಿ ಮಡದಿ ಹೊಡೀಬಾರ್ದು.**

ಅಂದರೆ ಬಿತ್ತಿದ ಸಾಲಿನಲ್ಲಿ ಹರಗುವಾಗ ಎತ್ತುಗಳಿಗೆ ಹೊಡೆದರೆ ಅವು ಜೋರಾಗಿ ಓಡಿ ಸಾಲನ್ನು ಕೆಡಿಸಿ ಬಿಡುತ್ತವೆ. ಹಾಗೆ ಅಡವಿಯಲ್ಲಿ ಅಡಕಿ ಹಾಕುತ್ತಾ ಕಾಲ ಕಳೆಯುವ ಜಾಗವಲ್ಲ

ಸದಾ ಅಪಾಯಗಳಿರುವ ಸ್ಥಳವದು. ಅಲ್ಲಿಂದ ಬೇಗನೆ ದಾಟಿ ಬರಬೇಕು. ಹಾಗೆಯೇ ತೌರಿನಲ್ಲಿ ಮಡದಿಯ ಬೆಂಬಲಕ್ಕೆ ಬಹಳ ಜನ ಇರುತ್ತಾರೆ. ಅಂಥಲ್ಲಿ ಹೊಡೆದರೆ ಗಂಡನಿಗೇ ತೊಂದರೆ.

**೪೯. ಉಣಲಿಕ್ಕೆ ಜಾಣ ಕೆಲಸಕ್ಕೆ ಕೋಣ**

ಊಟದಲ್ಲಿ ಕೆಲವರು ಬಹಳ ಜಾಣರಿರುತ್ತಾರೆ. ಆದರೆ ಕೆಲಸ ಎಂದರೆ ಅವರಿಗಾಗದು. ಕೆಲಸದಲ್ಲಿ ಯಾವಾಗಲೂ ಹಿಂದೆ ಬೀಳುತ್ತಾರೆ. ಇಲ್ಲಿ ಕೋಣ ಪದಕ್ಕೆ ಹೀನಾರ್ಥ ಪ್ರಾಪ್ತವಾಗಿದೆ.ದಡ್ಡ ಎಂಬ ಅರ್ಥದಲ್ಲಿ ಬಳಕೆಯಾಗಿದೆ.

**೫೦. ಕುಂಟೆತ್ತಿಗೆ ಕೊಳಕು ನೀರು ಪಂಚಾಮೃತ**

ಚೆನ್ನಾಗಿ ದುಡಿಯುವ ಎತ್ತುಗಳಿಗೆ ಕಾಲ ಕಾಲಕ್ಕೆ ಸರಿಯಾಗಿ ಹುಲ್ಲು ಹಾಕಿ ಸಾಕುತ್ತಾರೆ. ಆದರೆ ಅದೇ ಎತ್ತು ತನ್ನ ಸಾಮರ್ಥ್ಯ ಕಳೆದು ಕೊಂಡರೆ ಅಂತಹ ಎತ್ತಿಗೆ ಕೊಳಕು ನೀರನ್ನು ಕುಡಿಸಿದರೆ ಅದೇ ಪಂಚಾಮೃತ ಎಂಬ ಭಾವನೆ. ಮನುಷ್ಯ ಹಾಗೂ ಪ್ರಾಣಿಗಳಲ್ಲಿ ದೈಹಿಕವಾಗಿ ಶಕ್ತಿ ಇರುವವರೆಗೆ ಮಾತ್ರ ಅವುಗಳಿಗೆ ಬೆಲೆ, ಗೌರವ ಎಂಬುದನ್ನು ಗಾದೆ ನಿರೂಪಿಸುತ್ತದೆ.

**೫೧. ಎಮ್ಮೆ ಮೇಲೆ ಮಳೆ ಹೊಯ್ದು ಹಾಗೆ**

ದಪ್ಪ ಚರ್ಮದ ಎಮ್ಮೆ ಮಳೆಯನ್ನು ಆರಾಮವಾಗಿ ಸಹಿಸಿಕೊಳ್ಳುತ್ತದೆ.ಅದಕ್ಕೆ ಏನೂ ಅನ್ನಿಸುವುದೇ ಇಲ್ಲ. ಹಾಗೆಯೇ ತಪ್ಪು ಮಾಡಿ,ಮಾಡೀ ಭಂಡ ಬಿದ್ದವರನ್ನು ಎಮ್ಮೆ ಚರ್ಮದವರು ಎನ್ನುತ್ತಾರೆ.ಅವರಿಗೆ ಯಾವುದೇ ಬುದ್ಧಿಯ ಮಾತುಗಳು ತಾಕುವುದೇ ಇಲ್ಲ ಎಂಬುದು ತಾತ್ಪರ್ಯ.ಹೀಗೆ ಜನಪದ ಗಾದೆಗಳು ಜನರ ಭಾವನೆಗಳನ್ನು, ಅಪಾರವಾದ ಅನುಭವದ ಮಹತ್ವದ ಮಾತುಗಳನ್ನು, ಚುಟುಕಾಗಿ ಜನತೆಗೆ ತಲುಪಿಸಲು ಸಹಕಾರಿಯಾಗಿವೆ. ಜನರಲ್ಲಿರುವ ಗುಣ, ಅವಗುಣ, ಸೋಮಾರಿತನಗಳನ್ನು, ವ್ಯಂಗ್ಯ ಮಾಡುವ, ಚುಚ್ಚಿ ಮಾತನಾಡುವ, ಪರೋಕ್ಷವಾಗಿ ಹುಂಬರನ್ನು ಎಚ್ಚರಿಸುವ ಶಕ್ತಿ ಗಾದೆಗಳಿಗಿದೆ. ಗ್ರಾಮೀಣರ ಜೀವನದ ಅವಿಭಾಜ್ಯ ಅಂಗವಾಗಿರುವ ಗೋಸಂಪತ್ತು ಜನತೆಯ ಸಂಬಂಧಗಳೊಂದಿಗೆ ರೀತಿ, ನೀತಿ, ತತ್ವ, ರೂಢಿ, ಸಂಪ್ರದಾಯಗಳನ್ನು ತಿಳಿಯಲು, ಹಾಗೂ ಜನತೆಯನ್ನು ಎಚ್ಚರಿಸಲು ಸಹಕಾರಿಯಾಗಿದೆ. ದನಗಳು ಸಾಕಷ್ಟು ಶಕ್ತಿ ಹೊಂದಿಯೂ ಒಂದು ಹಗ್ಗ ಅವುಗಳನ್ನು ಕಟ್ಟಿನಿಲ್ಲಿಸುತ್ತದೆ. ಆದರೆ ಆ ದನಗಳು ಪ್ರೀತಿಯ ಕಾರಣಕ್ಕಾಗಿ ನಂಬಿದ ಒಡೆಯನಿಗೆ, ಮನೆಗೆ ನಿಷ್ಠವಾಗಿ ಬದುಕುತ್ತವೆ. ಇದನ್ನೇ ಅವುಗಳಿಗೆ ಶಕ್ತಿ ಇದ್ದೂ ದಡ್ಡತನದಿಂದ ಬಾಳುವ ಈ ಜೀವಿಗಳನ್ನು ನಂಬಿಕೆಗೆ, ಶ್ರಮಕ್ಕೆ, ದಡ್ಡತನಕ್ಕೆ, ಉಪಯುಕ್ತತೆಯ ಕಾರಣಕ್ಕೆ ಅನೇಕ ರೀತಿಯಲ್ಲಿ ಮಾನವನಿಗೆ ಉದಾಹರಿಸಬಹುದಾದ ಪ್ರಾಣಿ ಎಂದರೆ ಅದು ಗೋವುಗಳು. ಅವುಗಳ ಸಾಧು ಸ್ವಬಾವ, ಒಡೆಯನಿಗೆ ತೋರಿಸುವ ನಿಷ್ಟೆ, ಮುಗ್ದತೆ, ಎಲ್ಲವೂ

ಮಾನವನನ್ನು ಎಚ್ಚರಿಸಲು ಗಾದೆಗಳಲ್ಲೂ ಬಳಕೆಯಾಗಿದೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಮಾತು ಅವುಗಳ ಸತ್ವ ಶಕ್ತಿಗೆ, ಸಾಕ್ಷಿಯಾಗಿವೆ.

### ಉ. ಗೋಸಂಬಂಧಿ ಬೈಗುಳಗಳು

ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಜನರು ತಮ್ಮ ಮನಸ್ಸಿನಲ್ಲಿ ಯಾವ ಕಲ್ಮಶವನ್ನೂ ಇಟ್ಟುಕೊಳ್ಳದಂತೆ ಇರುತ್ತಾರೆ. ಕಾರಣ ಅವರ ನೋವನ್ನು, ಬೇಜಾರನ್ನು, ಸಿಟ್ಟನ್ನು, ಬೈಗುಳಗಳು ಹೊರ ಹಾಕುತ್ತವೆ. ಯಾವುದೋ ಘಟನೆ ಸಂಭವಿಸಿದಾಗ ಅಥವಾ ನೋವಾದಾಗ ಆ ನೋವಾದ ತೀವ್ರತೆಯಲ್ಲಿಯೇ ಬೈಗುಳಗಳು ಹೊರ ಬಂದು ಅವರ ಮನಸ್ಸನ್ನು ಹಗುರಮಾಡುತ್ತವೆ. ಅಂಥಹ ಬೈಗುಳಗಳು ಗ್ರಾಮೀಣ ಜನರ ಮಾತುಗಳಲ್ಲಿ ಸಹಜವಾಗಿ ಬೆರೆತುಹೋಗಿವೆ. ಈ ಬೈಗುಳಗಳನ್ನು ವ್ಯಕ್ತಪಡಿಸಲು ಹಾಕುವ ಧ್ವನಿ ಶಕ್ತಿಯ ಆಧಾರದ ಮೇಲೆ ಈ ಬೈಗುಳಗಳ ತೀವ್ರತೆ, ಅರ್ಥ ಪರಂಪರೆ ಬದಲಾಗುತ್ತವೆ. ಕೆಲವೊಮ್ಮೆ ಈ ಬೈಗುಳಗಳು ಹೊಗಳಿಕೆ ಎನಿಸುತ್ತವೆ.ಇನ್ನು ಕೆಲವು ವೇಳೆ ಮಾಡಿದ ತಪ್ಪಿಗೆ ಹೊಡೆಯಲು ಅವಕಾಶ ಸಿಗದವರು ಅವರನ್ನು ಅವಮಾನಿಸಲು ಬೈದು ತಮ್ಮ ಸಿಟ್ಟನ್ನು ಕಡಿಮೆ ಮಾಡಿಕೊಳ್ಳುತ್ತಾರೆ. ಇಲ್ಲಿ ಕೆಲವು ಪಶು ಸಂಬಂಧಿ ಬೈಗುಳಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ.

#### ೧. ಲೇ ದನಾ

ದನಗಳನ್ನು ದುಡಿಯುವ ಪ್ರಾಣಿ ಎನ್ನುವುದರ ಜೊತೆಗೆ ಎರಡು ಅರ್ಥಗಳಲ್ಲಿ ಅದನ್ನು ಬಳಸಲಾಗಿದೆ. ಒಂದು ಇದು ಏನೂ ಅರಿಯದ ನಿಶ್ಕಲ್ಮಶ ಪ್ರಾಣಿ ಎಂಬರ್ಥದಲ್ಲಿ ಬಳಕೆಯಾದರೆ, ಇನ್ನೊಂದು ಅದರ ದಪ್ಪ ಚರ್ಮದಿಂದ ಭಂಡತನದ, ಎಲ್ಲ ವಾತಾವರಣದಲ್ಲೂ ಯಾವ ಸಂವೇದನೆಯನ್ನೂ(ಚಳಿ, ಮಳೆ, ಗಾಳಿ, ಬಿಸಿಲು)ವ್ಯಕ್ತಪಡಿಸದ ಪ್ರಾಣಿ ಎಂಬುದನ್ನು ತಿಳಿಸುತ್ತದೆ. ಅವುಗಳಿಗೆ ಒಂದು ಸಾರಿ ಹೈ ಅಂದರೆ ಸಾಕು ನೇಗಿಲನ್ನು ಎಳೆಯುವುದನ್ನು ಬಿಟ್ಟು ಅತ್ತ ಇತ್ತ ನೋಡುವುದಿಲ್ಲ. ಇದರಿಂದ ಸ್ವಲ್ಪ ಎಚ್ಚರಿಕೆ ತಪ್ಪಿದರೂ ದನಗಳು ಸಾಲುಗಳನ್ನು ತುಳಿದು ಹಾಳು ಮಾಡಿ ಬಿಡುತ್ತವೆ. ಮನುಷ್ಯನೂ ಪೂರ್ವಾಪರಗಳನ್ನು ಯೋಚಿಸದೆ ಕೆಲಸ ಮಾಡುತ್ತಿದ್ದರೆ ಅಥವಾ ಎಷ್ಟೇ ಹೇಳಿದರೂ ಸರಿಯಾಗಿ ಕೆಲಸ ಮಾಡದೆ ತನಗೆ ತಿಳಿದಂತೆ ಕೆಲಸ ಮಾಡುವವರನ್ನು ದನಕ್ಕೆ ಹೋಲಿಸಿ ಬೈಯುತ್ತಾರೆ.

#### ೨. ದನಕ್ಕೆ ಹುಟ್ಟಿದೋನೆ

ಅತ್ಯಂತ ಕೀಳು ಬೈಗುಳ. ಇಲ್ಲಿ ಮನುಷ್ಯ ತನ್ನ ಆತ್ಮ ಗೌರವವನ್ನು ಮಣ್ಣುಗೂಡಿಸಿಕೊಂಡವನಿಗೆ ನೀನು ಮನುಷ್ಯರ ಸಂಸರ್ಗದಿಂದ ಹುಟ್ಟಿಲ್ಲ. ಏಕೆಂದರೆ ನಿನ್ನಲ್ಲಿ ಮಾನವೀಯ ಗುಣಗಳಿಗಿಂತ

ಭಂಡತನದ ಪ್ರಾಣಿಯ ವರ್ತನೆಯನ್ನು ಕಾಣುತ್ತಿದ್ದೇವೆ. ನಿನ್ನ ಹುಟ್ಟಿಗೆ ಯಾವುದೋ ದನ ಕಾರಣ ಎಂದು ತನ್ನ ಹುಟ್ಟಿಗೆ ಕಾರಣವಾದ ತಂದೆಯನ್ನೂ ಸೇರಿಸಿಕೊಂಡು ಬೈದಂತೆ.

**೩. ಎಮ್ಮೆ ಕಾಯೋನೆ/ದನಾ ಕಾಯೋನೆ**

ಏನೂ ಕೆಲಸವಿಲ್ಲದವರನ್ನು ಎಮ್ಮೆ ಕಾಯೋನು, ದನಾ ಕಾಯೋನು ಎಂದು ಕರೆಯುತ್ತಾರೆ. ಕೈಗಾರಿಕಾ ಕ್ರಾಂತಿಯ ನಂತರ ಪಶುಪಾಲನೆ ಜೀವನದ ಕ್ರಮಗಳಲ್ಲಿ ತನ್ನ ಸ್ಥಾನವನ್ನು ಎಂದು ಕಳೆದು ಕೊಂಡಿತೋ ಅಂದಿನಿಂದ ಮಾಡಲು ಕೆಲಸ ಇಲ್ದೋರು ದನಾ ಸಾಕ್ತಾರೆ ಅನ್ನುವ ಭಾವನೆ ಬಂತು. ಏನೂ ವ್ಯವಹಾರಗಳನ್ನು ಮಾಡಲು ಬರದವರು ದನ ಕಾಯುವುದು ರೂಡಿಯಾಯಿತು. ಅದಕ್ಕೆ ಕೊಟ್ಟ ಕೆಲಸವನ್ನು ಸರಿಯಾಗಿ ನಿರ್ವಹಿಸದವರನ್ನು ಬೈಯ್ಯುವಾಗ ಎಮ್ಮೆ ಕಾಯೋನೆ, ದನಾ ಕಾಯೋನೆ, ಕೊಟ್ಟ ಕೆಲಸವನ್ನೂ ಸರಿಯಾಗಿ ಮಾಡಲು ಬರುವುದಿಲ್ಲ ಎಂದು ಬೈಯ್ಯುವುದು ರೂಡಿಯಲ್ಲಿದೆ.

**೪. ಕೋಣ ಆಗೀಯಲ್ಲೊ**

ಕೋಣ ಗಂಡು ಪ್ರಾಣಿಯಾಗಿದ್ದು ಗ್ರಾಮೀಣ ಪ್ರದೇಶದಲ್ಲಿ ದೇವರಿಗೆ ಬಿಡುವ ಕೋಣಕ್ಕೆ ಯಾರ ಅಂಕೆ, ಆಜ್ಞೇ ಇರುವುದಿಲ್ಲ. ಆ ಪ್ರಾಣಿಗೆ ಮೂಗುದಾರ ಹಾಕುವುದಿಲ್ಲ ಇಡಿ ಊರಿನಲ್ಲಿ ಮೆಯುತ್ತಾ ಏನೂ ಕೆಲಸವಿಲ್ಲದೆ ಓಡಾಡಿಕೊಂಡಿರುತ್ತದೆ. ತಿಂದುಂಡು ಓಡಾಡಿಕೊಂಡಿರುವ ಮನುಷ್ಯನಿಗೆ ಕ್ವಾಣ ಇದ್ದಾಂಗಿದ್ದೀಯಲ್ಲೋ, ಎಂದು ಬೈಯುವುದು ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತದೆ.

**೫. ದನಗಾರ್**

ಇದು ದನಮೇಯಿಸುವ ಕಾಯಕ ಕುರಿತಾದ ಬೈಗುಳ. ಕಾಲದ ಓಟದಲ್ಲಿ ಪಶುಸಾಕುವುದು, ಮತ್ತು ಕೃಷಿಯನ್ನು ಬಿಟ್ಟು ಬೇರೆ ಕೆಲಸ ಮಾಡದವರು ಮಾತ್ರ ಪಶುಪಾಲನೆ ಮಾಡುತ್ತಾರೆ ಎಂಬ ಭಾವನೆ ಸಮಾಜದಲ್ಲಿ ಮೂಡಿತು. ಮಾಡಲು ಕೆಲಸವಿಲ್ಲದ, ತುಂಬಾ ಒರಟು ಸ್ವಭಾವದ ಗುಣುಳ್ಳವರನ್ನು ದನಗಾರ್ ಎಂದು ಬಯ್ಯುತ್ತಿರುತ್ತಾರೆ.ಏಕೆಂದರೆ ಅಲೆಮಾರಿ ಜೀವನ ನಡೆಸುವ ದನಗಾಹಿಗಳು ಸರ್ವ ಋತುವಿಗೂ ಹೊಂದಿಕೊಂಡಿರುವುದರಿಂದ ಅವರು ಒಂದು ರೀತಿಯಲ್ಲಿ ದಪ್ಪ ಚರ್ಮದವರಾಗಿರುತ್ತಾರೆ. ಆದ್ದರಿಂದಲೇ ಮಾತು ಕೇಳದ ಭಂಡರನ್ನು ದನಗಾರ್ ಎಂದು ಬೈಯುವುದು ರೂಡಿ.

**೬. ದನದ್ ಮೈನೋನೆ\ಎಮ್ಮೆ ಚರ್ಮದೋನೆ**

ದನ ಮತ್ತು ಎಮ್ಮೆಯ ಚರ್ಮ ತುಂಬಾ ದಪ್ಪಗಿರುತ್ತದೆ. ಆ ಪ್ರಾಣಿಗಳು ಮರಣಾನಂತರ ಅವುಗಳ ಚರ್ಮವನ್ನು ಕಾಲಿಗೆ ಜೋಡುಗಳನ್ನು,ಬೆಲ್ಟಗಳನ್ನು,ವ್ಯಾನಿಟಿ ಬ್ಯಾಗ್‌ಗಳನ್ನು ಮಾಡಲು

ಬಳಸುತ್ತಾರೆ. ಈ ಪ್ರಾಣಿಗಳ ಚರ್ಮ ದಪ್ಪವಾಗಿದ್ದು ಸೂಕ್ಷ್ಮ ವಿಚಾರಗಳು ಇವಕ್ಕೆ ತಿಳಿಯುವುದಿಲ್ಲ. ಹಸಿರು ಕಂಡರೆ ಸಾಕು ಯಾರ ಹೊಲವಾದರೇನು ನುಗ್ಗಿ ಬಿಡುತ್ತವೆ. ಈ ಭಂಡತನಕ್ಕೆ ಅವು ಎಷ್ಟೇ ಸಾರಿ ದೊಣ್ಣೆಯ ಏಟನ್ನು ತಿಂದರೂ ಪುನಃ ಅದೇ ತಪ್ಪನ್ನು ಮಾಡುತ್ತಿರುತ್ತವೆ. ಹೀಗೆ ಮನುಷ್ಯರಲ್ಲಿಯೂ ಹೊಡೆತ ತಿಂದರೂ ಪಾಠಕಲಿಯದ, ಬೈದರೂ ಬಗ್ಗದ ಸ್ವಭಾವದವರನ್ನು ದನದ್ ಮೈನೋನೆ, ಎಮ್ಮೆ ಚರ್ಮದೋನೆ ಅಂತ ಬೈಯ್ಯುವುದು ರೂಡಿಯಲ್ಲಿದೆ.

**೭. ಗೂಳಿ**

ಇದು ಗ್ರಾಮೀಣ ಪ್ರದೇಶದಲ್ಲಿ ಸಾಮೂಹಿಕವಾಗಿ ತಮ್ಮ ಹಸುಗಳು ಗರ್ಭದರಿಸಲು ಸಹಾಯವಾಗಲು ಸಾರ್ವಜನಿಕವಾಗಿ ಗಂಡು ಹೋರಿಯನ್ನು ಬೀಜಕ್ಕೆ ಬಿಡಲು ಒಂದು ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಆ ಗ್ರಾಮದ ಅಗ್ರ ದೇವರ ಹೆಸರಿನಲ್ಲಿ ಒಂದು ಹೋರಿ ಕರುವನ್ನು ಪೂಜಿಸಿ ಅದಕ್ಕೊಂದು ದೈವದ ಗುರುತ್ತನ್ನು ಹಾಕಿ ಬಿಡುತ್ತಾರೆ. ಅಂದಿನಿಂದ ಅದು ಆ ಊರಿನ ಸ್ವತ್ತು.ಅದು ಎಲ್ಲಾದರೂ, ಯಾರ ಹೊಲದಲ್ಲಾದರೂ ಮೇವು ತಿನ್ನಬಹುದು. ಯಾರೂ ಅದಕ್ಕೆ ಹೊಡೆಯುವಂತಿಲ್ಲ. ಒಂದು ನಿಗದಿತ ವರ್ಷಕ್ಕೆ ಇವುಗಳನ್ನು ಹಿಡಿದು ಹರಾಜು ಹಾಕಿ ಬಂದ ಹಣವನ್ನು ದೇವಾಲಯದ ಕಾರ್ಯಗಳಿಗೆ ಬಳಸುತ್ತಾರೆ. ಹೀಗೆ ಜನರು ತಮ್ಮ ಕೋರಿಕೆ ಈಡೇರಿದರೆ ನಮ್ಮ ಕೊಟ್ಟಿಗೆಯ ಒಂದು ಕರುವನ್ನು ಗೂಳಿಗೆ ಬಿಡುತ್ತೇವೆ ಎಂದು ಹರಕೆ ಹೋರುತ್ತಾರೆ. ಊರಿನ ಯಾರಾದರೂ ಯುವಕ ಹೆಣ್ಣು ಮಕ್ಕಳನ್ನು ಚುಡಾಯಿಸುವುದು, ಕಂಡವರ ಹೊಲದಲ್ಲಿ ಕದಿಯುವುದು, ಯಾರ ಮಾತೂ ಕೇಳದ, ಮನೆಯ ಯಾವ ಕೆಲಸಗಳಲ್ಲೂ ತೊಡಗಿಸಿಕೊಳ್ಳದ ಗುಣದವರನ್ನು ಗೂಳಿದ್ದಂಗೆ ಇದ್ದೀಯಲ್ಲೋ ಎಂದು ಬೈಯ್ಯುತ್ತಾರೆ.

**೮. ಮಾರಿಕ್ವಾಣ**

ಇದು ಉಗ್ರ ದೇವರಾದ ಮಾರಮ್ಮನ ಹೆಸರಿನಲ್ಲಿ, ದುರ್ಗಮ್ಮನ ಹೆಸರಿನಲ್ಲಿ ಹರಕೆ ಬಿಡುವ ಪದ್ಧತಿ. ಇದು ಕೂಡ ಒಂದು ರೀತಿಯಲ್ಲಿ ಎಮ್ಮೆ ಸಂತತಿ ಬೆಳೆಯಲು ಬೀಜಕ್ಕೆ ಬಿಡುವ ಪದ್ದತಿಯೆ. ಕಾಲಿಗೆ ಬಳೆ ತೊಡಿಸಿ ಪೂಜಿಸಿ ಬಿಟ್ಟರೆಂದರೆ ಮುಗಿಯಿತು. ಅದನ್ನು ಯಾರೂ ಕಟ್ಟುವಂತಿಲ್ಲ. ಮೇಯುವಾಗ ಓಡಿಸುವಂತಿಲ್ಲ. ಯಾರದಾದರೂ ಬೇರೆಯವರ ಕೊಟ್ಟಿಗೆಗೆ ಬಂದರೂ ಅದು ದೈವ ಸ್ವರೂಪಿಯಾಗುತ್ತದೆ. ಅದು ಯಾವುದೇ ಮೂಗುದಾಣ ಹೊಂದಿರುವುದಿಲ್ಲ. ಆದ್ದರಿಂದ ಆ ಕೋಣ ಯಾರಿಗೂ ಬಗ್ಗುವುದಿಲ್ಲ. ಅದನ್ನು ಮೂರು, ಅಥವಾ ಆರು ವರ್ಷಗಳಿಗೆ ನಡೆಯುವ ಜಾತ್ರೆಯಲ್ಲಿ ಸಂಹಾರಮಾಡುತ್ತಾರೆ. ತಿಂದುಂಡು ಯಾವುದೇ ಕಾರ್ಯವನ್ನು ಮಾಡದೆ ತಿರುಗಿಕೊಂಡಿರುವ, ಮಕ್ಕಳಿಗೆ ತೊಂದರೆ ಕೊಡುವ, ದೊಣ್ಣೆಯ ಏಟುಗಳಿಗೂ

ಬಗ್ಗದ ಸ್ವಭಾವದವರನ್ನು ಮಾರೀಕ್ವಾಣ ಆಗಿಯಲ್ಲೊ ಎಂದುಬೈಯ್ಯುತ್ತಾರೆ. ಎಷ್ಟು ಉರುದ್ರೂ (ಅಹಂಕಾರದಿಂದ ಉರೀತಾನೆ ಎಂಬ ಗ್ರಾಮೀಣ ಮಾತಿನಂತೆ) ನಿನಿಗೊಂದಿನ ಹಬ್ಬ ಮಾಡ್ತೇವಿ ತಡಿ ಆಮೇಲೆ ನಿನ್ನ ಪೊಗುರು ತೋರಿಸುವಂತೆ ಎಂಬ ಮಾತುಗಳು ಗ್ರಾಮಗಳಲ್ಲಿ ಸಹಜವಾಗಿ ಕೇಳಿಬರುತ್ತವೆ.

ಒಟ್ಟಾರೆ ದನಗಳನ್ನು ಪ್ರೀತಿಯಿಂದ ನೋಡಿಕೊಂಡಾಗ ಅವು ಉಪಯುಕ್ತ ಪ್ರಾಣಿಗಳಾಗಿ ಬಳಕೆಯಾದರೆ, ಅದೇ ಗೋವುಗಳನ್ನು ಹಿಡಿತದಲ್ಲಿ ಇಟ್ಟು ಕೊಳ್ಳಲು ಸಾಧ್ಯವಾಗದೇ ಇದ್ದರೆ ಅವು ಇಡಿ ಊರಿನ ರೈತರ ಬೆಳೆಗಳನ್ನು ಹಾಳು ಮಾಡಿ ಬರೇ ನಿಂದನೆಗಳನ್ನು ತರುತ್ತವೆ. ಆದ್ದರಿಂದ ಅವುಗಳನ್ನು ಹಿಟಿತದಲ್ಲಿಟ್ಟುಕೊಳ್ಳಬೇಕು. ಹಾಗೇ ಮಾನವನೂ ದುಷ್ಟ ಚಟಗಳನ್ನು ಕಲಿತಾಗ ಅವನೂ ಸಮಾಜ ಕಂಟಕನಾಗುತ್ತಾನೆ. ಹಾಗಾಗಿ ಅವನನ್ನು ಮಾತು ಕೇಳುವಂತೆ ಇಟ್ಟುಕೊಳ್ಳಬೇಕು. ಇಲ್ಲದಿದ್ದರೆ ಪುಂಡು ದನಗಳಿಗಾಗುವ ಶಾಸ್ತಿಯೇ ಮಾತು ಕೇಳದ ಮಕ್ಕಳಿಗೂ ಸಮಾಜದಲ್ಲಿ ಆಗುತ್ತವೆ. ಆದ್ದರಿಂದಲೇ ಯಾರ ಮಾತನ್ನೂ ಕೇಳದ ಸ್ವಭಾವದವರನ್ನು, ಏಟು ತಿಂದರೂ ಬಗ್ಗದವರನ್ನು ದನಗಳಿಗೆ ಹೋಲಿಸಿ, ಅವನ ಮಂದ ಸ್ವಭಾವವನ್ನು ಎಮ್ಮೆಗೆ ಹೋಲಿಸಿ, ಕೋಣಕ್ಕೆ ಹೋಲಿಸಿ ಬಯ್ಯುವುದು ಗ್ರಾಮೀಣ ಪ್ರದೇಶದಲ್ಲಿ ಸಾಮಾನವಾಗಿ ಕಂಡುಬರುತ್ತವೆ. ಉಪಯುಕ್ತ ಪ್ರಾಣಿಗಳಾಗಿಯೂ ನಿಯಂತ್ರಣ ಇರಲೇಬೇಕು. ಅದು ಪ್ರಾಣಿಯಾದರೂ ಸರಿಯೇ, ಮನುಷ್ಯನಾದರೂ ಸರಿಯೆ. ಇಂಥ ಸಂದರ್ಭದಲ್ಲಿ ಗೋಸಂಬಂಧಿ ಬೈಗುಳಗಳು ಗಮನಸೆಳೆಯುತ್ತವೆ.

**ಅಡಿ ಟಿಪ್ಪಣಿಗಳು**

೧. ಡಿ.ವಿ. ಪರಮಶಿವಮೂರ್ತಿ, ತುರುಗೊಳ್ ಸಂಕಥನ, ಪು.೧೧

೨. ಎಂ.ಜಿ.ಈಶ್ವರಪ್ಪ, ಗ್ರಾಮೀಣ ಪಶು ಸಾಗಣೆ, ಪು.೧೦

೩. ಶೈಲೇಶ್ ಹೊಳ್ಳ ಕಾಮಧೇನು ೧

೪. ಡಿ.ವಿ.ಪರಮಶಿವಮೂರ್ತಿ, ತುರುಗೊಳ್ ಸಂಕಥನ, ಪು.೧೨

೫. ಎಂ.ಎಲ್.ಮಂಜುನಾಥ, ಸಂಗ್ರಹಿಸಿದ ಕಥೆ

೬. ವಿರುಪಾಕ್ಷಪೂಜಾರಳ್ಳಿ, ಗಾದರಿಪಾಲನಾಯಕ. ಪು.೭೦

೭. ವಿರುಪಾಕ್ಷಿ ಪೂಜಾರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು

೮. ಕೃಷ್ಣಮೂರ್ತಿ ಹನೂರು, ಜನಪದ ವೀರ ಗೀತೆಗಳು, ಪು.೭೦

೯. ಶೈಲೇಶ್ ಹೊಳ್ಳ ಕಾಮಧೇನು

೯ಎ. ಎಂ. ಚಿದಾನಂದ ಮೂರ್ತಿ, ಗೋವು ಗೋಮಾತೆ, ಗೋಹತ್ಯಾ ನಿಷೇಧ ಕಾನೂನು

೧೦. ಶೈಲೇಶ್ ಹೊಳ್ಳ ಕಾಮಧೇನು, ಪು.೧೩೧

೧೧. ಕನ್ನಡ ವಿಷಯ ವಿಶ್ವಕೋಶ, ಪು.೨-೩

೧೨. ಕನ್ನಡ ವಿಷಯ ವಿಶ್ವಕೋಶ, ಪು.೧೯೮

೧೩. ಸ.ಚಿ.ರಮೇಶ್, ಕರ್ನಾಟಕದ ಗ್ರಾಮೀಣ ಆಚರಣೆಗಳು, ಪು.೪೭

೧೪. ಅದೇ, ಪು.೨೨೨

೧೫. ಅದೇ, ಪು.೧೧೦

೧೬. ಅದೇ, ಪು.೧೨೨

೧೭. ಅದೇ, ಪು.೧೪೪

೧೮. ಅದೇ, ಪು.೧೪೪.

೧೯. ಕನ್ನಡ ವಿಷಯ ವಿಶ್ವಕೋಶ, ಪು.೧೧೨೧

೨೦. ಸ.ಚಿ.ರಮೇಶ್, ಕರ್ನಾಟಕದ ಗ್ರಾಮೀಣ ಆಚರಣೆಗಳು, ಪು.೨೦೮

ಅಧ್ಯಾಯ: ಐದು

# ಶಾಸನಗಳಲ್ಲಿ ಗೋಗ್ರಹಣ

ನಮ್ಮ ಪ್ರಾಚೀನರು ದನಗಳನ್ನು ಮುಖ್ಯ ಸಂಪತ್ತೆಂದು ಮತ್ತು ಗೌರವದ ಸಂಕೇತವೆಂದು ತಿಳಿದಿದ್ದರು. ಪ್ರಾಚೀನ ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರದ ಗದ್ದುಗೆ ಹಿಡಿಯಲು, ಅಧಿಕಾರ ವಿಸ್ತರಿಸಲು, ಆ ಮೂಲಕ ತಮ್ಮ ಶ್ರೀಮಂತಿಕೆಯನ್ನು ಉಳಿಸಿಕೊಳ್ಳಲು ಆಕ್ರಮಣ ನೀತಿಯನ್ನು ಅನುಸರಿಸುತ್ತಿದ್ದರು. ಈ ಕಾರಣದಿಂದ ಶಾಂತಿ-ನೆಮ್ಮದಿಗೆ ಬೆಲೆಯೇ ಇರಲಿಲ್ಲ. ವೈರಿಗಳು ದಾಳಿ ಮಾಡುವಾಗ ಯಾವುದೇ ರೀತಿಯ ನಿಯಮಗಳನ್ನು ಪಾಲಿಸುತ್ತಿರಲಿಲ್ಲ. ಈ ದಾಳಿಗಳಿಗೆ ನಿಯಮಗಳನ್ನು ಪಾಲಿಸದೇ ಇರುವ ಕಾರಣ ಯುದ್ಧದ ಭೀಕರತೆಯೂ ಹೆಚ್ಚಾಗಿರುತ್ತಿತ್ತು. ಮೊಘಲರು ಆಕ್ರಮಣ ನಡೆಸಿದ ಸಂದರ್ಭದಲ್ಲಿ ಗೋವುಗಳನ್ನು ಮುಂದಿಟ್ಟುಕೊಂಡು ರಕ್ಷಣೆ ಪಡೆಯುತ್ತಾ ಯುದ್ಧ ನಡೆಸಿದ ವಿಷಯ ಇತಿಹಾಸದಲ್ಲಿ ದಾಖಲಾಗಿದೆ. ಗೋವುಗಳು ಸೈನ್ಯದ ಮುಂದಿದ್ದರೆ, ಹಿಂದು ರಾಜರುಗಳು ಅವುಗಳ ಮೇಲೆ ಶಸ್ತ್ರಪ್ರಯೋಗ ಮಾಡಲಾರರು. ಏಕೆಂದರೆ ಗೋವುಗಳನ್ನು ಪೂಜಿಸುವವರು ಅವುಗಳನ್ನು ವಧಿಸುವುದು ಅವರಿಗೆ ಸಾಧ್ಯವಿಲ್ಲ, ಎಂಬ ಕಾರಣವನ್ನು ಮುಂದಿಟ್ಟುಕೊಂಡು ಅನೇಕ ಯುದ್ಧಗಳಲ್ಲಿ ಭಾರತೀಯ ರಾಜರುಗಳನ್ನು ಸೋಲಿಸಿದ್ದಾರೆ. ಸೋಲು, ಅಪಮಾನ-ಸಾವುಗಳಿಗಿಂತ ಹೆಚ್ಚಿನ ಗೌರವವನ್ನು ಭಾರತೀಯರು ಗೋವುಗಳಿಗೆ ಕೊಟ್ಟಿದ್ದಾರೆ. ಗೋವುಗಳನ್ನು ಪೂಜಿಸಿದ್ದಾರೆ. ಗೋವುಗಳನ್ನು ತಮ್ಮ ಜೀವನದ ಏಳು ಬೀಳುಗಳ ಭಾಗವಾಗಿಸಿಕೊಂಡಿದ್ದಾರೆ. ಆ ಕಾಲದಲ್ಲಿ ತುರುಗಳನ್ನು ರಕ್ಷಿಸುವುದು, ಸ್ತ್ರೀಯರ ಮಾನ ಕಾಪಾಡುವುದು, ಊರುಗಳನ್ನು ರಕ್ಷಿಸುವುದು ಗಂಡಸರ ಪರಮ ಕರ್ತವ್ಯವಾಗಿತ್ತು. ಊರು, ಸ್ತ್ರೀ, ಗೋವುಗಳನ್ನು ರಕ್ಷಿಸುವುದು ಜನರ ಆದ್ಯಕರ್ತವ್ಯವೆಂದು ಬಾವಿಸಿದ ರಾಜರುಗಳನ್ನು, ಊರುಗಳನ್ನು ಕಾಪಾಡಿಕೊಳ್ಳಲು ಅಸಮರ್ಥರು ಎಂಬುದನ್ನು ಸಾರಿ ಹೇಳಿ ಅವರನ್ನು ಕುಗ್ಗಿಸುವ ಕ್ರಮವಾಗಿ ಯುದ್ಧದ ತಂತ್ರಗಳಲ್ಲಿ ಗೋವು, ಸ್ತ್ರೀ, ಗ್ರಾಮಗಳ ಮೇಲೆಯೇ ದಾಳಿಗಳು ಹೆಚ್ಚಾದವು.

ನಿಮ್ಮ ಊರಿನ ಗೋವುಗಳನ್ನು, ಸ್ತ್ರೀಯರನ್ನು, ಗ್ರಾಮಗಳನ್ನು ಕಾಪಾಡಿಕೊಳ್ಳದ ನೀವೆಂಥ ಗಂಡಸರು ಎಂದು ಮೂದಲಿಸಿ ಅವಮಾನಪಡಿಸುವುದು ಯುದ್ಧದ ಭಾಗವಾಯಿತು.

ಯುದ್ಧ ಪ್ರಬೇದಗಳಲ್ಲಿ ಅತೀ ಮುಖ್ಯವಾದ **"ತುಱುಗೊಳ್"**.ತುಱು+ ಕೊಳ್, **"ಕೊಳ್"** ಎಂಬುದು ತೆಗೆದುಕೋ ಎಂಬರ್ಥದ **"ಕೊಳ್"** ಧಾತುವಿನ ಭಾವನಾಮ. ಕಳ್ಳರು ಬಂದು ದನಗಳನ್ನು (ಮುಖ್ಯವಾಗಿ ಹಸುಗಳನ್ನು, ಎಮ್ಮೆಗಳನ್ನು) ಕದಿಯುತ್ತಿದ್ದದ್ದನ್ನು **"ತುಱುಗೊಳ್"** ಎಂದೂ, ದನಗಳನ್ನು ರಕ್ಷಿಸಲು ನಡೆದ ಯುದ್ಧವನ್ನು **"ತುಱುಗೊಳ್"** ಎಂದು ಶಾಸನಗಳು ಕರೆದಿವೆ. ಹಸುಗಳನ್ನು ಒಂದು ಐಶ್ವರ್ಯವೆಂದೇ ಭಾವಿಸಿದ್ದು (ಗೋಧನ) ಅವುಗಳನ್ನು ಕದಿಯುವುದು ಕಳ್ಳರಿಗೆ ಬಹು ಪ್ರಿಯವಾಗಿತ್ತು. ಪ್ರಾಚೀನ ಕರ್ನಾಟಕದಲ್ಲಿ ಜನರಿಗಿಂತ ದನಗಳು ಹೆಚ್ಚು ಅರಕ್ಷಿತ ಸ್ಥಿತಿಯಲ್ಲಿದ್ದಂತೆ ಊಹಿಸಬಹುದು. ಕಳ್ಳರು ಬಂದು ಕದ್ದಾಗ ಗೋವುಗಳನ್ನು ಕಾಯುತ್ತಿದ್ದ ಗೋವಳರು ಮತ್ತು ಇತರರು ಹುಯ್ಯಲನ್ನೆಬ್ಬಿಸುತ್ತಿದ್ದರು. (ತುರುಗೊಳ್‌ಗೆ "ಹುಯ್ಯಲು" ಎಂಬ ಹೆಸರೂ ಇದೆ.) ಆ ಹುಯ್ಯಲನ್ನು ಕೇಳಿದ ಊರಿನ ಜನರು ಅವುಗಳನ್ನು ರಕ್ಷಿಸಲು ಮುಂದಾಗುತ್ತಿದ್ದರು. ಈ ಸಮಯದಲ್ಲಿ ಹೋರಾಡಿ ಸತ್ತವರ ಸ್ಮಾರಕಗಳು ಸಹಸ್ರಾರು ದೊರಕುತ್ತವೆ. **"ತುಱುಗೊಳ್"** ಕದನದಲ್ಲಿ ಶೌರ್ಯವನ್ನು ಮೆರೆಯದವನನ್ನು ಹೇಡಿಯೆಂದೇ ಜನರು ಭಾವಿಸುತ್ತಿದ್ದರು. ಹಾಗೆ ಭಾವಿಸಲು ಕಾರಣವೆಂದರೆ ಮೊದಲನೆಯದಾಗಿ ಗೋವು ಪೂಜನೀಯ ವಾದದ್ದು, ಎರಡನೆಯದಾಗಿ ಅದು ಕಳೆದುಕೊಳ್ಳಲಾರದ ಆಸ್ತಿ, ಮೂರನೆಯದಾಗಿ ಅವುಗಳನ್ನು ಕಳೆದುಕೊಳ್ಳುವುದರಲ್ಲಿ ಊರಿನ ವ್ಯಕ್ತಿಯ ಮಾನ ಅವಮಾನದ ಪ್ರಶ್ನೆಯೂ ಇದೆ.[೧]

ಗೋವುಗಳ ರಕ್ಷಣೆಗಾಗಿ ನಡೆದ ಯುದ್ಧಗಳನ್ನು ತುಱುಗೊಳ್ ಯುದ್ಧಗಳೆಂದು ಕರೆದಿದ್ದಾರೆ. **ತುಱುಗೊಳ್** ಕಾಳಗದಲ್ಲಿ ಮಡಿದ ವೀರರು, ಮಡಿದವರ ಮಕ್ಕಳು, ಹೆಂಡತಿಯರು, ತಾಯಿ–ತಂದೆಯರು, ಅಣ್ಣ–ತಮ್ಮಂದಿರು, ಊರ ಪ್ರಮುಖರು ದೇವಲೋಕಕ್ಕೆ ಹೋಗಲಿ ಎಂಬ ಆಶಯದಿಂದ ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದರು. ಈ ತುಱುಗೊಳ್, ಯುದ್ಧದ ವಿವರಣೆ ನೀಡುವ ಶಾಸನಗಳನ್ನು "ಗೋಗ್ರಹಣ" ಶಾಸನಗಳು ಎಂದೂ ಸಹ ಕರೆಯುವರು. ಇಲ್ಲಿಯವರೆಗೆ ಗೋಗ್ರಹಣ ಶಾಸನಗಳನ್ನು ವೀರಗಲ್ಲುಗಳ ಒಂದು ಪರಂಪರೆಯಲ್ಲಿಯೇ ಸೇರಿಸಿ ಅಧ್ಯಯನ ಮಾಡಲಾಗಿದೆ. ಈ ಸಂಶೋಧನೆಯಲ್ಲಿ ತುರುಗೊಳ್ ಸ್ಮಾರಕಗಳನ್ನೇ ವಿಶೇಷವಾಗಿ ಅನುಲಕ್ಷಿಸಿ ಅಧ್ಯಯನ ನಡೆಸಿರುವುದು ಈ ಸಂಶೋಧನೆಯ ವಿಶೇಷ. ಏಕೆಂದರೆ ತುರುಗಳನ್ನು ಅಪಹರಿಸುವ ವಿದ್ಯಾಮಾನಗಳು ಅನಿರೀಕ್ಷಿತವಾಗಿರುತ್ತಿದ್ದವು. ಈ ಯುದ್ಧಗಳ ಮುನ್ಸೂಚನೆ ಯಾವುದೇ ಕಾರಣಕ್ಕೂ ಶತ್ರುಗಳಿಗೆ ದೊರೆಯದಂತೆ ನೋಡಿಕೊಂಡು ದಾಳಿ ನಡೆಸುತ್ತಿದ್ದರಿಂದ ದಾಳಿಗೊಳಗಾದವರೇ ಹೆಚ್ಚು ನಷ್ಟವನ್ನು, ಜೀವ ಹಾನಿಯನ್ನು ಅನುಭವಿಸುತ್ತಿದ್ದರು. ಗೋವುಗಳನ್ನು ಹಿಡಿದು ಅವರನ್ನು

ದುರ್ಬಲರನ್ನಾಗಿಸುವುದೇ ಮುಖ್ಯ ಉದ್ದೇಶವಾಗಿದ್ದರಿಂದ ಗೋವುಗಳನ್ನು ಹಿಡಿಯುವುದು = ಗ್ರಹಣ, ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಗ್ರಹಣ ಹಿಡಿದಾಗ ಸೂರ್ಯನು ಕಳೆಗುಂದುವಂತೆ ಇಲ್ಲಿ ದಾಳಿಗೊಳಗಾದವನ ತೇಜಸ್ಸು, ಪರಾಕ್ರಮಗಳು ಸಂದಿಗ್ಧತೆಗೆ ಸಿಲುಕಿ, ಕುಂದುತ್ತಿದ್ದರಿಂದ ಗ್ರಹಣ ಪದ ಸೂಕ್ತವಾಗಿದೆ. ತುಱುಗೊಳ್=ಗೋಗ್ರಹಣ ಎಂಬ ಎರಡೂ ಪದಗಳೂ ಬಳಕೆಯಾಗಿವೆ.

ಈ ಶಾಸನಗಳು ಇಡೀ ಆ ಯುದ್ಧದ ಚಿತ್ರಣವನ್ನು ದಾಖಲಿಸುವ, ಆ ವೀರನ ಪರಾಕ್ರಮವನ್ನು ವರ್ಣಿಸುವ ಅವನ ಪರಾಕ್ರಮವನ್ನು ಬಣ್ಣಿಸುವ, ಉದ್ದೇಶ ಶಾಸನಗಳಲ್ಲಿ ಅಡಗಿದೆ. ಗೋವುಗಳನ್ನು ಅಪಹರಿಸುವವರು ಕೆಲವೊಮ್ಮೆ ರಾಜರ ಸಾಮ್ರಾಜ್ಯ ವಿಸ್ತರಣೆಯ ಭಾಗವಾಗಿ ನಡೆಸುತ್ತಿದ್ದ ದಾಳಿಗಳನ್ನು ರಾಜಕೀಯ ಉದ್ದೇಶದ **ತುಱುಗೊಳ್** ಯುದ್ಧಗಳೆಂದು ಕರೆಯುತ್ತೇವೆ. ಇದಕ್ಕೆ ಮಹಾಭಾರತದ ವಿರಾಟಪರ್ವದ ಉತ್ತರ-ಗೋಗ್ರಹಣ, ದಕ್ಷಿಣ-ಗೋಗ್ರಹಣ ಪ್ರಸಂಗಗಳನ್ನು ಗಮನಿಸಬಹುದು. ಹಾಗೆಯೇ ತಮ್ಮ ದನಗಳ ಹಿಂಡುಗಳನ್ನು ಬೆಳೆಸುವ ಉದ್ದೇಶದಿಂದ, ಜೀವಧನವಾದ ಗೋವುಗಳನ್ನು ಅಪಹರಿಸುವುದು ಅಂದಿನ ಕಾಲದಲ್ಲಿ ಹೆಚ್ಚಾಗಿತ್ತು. ಇಂಥಹ ಉದ್ದೇಶದಿಂದ ಗೋವುಗಳನ್ನು ಅಪಹರಿಸಲು ಬಂದವರನ್ನು ಕಳ್ಳರು ಎಂದು ಶಾಸನಗಳಲ್ಲಿ ಕರೆಯಲಾಗಿದೆ.

ಕಳ್ಳರು ತುರುಗಳನ್ನು ಕದಿಯಲು ಬಂದಾಗ ಕದಿಯುವುದರ ಜೊತೆಗೆ ಆ ಊರಿನ ಸ್ತ್ರೀಯರ ಬಟ್ಟೆಯನ್ನು ಸೆಳೆದು ಅವಮಾನಗೊಳಿಸುತ್ತಿದ್ದರು. **'ಉಡೆಉರ್ಚುವುದು'** ಎಂಬ ಪದ ಶಾಸನಗಳಲ್ಲಿ ಬಳಕೆಯಾಗಿದೆ. (ಜಂಬೂರು, ಅಡಗಂಟೆ, ಮಳವಳ್ಳಿ, ಚಿಕ್ಕಬಿಲಗುಂಜಿ-ಶಾಸನಗಳನ್ನು ಗಮನಿಸಬಹುದು) ಅಷ್ಟೇಅಲ್ಲದೆ ಅಪಹರಣಕಾರರು ದನಗಳ ಜೊತೆಗೆ ಹೆಣ್ಣು ಮಕ್ಕಳನ್ನೂ ಅಪಹರಿಸುತ್ತಿದ್ದರು. ಆಗ ಸ್ತ್ರೀಯರು ತಮ್ಮ ರಕ್ಷಣೆಗಾಗಿ ಪುಯ್ಯಲಿಡುತ್ತಿದ್ದರು ಅಥವಾ ಹುಯ್ಯಲಿಟ್ಟು ಕೂಗಿಕೊಳ್ಳುತ್ತಿದ್ದರು. ಸ್ತ್ರೀಯರ ವಸ್ತ್ರಗಳನ್ನು (ಉಡೆಯುರ್ಚಿ)ತೆಗೆದು ಹಾಕಿ ಅವರ ಮಾನಭಂಗ ಮಾಡುತ್ತಿದ್ದರು. ಹೆಣ್ಣುಮಕ್ಕಳ ರಕ್ಷಣೆ ಮಾಡಿಕೊಳ್ಳದಿದ್ದರೆ ಆ ಊರಿನ ಗಂಡಸರು ಷಂಡರೆನಿಸಿ ಕೊಳ್ಳಬೇಕಾಗುತ್ತಿತ್ತು. ಹಾಗಾಗಿ ಗೋವುಗಳ, ಹೆಣ್ಣಮಕ್ಕಳ ರಕ್ಷಣೆಗಾಗಿ ನಡೆದ ಯುದ್ಧದಲ್ಲಿ ಮಡಿದವರ ವಿವರಗಳನ್ನು ತಿಳಿಸುವ ಶಾಸನಗಳನ್ನು "ಪೆಣ್ಬುಯ್ಯಲ್" ಶಾಸನಗಳೆಂದು ಕರೆಯಲಾಗಿದೆ.

ಈ ದಾಳಿಗಳು ತುರುಮಂದೆಯನ್ನು ಅಥವಾ ಗ್ರಾಮವನ್ನು ಗುರಿಯಾಗಿಸಿ ದಾಳಿನಡೆಸುತ್ತಿದ್ದ ರಿಂದ ಕಳ್ಳರು ತುರುಗಳನ್ನುಹಿಡಿದ, ಮುಂದಿನ ಹೆಜ್ಜೆ ಸ್ತ್ರೀಯರನ್ನು ಮಾನಭಂಗ ಗೊಳಿಸುವುದು, ಅಪಹರಿಸುವುದನ್ನು ಎರಡನೆಯ ಹಂತವಾಗಿ ಮಾಡುತ್ತಿದ್ದರು. ಮೂರನೆಯ ಹಂತವಾಗಿ ದಾಳಿಗೊಳಗಾದ ಆ ಊರನ್ನು ಪುನಃ ನಿರ್ಮಾಣ ಮಾಡಿಕೊಳ್ಳಲು ಆಗದಷ್ಟು ಹಾಳು ಮಾಡು ತ್ತಿದ್ದರು. ಊರಿಗೆ ಬೆಂಕಿ ಇಡುವುದು, ಮನೆ, ಪೈರು ನಾಶಮಾಡುವುದು ನಡೆಯುತ್ತಿತ್ತು.

ಇದನ್ನು "ಊರಳಿವು" ಎಂದು ಶಾಸನಗಳು ಕರೆದಿವೆ. ತುರುಗೋಳ್ ಶಾಸನಗಳಲ್ಲಿ ಊರಳಿವು ಗೋವುಗಳ ರಕ್ಷಣೆ, ಹೆಣ್ಣುಮಕ್ಕಳ ಮಾನರಕ್ಷಣೆಗಾಗಿ ಮಡಿದ ವೀರನ ವಿವರಗಳು ಜೊತೆಯಲ್ಲಿ ಇರುವ ಶಾಸನಗಳು ಅನೇಕ ದೊರೆಯುತ್ತವೆ. ಇವುಗಳಲ್ಲಿ ಮುಖ್ಯವಾಗಿ ಗೋವುಗಳ ರಕ್ಷಣೆಗೆ ಅಂದಿನ ಸಮಾಜ ಹೆಚ್ಚು ಮೌಲ್ಯವನ್ನು ಕೊಟ್ಟಿದ್ದರಿಂದ ಉಳಿದ ಅಂಶಗಳು ಐಚ್ಛಿಕವಾಗಿ ಮಾತ್ರ ಪ್ರಸ್ತಾಪವಾಗಿವೆ.

**೧. ತುರುಗೋಳ್ ಶಾಸನದ ಸ್ವರೂಪ**

ಪ್ರಾಚೀನ ಕರ್ನಾಟಕದ ಯುದ್ಧಗಳಲ್ಲಿ "ತುಱುಗೋಳ್" ಬಹಳ ಪ್ರಸಿದ್ಧವಾದ ಯುದ್ಧವಾಗಿತ್ತು. ದನಗಳು ಅಂದಿನ ಗ್ರಾಮಸಮಾಜದ ಮತ್ತು ಆರ್ಥಿಕ ವ್ಯವಸ್ಥೆಯ ನಡುವಿನ ಸಂಬಂಧವನ್ನು ಪ್ರತಿಬಿಂಬಿಸುತ್ತದೆ. ಒಬ್ಬರ ಬಳಿ ಲಕ್ಷಾಂತರ ದನಗಳಿವೆ ಎಂದರೆ ಅವುಗಳ ಪಾಲನೆ, ಪೋಷಣೆ ಸುಲಭದ ಮಾತಲ್ಲ. ಆ ಗೋವುಗಳು ಕುಟುಂಬಗಳ ಮತ್ತು ಗ್ರಾಮ ಸಮುದಾಯಗಳ ಆರ್ಥಿಕ ಮೂಲಗಳೂ ಆಗಿದ್ದವು. ಈ ಆರ್ಥಿಕ ಮೂಲಗಳು ಕೆಲವು ವೇಳೆ ವೈಷಮ್ಯಕ್ಕೆ ಕಾರಣವಾಗಿ ಸಂಘರ್ಷಗಳಾಗಿವೆ. ಒಬ್ಬನ ಅರ್ಥವ್ಯವಸ್ಥೆ ಕೆಡಿಸಿದರೆ ಅವನ ಬಲ ಕುಗ್ಗಿಸಿದಂತೆ. ಕೃಷಿಯನ್ನು ಹೊರತುಪಡಿಸಿದರೆ ಹೈನುಗಾರಿಕೆಯೇ ನಮ್ಮ ಪ್ರಾಚೀನರ ಮುಖ್ಯ ಆದಾಯದ ಮೂಲವಾಗಿತ್ತು. ಹೈನುಗಾರಿಕೆಯ ಉತ್ಪನ್ನಗಳೆಲ್ಲವೂ ಅಂದಿನ ಎಲ್ಲ ಅಗತ್ಯ ವಸ್ತುಗಳನ್ನು ಕೊಳ್ಳಲು, ವಿನಿಮಯಕ್ಕೆ ಬಳಕೆಯಾಗುತ್ತಿದ್ದದ್ದು, ಅವುಗಳ ಪ್ರಾಮುಖ್ಯತೆಯನ್ನು ಇನ್ನಷ್ಟು ಹೆಚ್ಚಿಸಿತ್ತು.[೨]

ಶಾಸನಗಳ ಸ್ವರೂಪವನ್ನು ತಿಳಿಯಲು ವಿದ್ವಾಂಸರು ಹಲವಾರು ಪ್ರಯತ್ನಗಳನ್ನು ಮಾಡಿದ್ದಾರೆ. ಆ ಎಲ್ಲ ಪ್ರಯತ್ನಗಳು ಶಾಸನದ ಒಂದೊಂದು ಹೊಳಹುಗಳನ್ನು, ಮಗ್ಗಲುಗಳನ್ನು ಪರಿಚಯ ಮಾಡಿ ಕೊಡುತ್ತದೆ. ಶಾಸನಗಳನ್ನು ಪ್ರದೇಶ, ಭಾಷೆ, ವಸ್ತು, ರಾಜವಂಶ ಮತ್ತು ವಿಷಯಗಳ ಹಿನ್ನೆಲೆಯಲ್ಲಿ ವಿಂಗಡಿಸಿ ವಿಶ್ಲೇಷಿಸುವ ಅನೇಕ ವಿಧಾನಗಳು ಚಲಾವಣೆಯಲ್ಲಿವೆ.

**ಅ. ಪ್ರಾದೇಶಿಕ ಆಧಾರ**

ಭೌಗೋಳಿಕ ಎಲ್ಲೆಯೊಂದನ್ನು ಪರಿಗಣಿಸಿ ಆ ಪ್ರದೇಶದ ಶಾಸನಗಳ ಇತಿಹಾಸವನ್ನು ಗುರುತಿಸುವ ಪ್ರಯತ್ನವೇ ಪ್ರಾದೇಶಿಕ ಆಧಾರ ಅಧ್ಯಯನ. ಇದು ಪ್ರಾದೇಶಿಕ ಇತಿಹಾಸವನ್ನು ತಿಳಿಯಲು ಸಹಕಾರಿಯಾಗಿದೆ. ಉದಾಹರಣೆಗೆ ತರ್ದವಾಡಿ ನಾಡಿನ ಶಾಸನಗಳು, ಬೆಳಗಾವಿ ಜಿಲ್ಲೆಯ ಶಾಸನಗಳು, ಕನ್ನಡ ನಾಡಿನ ಶಾಸನಗಳು, ತಮಿಳುನಾಡಿನ ಶಾಸನಗಳು. ಹೀಗೆ ಆಯಾ ಪ್ರದೇಶದ ಶಾಸನಗಳನ್ನು ಒಟ್ಟುಗೂಡಿಸಿ ಅಧ್ಯಯನ ನಡೆಸುವುದು. ಈ ವಿಭಾಗದಲ್ಲಿ ಬೇರೆ ಬೇರೆ ಅರಸರ, ಕಾಲದ, ವರ್ಷದ, ಮತ್ತು ವಿಷಯದ ಶಾಸನಗಳು ಒಟ್ಟಾಗಿ ದೊರೆಯುತ್ತವೆ.

### ಆ. ಭಾಷಾಧಾರಿತ

ಭಾಷೆಯನ್ನು ಗಮನಿಸಿ ಭಾಷೆಯ ಆಧಾರದ ಮೇಲೆ ಶಾಸನಗಳನ್ನು ವಿಭಾಗಿಸುವ ಕ್ರಮವೇ ಭಾಷೆ ಆಧಾರಿತ ವಿಂಗಡಣೆ. ಭಾಷೆಯ ಇತಿಹಾಸದ ಮೂಲಕ, ಕಾಲ, ರಾಜಮನೆತನ, ತಿಳಿಯಲು ಸಹಕಾರಿ. ಉದಾಹರಣೆಗೆ ಪೂರ್ವದ ಹಳೆಗನ್ನಡದಶಾಸನಗಳು, ಕನ್ನಡ ಶಾಸನಗಳು, ಸಂಸ್ಕೃತ ಶಾಸನಗಳು, ಉರ್ದು ಶಾಸನಗಳು, ನಡುಗನ್ನಡ ಶಾಸನಗಳು, ಹೀಗೆ ಆಯಾ ಶಾಸನಗಳ ಭಾಷೆಯನ್ನು ಆಧರಿಸಿ ಅಧ್ಯಯನ ಮಡುವ ವಿಭಾಗ ಇದಾಗಿದೆ. ಇದರಲ್ಲಿ ಬೇರೆ ಬೇರೆ ಪ್ರದೇಶ,ಕಾಲ ಮತ್ತು ಅರಸರ ಶಾಸನಗಳು ಒಂದೆಡೆ ದೊರೆಯುತ್ತವೆ.

### ಇ. ರಾಜವಂಶ ಆಧಾರಿತ

ನಿರ್ದಿಷ್ಟ ಮನೆತನ, ರಾಜವಂಶಗಳಿಗೆ ಸೇರಿದ ಶಾಸನಗಳನ್ನು ಕಾಲಾನುಕ್ರಮದಲ್ಲಿ, ವಂಶಾವಳಿಯ ಕ್ರಮದಲ್ಲಿ ಒಟ್ಟುಗೂಡಿಸಿ ಆ ಮೂಲಕ ಅರಸುಮನೆತನಗಳ ಇತಿಹಾಸ ತಿಳಿಯುವ ಪ್ರಯತ್ನವನ್ನು ಈ ವಿಭಾಗದಲ್ಲಿ ಕಾಣಬಹುದು.ಉದಾಹರಣೆಗೆ ಗಂಗರ ಶಾಸನಗಳು, ವಿಜಯನಗರ ಅರಸರ ಶಾಸನಗಳು, ಮುಂತಾಗಿ ವಿಭಾಗಿಸಬಹುದು.

ಒಬ್ಬ ರಾಜನ ಆಡಳಿತ ಪದ್ಧತಿ, ಅವರ ಕಾಲದ ಸಂಸ್ಕೃತಿ, ಧರ್ಮ ಮತ್ತು ರಾಜ್ಯದ ಏಳುಬೀಳುಗಳನ್ನು ಈ ವಿಧಾನದಲ್ಲಿ ಅರಿಯಲು ಸಾಧ್ಯ. ಆದರೆ ರಾಜವಂಶದ ಆಧಾರದ ವಿಂಗಡಣೆಯಲ್ಲಿ ಕೆಲವು ವಿಷಯಗಳಿಗೆ ಆಕರಗಳೇ ದೊರೆಯುವುದಿಲ್ಲ. ದೊರೆತರೂ ಕೂಡ ನಾಲ್ಕೈದು ಶಾಸನಗಳು ಮಾತ್ರ ದೊರೆಯುತ್ತವೆ.

### ಈ. ವಸ್ತು ಆಧಾರಿತ

ಶಾಸನಗಳನ್ನು ಯಾವ ವಸ್ತು ಮಾಧ್ಯಮದ ಮೇಲೆ ಕೊರೆಯಲಾಗಿದೆ ಎಂಬ ಅಂಶದ ಮೇಲೆ ಶಾಸನಗಳನ್ನು ವರ್ಗೀಕರಿಸುವ ಪದ್ಧತಿಯೇ ವಸ್ತು ಆಧಾರಿತ ಪದ್ಧತಿ. ಶಾಸನಗಳನ್ನು ಬರೆಯಲು ವಸ್ತು ಮಾಧ್ಯಮಗಳಾಗಿ ತಾಮ್ರ, ಶಿಲೆ ಮುಖ್ಯವಾಗಿವೆ. ಇವುಗಳಲ್ಲದೆ ಚಿನ್ನ, ಬೆಳ್ಳಿ, ಹಿತ್ತಾಳೆ, ಕಂಚು, ಮಣ್ಣಿನ ಕುಡಿಕೆ, ಇಟ್ಟಿಗೆ, ಶಂಖ ಮುಂತಾದ ವಸ್ತುಗಳನ್ನು ಬರೆಯಲು ಬಳಸಿದ್ದಾರೆ. ಈವರೆಗೆ ಗೋಗ್ರಹಣ ಶಾಸನಗಳು ಶಿಲಾ ಮಾಧ್ಯಮದಲ್ಲಿ ಮಾತ್ರ ದೊರತಿವೆ.

### ಉ. ವಿಷಯ ಆಧಾರಿತ

ಶಾಸನವು ಯಾವುದೇ ಲೇಖನ ಸಾಮಗ್ರಿಯ ಮೇಲೆ ಕೊರೆಯಲ್ಪಟ್ಟಿರಲಿ ಅಥವಾ ಯಾವುದೇ ಪ್ರದೇಶ, ರಾಜವಂಶ, ಭಾಷೆಗೆ ಸೇರಿರಲಿ ಮುಖ್ಯವಲ್ಲ. ಆದರೆ ಆ ಶಾಸನ ಯಾವ ವಿಷಯವನ್ನು ಹೇಳುತ್ತದೆ? ಎಂಬುದನ್ನು ಮಾತ್ರ ಈ ವಿಭಾಗದಲ್ಲಿ ಮುಖ್ಯವಾಗಿ ಗಮನಿಸಲಾಗುತ್ತದೆ.

ಉದಾಹರಣೆಗೆ ದಾನಶಾಸನ, ಪ್ರಶಸ್ತಿಶಾಸನ, ವೀರಗಲ್ಲು, ಮಾಸ್ತಿಗಲ್ಲು, ರಾಜಾಜ್ಞೆಗಳು, ಆಜ್ಞೆಗಳು, ವೀರಸ್ಮಾರಕ, ಆತ್ಮ ಬಲಿದಾನ, ಯಂತ್ರದ ಕಲ್ಲು, ಗಡಿಕಲ್ಲು, ಜಯಪತ್ರ ಇತ್ಯಾದಿ. ಈ ವಿಭಾಗ ಕ್ರಮದಲ್ಲಿ ಎಲ್ಲ ಸ್ಥಳಗಳ, ಕಾಲದ, ಭಾಷೆಯ, ಮತ್ತು ರಾಜವಂಶಗಳ ಶಾಸನಗಳು ವಿಷಯದ ಆಧಾರದಿಂದ ಒಂದು ಕಡೆ ದೊರೆಯುತ್ತವೆ. ಈ ವಿಭಾಗ ಕ್ರಮವೇ ಅತ್ಯಂತ ಸೂಕ್ತವಾದ ವಿಭಾಗ ಕ್ರಮವಾಗಿದೆ. ಆ ವಿಷಯಕಾಲಾಂತರದಲ್ಲಿ ಹೇಗೆ ಹೇಗೆ ಬೆಳೆಯಿತು, ಬದಲಾಯಿತು, ಎಂಬುದು ಇದರಿಂದ ತಿಳಿಯುತ್ತದೆ. ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಈ ವಿಭಾಗ ಕ್ರಮ ಬಹಳ ಸೂಕ್ತ

ಸಾಮಾನ್ಯವಾಗಿ ಶಾಸನಗಳ ಆರಂಭದಲ್ಲಿ ಆ ರಾಜರು, ಶಿಲ್ಪಿ, ಅಥವಾ ಆ ವೀರನ ಕುಲದೇವತೆಗೆ ಸಂಬಂಧಿಸಿದಂತೆ ಸ್ತುತಿ ವಾಕ್ಯಗಳಿರುತ್ತವೆ. ಇದು ಶಾಸನ ಹಾಕಿಸಿದವರ ಅಥವಾ ಮರಣ ಹೊಂದಿದವರ, ದಾನ ನೀಡಿದವರ, ಕುಲಾಚಾರದ ದೇವತೆಗಳ ಸ್ತುತಿಯಾಗಿರುತ್ತದೆ. ಶಾಸನ ಸಾಹಿತ್ಯ ಬರಹದ ಆರಂಭದಲ್ಲಿಯೇ 'ಓಂ ಸಿದ್ಧಂ', 'ಶ್ರೀ ಸ್ವಸ್ತಿಶ್ರೀ' ಎಂಬ ಅಕ್ಷರಗಳನ್ನು ಗಮನಿಸಬಹುದು. ಆನಂತರ ಶಾಸನಗಳಲ್ಲಿ ಶಾಸನ ಹಾಕಿಸಿದ ವ್ಯಕ್ತಿ, ದೇವಾಲಯಕ್ಕೆ ಬಿಟ್ಟ ದತ್ತಿ, ದತ್ತಿ ಬಿಟ್ಟ ಸಂಸ್ಥೆ, ವ್ಯಕ್ತಿ ಅಥವಾ ಅರಸು, ಅವರು ನಂಬಿದ ದೈವದ ಶ್ಲೋಕದಿಂದ ಆರಂಭಿಸತೊಡಗಿದ್ದನ್ನು ಗಮನಿಸಬಹುದು.

**ಶೈವ(ಶಿವ)ಉಪಾಸಕರ ಶಾಸನಗಳು**

"ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ

ತ್ರೈಲೋಕ್ಯ ನಗರಾರಂಭ ಮೂಲಸ್ಥಂಭಾಯ ಶಂಭವೇ" ಎಂಬ ಸಾಲನ್ನು ಕಾಣುತ್ತೇವೆ.

**ವಿಷ್ಣು ಉಪಾಸಕರಾದರೆ,**

"ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ

ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ" ಎಂಬ ಸ್ತುತಿಯನ್ನು ಕಾಣಬಹುದು.

**ಜೈನ ಧರ್ಮದ ಅನುಯಾಯಿಗಳಾದರೆ,**

**"ಶ್ರೀ ಮತ್ಪರಮ ಗಂಭೀರ ಸ್ವಾದ್ವಾದಾ ಮೋಘ ಲಾಂಛನಂ**

**ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ"** ಎಂಬ ಶ್ಲೋಕವನ್ನು ಕಾಣಬಹುದು.

ಆದರೆ ತುರುಗೊಳ್ ಶಾಸನದ ಸ್ವರೂಪದಲ್ಲಿ ಬಹುತೇಕ ಒಂದೇ ರೀತಿಯ ಮಾದರಿಯನ್ನು ಹೆಚ್ಚು ಅನುಸರಿಸಲಾಗಿದೆ. ವೀರಗಲ್ಲುಗಳಲ್ಲಿ ಇರುವಂತೆ ಕೆಳಗಿನ ಪಟ್ಟಿಯಲ್ಲಿ ಯುದ್ಧದ ವರ್ಣನೆ

ಎರಡನೆ ಪಟ್ಟಿಯಲ್ಲಿ ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವುದು, ಸ್ವಾಗತಿಸಲು ನಿಂತ ಸ್ವಾಗತಕಾರರು, ವಾದ್ಯಕಾರರು, ಆನಂತರ ಆತನ ಧರ್ಮದ ಅಧಿದೇವರ-ಬಳಿ ಕುಳಿತಿರುವಂತೆ ಚಿತ್ರಿಸಿರುವ ಚಿತ್ರಗಳನ್ನು ಕಂಡ್ರಿಸಿರುವುದರ ಮೇಲೆ ನಾಲ್ಕು ಇಂಚಿನಿಂದ ಆರು ಇಂಚು ಅಗಲದ ಪಟ್ಟಿಯಲ್ಲಿ ಮೇಲಿನಿಂದ ಕೆಳಭಾಗದ ಪಟ್ಟಿಗಳಲ್ಲಿ ಮುಂದುವರೆಯುವಂತೆ ಸಾಹಿತ್ಯವನ್ನು ಕೆತ್ತಲಾಗಿರುತ್ತದೆ. (ಪ್ರತಿ ಚಿತ್ರದ ಮೇಲೆ ೪-೬ ಇಂಚು ಬರಹದ ಪಟ್ಟಿ ಇರುತ್ತದೆ.) ಇದೇ ಮಾದರಿಯನ್ನು ಸಾಮಾನ್ಯವಾಗಿ ಎಲ್ಲಾ ವೀರಗಲ್ಲುಗಳಲ್ಲಿಯೂ ಬಳಸಲಾಗಿರುತ್ತದೆ. ಆದರೂ "ತುರುಗೊಳ್" ಶಾಸನಗಳಲ್ಲಿ ಸಾಹಿತ್ಯದ ಜೊತೆಗೆ ಶಿಲ್ಪವನ್ನು ಕೆತ್ತುವ ವೇಳೆಯಲ್ಲಿ ಕೆಳಭಾಗದ ವೀರನ ಹೋರಾಟದ ಭಾಗದಲ್ಲಿ ವೀರನ ಹಿಂದೆ ಹಲವು ಹಸು ಅಥವಾ ದನಗಳ ಚಿತ್ರವನ್ನು ಕೆತ್ತಿರುತ್ತಾರೆ. ಇದು ಶಿಲ್ಪಿಯ ಆಲೋಚನೆಯಂತೆ ವೈವಿಧ್ಯಮಯವಾಗಿ ಗೋವುಗಳನ್ನು ಬೇರೆ ಬೇರೆ ಕಡೆಗಳಲ್ಲಿಯೂ ಚಿತ್ರಿಸಿರುವುದು ಕಂಡು ಬರುತ್ತದೆ. ಅದನ್ನು ಶಾಸನಶಿಲ್ಪ ಭಾಗದಲ್ಲಿ ದಾಖಲಿಸಿದೆ. 'ತುರುಗೊಳ್' ಶಾಸನಗಳು ಒಂದು ಪ್ರದೇಶದ, ರಾಜರ, ವ್ಯಕ್ತಿಯ, ಗೋ ಸಂಪತ್ತನ್ನು, ಅವುಗಳನ್ನು ಪಾಲಿಸುತ್ತಿರುವ ರೀತಿ, ಆಳುತ್ತಿರುವ ರಾಜ, ದಾಳಿ ಮಾಡಿಸಿದ ರಾಜ, ಹೋರಾಡಿ ತುರುಗಳನ್ನು ಹಿಂದಿರುಗಿಸಿ ಮಡಿದ ವೀರ ಅಥವಾ ಹೋರಾಡುತ್ತಾ ಮಡಿದ ವೀರ, ಶಾಸನ ಹಾಕಿಸಿದ ವ್ಯಕ್ತಿ ಅಥವಾ ಸಂಬಂಧಿಕರ ಬಗ್ಗೆ, ಮಡಿದ ವೀರನ ಗೌರವ ದ್ಯೋತಕವಾಗಿ ಆತನಿಗೆ "ನೆತ್ತರ ಕೊಡುಗೆ" ಯಾಗಿ ದಾನ ನೀಡಿದ ಭೂಮಿಯ ಅಥವಾ ವಸ್ತುವಿನ ವಿವರ, ಚಕ್ಕುಬಂದಿ, ಹಾಗೂ ದಾನ ನೀಡಿದವರ ವಿವರ, ಆ ಹೋರಾಟದಲ್ಲಿ ಆತ ವೀರ ಪಟ್ಟವನ್ನು ಅಲಂಕರಿಸಲು ಹೋರಾಡಿದ ರೀತಿ, ಸಾವಿಗೆ ಹೆದರದೆ ಯುದ್ಧ ಮಾಡುವ ಆತನ ರಣ ಉತ್ಸಾಹ, ಗಾಯಗೊಂಡರೂ ಹೆದರಿ ಓಡದೆ ವೈರಿಗಳ ರುಂಡವನ್ನು ಚಂಡಾಡಿದ ಬಗ್ಗೆ ಆತನ ಸಮರ ಉತ್ಸಾಹವನ್ನು ದೇವತೆಗಳು ಹಾರೈಸಿದ ವಿವರಗಳು, ಆ ವೀರ ಹೋರಾಡುತ್ತಲೇ ಮಡಿದಾಗ ಯುದ್ಧ ಭೂಮಿಯ ವರ್ಣನೆ ಮುಂತಾದ ವಿವರಗಳನ್ನು ಶಿಲ್ಪಿ ಅಥವಾ ಸಾಹಿತಿ ಲಭ್ಯವಿರುವ ಶಾಸನದ ಜಾಗದಲ್ಲಿ ದಾಖಲಿಸಿದ ದಾಖಲೆ "ತುರುಗೊಳ್" ಶಾಸನಗಳಲ್ಲಿ ದೊರೆಯುತ್ತದೆ. ಇಲ್ಲಿ ವೀರ ತನ್ನ ಬಲಿದಾನವನ್ನು ಊರಿನ, ರಾಜ್ಯದ, ರಾಜರ ಮರ್ಯಾದೆಯನ್ನು ಕಾಪಾಡಲು ಹಾಗೂ ತನ್ನೂರಿನ ಗೋ ಸಂಪತ್ತನ್ನು ಉಳಿಸಿಕೊಳ್ಳಲು ಹೋರಾಡುವ ರೀತಿ ಕರ್ನಾಟಕದ ವೀರಗಲ್ಲುಗಳಲ್ಲಿ ಎದ್ದು ಕಾಣುವ ಅಂಶಗಳಲ್ಲೊಂದು. ಗೆದ್ದರೆ ರಾಜ್ಯಲಕ್ಷ್ಮಿ, ಕೀರ್ತಿ, ಮಡಿದರೆ ಸ್ವರ್ಗದಲ್ಲಿ ಅಪ್ಸರೆಯರು ಒಲಿಯುತ್ತಾರೆ. ಕ್ಷಣದಲ್ಲಿ ನಾಶವಾಗುವ ಈ ಅಶಾಶ್ವತ ದೇಹದ ಬಗ್ಗೆ ಮೋಹವೇಕೆ? ಎಂಬ ಮಾತುಗಳು ನಾಡಿನ ವೀರಪರಂಪರೆಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಈ ಹೋರಾಟದ ವೀರಗಲ್ಲುಗಳಲ್ಲಿ ಈ ಕೆಳಗಿನಂತೆ ವಿಷಯಗಳ ಆಧಾರದಲ್ಲಿ ವರ್ಗೀಕರಿಸಿದೆ.

೧. ಯುದ್ಧದಲ್ಲಿ ಮಡಿದ ವೀರರ ವೀರಗಲ್ಲುಗಳು.

೨. ತುರುಗಾಳಗ/ಗೋಗ್ರಹಣದಲ್ಲಿ ಮಡಿದ ವೀರರ ವೀರಗಲ್ಲುಗಳು.

೩. ಹೆಂಗಸರ ಮಾನಭಂಗ ಪ್ರಸಂಗಗಳಲ್ಲಿ(ಪೆಣ್ಬುಯ್ಯಲ್) ಹೋರಾಡಿ ಮಡಿದವರ ವೀರಗಲ್ಲುಗಳು.

೪. ಬೇಟೆಯಲ್ಲಿ ಮಡಿದ ವೀರರ ವೀರಗಲ್ಲುಗಳು.

೫. ಊರಳಿವಿನಲ್ಲಿ ಮಡಿದ ವೀರರ ವೀರಗಲ್ಲುಗಳು.

೬. ಕಳ್ಳರು ಮತ್ತು ದಾರಿಗಳ್ಳರೊಡನೆ ಹೋರಾಡಿ ಮಡಿದವರ ವೀರಗಲ್ಲುಗಳು.

೭. ಸೀಮಾ ಸಂಬಂಧದ (ಗಡಿಕಾಳಗ) ದಲ್ಲಿ ಮಡಿದ ವೀರರ ವೀರಗಲ್ಲುಗಳು

ಎಂದು ಅಧ್ಯಯನಕ್ಕೆ ವರ್ಗೀಕರಿಸಿಕೊಳ್ಳಬಹುದು.[೩]

ಇವುಗಳಲ್ಲಿ ಗೋವುಗಳನ್ನು ರಕ್ಷಿಸುವ ಪ್ರಯತ್ನದಲ್ಲಿ ಅಥವಾ ಕದ್ದವರೊಡನೆ ಹೋರಾಡಿ ಮಡಿದ ವೀರರ ವಿವರಗಳೇ 'ತುರುಗೊಳ್' ಶಾಸನದ ಮೂಲ ಆಧಾರ. ಆ ಆಧಾರಕ್ಕೆ ಶಿಲ್ಪದ ವಿವರ, ಸಾಹಿತ್ಯದ ಸವಿ ಸೇರಿದಾಗ ಅದು ಈ ನಾಡಿನ ವೀರಪರಂಪರೆಯ ರಸಗವಳವಾಗಿ ಕಂಡುಬರುತ್ತದೆ. ಈ ವಿಭಾಗದಲ್ಲಿ ಆ ಅಂಶಗಳನ್ನು ವಿವರವಾದ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ

**೧ ತುರುಗೊಳ್ ಶಾಸನದ ಸಾಹಿತ್ಯ**

ತುರುಗೊಳ್ ಶಾಸನಗಳ ಪಾಠದ ಮುಖ್ಯ ಲಕ್ಷಣವೆಂದರೆ ಅದು ತನ್ನ ಗಮನವನ್ನು ಮುಖ್ಯವಾಗಿ ವೀರನ ಬಗ್ಗೆ ಒಲವನ್ನು ಹೊಂದಿರುವುದೇ ಆಗಿದೆ. ವೀರ ಎನಿಸಿಕೊಳ್ಳಲು ಪ್ರತಿಯೊಬ್ಬ ಪ್ರಜೆಯೂ ಪ್ರಾಣಕ್ಕಿಂತ ಮಾನವೇ ದೊಡ್ಡದು, ಊರಿನ, ಹೆಣ್ಣಿನ, ಗ್ರಾಮದ, ರಾಜರ, ರಾಜ್ಯದ ಸಂಕಟದ ಸಂದರ್ಭದಲ್ಲಿ ಪ್ರತಿಯೊಬ್ಬ ಪ್ರಜೆಯೂ ಪ್ರಾಣದ ಹಂಗು ತೊರೆದು ಹೋರಾಡುತ್ತಾನೆ. ಇಲ್ಲಿ ಒಬ್ಬ ಮನುಷ್ಯನ ಹುಟ್ಟಿನ ಶ್ರೇಷ್ಠತೆ ಅವನ ಜಾತಿಯಿಂದ ಬೆಳೆಯದೆ ಅವನು ಬದುಕಿದ ರೀತಿಯಿಂದ ಆಗುತ್ತಿತ್ತು ಎಂಬುದಕ್ಕೆ ಪಂಪನಪಂಪಭಾರತ, ೬ನೇ ಅಶ್ವಾಸದ ೨೧ನೇ ಪದ್ಯವನ್ನು ಗಮನಿಸಬಹುದು.

> **ಕುಲಮನೆ ಮುನ್ನಮುಗ್ಗಡಿಪಿರೇಂಗಳ ನಿಮ್ಮ ಕುಲಗಳಾಂತು ಮಾ**
> **ರ್ಮಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂಕುಲಂ ಗುಣಂ।**
> **ಕುಲಮಭಿಮಾನಮೊಂದೆ ಕುಲಮಣ್ಣು ಕುಲಂ ಬಗೆವಾಗಳೀಗಳೀ**
> **ಕಲಹದೊಳಣ್ಣ ನಿಮ್ಮ ಕುಲವಾಕುಲಮಂ ನಿಮಗುಂಟುಮಾಡುಗಂ**

“ಮಾತಿಗೆ ಮೊದಲು ಕುಲವನ್ನು ಏಕೆ ಘೋಷಿಸುತ್ತೀರಿ? ನಿಮ್ಮ ಕುಲಗಳು ಪ್ರತಿಭಟಿಸಿದ ವರನ್ನು ಎದುರಿಸಿ, ಹಿಂಬಾಲಿಸಿ ತಿಂದು ಹಾಕುತ್ತವೆಯೇನು? ಹುಟ್ಟಿದ ಜಾತಿ ನಿಜವಾದ ಕುಲವಲ್ಲ, ಛಲ-ಕುಲ, ಸದ್ಗುಣ-ಕುಲ, ಆತ್ಮಗೌರವ ಒಂದೇ ಕುಲ, ಪರಾಕ್ರಮ ಒಂದೇ ಕುಲ, ನನ್ನ ಈ ಕುಲ ನನ್ನನ್ನು ಕಾಪಾಡಿದರೆ ನಿಮ್ಮ ಹುಟ್ಟಿದ ಆಧಾರದ ಕುಲ ನಿಮಗೆ ವ್ಯಥೆಯನ್ನು ಉಂಟುಮಾಡುತ್ತದೆ. ಎಂಬ ಕರ್ಣನ ಮಾತು ಅರ್ಥಗರ್ಭಿತವಾಗಿದೆ. ಹುಟ್ಟಿನಿಂದ ಯಾರೂ ಶ್ರೇಷ್ಠರಾಗುವುದಿಲ್ಲ. ಅವನು ಬಾಳುವ ರೀತಿಯಿಂದ ಶ್ರೇಷ್ಠನಾಗುತ್ತಾನೆ.

ಅಂದಿನ ಕಾಲದಲ್ಲಿ ವ್ಯವಸಾಯ, ಪಶು ಸಂಗೋಪನೆ, ವ್ಯವಸಾಯ ಸಂಬಂಧಿ ಕೆಲಸಗಳನ್ನು ಹೊರತುಪಡಿಸಿದರೆ ದಂಡಿಗೆ ಸೇರುವುದು(ರಾಜರ ಸೈನ್ಯಕ್ಕೆ ಸೇರುವುದು) ಆದಾಯದ ಮೂಲವಾಗಿತ್ತು. ಯುದ್ಧದ ರೋಚಕತೆ, ರಾಜರ ಕೊಡುಗೆಗಳು, ಸೋತ ರಾಜರ ರಾಜ್ಯವನ್ನು ದೋಚುವ ಅವಕಾಶಗಳು ಹೆಚ್ಚಾಗಿದ್ದರಿಂದ ಸೈನ್ಯದ ಕೆಲಸ ಆಕರ್ಷಣೀಯವಾಗಿತ್ತು. ಯುದ್ಧದಲ್ಲಿ ಅವರು ಉತ್ಸಾಹದಿಂದ ಶತ್ರು ರಾಜರನ್ನು ಸದೆ ಬಡಿಯುವ, ಸಾವಿಗೂ ಅಂಜದೆ, ಹೋರಾಡುವ ಮನೋಭಾವ ಅವರನ್ನು ವೀರರನ್ನಾಗಿಸುತ್ತಿತ್ತು. ವೀರನಾದವನು ಯುದ್ಧದಲ್ಲಿ ಪರಾಕ್ರಮವನ್ನು ಪ್ರದರ್ಶಿಸುವುದರಿಂದ ಅಥವಾ ಸಾಯುವುದರಿಂದ ಮಾತ್ರ “ವೀರ” ನೆಂಬ ಗೌರವಕ್ಕೆ ಪಾತ್ರನಾಗು ತ್ತಿರಲಿಲ್ಲ. ತನ್ನ ಸ್ವಂತ ರಕ್ಷಣೆಗಾಗಲೀ, ಇತರರಿಗೆ ದಕ್ಕೆ ಉಂಟಾದಾಗ ಆಗಲೀ, ತನ್ನ ಊರು, ನೆಂಟರು, ಗೋವು, ಹೆಣ್ಣು ತೊಂದರೆಯಲ್ಲಿ ಸಿಕ್ಕಿದಾಗ, ಅವರನ್ನು ತೊಂದರೆಗಳಿಂದ ಬಿಡಿಸುವಲ್ಲಿ ವ್ಯಕ್ತಿಯೊಬ್ಬ ಮಾಡುವ ಹೋರಾಟವನ್ನು ವೀರತನವೆಂದು ಪರಿಗಣಿಸಲಾಗುತ್ತಿತ್ತು. ಒಂದು ವೇಳೆ ಹೋರಾಡದೆ ತಟಸ್ಥನಾಗಿರುವವನನ್ನು ‘ಷಂಡ’ ನೆಂದೂ, ನಿರ್ವೀರ್ಯನೆಂದೂ ಸಮಾಜ ಕರೆಯುತ್ತಿತ್ತು. ಆತನ ಸ್ಥಾನಮಾನಗಳು, ಗೌರವಗಳು ಸಮಾಜದಲ್ಲಿ ಕುಂದುತ್ತಿದ್ದವು. **“ತಾಯಿಯ ಹಾಲು ಕುಡಿಯದವನು”** ಎಂಬ ಮೂದಲಿಕೆ ಮಾತುಗಳು **“ ರಣಹೇಡಿ” ಗೆ** ಅನ್ವಯಿಸುತ್ತಿದ್ದವು.

ಪ್ರಾಚೀನ ಕರ್ನಾಟಕದ ಸಾಮಾಜಿಕ ಮೌಲ್ಯಗಳಲ್ಲಿ **“ಚಾಗ”**(=ತ್ಯಾಗ) ದಷ್ಟೇ ಮುಖ್ಯವಾದುದು **“ಬೀರ”**(=ವೀರ), ಸಂಪಾದಿಸಿದ ಹಣವನ್ನು ಉದಾರವಾಗಿ ದಾನ ಮಾಡಬೇಕು, ಯುದ್ಧದಲ್ಲಿ ಧೈರ್ಯದಿಂದ ಹೋರಾಡಬೇಕು. ಇವೆರಡೂ ಆ ಕಾಲದ ಆದರ್ಶಗಳಲ್ಲಿ ಮುಖ್ಯವಾದವು. ಪಂದೆ(=ಹಂದೆ, ಹೇಡಿ) ಎನಿಸಿಕೊಳ್ಳುವುದು ಸಾವಿಗಿಂತ ಕಡೆ ಎಂಬ ಭಾವನೆ ಆ ಕಾಲದಲ್ಲಿತ್ತು. ಕ್ಷತ್ರಿಯರಿಗೆ ಯುದ್ಧ ಎನ್ನುವುದು ನಿಯಮವಾಗಿ, ಶಾಂತಿಎನ್ನುವುದು ಅಪವಾದವಾಗಿದ್ದ ಕಾಲವದು. **“ಸೈನ್ಯಾತ್ ವಿನಾ ನೈವ ರಾಜ್ಯಂ, ನಧನಂ ನ ಪರಾಕ್ರಮ”**, ಸೈನ್ಯ ಇಲ್ಲದೆ ರಾಜ್ಯವಿಲ್ಲ, ಧನವಿಲ್ಲ, ಪರಾಕ್ರಮವಿಲ್ಲ ಎಂದು ಅಂದಿನ ಜನರು ನಂಬಿದ್ದರು. ರಾಜನೊಬ್ಬನು ಯುದ್ಧಕ್ಕೆ ಸಿದ್ಧವಾದರೆ ಅವನ ಉಪ್ಪುಂಡು ಬದುಕಿದ ಸೈನಿಕರು ಯುದ್ಧಕ್ಕೆ ಸಿದ್ಧವಾಗುತ್ತಿದ್ದರು. ಯುದ್ಧದಲ್ಲಿ ಹೋರಾಡಿ

ರಾಜನ ಉಪಕಾರವನ್ನು ತೀರಿಸುವುದು ತಮ್ಮ ಕರ್ತವ್ಯವೆಂದು ಅವರು ಭಾವಿಸಿದ್ದರು. ಇದನ್ನೇ ಕಾವ್ಯಗಳಲ್ಲಿ, ಶಾಸನಗಳಲ್ಲಿ "ಜೋಳದ ಪಾಟಿ" ಎಂದು ಕರೆದಿದ್ದಾರೆ.[೪]

ಅಂದಿನ ಕಾಲದಲ್ಲಿ ಇಂದಿನಂತೆ ರಕ್ಷಣಾವ್ಯವಸ್ಥೆ ಆಡಳಿತವರ್ಗದಿಂದ ಇರಲಿಲ್ಲ. ಒಂದೊಂದು ಗ್ರಾಮದಲ್ಲೂ ಅದರ ರಕ್ಷಣೆಗಾಗಿ ಆ ಊರಿನ ಒಂದು ವೀರರ ತಂಡವೇ ಸಿದ್ಧವಾಗಿರುತ್ತಿತ್ತು. ಕಳ್ಳರು ಬಂದು ತುರುಗಳನ್ನು ಅಪಹರಿಸಿದಾಗ, ಸ್ತ್ರೀಯರ ಮಾನಭಂಗ ಪ್ರಯತ್ನಗಳು ನಡೆದಾಗ, ಊರಿಗೆ ಊರೇ ಒಗ್ಗಟ್ಟಾಗಿ ನಿಂತು ಹೋರಾಡುತ್ತಿತ್ತು. ಇಂಥಹ ಅಪಾಯದ ಸಂದರ್ಭದಲ್ಲಿ ಹೋರಾಡದೇ ಇದ್ದರೆ "ಬ್ರಹ್ಮ ಪೂತಪಾತಕ"ವು ಬರುತ್ತದೆ ಎಂದು ಶಾಸನ ಒಂದು ಹೇಳುತ್ತದೆ.[೫]

ಇಂತಹ ಸಂದರ್ಭಗಳಲ್ಲಿ ಒಂದು ಕಡೆ ಕರ್ತವ್ಯದ ದೃಷ್ಟಿ, ಮತ್ತೊಂದು ಕಡೆ ಧರ್ಮದೃಷ್ಟಿ ಎರಡೂ ಕೆಲಸಮಾಡುತ್ತಿದ್ದವು. ಯುದ್ಧದಲ್ಲಿ ಆದ ಗಾಯಗಳು ಹೆಚ್ಚು ಇದ್ದಷ್ಟೂ ಆ ಪುರುಷನ ಗೌರವಗಳು ಹೆಚ್ಚಾಗಿರುತ್ತಿದ್ದವು. ಗದಾಯುದ್ಧದಲ್ಲಿ ಒಂದು ಪದ್ಯ

**"ಮಣಿ ಕನಕಂ ವಸ್ತು ವಿಭೂ**
**ಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ॥**
**ಗುಣಮನೆ ಮೆಚಿವುದು ಶಸ್ತ್ರ ।**
**ವ್ರಣಮಂ ನಿನ್ನಂತೆ ಮೆಚಿವುದಿಜೆವ ಬೆಡಂಗಾ** ॥ ೫ ॥(ಗ.ಯು. ೨.೭) ರನ್ನ

ಪುರುಷರು ತಮಗೆ ಕೊಡುವ ಮಣಿಕನಕಾದಿಗಳನ್ನು ಸ್ತ್ರೀಯರು ಅಪೇಕ್ಷಿಸುವುದಿಲ್ಲ. ಅವರು ಮೆಚ್ಚುವುದು ಗುಣವನ್ನು ಮತ್ತು **"ಶಸ್ತ್ರವ್ರಣ"**ವನ್ನು ಎಂದು ಗದಾಯುದ್ಧ ಕೃತಿಯಲ್ಲಿ ದ್ರೌಪದಿ ಹೇಳುತ್ತಾಳೆ. ಹೆಣ್ಣಿನ ಪ್ರೇರಣೆಯ ಮಾತುಗಳು ಇತಿಹಾಸದ ಪುಟಗಳಲ್ಲಿ ಅನೇಕ ಮಹತ್ವದ ಘಟನೆಗಳಿಗೆ ಸಾಕ್ಷಿಯಾಗಿದೆ. ತಾಬಯಸಿದ ಹೆಣ್ಣಿನ ದೃಷ್ಟಿಯಲ್ಲಿ ಒಬ್ಬ ಪುರುಷ ಸದಾಕಾಲ ಶಕ್ತಿಶಾಲಿಯಾಗಿ ವೀರನಾಗಲು ಬಯಸುತ್ತಿದ್ದ. ದೇಹವೆನ್ನುವುದು ಅಶಾಶ್ವತವಾದದ್ದು. ಕೀರ್ತಿಯು ಚಿರಸ್ಥಾಯಿಯಾದದ್ದು. ಅಶಾಶ್ವತವಾದ ದೇಹವು ಹೋದರೆ ಹೋಗಲಿ, ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಬೇಕೆಂಬುದು ಜನರ ಬಯಕೆಯಾಗಿತ್ತು. ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವುದು ಅಥವಾ ಸೋತು ಪ್ರಾಣ ಬಿಡುವುದು, ಎರಡಕ್ಕೂ ಸಮಾನವಾಗ ಗೌರವವಿದೆ. ಸೋತು ಹಿಂದಕ್ಕೆ ಬರುವುದು ಸಾವಿಗಿಂತ ಕಡೆಯಾದದ್ದು. ಈ ಅಂಶವನ್ನು ಗಮನಿಸಿದಾಗ ಅಂದಿನ ಕಾಲದಲ್ಲಿ ಪ್ರಾಣಕ್ಕಿಂತ ಮಾನವೇ ದೊಡ್ಡದು. ಆ ಮಾನದ ರಕ್ಷಣೆ, ಜೀವನದಲ್ಲಿ ಗೌರವಯುತವಾಗಿ ಬದುಕಲು ವೀರನು ಬಯಸುತ್ತಿದ್ದನು. ಅದಕ್ಕಿಂತ ಹೆಚ್ಚಾಗಿ ಹೇಡಿಗಳನ್ನು ಯಾವ ಸೈನ್ಯವೂ ಹೊಂದಲು ಇಷ್ಟಪಡುವುದಿಲ್ಲ. ಆದ್ದರಿಂದ ಅಂದು ಬದುಕಲು ವೀರತನ ಒಂದು ಅರ್ಹತೆಯೂ ಆಗಿತ್ತು.

ಅನೇಕ ಶಾಸನಗಳಲ್ಲಿ ಉಲ್ಲೇಖಿತವಾದ ವೀರನ, ವೀರತ್ವದ ಪ್ರಶಂಸೆಯನ್ನು ಕವಿಗಳು ಮಾಡಿರುವ ರೀತಿಯನ್ನು ಶಾಸನ ಸಾಹಿತ್ಯದ ಈ ಭಾಗದಲ್ಲಿ ಗಮನಿಸುವುದಾದರೆ,

**"ದ್ವಾಮಿಮೌ ಪುರಷೌಲೋಕೇ ಸೂರ್ಯ ಮಂಡಲ ಬೇಧಿನೌ**

**ಪರಿವ್ರಾಡ್ಯೋಗ ಯುಕ್ತಾಶ್ಚರಣೇಚ ಶೂರಮುಖೇ ಹತಃ"**

ಸೌರಮಂಡಲವನ್ನು ಬೇಧಿಸಲು ಇಬ್ಬರಿಗೆ ಮಾತ್ರ ಸಾಧ್ಯ. ಒಬ್ಬನು ಸಾಧನೆಯಿಂದ ಸಿದ್ಧಿ ಪಡೆದ ಸಾಧಕರು, ಇನ್ನೊಬ್ಬರು ರಣರಂಗದಲ್ಲಿ ಶೂರ ಮುಖದಿಂದ ಹೋರಾಡಿ ಮಡಿದ ವೀರನು. ಎಂಬ ಮಾತು ವೀರನ ಮಹತ್ವವನ್ನು ತಿಳಿಸುತ್ತದೆ. ಕನ್ನಡ ನಾಡಿನ ಜನರ ಗುಣಗಳ ಬಗ್ಗೆ ಕವಿರಾಜಮಾರ್ಗಕಾರ ಈ ರೀತಿ ಹೇಳಿದ್ದಾನೆ.

**"ಸುಭಟರ್ಕಳ್ ಕವಿಗಳ್ ಸು**

**ಪ್ರಭುಗಳ ಚೆಲ್ವರ್ಕಳ್ ಅಭಿಜನರ್ಕಳ್ ಗುಣಿಗಳ್**

**ಅಭಿಮಾನಿಗಳ್ ಅತ್ಯುಗ್ರರ್**

**ಗಂಭೀರ ಚಿತ್ತರ್ ವಿವೇಕಿಗಳ್ ನಾಡವರ್ಗಳ್"**

ಎಂಬ ವಾಕ್ಯಗಳು ಕನ್ನಡಿಗರು ಧರಿಸಿದ ಗುಣಗಳನ್ನು ತಿಳಿಸುತ್ತದೆ. ಈ ನಾಡಿನವರು ಒಳ್ಳೆಯ ಯೋಧರೂ, ಗುಣವಂತರೂ, ಕಲಾರಸಿಕರೂ, ವಿವೇಕಿಗಳೂ, ಸ್ವಾಭಿಮಾನಿಗಳೂ, ಉಗ್ರ ಸ್ವರೂಪದವರೂ ಆಗಿದ್ದರು. ಎಂಬುದು ಈ ಕನ್ನಡ ನಾಡು ನಂಬಿದ ಮೌಲ್ಯಗಳು ಕಾವ್ಯದ ಭಾಗ ಆಗಿರುವುದೇ ಸಾಕ್ಷಿಯಾಗಿದೆ. ಸುಮಾರು ಕ್ರಿ.ಶ.೭೦೦ರ ಕಪ್ಪೆ ಅರಭಟ್ಟನ ಬಾದಾಮಿಯ ಶಾಸನದಲ್ಲಿರುವ ತ್ರಿಪದಿ ಕನ್ನಡಿಗರ ಶೌರ್ಯ ಸಾಹಸಗಳನ್ನು ವರ್ಣಿಸುತ್ತದೆ.

**"ಸಾಧುಂಗೆ ಸಾಧು ಮಾಧುರ್ಯಂಗೆ ಮಾಧುರ್ಯಂ**

**ಬಾಧಪ್ಪ ಕಲಿಗೆ ಕಲಿಯುಗ ವಿಪರೀತನ್**

**ಮಾಧವನೀತಂ ಪೆರನಲ್ಲ"**

ಎಂಬ ಮಾತುಗಳು ಸಾಧುಗಳಿಗೆ, ಸಾಧುವಾಗಿಯೂ, ಪ್ರೀತಿಯ ಮಾತುಗಳಿಗೆ ಪ್ರೀತಿಯುಳ್ಳ ನಡತೆಯವನಾಗಿಯೂ, ವೀರಾಧಿ ವೀರನಿಗೆ ಕಲಿಯುಗದಲ್ಲೇ ಅತ್ಯಂತ ವೀರನು ಎಂಬ ನುಡಿಗಳು ಕಲಿತನಕ್ಕೆ ಕನ್ನಡ ನಾಡಿನ ಗುಣಕ್ಕೆ ಸಾಕ್ಷಿಯಾಗಿವೆ. ಗೋವುಗಳು ರಾಜರ, ರಾಜ್ಯದ, ಜನರ ಆದಾಯದ ಮೂಲ ಆದಾಗ ದನಗಳು–ಜೀವಧನದ ಸ್ಥಾನವನ್ನು ಪಡೆದುಕೊಂಡವು. ಗೋವುಗಳನ್ನು ಅವಲಂಬಿಸುವುದು ಜೀವನದ ಆರ್ಥಿಕತೆಯ ಭಾಗವೂ ಆಯಿತು. ಇತರರ ಗೋ ಸಂಪತ್ತನ್ನು ಕಂಡು ತಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನದಲ್ಲಿ **"ತುರುಗೊಳ್"** ಯುದ್ಧ ವಿಧಾನ ಆಕರ್ಷಣೆ ಪಡೆಯಿತು. ಈ ರೀತಿ ಆರಂಭವಾದ **"ತುರುಗೊಳ್"** ಕ್ರಮೇಣ

ಒಂದು ಖಚಿತ ರೂಪವನ್ನು ಪಡೆಯುತ್ತಾ ಬಂದಾಗ ಒಂದು ಗುಂಪಿನವರು ಜೀವಧನಗಳನ್ನು ಅಪಹರಿಸಿದಾಗ, ಇನ್ನೊಂದು ಗುಂಪಿನವರು ಅಪಹರಿಸಿದ ಗುಂಪನ್ನು ತಡೆದು ಹೋರಾಡುವುದು, ಜೀವನದ ಒಂದು ಮೌಲ್ಯವೆಂದು ಪರಿಗಣಿತವಾಯಿತು. ರಾಜ ಪ್ರಭುತ್ವಗಳು ಅಸ್ತಿತ್ವ ಕಂಡುಕೊಂಡಂತೆ ಆಡಳಿತ ವ್ಯವಸ್ಥೆಯ ದೃಷ್ಟಿಯಿಂದ ಭೂಭಾಗವು ಕೃಷಿ, ಗ್ರಾಮ, ನಗರ, ಮಂಡಲ, ನಾಡು ಎಂದು ವರ್ಗೀಕರಣಗೊಂಡವು. ಅವುಗಳ ನೇತೃತ್ವವಹಿಸುವ ರಾಜನ ಒಂದು ನಂಬಿಕೆಯ ಪಡೆ ನಿರ್ಮಾಣವಾಯಿತು. ಸಾಮಂತರು, ನಾಡಗೌಡರು, ಗ್ರಾಮ ಮುಖಂಡರು, ಪಾಳೆಗಾರರು ನಿರಂತರವಾಗಿ ಆ ರಾಜ್ಯದ ರಾಜರ, ಮುಖಂಡರ, ಸಾಮ್ರಾಜ್ಯ ವಿಸ್ತರಣೆಯ ಯುದ್ಧಗಳಲ್ಲಿ ಪಾಲ್ಗೊಳ್ಳುವುದು ಅನಿವಾರ್ಯವಾಯಿತು. ತಮ್ಮ ಶಕ್ತಿ ಪ್ರದರ್ಶಿಸಲು ಸಾಮಂತ–ಸಾಮಂತರಲ್ಲಿ, ಗೌಡ–ಗೌಡರ ನಡುವಿನ ವೈರತ್ವ ಅಥವಾ ತಮ್ಮ ಸೈನ್ಯದ ಪ್ರಭುತ್ವ ತೋರಿಸಲು, ಈ **"ತುರುಗೋಳ್"** ಕದನಗಳು ರಾಜಕೀಯ ಉದ್ದೇಶದ ಸ್ವರೂಪವನ್ನು ಪಡೆದುಕೊಂಡವು. ತಮ್ಮ ಊರಿನ ತುರುಗಳನ್ನು ಬೇರೆಯವರು ಸವಾಲು ಎಸೆದೋ ಅಥವಾ ಕಳ್ಳತನಕ್ಕಾಗಿಯೋ ಅಪಹರಿಸಿದಾಗ, ತುರುಗಳನ್ನು ಕಾಯುತ್ತಿದ್ದ ಗೋಪಾಲಕರಿಗೆ ಮತ್ತು ಆ ಸ್ಥಳದ ವೀರರ ಮನಸ್ಥಿತಿ ಹೇಗಿರುತ್ತಿತ್ತು ಎಂಬುದಕ್ಕೆ ಪಂಪನ ಪಂಪಭಾರತದ ಅಷ್ಟಮಾಶ್ವಾಶ ೯೫ನೆ ಪದ್ಯ ಸಮರ್ಥವಾಗಿ ವಿವರಣೆ ನೀಡುತ್ತದೆ.

**"ತುರು ಪರಿವಾಗಳೆಮ್ಮ ಪೆಣನಂತುಟುಱದುಂ ಪರಿಗುಂದಲೆಂದು ಚಿಃ**
**ತುಱುಗೊಳೆ ಬಾಟುಮೆಂದು ತುಱುಗೊಳೊಳೆಸಾವುದು ಸೈಪಿದೆಂದು ಪಾ**
**ಯ್ದುಱುಕೆಯ ಗೋವರಣ್ಮೆ ಬರೆ ಪಾಯಿಸಿ ಘೋಱಯಿಲರ್ ತಗುಳ್ದು ತ**
**ತ್ತುಱತಜೆದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್"**

"ದನಗಳು ಓಡುವಾಗ ನಮ್ಮ ಹೆಣವನ್ನು ತುಳಿದುಕೊಂಡು ಓಡುತ್ತವೆಯಲ್ಲವೆ? ದನಗಳನ್ನು ಶತ್ರುಗಳು ಹಿಡಿದರೆ ನಾವು ಬದುಕಿರಲಾರೆವು. ತುರುಗಾಳಗದಲ್ಲಿ ಸಾಯುವುದು ನಮ್ಮ ಪುಣ್ಯವೇ ಸರಿ(ಅದೃಷ್ಟ)ಎಂದು ಹಾಯ್ದು ಪ್ರಸಿದ್ಧರಾದ ಗೋಪಾಲಕರು ಪೌರುಷ ಪ್ರದರ್ಶನ ಮಾಡಿ ಬರಲು ಕುದುರೆಯರಾವುತರು ಕುದುರೆಗಳನ್ನು ಮುನ್ನುಗ್ಗಿಸಿ ಅವರನ್ನು ಬೆನ್ನಟ್ಟಿ ದೇವಾಲಯಕ್ಕೆ ದೊಡ್ಡ ಮರವನ್ನು ಕಡಿಯುವಂತೆ ಚೂರು ಚೂರಾಗಿ ಕತ್ತರಿಸಿದರು" ಎಂಬ ವರ್ಣನೆ ಕಾವ್ಯಮಯವಾಗಿ ಗೋಗ್ರಹಣದ ಸಂದರ್ಭದ ಹೋರಾಟದ ಮನಸ್ಥಿತಿಯನ್ನು ನಮ್ಮೆದುರು ನಿಲ್ಲಿಸುತ್ತದೆ. ತುರುಕಾಳಗಗಳು ಯಾವುದೇ ಮುನ್ಸೂಚನೆಯೂ ಇಲ್ಲದೆ ಆಕಸ್ಮಿಕವಾಗಿ ನಡೆಯುತ್ತಿದ್ದರಿಂದ ಒಂದು ರೀತಿ "ಗ್ರಹಣ"ವೇ ಸರಿ. ತುರುಗಾಳಗವು ಸ್ವರಕ್ಷಣೆಯ ಯುದ್ಧವಾಗಿದೆ. ಇಂಥಹ ಯುದ್ಧದಲ್ಲಿ ತುರುಗಳ್ಳರ ಬಗ್ಗೆ ಗೌರವ ಇರುತ್ತಿರಲಿಲ್ಲ. ಆದರೆ ಆ ಕಳ್ಳರ ಜೊತೆಗೆ ಹೋರಾಡಿ ಮಡಿದ ಅಥವಾ ಆ ದನಗಳನ್ನು ಹಿಂದಿರುಗಿಸುವಂತೆ ಹೋರಾಡಿದ ವೀರನ ಬಗ್ಗೆ ತುಂಬಾ

ಗೌರವ ಇರುತ್ತಿತ್ತು. ಆದರೆ ಅರಸನ ಆಜ್ಞೆಯಂತೆ ಶತ್ರು ಪಕ್ಷದ ಮೇಲೆ ದಾಳಿ ಮಾಡಿ ಯುದ್ಧಕ್ಕೆ ಆಹ್ವಾನಿಸುತ್ತಿದ್ದ. ಸವಾಲೆಸೆದು ಬರುತ್ತಿದ್ದ ವೀರರ ಬಗ್ಗೆ ಗೌರವ ಭಾವನೆ ಇದ್ದದ್ದರ ಬಗ್ಗೆ ಅಪರೂಪಕ್ಕೆ ದಾಖಲೆಗಳು ಸಿಗುತ್ತವೆ. ತಮಿಳಿನ ಸಂಗಮ್ ಸಾಹಿತ್ಯ ಕೃತಿಗಳಿಂದ ತುರುಗಳನ್ನು ವೀರತನದಿಂದ ಅಪಹರಿಸುವ ವೀರನನ್ನು ಗೌರವಿಸುತ್ತಿದ್ದರೆನ್ನುವುದು ವ್ಯಕ್ತವಾಗುತ್ತದೆ.

ಒಂದು ಗ್ರಾಮದ ವೀರನು ಅಥವಾ ಒಂದು ರಾಜ್ಯದ ಅರಸನು ತನ್ನ ಶತ್ರು ಪಕ್ಷದವರ ಮೇಲೆ ಬಿದ್ದು ತುರುಗಳನ್ನು ಅಪಹರಿಸಿ ಜಯ ದೊರಕಿಸಿಕೊಳ್ಳಲು ಗ್ರಾಮ ದೇವತೆಯನ್ನು ಆರಾಧಿಸುತ್ತಿದ್ದ. ಆನಂತರ ಶುಭ ಶಕುನವೆಂದು ಪರಿಗಣಿಸಲಾಗಿದ್ದ ಕಾಡುಕೋಳಿ ಯಾವ ದಿಕ್ಕಿನಲ್ಲಿ ಕೂಗುತ್ತಿದೆ ಎಂದು ಕಾಯುತ್ತಿದ್ದರು. ಕಾಡುಕೋಳಿ ಕೂಗಿದರೆ ಅದು ಕೂಗುವ ದಿಕ್ಕಿನ ಗ್ರಾಮವನ್ನಾಳುವ ಅರಸನ ಅವನತಿ ಎಂಬುದಕ್ಕೆ ಅದು ಶಕುನವೆಂದು ಭಾವಿಸುತ್ತಿದ್ದರು. ಈ ಶಕುನವನ್ನು ನಂಬಿ ಕಾಡುಕೋಳಿ ಕೂಗಿದ ದಿಕ್ಕಿನಲ್ಲಿದ್ದ ಊರನ್ನು ಮುತ್ತುತ್ತಿದ್ದರು.[೬] ಇಂಥಹ ಹೋರಾಟದಲ್ಲಿ ಜಯದ ಸಂಕೇತವಾಗಿ ಪ್ರತಿಯೊಂದು ಘಟ್ಟದಲ್ಲಿಯೂ ವಿಶಿಷ್ಟವಾದ ಹೂಮಾಲೆ ಯನ್ನು ಹಾಕಿಕೊಳ್ಳುತ್ತಿದ್ದರು.

**"ವೆಚ್ಚ"** ಎಂಬ ಹಾರ ಗೋಗ್ರಹಣದ ವಿಜಯದ ಸಂಕೇತ.

**"ವೆಟ್ಚಿ"** ಎಂಬ ಹಾರ ಗೋಗ್ರಹಣ ಆಕ್ರಮಣ ಮಾಡುವಾಗ, ಸಮರ್ಥ ಆಕ್ರಮಣ ನಡೆಸಿದ್ದರ ಸಂಕೇತ.

**"ನೊಚ್ಚಿ"** ಈ ಹಾರ ಶತ್ರುಗಳನ್ನು ಸಮರ್ಥವಾಗಿ ಎದುರಿಸಿದ್ದರ ಸಂಕೇತವಾಗಿ ಹಾಗೂ ತಮ್ಮನ್ನು ರಕ್ಷಣೆ ಮಾಡಿಕೊಂಡಿದ್ದರ ಸಂಕೇತ.

ಪ್ರತಿಯೊಬ್ಬ ವೀರನೂ **"ವೆಚ್ಚ"** ಹೂಮಾಲೆಯನ್ನು ಧರಿಸಲು ಬಯಸುತ್ತಿದ್ದರು.

ಕರ್ನಾಟಕದಲ್ಲಿ ದೊರೆಯುವ ಅಸಂಖ್ಯ ವೀರಗಲ್ಲುಗಳಲ್ಲಿ ತುರುಗಾಳಗದ ವೀರಗಲ್ಲುಗಳ ಪಾತ್ರ ಮಹತ್ವದ್ದು. ರಾಜಕೀಯ ಸ್ಥಿತ್ಯಂತರದ ಕಾಲಕ್ಕೆ ಸಾಕ್ಷಿಯಾಗಿದ್ದ ಇವುಗಳು ಕೇವಲ ವೀರಗಲ್ಲುಗಳಲ್ಲ. ಕ್ಷತ್ರಿಯ ವರ್ಗದ ಅತ್ಯಂತ ರೋಚಕ ಕದನಕ್ಕೆ ಉದಾಹರಣೆಯಾಗಿ ಸಾಮ್ರಾಜ್ಯಶಾಹಿಗಳ ಅತಿ ಆಸೆಯ ದ್ಯೋತಕವಾದ ಯುದ್ಧಗಳಲ್ಲಿ ಬಲಿ ಪಶುಗಳಾದ ಸಾಮಂತರ, ಗ್ರಾಮ ಮುಖಂಡರ, ಪಾಳೆಗಾರರ, ನಂಬಿಕಸ್ಥ ಭಂಟರ, ರಕ್ತದ ಮಡುವಿನಲ್ಲಿ ಮರೆಯಾದ ವೀರರ ಶೌರ್ಯದ, ಬಲಿದಾನದ ಸಾಕ್ಷಿಗಲ್ಲುಗಳಿವು. ಪ್ರಾಚೀನರ ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರ ಗದ್ದುಗೆ ಹಿಡಿಯಲು, ಅಧಿಕಾರವನ್ನ ವಿಸ್ತರಿಸಲು, ಆ ಮೂಲಕ ತಮ್ಮ ಶ್ರೀಮಂತಿಕೆಯನ್ನು, ಪ್ರತಿಷ್ಠೆಯನ್ನು ಉಳಿಸಿಕೊಳ್ಳಲು ಆಕ್ರಮಣ ನೀತಿ ಅನುಸರಿಸುತ್ತಿದ್ದರು. ಈ ಕಾರಣದಿಂದ ಶಾಂತಿ

– ನೆಮ್ಮದಿಗೆ ಬೆಲೆಯೇ ಇರಲಿಲ್ಲ. ವೈರಿಗಳು ದಾಳಿಮಾಡುವಾಗ ಯಾವುದೇ ರೀತಿ–ನಿಯಮವನ್ನು ಪಾಲಿಸುತ್ತಿರಲಿಲ್ಲ. ಅಧಿಕಾರದ ದಾಹದ ಪರಿಣಾಮದಿಂದ ಸಾಮಾನ್ಯ ಜನರೇ ಹೆಚ್ಚು ನಲುಗಿದ ಸಂಗತಿ ಈಗ ಇತಿಹಾಸದಲ್ಲಿ ಹೂತು ಹೋಗಿದೆ. ದಾಳಿಯ ವೇಳೆ ಅಪಾಯಕ್ಕೆ ಒಳಗಾಗುತ್ತಿದ್ದವರು ಮಹಿಳೆಯರು, ಮಕ್ಕಳು, ಮೂಕ ಪ್ರಾಣಿಗಳು, ಆನೆ, ಕುದುರೆ, ಒಂಟೆ, ಪಶುಗಳು, ರಾಜರುಗಳ ಸಿಂಹಾಸನಕ್ಕಾಗಿ, ಶ್ರೀಮಂತಿಕೆಯ ಉಳಿವಿಗಾಗಿ ಪ್ರಾಣತೆತ್ತ ಬಲಿದಾನಗಳು ಲೆಕ್ಕವಿಲ್ಲದಷ್ಟು. ಯುದ್ಧದ ತಂತ್ರಗಳಲ್ಲಿ ದನಗಳನ್ನು ಅಪಹರಿಸುವುದು, ಸ್ತ್ರೀಯರ ಮಾನಭಂಗ, ಕೊಲೆ–ಸುಲಿಗೆಗಳು ಮುಖ್ಯವಾಗಿದ್ದವು. ಇವುಗಳನ್ನು ಶಾಸನ ಸಾಹಿತ್ಯ ನಮಗೆ ತಿಳಿಸುತ್ತದೆ.

ತುರುಗೊಳ್ ಶಾಸನ ಸಾಹಿತ್ಯದಲ್ಲಿ ಮುಖ್ಯವಾಗಿ ಕಂಡುಬರುವ ಅಂಶಗಳನ್ನು ಪಟ್ಟಿಮಾಡುವುದಾದರೆ,

೧. ರಾಜರ ಆಡಳಿತಕ್ಕೆ ಒಳಪಟ್ಟ ಪ್ರದೇಶ

೨. ತುರುಗೊಳ್ ಊರಳಿವು, ಪೆಣ್ಬುಯ್ಯಲ್‌ಗೆ ಸಂಬಂಧಿಸಿದ ವಿಚಾರಗಳು ಹಾಗೂ ಆ ಗೋಗ್ರಹಣದಲ್ಲಿ ಬಂಧಿಯಾದ ಪಶುಗಳ ಸಂಖ್ಯೆ ಇತ್ಯಾದಿ ವಿವರಗಳು.

೩. ಆಕ್ರಮಿಸಿದ ರಾಜರು, ಅಥವಾ ವ್ಯಕ್ತಿಯ ವಿವರ, ಕಾಲ.

೪. ಹೋರಾಡಿದ ವೀರನ ತಂದೆ–ತಾಯಿ–ವೀರನ ವಿವರ.

೫. ಹೋರಾಡಿದ ರೀತಿ (ರಣ ಉತ್ಸಾಹ)

೬. ಯುದ್ದ ಭೂಮಿ, ಆ ಹೋರಾಟದಿಂದ ಯಾವ ರೀತಿಯಾಗಿತ್ತು ಎಂಬುದರ ವರ್ಣನೆ.

೭. ದನಗಳನ್ನು ಮರಳಿಸಿ ಅಥವಾ ಹೋರಾಡುತ್ತಲೇ ಮಡಿದವರ ವಿವರ.

೮. ದೇವಾನುದೇವತೆಗಳ ಮೂಲಕ ಸ್ವರ್ಗಕ್ಕೆ ಸಂದ ವಿವರಣೆ.

೯. ಇವನ ಹೋರಾಟವನ್ನು ಮೆಚ್ಚಿ "ನೆತ್ತರ ಉಡುಗೆಯಾಗಿ" ಭೂಮಿ, ಧನ, ಕನಕಗಳನ್ನು ನೀಡಿದ ವಿವರ.

೧೦. ಶಾಸನವನ್ನು ಹಾಕಿಸಿದ ರಾಜ ಅಥವಾ ರಕ್ತ ಸಂಬಂಧಿಗಳ ವಿವರ.

ಇಷ್ಟು ಅಂಶಗಳನ್ನು ತುರುಗೊಳ್ ಶಾಸನ ಸಾಹಿತ್ಯವು ಒಳಗೊಂಡಿರುವುದನ್ನು ಗಮನಿಸಬಹುದು. ಇಡೀ ಕರ್ನಾಟಕದ ವೀರಗಲ್ಲುಗಳನ್ನು ಗಮನಿಸಿದಾಗ ಎಲ್ಲಾ ಪ್ರದೇಶಗಳಲ್ಲೂ ಕಂಡುಬರುವ ಈ ತುರುಗೊಳ್ ಶಾಸನಗಳು ಮಲೆನಾಡಾದ ಶಿವಮೊಗ್ಗ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಶಿವಮೊಗ್ಗ ಜಿಲ್ಲೆಯಲ್ಲಿ ದೊರೆತಿರುವ ಶಾಸನಗಳ ಒಟ್ಟು ಸಂಖ್ಯೆಯಲ್ಲಿ ಹೆಚ್ಚು

ಶಾಸನಗಳನ್ನು ಸೊರಬ ಹಾಗೂ ಶಿಕಾರಿಪುರ ತಾಲ್ಲೂಕುಗಳು ಒಳಗೊಂಡಿವೆ. ಕಾರಣ ಸಮತಟ್ಟಾದ ಭೂಮಿ, ನೀರನ್ನು ಕುಡಿಸಲು ಅಪಾಯವಿಲ್ಲದ ಕೆರೆ ಅಥವಾ ನೀರಿನ ಹೊಂಡಗಳು, ವಿಶಾಲವಾದ ಹುಲ್ಲುಗಾವಲು ಹಾಗೂ ದುರ್ಗಮವಲ್ಲದ ಅರಣ್ಯಗಳು ಪಶುಪಾಲನೆಗೆ ಹೇಳಿ ಮಾಡಿಸಿದ ವಾತಾವರಣ ಪಶುಸಂಪತ್ತು ಹೆಚ್ಚಲು ಕಾರಣ. ಆ ಕಾರಣದಿಂದಲೇ ತುರುಗೊಳ್ ಶಾಸನಗಳ ಸಂಖ್ಯೆಯಲ್ಲೂ ಹೆಚ್ಚಾಗಿವೆ. ಈ ಭೂ ಭಾಗದಲ್ಲಿ ಇರುವ ನದಿಗಳೂ ಸದಾಕಾಲ ತುಂಬಿಹರಿಯದೆ ಮಳೆಗಾಲದಲ್ಲಿ ಮಾತ್ರ ಉಕ್ಕಿ ಹರಿಯುತ್ತವೆ. ಉಳಿದ ದಿನಗಳಲ್ಲಿ ಈ ನದಿಗಳು ಅಪಾಯವಲ್ಲದ ನೀರಿನ ಮಡುಗಳಾಗಿರುವುದು ಪಶುಪಾಲಕರು ಇಷ್ಟಪಟ್ಟಂತೆ ಕಂಡುಬರುತ್ತದೆ.

ಆದರೆ ತೀರ್ಥಹಳ್ಳಿ, ನಗರ, ಶಿವಮೊಗ್ಗ, ಭದ್ರಾವತಿ ಭಾಗಗಳನ್ನು ಗಮನಿಸಿದಾಗ ವಿಶಾಲವಾದ ತುಂಗ, ಭದ್ರ, ಶರಾವತಿ ನದಿಗಳು ವಿಶಾಲ ಹರಿವನ್ನು ಹೊಂದಿರುವುದು ಹಾಗೂ ಅರಣ್ಯವೂ ಸಹ ದಟ್ಟವಾಗಿ ದುರ್ಗಮವಾಗಿರುವುದು, ಮಳೆಗಾಲದಲ್ಲಿ ಮಳೆಯೂ ಹೆಚ್ಚಾಗಿರುವುದು ಆ ಭಾಗದ ಕಾಡುಗಳು ಸದಾ ಜೌಗು ಪ್ರದೇಶವಾಗಿರುವುದು ಹಾಗೂ ಆ ಭಾಗದ ಕಾಡುಗಳಲ್ಲಿ ರಕ್ತ ಹೀರುವ ಇಂಬಳ(ಜಿಗಣಿ)ಹುಳುಗಳು ಗೋವುಗಳು ಮೇಯುವಾಗ ರಕ್ತ ಹೀರಿತ್ತಿದ್ದದ್ದು, ಕಾಡಿನ ಕ್ರೂರ ಪ್ರಾಣಿಗಳ ಕಾಟ ಗೋವುಗಳ ಪಾಲನೆಗೆ ಸೂಕ್ತವಾಗಿಲ್ಲದ ಕಾರಣ ಪಶುಪಾಲನೆ ವೇಗ ಪಡೆಯಲಿಲ್ಲ. (ಆದ್ದರಿಂದಲೇ ಕೆಲವು ಭಾಗದಲ್ಲಿ ವ್ಯವಸಾಯಕ್ಕೆ ಎತ್ತುಗಳನ್ನು ಹೆಚ್ಚಾಗಿ ಬಳಸದೆ ಕೋಣಗಳನ್ನು ಬಳಸುತ್ತಾರೆ). ಆದ್ದರಿಂದ ಈ ನಾಲ್ಕು ತಾಲ್ಲೂಕುಗಳಲ್ಲಿ ತುರುಗೊಳ್ ಶಾಸನಗಳು ಬೆರಳೆಣಿಕೆಯ ಸಂಖ್ಯೆಯಲ್ಲಿ ಕಂಡುಬರುತ್ತವೆ. ಹೆಚ್ಚಿನ ಸಂಖ್ಯೆಯ ಶಾಸನಗಳು ಪ್ರಾಕೃತಿಕ ಕಾರಣಕ್ಕಾಗಿಯೇ ನಾಶವಾಗಿವೆ.

ತುರುಗೊಳ್ ಶಾಸನಗಳು ಅಂದಿನ ಜನಜೀವನದ ಭಾಗವಾದ ಗೋವುಗಳ ಬಗೆಗಿನ ಪ್ರೀತಿ, ಆರ್ಥಿಕ ಸಂಬಂಧ, ಅಸ್ತಿತ್ವದ ಹೋರಾಟ, ಮಾನಾಪಮಾನದ ಪ್ರಶ್ನೆಗಳನ್ನು, ಸಂಧಿಗ್ಧತೆಗಳನ್ನು ತನ್ನ ಒಡಲೊಳಗೆ ಹುದುಗಿಸಿಕೊಂಡು ಕರ್ನಾಟಕದ ಸಂಸ್ಕೃತಿಯ ವೀರ ಪರಂಪರೆಯೊಂದರ ಸಾಕ್ಷಿಯಾಗಿ ನಮ್ಮೆದುರಿಗೆ ಕಂಡುಬರುತ್ತವೆ. ಅವುಗಳ ಸಾಹಿತ್ಯಿಕ ಪಾಠಗಳನ್ನು ನಾವು ರಕ್ಷಿಸಿದರೂ ಶಾಸನಗಳನ್ನು ರಕ್ಷಿಸುವಲ್ಲಿ ಆಳುವವರು ತೋರುತ್ತಿರುವ ನಿರ್ಲಕ್ಷ್ಯ ಹಾಗೂ ಗ್ರಾಮಸ್ಥರ ನಿರ್ಲಕ್ಷ್ಯ ಅವುಗಳ ನಾಶಕ್ಕೆ ಕಾರಣವಾಗಿವೆ.

**ಅ. ತುರುಗೊಳ್ ವೀರರು**

ಕರ್ನಾಟಕದ ತುರುಗೊಳ್ ವೀರ ಪರಂಪರೆಯನ್ನು ಗಮನಿಸಿದಾಗ, ಇಲ್ಲಿನ ಪ್ರತಿಯೊಬ್ಬ ವೀರನೂ ದೈವತ್ವವನ್ನು ಪಡೆದು ಜನಮಾನಸದಲ್ಲಿ ವೀರಗಲ್ಲಿನ ರೂಪದಲ್ಲಿ ಪೂಜಿತನಾಗಿದ್ದಾನೆ. ಈ ವೀರರು ಕೇವಲ ರಾಜಮಹರಾಜರ ಸುಖಕ್ಕಾಗಿ ಸತ್ತಿಲ್ಲ. ತಮ್ಮ ಊರಿನ ದನಕರುಗಳಿಗಾಗಿ,

ತಮ್ಮ ಊರಿನ ಮಹಿಳೆಯರ ಮಾನ ರಕ್ಷಣೆಗಾಗಿ, ಊರಿನ ಏಳಿಗೆ ಮತ್ತು ರಕ್ಷಣೆಗಾಗಿ, ಹೋರಾಡುತ್ತಲೇ ಪ್ರಾಣಾರ್ಪಣೆ ಮಾಡಿದ್ದಾರೆ. ಅಲ್ಲದೆ ಹೆಚ್ಚಿನವರು ಈ ರಕ್ಷಣೆಯ ಕೆಲಸಕ್ಕೆ ಸಂಬಳ ಪಡೆಯುವ ಸೈನಿಕ ವೃತ್ತಿಯವರಲ್ಲ. ಆಯಾ ಸಂದರ್ಭದಲ್ಲಿ ರಕ್ಷಣೆಗಾಗಿ ಮೊರೆಯಿಟ್ಟವರ ಸಂರಕ್ಷಣೆಗಾಗಿ ಎಲ್ಲ ಸ್ವಾರ್ಥವನ್ನು ಮೀರಿ ಪ್ರಾಣ ತ್ಯಾಗ ಮಾಡಿದ ಹುತಾತ್ಮರು. ಅವರ್‍ಯಾರೂ ಅನ್ನದ ಹಂಗಿಗಾಗಿ ಸತ್ತವರಲ್ಲ. ಉದಾತ್ತ ಗುಣ, ಕೀರ್ತಿ, ಧರ್ಮದ ಶಾಶ್ವತತೆಗಾಗಿ ಪ್ರಾಣವನ್ನು ತೃಣಕ್ಕೆ ಸಮಾನವಾಗಿ ಕಂಡು ಇಲ್ಲವಾಗಿದ್ದಾರೆ. ಈ ಕಾರಣಕ್ಕಾಗಿಯೇ ಕೆಲವೊಮ್ಮೆ ಸಮಾಜವು ಅವರ ತ್ಯಾಗ ಬಲಿದಾನಕ್ಕೆ ನೆತ್ತರ ಕೊಡುಗೆಗಳನ್ನು ಮರಣಾ ನಂತರ ನೀಡಿದೆ. ಆ ಮೂಲಕ ಅವರ ಬಲಿದಾನಕ್ಕೆ ಗೌರವವನ್ನು ಅವರ ಕುಟುಂಬಕ್ಕೆ ನೆತ್ತರ ಕೊಡುಗೆಯ ಮೂಲಕ ಭದ್ರತೆಯನ್ನು ನೀಡಿದೆ. ಅವರ ಹೋರಾಟವನ್ನು ತಿಳಿಸುವ ಶಾಸನವನ್ನು ಹಾಕಿಸಿ, ಅವರ ಹೋರಾಟವನ್ನು ಗೌರವಿಸುವ, ನೆನಪಿಸಿಕೊಳ್ಳುವ, ಪೂಜಿಸುವ ಮೂಲಕ ಆ ಮಡಿದ ವೀರರಿಗೆ ಗೌರವ ನೀಡುತ್ತಿವೆ.[೭] ತುರುಗೊಳ್ ಯುದ್ಧಕ್ಕೆ ಕಾರಣಗಳನ್ನು ನೋಡುವುದಾದರೆ ಪಶು ಸಂಪತ್ತನ್ನು ಹೆಚ್ಚಿಸಿಕೊಳ್ಳುವುದು ಹಾಗೂ ಬೇರೆ ಬೇರೆ ನಾಡುಗಳ ನಡುವಿನ ಜಿದ್ದು ಕಾರಣವಾಗಿತ್ತು. ತುರುಗಳನ್ನು ಕದ್ದು ಶತ್ರುವಿಗೆ ಅವಮಾನ ಮಾಡುವ ಸಂಪ್ರದಾಯ ಮಹಾಭಾರತದಷ್ಟು ಹಳೆಯದು. ದುರ್ಯೋಧನನು ವಿರಾಟನ ಗೋವುಗಳನ್ನು ಹಿಡಿದದ್ದು ಉತ್ತರ ಗೋಗ್ರಹಣ, ದಕ್ಷಿಣ ಗೋಗ್ರಹಣದಲ್ಲಿ. ಪಾಂಡವರನ್ನು ಅವಮಾನ ಮಾಡಲು ವೀರಾಧಿವೀರರೆಲ್ಲ ಭಾಗವಹಿಸಿದ್ದನ್ನು ಗಮನಿಸಬಹುದು. ಅಜ್ಞಾತವಾಸದಲ್ಲಿ ವಿರಾಟನ ಆಸ್ಥಾನದಲ್ಲಿ ಪಾಂಡವರು ಇರುವರೆಂಬ ಸೂಚನೆ ದೊರೆತಾಗ, ರಾಜಕೀಯ ಲೆಕ್ಕಾಚಾರ ಹಾಕಿದ ಕೌರವರು ವಿರಾಟನ ಗೋವುಗಳನ್ನು ಸೆರೆಹಿಡಿಯುವ ಯೋಜನೆ ರೂಪಿಸುತ್ತಾರೆ. ಕಾರಣ ವೀರರಾದ ಪಾಂಡವರು ಅಲ್ಲಿದ್ದರೆ ಖಂಡಿತ ಅವರು ತಮ್ಮ ಅಜ್ಞಾತ ವಾಸವನ್ನೂ ಲೆಕ್ಕಿಸದೆ ಹೋರಾಟಕ್ಕೆ ಬರುತ್ತಾರೆ. ಎಂಬ ಸಂದರ್ಭವನ್ನು ಗಮನಿಸಿದಾಗ ವೀರ ಪದವಿಯ ಧರ್ಮವನ್ನು ನಿಭಾಯಿಸಲು ಪಾಂಡವರು ಬರಲೇಬೇಕು ಎಂಬ ಮಾತುಗಳು ವೀರನ ಕರ್ತವ್ಯವನ್ನು ಸೂಚಿಸುತ್ತವೆ. ಕರ್ನಾಟಕದ ಶಾಸನಗಳ ಪರಂಪರೆಗೆ ಕಾರಣವೇ ಪ್ರಾಚೀನ ಕರ್ನಾಟಕ ಒಪ್ಪಿಕೊಂಡಿದ್ದ ವೀರ ಪರಂಪರೆ. **"ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾಕ್ಷಣ ವಿಧ್ವಂಸಿನೀ ಕಾ ಯೇ ಕಾಚಿಂತಾಮರಣೇರಣೇ"** ಎಂಬ ಒಂದು ಪದ್ಯ ಶಾಸನ ವೀರರೆಲ್ಲರಿಗೆ ಸ್ಫೂರ್ತಿ ತುಂಬಿದ ವಾಕ್ಯ. ಕ್ಷಣದಲ್ಲಿ ನಾಶ ಆಗುವ ದೇಹಕ್ಕಿಂತ ಶಾಶ್ವತವಾದ ಕೀರ್ತಿಯನ್ನು ಹೊಂದಿ ಗೌರವಿಸಲ್ಪಡಬೇಕು. ಎಂಬುದು ಪ್ರತಿಯೊಬ್ಬ ವೀರನ ಕನಸಾಗಿತ್ತು ಅದು ಅಂದಿನ ಸಮಾಜದಲ್ಲಿ ಪುರುಷನೆನಿಸಿಕೊಳ್ಳಲು ಹೋರಾಟಗಳಲ್ಲಿ ವೀರತನವನ್ನು ಮೆರೆಯುವುದು, ಅಸ್ತಿತ್ವದ ಹಾಗೂ ಅರ್ಹತೆಯ ಮಾನದಂಡವಾಗಿತ್ತು. ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.[೮] ಗೋವುಗಳನ್ನು ಶತ್ರುಗಳಿಂದ ರಕ್ಷಿಸುವಲ್ಲಿ ನಡೆಸುವ ಹೋರಾಟ ಒಂದು

ರಾಜ ಮನೆತನದ ಉದಯಕ್ಕೂ ಕಾರಣವಾಗಬಹುದೆಂಬ ಮಾತನ್ನು **"ಸೊಂತ್ಮೈಮರ್"** ಹೀಗೆ ಹೇಳುತ್ತಾನೆ. ಕೆಲವು ಪ್ರತಿಷ್ಠಿತ ರಾಜವಂಶಗಳ ಸಂತತಿಯ ಮೂಲ ಪಶು ಪಾಲಕ ಪರಿಸರದಿಂದ ಬಂದಿದ್ದು. ದನಗಳನ್ನು ಪಾಲಿಸುವ, ರಕ್ಷಿಸುವ, ಯಶಸ್ಸಿನ ಹಾದಿಯೇ ರಾಜ ಸಂತತಿಯ ಉಗಮಕ್ಕೆ ಕಾರಣವೂ ಆಗಿದೆ. ಇಂಥ ಸಾಹಸ ಕಾರ್ಯವೇ ಪಶು ಸಂರಕ್ಷಕನನ್ನು ಒಬ್ಬ ವೀರನನ್ನಾಗಿ ಮಾಡುವುದರೊಂದಿಗೆ ಸಂಪತ್ತನ್ನು ಗಳಿಸಿಕೊಡುತ್ತದೆ. ಅಕಸ್ಮಾತ್ ಯುದ್ಧದಲ್ಲಿ ಕೊಲ್ಲಲ್ಪಟ್ಟರೆ ಅವನಿಗೆ ಮತ್ತು ಅವನ ವಂಶಸ್ಥರಿಗೆ ಕೀರ್ತಿಯನ್ನು ತರುತ್ತಿತ್ತು.[೯] ನಾಯಕನಹಟ್ಟಿಯ ಪಾಳೆಗಾರರು ಮೂಲತಃ ಪಶುಪಾಲಕರಾದರೂ ಅವರ ಗೋಸಂಬಂಧಿತ ಹೋರಾಟಗಳು, ಯುದ್ಧಗಳು, ಒಂದು ಪಾಳೇಪಟ್ಟುವನ್ನು ಸ್ಥಾಪಿಸುವಲ್ಲಿ ನೆರವಾಯಿತು.

ಕೊಡಗಿನಲ್ಲಿ ಪ್ರಚಲಿತವಿರುವ ಒಂದು ಗಾದೆ **"ಗಂಡಸು ಯುದ್ಧರಂಗದಲ್ಲಿಯೂ, ಬೇಟೆ ಯಲ್ಲಿಯೂ, ಹೆಂಗಸರು ಹೆರಿಗೆಯಲ್ಲಿಯೂ ಸಾಯಬೇಕು"**. ಈ ಗಾದೆಯನ್ನು ಗಮನಿಸಿದಾಗ ಗಂಡಿನ ಸಾವು ಯುದ್ಧದಲ್ಲಾದರೆ ಮತ್ತು ಹೆರಿಗೆಯಲ್ಲಿ ಹೆಣ್ಣಿನ ಸಾವು, ಅವರ ಜೀವಕ್ಕೊಂದು ಸಾರ್ಥಕತೆಯನ್ನು ತಂದುಕೊಡುತ್ತದೆ ಎಂಬ ಮಾತು ಅಂದಿನ ವೀರಪರಂಪರೆಯ ಮೌಲ್ಯಗಳಲ್ಲಿ ಒಂದಾಗಿದೆ. ಹೀಗೆ ಗೋವುಗಳ ರಕ್ಷಣೆಗಾಗಿ, ಸ್ತ್ರೀಯರ, ಊರಿನ ರಕ್ಷಣೆಗಾಗಿ ಹೋರಾಡಿ ಮಡಿದವರು ಆ ಸಂಸ್ಕೃತಿಯ ವೀರರಾಗಿ ದೈವತ್ವವನ್ನು ಪಡೆದಿದ್ದಾರೆ. ಉದಾಹರಣೆಗೆ ಮ್ಯಾಸಬೇಡರ ಜಗಲೂರು ಪಾಪನಾಯಕ, ಗಾದ್ರಿಪಾಲನಾಯಕ, ದಡ್ಡ ಸೂರನಾಯಕ, ಯರಮಂಚ ನಾಯಕ, ಮೂಲತಃ ಪಶುಪಾಲಕರಾಗಿದ್ದು ಆ ಜನಾಂಗದ ಸಾಂಸ್ಕೃತಿಕ ವೀರರಾಗಿದ್ದಾರೆ. ಅಂದಿನ ಕಾಲದಲ್ಲಿ ಆ ವೀರರ ನಿಸ್ವಾರ್ಥ ಹೋರಾಟ ಸಮಾಜದಲ್ಲಿ ಅವರಿಗೆ ಗೌರವವನ್ನು, ದೈವತ್ವವನ್ನೂ ನೀಡಿ ಮರಣಾ ನಂತರವೂ ಸಮಾಜದಿಂದ ಪೂಜಿತರಾಗಿದ್ದಾರೆ. ಅಂತಹ ವೀರ ಪರಂಪರೆಯ ತುರುಗೊಳ್ ವೀರರ ಬಗ್ಗೆ ಗಮನಿಸುವುದಾದರೆ ಸೊರಬ ತಾಲ್ಲೂಕಿನ ಕ್ರಿ.ಶ. ೧೦೯೩ರ ಶಾಸನ ಒಂದರಲ್ಲಿ ತನ್ನೂರಿನ ತುರುಗಳನ್ನು ತುರುಗಳ್ಳರಿಂದ ರಕ್ಷಿಸಲು ಮಾಕಿಸೆಟ್ಟಿ ತುರುಗೊಳ್ ಕದನದಲ್ಲಿ ಮರಣ ಹೊಂದಿದ ವಿವರ ತಿಳಿದುಬರುತ್ತದೆ.[೧೦]

ಅದ್ಭುತವಾದ ವರ್ಣನೆಯನ್ನು ಹೊಂದಿದ ಕ್ರಿ.ಶ.೧೦೯೬ ಕೊರಕೋಡು ಶಾಸನದ ವೀರರಾದ ಭಾವಗೌಡನ ಮಗಂದಿರಾದ ದೇವಗಾವುಂಡ ಮತ್ತು ಮಲ್ಲಗಾವುಂಡ ಆ ಊರಿನ ಗೋವುಗಳ ಮತ್ತು ಸ್ತ್ರೀಯರ ರಕ್ಷಣೆಗಾಗಿ ಮಡಿಯುತ್ತಾರೆ. ಅವರ ದೇಹಗಳನ್ನು ನೋಡಿ ಅಣ್ಣನಾದ **ಬೊಪ್ಪಗೌಡನೂ** ಹೋರಾಡಿ ಮಡಿಯುತ್ತಾನೆ. ಗ್ರಾಮದ ತುರುಗಳ ಹಾಗೂ ಸ್ತ್ರೀಯರ ರಕ್ಷಣೆಗೆ ಒಂದೇ ಮನೆಯ ವೀರರು ಮಡಿದಿರುವುದು ವಿಶೇಷವಾಗಿದೆ. ಇಲ್ಲಿನ ರಣರಂಗದ ವರ್ಣನೆ, ಯುದ್ಧದ ಚಿತ್ರಣ ತುರುಗೊಳ್ ಶಾಸನಗಳಲ್ಲಿಯೇ ಪ್ರಾಮುಖ್ಯತೆ ಪಡೆದಿದೆ.[೧೧]

ತಾಳಗುಂದದ ಶಾಸನ ಒಂದರಲ್ಲಿ ಕಾಳೇಯನಾಯಕನ ಹೋರಾಟ, ಗೋವುಗಳ, ಹೆಣ್ಣುಮಕ್ಕಳ ಮಾನರಕ್ಷಣೆಯ ವೇಳೆ ಮಡಿದ ದಾಖಲೆ ಒದಗಿಸುತ್ತದೆ.[೧೨] ಕ್ರಿ.ಶ. ೧೨ನೇ ಶತಮಾನದ ಸೊರಬ ತಾಲ್ಲೂಕಿನ ಹುನವಳ್ಳಿಯ ಶಾಸನ ಕಳ್ಳರೊಂದಿಗೆ ಕಾದಾಡಿ ತುರುಗಳನ್ನು ಹಿಂದಿರುಗಿಸಿದ ಬೇಳೈಯ್ಯನ ಮಗ **"ಕಪ್ಪಣ್ಣ"**ನ ಹೋರಾಟವನ್ನು ತಿಳಿಸುತ್ತದೆ. ಶಿಕಾರಿಪುರ ತಾಲ್ಲೂಕಿನ ಮುತ್ತಿಗೆಯ ಶಾಸನ **"ತಳಾರದಾಸಿ"**ಯ ಹೋರಾಟವನ್ನು ತಿಳಿಸುತ್ತದೆ.[೧೩] ಕ್ರಿಸ್ತಶಕ ೧೨೨೩ರ ಶಿಕಾರಿಪುರ ತಾಲ್ಲೂಕಿನ ಮಲ್ಲೇನಹಳ್ಳಿಯ ಶಾಸನದಲ್ಲಿ **"ಹೊಂಚಗಾವುಂಡನ"** ವೀರತ್ವವನ್ನು ವಿವರಿಸಲಾಗಿದೆ.[೧೪] ಹಿರೇಜಂಬೂರಿನ ವೀರ **"ದೀವರಬಾಚೇಯ"** ತುರುಗಳ, ಹೆಣ್ಣುಮಕ್ಕಳ ರಕ್ಷಣೆಗಾಗಿ ಹೋರಾಡಿ ಮಡಿದ ವಿವರ ದೊರೆಯುತ್ತದೆ.[೧೫] ತಾಳಗುಂದದ ಪ್ರಣವೇಶ್ವರ ದೇವಾಲಯದ ಮುಂದಿರುವ ಶಾಸನದಲ್ಲಿ ಬನವಾಸಿ ನಾಡಿನ ಹೆಗ್ಗಡೆ ದಂಡನಾಯಕ ಚಾಳುಕ್ಯ ಕೇಸೀಮಯ್ಯ ಸಾಂತಳಿಗೆ ನಾಡಮೇಲೆ ದಾಳಿಮಾಡಿ ತುರುಗಳನ್ನು ಹಿಡಿದು ಹೆಣ್ಣುಮಕ್ಕಳ ಬಟ್ಟೆಯನ್ನು ಬಿಚ್ಚಿ ಹೋಗುವಾಗ ನಾಡಿನ ಕುಲತಿಲಕನಾದ ಮುಕ್ಕಡರ ಸೋವಿಸೆಟ್ಟಿಯ ಮಗ **"ಕಾಳೇಯನಾಯಕ"** ಕುದುರೆಯನ್ನು ಇರಿದು, ಹಲವರನ್ನು ಕೊಂದು ತುರುಗಳನ್ನು ಮರಳಿಸಿದ ವಿವರ ತಿಳಿದುಬರುತ್ತದೆ.[೧೬] ಮಲ್ಲೇನಹಳ್ಳಿಯ **ಹೋಚಗೌಡ,**[೧೭] ಅದೇ ಕಾಲದ ಇನ್ನೊಂದು ಹೋರಾಟದ ಶಾಸನದಲ್ಲಿ **"ಮಸಣಿಗ"**[೧೮] ತುರುಗೊಳ್ ಕದನದಲ್ಲಿ ಹೋರಾಡಿ ಮಡಿದ ವಿವರಗಳು ದೊರೆಯುತ್ತವೆ. ಮಳವಳ್ಳಿಯ ತುರುಗೊಳ್ ಕದನದಲ್ಲಿ ಮಡಿದ **"ಮವಬೋವ"** ನ ಹೋರಾಟವನ್ನು ಮೆಚ್ಚಿ ನೆತ್ತರ ಕೊಡುಗೆ ನೀಡಿದ ವಿವರ ದೊರೆಯುತ್ತದೆ.[೧೯] ತುರುಗಳ್ಳರೊಂದಿಗೆ ಹೋರಾಡಿ ಮಡಿದ ತ್ಯಾಗರ್ತಿಯ **'ಸರಿಯಮೋಜ'**ನು ಹೋರಾಡಿ ಸ್ವರ್ಗಸ್ಥನಾದ ವಿವರಗಳು ಶಾಸನೋಕ್ತವಾಗಿದೆ.[೨೦] ಸೊರಬ ತಾಲ್ಲೂಕಿನ ಚಿಕ್ಕಮಾಗಡಿ ಶಾಸನದಲ್ಲಿ ಕ್ರಿ.ಶ. ೧೯೦ರ ಕಿರಿಯ ಮಾಗಡಿಯ(ಇಂದು ಇದನ್ನು ಚಿಕ್ಕ ಮಾಗಡಿ ಎಂದು ಕರೆಯುವರು)**'ಏಕಗಾವುಣ್ಣ'** ತುರುಗೊಳ್ ಕದನದಲ್ಲಿ ಮಡಿಯುತ್ತಾನೆ. ಹಳೆ ಸೊರಬದ ಶಾಸನ ಒಂದರಲ್ಲಿ ಎರಹಿಸೆಟ್ಟಿಯ ಮಗ **ಮಾಕಿಸೆಟ್ಟಿ** ಹಲವರನ್ನು ಕೊಂದು ತುರುಗಳನ್ನು ಮರಳಿಸಿ ಸುರಲೋಕ ಹೊಂದುತ್ತಾನೆ.[೨೧] ಬಳ್ಳಿಗಾವೆಯ ಶಾಸನ ಒಂದರಲ್ಲಿ **'ಕಣಿಯರೇವಯ್ಯ ನಾಯಕ'** ಗೋವುಗಳನ್ನು ಮರಳಿಸಿ ತನ್ನ ದೇಹವನ್ನು ತೃಣಕ್ಕೆ ಸಮಾನವಾಗಿಸಿ ಮಡಿದು ಕೀರ್ತಿ ಹೊಂದುತ್ತಾನೆ.[೨೨] ಕ್ರಿ.ಶ.೧೧೪೪ರ ಮಾವಲಿ ಶಾಸನದಲ್ಲಿ ಉತ್ತಗೌಡನು, ತುರುಕಾಳಗದಲ್ಲಿ ಮಡಿದು ದೈವತ್ವವನ್ನು ಪಡೆಯುತ್ತಾನೆ.[೨೩] ಕ್ರಿ.ಶ. ೧೧೫೨ರ ಕಾಲದ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕವಡಿ ಗ್ರಾಮದ ತುರುಗೋಳ್ ಶಾಸನದಲ್ಲಿ **"ಕನ್ನಡಿಯ ಕಾವೇಯನಾಯಕ"**, ತುರುಗೊಳ್ ಕದನದಲ್ಲಿ ಹೋರಾಡುತ್ತಲೇ ಮರಣ ಹೊಂದುತ್ತಾನೆ.[೨೪]

ಅಂದಿನ ವೀರ ಯುಗದ ಪ್ರೇರಣೆಯ ವಾಕ್ಯವಾದ ಗೆದ್ದರೆ ವಿಜಯಲಕ್ಷ್ಮಿ, ಸೋತರೆ ಶಾಶ್ವತವಾದ ಕೀರ್ತಿಯೊಂದಿಗೆ ಸುರಾಂಗನೆಯರು, ಕ್ಷಣದಲ್ಲಿ ನಾಶವಾಗುವ ದೇಹಕ್ಕಿಂತ, ಶಾಶ್ವತವಾದ ಕೀರ್ತಿ ಹೊಂದುವ ಸಾವೇ ಸರಿ ಎಂಬ ಪ್ರೇರಣೆಯನ್ನು ಪ್ರತಿಯೊಬ್ಬ ವೀರನೂ ಹೊಂದಿದ್ದ. ಕ್ರಿ.ಶ ೧೧ನೇ ಶತಮಾನದ ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಓಟೂರು ಶಾಸನದಲ್ಲಿ **'ಮಿಂಡಗಾವುಂಡ'** ತುರುಗೋಳ್ ಕದನದಲ್ಲಿ ಮರಣ ಹೊಂದಿದ್ದನ್ನು ಕಾಣಬಹುದು.[೨೫] ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕಿನ **ನಡಹಳ್ಳಿ** ಗ್ರಾಮದ ಕ್ರಿ.ಶ. ೧೧೫೪ರ ತುರುಗೊಳ್ ಶಾಸನದಲ್ಲಿ ಗುತ್ತಿಯ ಮಾಂಡಳಿಕ ಬೊಮ್ಮರಸ ತುರುಗಳನ್ನು ಹಿಡಿಯಲು ಬಂದಾಗ ಚೆನ್ನಗಾವುಂಡ ಹಾಗೂ ಮುದ್ದಿಯೆಬ್ಬೆ ಗೌಡಿಯರ ಒಡಲಲ್ಲಿ ಹುಟ್ಟಿದ ಹಾಗೂ ಗೊರವ ಗೌಡನ ಅಳಿಯ **ಚೆಳಗಾವುಡ** ಯುದ್ಧದಲ್ಲಿ ಹೋರಾಡಿ ಮಡಿದ ವಿವರಗಳು ಸೊಗಸಾಗಿ ಮೂಡಿಬಂದಿದೆ.[೨೬] ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ಕ್ರಿ.ಶ.೧೧೫೮ರ ಕಾಲದ ಬಳ್ಳಿಗಾವೆಯ ತುರುಗೊಳ್ ಶಾಸನವು ವಿಶೇಷವಾಗಿ **"ಓಂ ನಮಃ ಶಿವಾಯ"** ಎಂಬ ವಾಕ್ಯದಿಂದ ಆರಂಭವಾಗಿದ್ದು ಬಿಜ್ಜಳ ರಾಜ್ಯವಾಳುತ್ತಿದ್ದ ಉಲ್ಲೇಖವಿದೆ. ಈ ಶಾಸನದಲ್ಲಿ ದಾಸೀಮೇಯನ ಮಗ **'ಕೇತಣ'** ಗೋವುಗಳನ್ನು ಮರಳಿಸಿ ಮಡಿದ ವಿವರವಿದೆ.[೨೭] ಅಂದಿನ ಕಾಲದ ವೀರ ಪರಂಪರೆಯ ದ್ಯೋತಕವಾದ ಈ ಶಾಸನಗಳು ಜನರಲ್ಲಿ ಪೂಜನೀಯ ಭಾವ ಮೂಡಿಸಿದೆ. ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಕಾತವಳ್ಳಿಯ ಕ್ರಿ.ಶ. ೧೧೬೫ರ ಕಾಲದ ಶಾಸನ ಒಂದರಲ್ಲಿ ಹೊಯ್ಸಳ ಮಾಂಡಲೀಕ ತುರುಗಳನ್ನು ಹಿಡಿದಾಗ ಮೂಡಿಊರ ಜೆಯ ಬಮ್ಮಿಸೆಟ್ಟಿಯ ಮಗ "ಮಲ್ಲಿಸೆಟ್ಟಿ" ಹಲವರನ್ನು ಸಾಯಿಸಿ ಸುರಲೋಕ ಪ್ರಾಪ್ತನಾದ ವಿವರಗಳಿವೆ. ಅಂದಿನ ಕಾಲದ ವೀರರ ಹೆಸರಿನೊಂದಿಗೆ ಆ ವೀರನಿಗೆ ಜನ್ಮ ನೀಡಿದ ತಂದೆಯ ಹೆಸರೂ, ತಾಯಿಯ ಹೆಸರನ್ನು ಹಲವು ಶಾಸನಗಳಲ್ಲಿ ಉಲ್ಲೇಖಿಸಿರುವುದು ತಂದೆ ತಾಯಿಗಳಿಗೆ ಗೌರವವನ್ನು ನೀಡುತ್ತಿತ್ತಲ್ಲದೆ, ವೀರ ಮಗನ ಜನ್ಮದಾತರೆಂದು ಅವರನ್ನೂ ಸಮಾಜ ವಿಶೇಷ ಗೌರವಾದಾರಗಳಿಂದ ನೋಡುತ್ತಿತ್ತು.[೨೮]

ಕ್ರಿ.ಶ.೧೧೬೯ರ ಕಾಲದ ಶಿಕಾರಿಪುರ ತಾಲ್ಲೂಕಿನ ತಾಳಗುಂದ ಶಾಸನ ಬನವಾಸೆಯ ಹೆಗ್ಗಡೆ ದಂಡನಾಯಕ ಚಾಳುಕ್ಯ ಕೇಸೀಮಯ್ಯನು ಸಾನ್ತಳಿಗೆ ನಾಡ ಬಳಿಯ ಹಳ್ಳಿಗಳನ್ನು ಮುತ್ತಿ ಹೆಣ್ಣುಮಕ್ಕಳ ಉಡುಗೆಯನ್ನು ಬಿಚ್ಚಿ, ತುರುಗಳನ್ನು ಹಿಡಿದುಕೊಂಡು ಹೋಗುವಾಗ ನಾಡ ಕುಲತಿಲಕ, ಮುಕ್ಕಡರ ಸೋವಿಸೆಟ್ಟಿಯ ಮಗ "ಕಾಳೆಯ ನಾಯಕ" ತಳಕುದುರೆಯನ್ನು ಇರಿದು ಹೋರಾಡಿ, ತುರುಗಳನ್ನು ಹಿಂದಿರುಗಿಸಿ ಮಡಿಯುತ್ತಾನೆ. ಇಲ್ಲಿ ವೀರನ ಕುಟುಂಬವನ್ನು "ನಾಡ ಕುಲತಿಲಕ" ಎಂದು ಗೌರವಿಸಿರುವುದು ವಿಶೇಷವಾಗಿದೆ.[೨೯]

ಕ್ರಿ.ಶ.೧೧೨೫ರ ಕಾಲಕ್ಕೆ ಸರಿ ಹೊಂದುವ ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ತಾಲ್ಲೂಕಿನ ಚಿಕ್ಕ ಕೂಡಲಿ ಗ್ರಾಮದ ಶಾಸನದಲ್ಲಿ ಬೆಳಗವತ್ತಿಯ "ಮಾನಿಯ" ದಾಳಿ ಮಾಡಿ ತುರುಗಳನ್ನು ಹಿಡಿದಾಗ "ಮಾಚಗೌಂಡ" ಹೋರಾಡಿ ತುರುಗಳನ್ನು ಹಿಂದಿರುಗಿಸಿ ಮಡಿದ ವಿವರಗಳನ್ನು ಈ ಶಾಸನ ಒಳಗೊಂಡಿದೆ. ನದಿ ಪಾತ್ರದ ಅಂಚಿನಲ್ಲಿರುವ ಈ ಗ್ರಾಮವು ಭೌಗೋಳಿಕವಾಗಿ ಪಶು ಸಂಗೋಪನೆಗೆ ಯೋಗ್ಯವಾದ ವಾತಾವರಣ ಹೊಂದಿರುವುದನ್ನು ಗಮನಿಸಬಹುದು.[೩೦] ಕ್ರಿ.ಶ.೧೧೮೧ರ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಹಳೆಯ ಸೊರಬ ಗ್ರಾಮದ ಶಾಸನವು 'ಸಣಗೌಡ'ನ ಅಳಿಯ "ಕಾಮಗಾವುಂಡ" ಪರೋಪಕಾರಕ್ಕಾಗಿ ಈ ಶರೀರ ಎಂಬ ವಾಕ್ಯವನ್ನು ನೆನೆದು ಹೋರಾಡಿ ಮಡಿಯುತ್ತಾನೆ. ಇಲ್ಲಿ ತನ್ನ ಜನ್ಮವೇ ಪರರ ಉಪಯೋಗಕ್ಕಾಗಿ ಎಂಬ ಧ್ಯೇಯ ವಾಕ್ಯವನ್ನು ನೆನೆದು ತನ್ನ ಊರಿನ ಗೋವುಗಳ ರಕ್ಷಣೆಗೆ ಮುಂದಾಗಿರುವುದು ವಿಶೇಷವಾಗಿದೆ.[೩೧]

ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಹಿರೇಚೌಟಿ ಗ್ರಾಮದ ಕ್ರಿ.ಶ.೧೧೮೫ರ ಶಾಸನದಲ್ಲಿ ಎಣ್ಣೆಗೇರಿಯ ಹರುವ ಬಮ್ಮಿ ಸೆಟ್ಟಿಯ ಮಗ "ಸೋವಿಸೆಟ್ಟಿ" ಆ ಊರ ತುರುಹುಯಿಲಿನಲ್ಲಿ ಮಡಿದು ಸುರಗಣಿಕೆಯರನ್ನು ಕೂಡಿದ ಎಂಬುದನ್ನು ತಿಳಿಸುತ್ತದೆ. ದೇಹವನ್ನೇ ತೃಣವಾಗಿಸಿ ಧ್ಯೇಯ, ಆತ್ಮಾಭಿಮಾನವನ್ನೇ ಉಸಿರಾಗಿಸಿಕೊಂಡ ವೀರ ಪರಂಪರೆಯ ಅನರ್ಘ್ಯ ರತ್ನಗಳಿವು.[೩೨]

ಶಿಕಾರಿಪುರ ತಾಲ್ಲೂಕಿನ ಕ್ರಿ.ಶ.೧೧೮೨ರ ಕಾಲದ ಮಾಯಿತಮ್ಮನ ಮುಚುಡಿ ಗ್ರಾಮದ ಶಾಸನ ಒಂದರಲ್ಲಿ ಕಓಜನ ಅಳಿಯ, ಮಾರೋಜನ ತಮ್ಮ "ನಾದೆಯನಾಯಕ" ತಳ್ತಿರಿದು, ಮೆರೆದು ತುರುಗಳನ್ನು ಮರಳಿಸಿ ಸುರಲೋಕವನ್ನು ಪಡೆಯುತ್ತಾನೆ. ಇಲ್ಲಿ ಆತ ವಿವಾಹವಾದ ತನ್ನ ಹೆಂಡತಿಯ ತಂದೆಯ ಹೆಸರನ್ನು ಸೇರಿಸಿರುವುದು ಕಂಡುಬರುತ್ತದೆ. ವಿವಾಹಿತ ವೀರನಾಗಿದ್ದರೆ ಅವನ ಮಾವನ ಹೆಸರನ್ನೂ ಉಲ್ಲೇಖಿಸುತ್ತಿದ್ದರು ಎಂದು ಊಹಿಸಲು ಅವಕಾಶವಿದೆ. ಈ ಶಾಸನ ಮಾಯಿತಮ್ಮನ ಮುಚುಡಿಯಲ್ಲಿದ್ದರೂ ಇದರಲ್ಲಿ ಉಲ್ಲೇಖವಾಗಿರುವ ತುರುಗೊಳ್ ನಡೆದ ಸ್ಥಳ ಹಿರೇಜಂಬೂರನ್ನು ಸಾಂತರ ಸಿಂಗದೇವರಸರು ಆಕ್ರಮಿಸಿ ತುರುಗಳನ್ನು ಹಿಡಿದ ವಿವರಣೆಗಳು ಉಲ್ಲೇಖಿತವಾಗಿವೆ.[೩೩]

ಶಿವಮೊಗ್ಗ ಜಿಲ್ಲೆಯ ಸೊರಬದ ಕ್ರಿ.ಶ.೧೧೯೩ರ ಶಾಸನದಲ್ಲಿ 'ಹಿರೇಸಕುಣ'ಹಳ್ಳಿಯನ್ನು ಹಡವಳ ಮಾಚೇಯನನ್ನು ಕಾಮದೇವ ನಾಯಕನು ಸೋಲಿಸಿ, ತುರುಗಳನ್ನು ಹಿಡಿದುಕೊಂಡು ಹೋಗುತ್ತಿರಲು ಬೀರಗೌಡನು, ಕಾಳಗೌಡನಾಳು ಕಂಚಗಾರ ಬಸವೋಜನ ಮಗ ಹೋರಾಡಿ ಕುದುರೆಯನಿರಿದು, ಮೇಲಾಳನಿರಿದು ಮಡಿದ ವಿವರಣೆ ದೊರೆಯುತ್ತದೆ.[೩೪] ಸೊರಬ ತಾಲ್ಲೂಕಿನ

ಹಿರಿಯ ಮಾಗುಡಿಯ(ಇಂದು ಈ ಗ್ರಾಮ ಹಿರೇಮಾಗಡಿ ಎಂದಾಗಿದೆ) ಗ್ರಾಮದಲ್ಲಿ ದೊರೆತ ಶಾಸನದಲ್ಲಿ ಹೆಗ್ಗಡೆ ಕುಪ್ಪಯ್ಯನ ತಮ್ಮ "ಸಂಕಯ್ಯ" ತುರುಗಾಳಗದಲ್ಲಿ ಹಲವರನ್ನು ಕೊಂದು ಮಡಿಯುತ್ತಾನೆ.[೩೫] ಆನವಟ್ಟಿ ಸಮೀಪದ ಸೊರಬ ತಾಲ್ಲೂಕಿನ ತತ್ತೂರಿನ ಕ್ರಿ.ಶ. ೧೨ನೇ ಶತಮಾನದ ವೀರಗಲ್ಲೊಂದರಲ್ಲಿ ಮಸಣಸೆಟ್ಟಿಯ ಮಗ **'ಸೋವಣ'** ತನ್ನ ಖಡ್ಗವನ್ನು ತೆಗೆದು ಮೆರೆದು ಸುರಲೋಕವನ್ನು ಹೊಂದುತ್ತಾನೆ ಎಂಬ ವಿವರಣೆಗಳಿವೆ.[೩೬] ಕುಣಿತೆಪ್ಪದ ತುರುಗೊಳ್ ಶಾಸನದಲ್ಲಿ ಸಿಂಗರಸ ಬೀರರಸನವರು ದಾಳಿಮಾಡಿದಾಗ ಲೋಕಗೌಡನ ಅಳಿಯ "ಗೋಗಿಗವುಡ" ತುರುಗೋಳ್ ಕದನಲ್ಲಿ ಮಡಿಯುತ್ತಾನೆ.[೩೭] ಕ್ರಿ.ಶ. ೧೨ನೇ ಶತಮಾನದ ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಕಾತೂರು ಗ್ರಾಮದಲ್ಲಿ ದೊರೆತಿರುವ ಶಾಸನವು ಒಡೆಯನೊಂದಿಗೆ ತಾವೂ ಕಾದಾಡಿ ವೀರಮರಣ ಹೊಂದಿದ ವಿವರವನ್ನು ತಿಳಿಸುತ್ತದೆ. ಹಣದೇವನ ಮನೆಯ ಸಿಂಹನಾಯಕ, ವೆಂಕದೇವನಾಯಕರು ಎಡನಾಡ **ಸಿಡಣಿ**ಯನ್ನು ಹಾಯ್ದು ತುರುಸೆರೆಯನ್ನು ಹಿಡಿದುಕೊಂಡು ಹೋಗುವಾಗ ಕಾಂತಾಪುರದ ದೀವರ ಕಾಳಯನಾಯಕನ ಮಕ್ಕಳು "ಅಜ್ಜೆಯ ನಾಯಕ" ಆತನ ತಮ್ಮ "ಬೊಮ್ಮಯ್ಯ ನಾಯಕ" ಸಿಡಣಿಯ ಹುಯ್ಯಲಂ ಕೇಳ್ದು ತಮ್ಮ ಒಡೆಯ ಎಡಗಾವುಂಡ ಸಹಿತ ತುರುಸೆರೆಯನ್ನು ಬಿಡಿಸಿ ಹಿಂದಿಕ್ಕಿಕೊಂಡು ಹಲವು ವೀರಭಟರನ್ನು ಕೆಡಹಿ ಸುರಲೋಕ ಪ್ರಾಪ್ತರಾಗುತ್ತಾರೆ.[೩೮]

ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಬಿಳವಾಣಿ ಗ್ರಾಮದ ಕ್ರಿ.ಶ. ೧೨ನೇ ಶತಮಾನದ ಶಾಸನ ಒಂದರಲ್ಲಿ ಬೆಳುವಾಣಿಯ ಹಡವಳ ಮಾಚಯ ತುರುಗಳನ್ನು ಅಪಹರಿಸಿಕೊಂಡು ಹೋಗುವಾಗ "ಕರಿಯಕಂಚೆಯ" ಬಂದು ಹಲವರನ್ನು ಕೊಂದು ತುರುಗಳನ್ನು ಮರಳಿಸಿ ಹಲವರನ್ನು ಕೊಂದು ಸುರಲೋಕವನ್ನು ಪಡೆದನು. ಯುದ್ಧ ಮಾಡುತ್ತ ಕಟ್ಟಾಳುಗಳಿಗೆ ಹೆದರದೆ ಇದಿರಿಸಿ ಮಡಿದಾಗ ತುರುಗಳು ಹೆಣವನ್ನು ಮೆಟ್ಟಿ ಮುಂದುವರೆಯಲು, ಸುರಾಂಗನೆಯರು ಆತನನ್ನು ನಮಗೆ–ತಮಗೆ ಎನ್ನುತ್ತ ಒಯ್ದರು ಎಂಬ ವರ್ಣನೆ ಅಂದಿನ **'ಮೃತೇನಾಪಿ ಸುಂರಾಗನ'** ಎಂಬ ನಂಬಿಕೆಯ ವೀರಕಾವ್ಯದ ಸಾಲುಗಳಿಗೆ ಸಾಕ್ಷಿಯಾಗಿದೆ.[೩೯]

ಸೊರಬ ತಾಲ್ಲೂಕಿನ ೧೪ನೇ ಶತಮಾನದ 'ಕೊಂಡಗಳಲೆ' ಗ್ರಾಮದ ಶಾಸನ ಒಂದರಲ್ಲಿ ಕೊಂಡಗಣಲೆಯ ತುರುಗಳನ್ನು ಹನುಬರು ಹೊಡೆದುಕೊಂಡು ಹೋಗುವಾಗ ಕೊಂಡಗಣಲೆಯ "ಮಾದಿಗವುಡ ತಂದೆ ಆತನ ಮಗ ಸೂರಪ್ಪಗೌಡ" ಇಬ್ಬರೂ ಯುದ್ಧದಲ್ಲಿ ಆಳನ್ನು ಇರಿದು ಕುದುರೆ ಹಿಡಿದು ಅತಿರಥ ಮಹಾರಥ ಮೆರೆದರು. ಈ ಕದನದ ಫಲಿತಾಂಶವೆಂಬಂತೆ ಮಾದಿಗ ವುಡನ ಸತಿ, ತಾಯಿ ಗವುಡಿ ಇಬ್ಬರೂ ಸ್ವರ್ಗಸ್ಥರಾದರು. ಸ್ತ್ರೀಯರೂ ಕೂಡ ಬಲಿಯಾಗಿರುವುದಕ್ಕೆ

ಅಥವಾ ಸತಿಯಾಗಿರುವುದಕ್ಕೆ ಈ ಶಾಸನ ಸಾಕ್ಷಿಯಾಗಿದೆ.[೮೦] ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಹೊಸಮನೆಯ ಶಾಸನದಲ್ಲಿ ಹೋರಾಡಿ ಮಡಿದ ವೀರನ ಹೆಂಡತಿಯೂ ಸಹಗಮನ ಮಾಡಿದ ವಿವರವನ್ನು ಶಾಸನ ನೀಡುತ್ತದೆ. ಈ ಶಾಸನ ಕಾಲ ಕ್ರಿ.ಶ.೧೪ನೇ ಶತಮಾನದ್ದಾಗಿದ್ದು ಇಲ್ಲಿ ಚಾಮಗವುಡನು ತುರುಸೆರೆಯನ್ನು ಹಿಡಿದಾಗ "ಚಾಮಗೌಡರು" ಸೆರೆಯಲ್ಲಿದ್ದ ತುರುಗಳನ್ನು ಮರಳಿಸಿ ಮಡಿದ "ಹದಸೆಯ ಬೀರಗವುಡ ಗಾಯಗೊಂಡು ಬಿದ್ದಲ್ಲಿ ಆತನ ಮದವಳಿಗೆ ಗರಾಯಿ **ಸಹಗಮನ** ಮಾಡಿ ವೀರಸ್ವರ್ಗವನ್ನು ಪಡೆದ ವಿವರವಿದೆ. ಈ ಶಾಸನವನ್ನು ಬರೆದ ಶಾಸನ ಕವಿ **'ಕರವೂರ ವಿರಜ್ಯ'**ನು ಎಂದು ಉಲ್ಲೇಖಿತವಾಗಿದೆ.[೮೧]

**ಪ್ರತಿವೀರರ ಶಾಸನ :** ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಹರೂರು ಗ್ರಾಮದ ಶಾಸನ ವೀಶೇಷವಾದದ್ದು. ಈ ಶಾಸನ ದನಗಳನ್ನು ಕದಿಯಲು ಹೋಗಿ ಮಡಿದವರ ಹೆಸರಿನಲ್ಲಿ ಹಾಕಿಸಿರುವುದು ವಿಶೇಷವಾಗಿದೆ. ಆ ಪಾಠವನ್ನು ಗಮನಿಸುವುದಾದದರೆ

**ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇತ್ರೈಲೊಕ್ಯನಗರಾರಂಭ ಮೂಲಸ್ತಂಭಾಯಶಂಭವೇ**

**......ಸ್ವಸ್ತಿ ಶ್ರೀಜಯಾಬ್ಯುದಯಚತುಸ್ಸಮುದ್ರಾಧೀಸ್ವರವಿಜಯಶ್ರೀ**

**ದೇವರಾಯರಕುಮಾರಮಲ್ಲಿಕಾರ್ಜುನಮಹಾರಾಯರಿಹವಿಜಯನಗ**

**ರಿಯತಾಣೆಯಚಂದ್ರಗುತ್ತಿಯಪ್ರತಿಪಾಲಿಸಿದಭಂಡಾರದಲಿಂಗಪ್ಪೊಡೆಯರಕಾಲದ**

**ಲುಆಚಂದ್ರಗುತ್ತಿಯೊಳಗಣ ಹಿರಿಯ ಜಿಡ್ಡುಳಿಗೆ ನಾಡೊಳಗಣ ಪುಲೆಯದಹರೂರಗ್ರಾ**

**ಮದ ಕುಳವಾಡಿಗವುಡುಗಳು ತುಱುಸೆಱೆಹೋಗೆ ಕಾದಿಮಡಿದವರುಗಳು**

**ಮಸಣಗಲುಡರ ಮಗಬೊಂಮರ್ಸಗಲುಡರುತಮ್ಮಗಲುಡರ ಮಗ ನರಸಂ**

**ಣ ಗೌಡರುಸಕರ್ಷ೧೩೭೭ನೆಯಭಾವಸಂವತ್ಸರದಾಸ್ವೀಜಸ್ದು೧೧**

**ಬುಧವಾರಮೂರನೆಯಜಾಮದಲುಕಾದಿಮ**

**ಡಿದ ಸಾಂಗತ್ಯದ ವೀರಕಲ್ಲು..ಮಂಗಳಮಹಾ ಶ್ರೀ ಶ್ರೀ.**[೮೨]ದನಗಳನ್ನು ಕದಿಯಲು ಹೋಗಿ ಮಡಿದವರ ವೀರಗಲ್ಲಾಗಿರುವುದು ಈ ಶಾಸನದ ವಿಶೇಷವಾಗಿದೆ

ಹೀಗೆ ಹೋರಾಡಿದ ದಾಖಲೆಗಳ ಆಗರವಾದ ಶಿವಮೊಗ್ಗ ಜಿಲ್ಲೆಯಲ್ಲಿಯೇ ಸುಮಾರು ೧೮೦ಕ್ಕೂ ಹೆಚ್ಚು ಶಾಸನಗಳು ದೊರೆಯುತ್ತದೆ. ಅವುಗಳಲ್ಲಿ ಸೊರಬ ತಾಲ್ಲೂಕಿನಲ್ಲೇ ೭೫ಕ್ಕೂ ಹೆಚ್ಚು ತುರುಗೊಳ್ ಶಾಸನಗಳು ದೊರೆಯುತ್ತವೆ. ಇಂಥ ವೀರಪರಂಪರೆಯೊಂದರ ಸಾಕ್ಷಿ ಪ್ರಜ್ಞೆಗೆ ಇಲ್ಲಿನ ಪ್ರತಿ ಶಾಸನಗಳು ಸಾಕ್ಷಿಯಾಗಿವೆ. ಇಂಥ **'ವೀರತ್ವಕ್ಕೆ'** ಕಾರಣವಾಗುವ ಎಲ್ಲ ಶಾಸನಗಳಲ್ಲಿರುವ ಅಸಾಮಾನ್ಯ ಲಕ್ಷಣಗಳನ್ನು ಗಮನಿಸುವುದಾದರೆ

೧. ಕದ್ದೊಯ್ದ ದನಗಳನ್ನು ಹಿಂದಕ್ಕೆ ಹೋರಾಡಿ ಪಡೆಯುವಾಗ,

೨. ಹೆಣ್ಣು ಮಕ್ಕಳ ವಸ್ತ್ರಾಪಹರಣ ಕ್ರಿಯೆಗಳಿಂದ ಅವರ ಮಾನಕ್ಕೆ ದಕ್ಕೆ ಬಂದಾಗ,

೩. ಗ್ರಾಮಗಳ ಮೇಲೆ ದಾಳಿ ನಡೆದಾಗ,

೪. ವಿದ್ಯಾಕೇಂದ್ರ ಹಾಗೂ ಆಚಾರ್ಯರ ಮೇಲೆ ದಾಳಿ ನಡೆದಾಗ,

೫. ಯುದ್ಧಗಳಾದಾಗ,

೬. ಸಿಡಿತಲೆ, ವೇಳವಾಟಿ, ಮೊದಲಾದ ವಚನಕ್ಕೆ ಬದ್ಧವಾದಾಗ,

೭. ಕಳ್ಳರ ದಾಳಿಗಳನ್ನು ಪ್ರತಿಭಟಿಸಿದಾಗ,

೮. ಪರರ ಅಥವಾ ಪರ ಊರಿನ ಸಹಾಯಾರ್ಥ ಸ್ವಯಂ ಪ್ರೇರಿತರಾಗಿ ಭಾಗವಹಿಸಿ ಹೋರಾಡುವ ಇಂಥ ಸಂದರ್ಭಗಳು ವೀರತ್ವದ ದ್ಯೋತಕ ಸಂದರ್ಭಗಳಾಗಿ, ಸ್ವಾಭಿಮಾನದ ಸಂದರ್ಭಗಳಾಗಿ, ಸಂಸ್ಕೃತಿಯ ಪುಟಗಳಲ್ಲಿ ದಾಖಲೆಗಳಾಗಿ ಉಳಿದಿವೆ.

ಜೀವಧನ ಎನಿಸಿದ ಗೋವುಗಳ ರಕ್ಷಣೆ ಅಂದಿನ ಜನರ, ರಾಜ್ಯದ, ರಾಜರ, ಪ್ರತಿಷ್ಠೆಯ, ಅಸ್ತಿತ್ವದ ಪ್ರಶ್ನೆಯಾದ್ದರಿಂದ ತುರುಗೊಳ್ ಕದನದಲ್ಲಿ ಭಾಗವಹಿಸುತ್ತಿದ್ದ ಗ್ರಾಮ ಮುಖಂಡರು, ವೀರರು ವಿಶೇಷ ಗೌರವಾದಾರಗಳಿಗೆ ಪಾತ್ರರಾಗುತ್ತಿದ್ದರು. ಸಮಾಜದಿಂದ ಪೂಜಿತರಾಗುತ್ತಿದ್ದ ವಿವರಗಳು ಶಾಸನಗಳಿಂದ ತಿಳಿದು ಬರುತ್ತದೆ. ಈ ತುರುಗೊಳ್ ಶಾಸನಗಳು ಆ ವೀರರ ಹೆಸರುಗಳನ್ನು ಅಜರಾಮರಗೊಳಿಸಿವೆ.

**ಆ. ವೀರರಿಗೆ ದಾನದ ವಿವರಗಳು**

ರನ್ನನು ತನ್ನ 'ವಿಕ್ರಮಾರ್ಜುನ ವಿಜಯಂ' ಕೃತಿಯಲ್ಲಿ ವೀರನು ಹೇಗೆ ನಡೆದುಕೊಳ್ಳಬೇಕೆಂದು ಹೇಳುತ್ತಾ,

> **'ಗೆಲಲಾರ್ಪೊಡಿಜೆದು ಗೆಲ್ವುದು**
> **ಗೆಲಲಾಜದೊಡಣ್ಮೆ ಸಾವುದಾಳ್ಗಿನಿತೆ ಗುಣಂ॥**
> **ಗೆಲಲುಂ ಸಾಯಲುಮಾಜದೆ।**
> **ತೊಲಗಿದೊಡೆ ನೆಗಟ್ತೆ ತೊಲಗದಿ (ರ್ಕುಮೆ)ಮೆಯ್ಯಂ ॥೨೧॥**

ಒಬ್ಬ ವೀರನು ಗೆಲ್ಲಲು ಶಕ್ತನಾದರೆ ಯುದ್ಧಮಾಡಿ ಗೆಲ್ಲಬೇಕು. ಸಾಧ್ಯವಾಗದಿದ್ದರೆ ಪರಾಕ್ರಮದಿಂದ ಹೋರಾಡಿ ಪ್ರಾಣ ನೀಗಬೇಕು. ಭಂಟನಾದವನಿಗೆ ಇರುವುದು ಒಂದೇ ಮಾರ್ಗ. ಅದುವೆ ಸಾವು ಅಥವಾ ಗೆಲುವು. ಸಾಯಲು ಒಲ್ಲದೆ ಯುದ್ಧರಂಗದಿಂದ ಜಾರಿಕೊಂಡರೆ

ವೀರನ ಚಾರಿತ್ರ್ಯಕ್ಕೆ ಕಳಂಕ ತಟ್ಟುವುದಿಲ್ಲವೇ ಎಂಬ ಮಾತು ವೀರತ್ವದ ಸಾರವಾಗಿದೆ. ಹಾಗೆ ತುರುಗೊಳ್ ಕದನದಲ್ಲಿ ತಮ್ಮ ಪ್ರಾಣಕ್ಕಿಂತ ತಮ್ಮೂರಿನ ಅಥವಾ ತನ್ನ ಒಡೆಯನ ಗೋವುಗಳನ್ನು ಉಳಿಸಿಕೊಂಡು, ತಮ್ಮೂರಿನ ಮರ್ಯಾದೆಯನ್ನು ಕಾಪಾಡುವುದೇ ಮುಖ್ಯ ಉದ್ದೇಶ ಆಗಿದ್ದರಿಂದ, ವೀರ ತನ್ನ ಪ್ರಾಣವನ್ನೇ ತೃಣವಾಗಿಸಿಕೊಂಡು ಮೌಲ್ಯಕ್ಕಾಗಿ ಹೋರಾಡಿ, ಮಡಿಯುತ್ತಿದ್ದ. ಅಂತಹ ಸಂದರ್ಭದಲ್ಲಿ ಅವನ ತ್ಯಾಗ, ಬಲಿದಾನಗಳಿಗಾಗಿ ರಾಜ ಅಥವಾ ಗ್ರಾಮ ಮುಖಂಡ ಆ ವೀರನ ಕುಟುಂಬದ ಜೀವನ ನಿರ್ವಹಣೆಗಾಗಿ ಮಡಿದ ವೀರನ ಆತ್ಮ ಗೌರವಾರ್ಥವಾಗಿ ಭೂಮಿ ಮತ್ತು ಹಣವನ್ನು ಅವನ ಬಲಿದಾನಕ್ಕೆ ಪ್ರತಿಯಾಗಿ ನೀಡುತ್ತಿದ್ದರು. ಈ ಕೊಡುಗೆಯನ್ನು **'ರುಧಿರಮಾನ್ಯ, ನೆತ್ತರ ಕೊಡುಗೆ, ನೆತ್ತರ್ಪಟ್ಟು'** ಎಂಬ ಹೆಸರುಗಳಿಂದ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

ಗೋಗ್ರಹಣ ಸಂದರ್ಭದಲ್ಲಿ, ಗಡಿಕಾಳಗದಲ್ಲಿ, ಊರಳಿವಿನಲ್ಲಿ, ಕಳ್ಳರು ಊರು ನುಗ್ಗಿದಾಗ, ಹೆಣ್ಣುಗಳನ್ನು ಅಪಹರಿಸುವಾಗ, ಅಂದಿನ ಸಮಾಜ ಒಟ್ಟಾಗಿ ಹೋರಾಡುವುದು ಕಂಡುಬರುತ್ತದೆ. ಹಾಗೆ ಹೋರಾಡುವುದೇ ಅಂದಿನ ಸಮಾಜದ ಪುರುಷರ ಗೌರವ ದ್ಯೋತಕವಾಗಿತ್ತು. ಹಾಗೂ ಆ ಹೋರಾಟವೇ ಅವರ ಅಳಿವು–ಉಳಿವಿನ ಪ್ರಶ್ನೆಯಾಗಿತ್ತು. ಮರಣ ಹೊಂದಿದರೂ ಹೋರಾಡುತ್ತಲೇ ಮಡಿಯಬೇಕೆಂಬುದು ಪ್ರತಿಯೊಬ್ಬ ವೀರನ ಆಸೆ. ಆ ಹೋರಾಟದ **'ವೀರಮರಣ'**ಕ್ಕೆ ಸಮಾಜ ನೀಡುತ್ತಿದ್ದ **ನೆತ್ತರ ಕೊಡುಗೆ**ಗಳು ಆ ಮನೆತನದ, ಆ ಊರಿನ ಹೆಮ್ಮೆ ಎಂದು ಅಂದಿನ ಸಮಾಜ ನಂಬಿಕೊಂಡು, ಆಚರಿಸಿ, ಬಾಳಿ ಬದುಕಿದೆ. ಅಂತಹ ದಾನದ ವಿವರಗಳನ್ನು ಶಾಸನಗಳು ವಿಶೇಷವಾಗಿ ಉಲ್ಲೇಖಿಸಿ ಆ ದಾನದ ಅಂಶಗಳು ಹಾಳು ಮಾಡುವವನಿಗೆ ನರಕ ಎಂದು ಶಾಪಗಳನ್ನು ಹಾಕಲಾಗಿದೆ. ಇದರಿಂದ ಆ ಶಾಸನವು ಒಂದು ರಾಜಾಜ್ಞೆಯನ್ನು ಮುಂದಿನ ತಲೆಮಾರಿಗೂ ಒಯ್ಯುವ ಸಾಧನವಾಗಿ ಇತಿಹಾಸದ ಪುಟಗಳಲ್ಲಿ ಬಳಕೆಯಾಗಿದೆ.

ಕ್ರಿ.ಶ.೧೧ನೇ ಶತಮಾನದ ಸೊರಬ ತಾಲ್ಲೂಕಿನ **ಚಿಕ್ಕ ಚವುಟಿಯ** ಶಾಸನದಲ್ಲಿ ಬನವಾಸಿ ಪನ್ನಿಚ್ಛಾಸಿರದ ಬರಮ ಶ್ರೀ ಕಲಿವಿಟ್ಟರ ಉಲ್ಲೇಖವಿದ್ದು, ಬೇಡಕಳ್ಳರು ತುರುಗಳನ್ನು ಹಿಡಿಯಲು ಕಚ್ಚವಿಯ ಕುಲತಿಲಕ **ಕಲಿರೂಪಂ** ಅಲ್ಲಿ ಬಂದು (ತೃಟಿತ ವಾಗಿದೆ.) ಸುರಲೋಕ ಹೊಂದುತ್ತಾನೆ. ಆತನಿಗೆ ಭೂಮಿದಾನ–ಸತ್ತಗಣ್ವಂಕೆಯ್ಯ ೧೫, ಎಂದು ಉಲ್ಲೇಖಿಸಲಾಗಿದೆ. ಈ ಶಾಸನವನ್ನು ಅಳಿಸಿದವನಿಗೆ ಪಂಚಮಹಾಪಾತಕ ಹಾಗೂ ಉಳಿಸಿದವನಿಗೆ ಅಷ್ಟ ವಿಧದ ಫಲ ಎಂದೂ ಉಲ್ಲೇಖಿಸಲಾಗಿದೆ.[೪೩]

ಶಿಕಾರಿಪುರ ತಾಲ್ಲೂಕು ಮುತ್ತಿಗೆ ಗ್ರಾಮದ ೧೧ನೇ ಶತಮಾನದ ಶಾಸನ ಒಂದರಲ್ಲಿ ಮುತ್ತಗಿಯ **ತಳಾರದಾಸಿ** ತುರುಗೊಳ್ ಕದನದಲ್ಲಿ ಮಡಿಯುತ್ತಾನೆ. ಆತನ ಮಗ ಮಸಣಯ್ಯಗೆ ಮೂವತ್ತಿರ್ಚ್ಛಾಸಿರ ಕಾರುಣ್ಯಂ ಹಾಗೂ ಒಳಗೆರೆಯಲ್ಲಿ ಒಂದು ಮುತ್ತಲು ಕೆಯ್ಯ ಹಾಗೂ

ಒಂದು ಮನೆಯನ್ನು ಸರ್ವರೂ ಒಪ್ಪಿ ನಡೆಯಿಸುವರು ಎಂಬುದನ್ನು ಸಿದ್ಧರಾಮೇಶ್ವರ ದೇವಸ್ಥಾನದ ಬಳಿಯ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೪೪]

ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಕ್ರಿ.ಶ. ೧೦ನೇ ಶತಮಾನದ ಮಾವಲಿ ಗ್ರಾಮದ ಶಾಸನದಲ್ಲಿ ಸಿಂಗಿದೇವ ಮಾವಲಿಯನ್ನು ಆಕ್ರಮಿಸಿ ತುರುಗಳನ್ನು ಕೊಂಡು ಹೋಗುವಾಗ ಬೊಪ್ಪಣ್ಣನ ಮಗ "ದಿವಮಗೌಡ" ಮರಣ ಹೊಂದುತ್ತಾನೆ. ಆತನ ಮರಣದ ಗೌರವಾರ್ಥವಾಗಿ, ಆತನಿಗೆ ಎಡನರಿಯೊಳಗೆ ಗದ್ದೆಯನ್ನು ನೆತ್ತರ ಕೊಡುಗೆಯಾಗಿ ನೀಡುತ್ತಾನೆ. ಈ ಶಾಸನವನ್ನು ಎಲ್ಲರೂ ಪ್ರತಿಪಾಲಿಸುವುದು. ಇದನ್ನು ಕೆಡಿಸಿದವರಿಗೆ ಪಂಚ ಮಹಾಪಾತಕವಕ್ಕು ಎಂಬ ಶಾಪಾಶಯವನ್ನು ಕೂಡ ದಾಖಲಿಸಿರುವುದು ವಿಶೇಷವಾಗಿದೆ.

ಕ್ರಿ.ಶ. ೧೧ನೇ ಶತಮಾನದ ಸೊರಬ ತಾಲ್ಲೂಕಿನ ಕೊಳಗ ಗ್ರಾಮದ ರಾಮಲಿಂಗೇಶ್ವರ ದೇವಸ್ಥಾನದ ಶಾಸನವು ಪೆಣ್ಬುಯ್ಯಲ್ ಹಾಗೂ ತುರುಗೊಳ್ ಶಾಸನಗಳ ಅಂಶವನ್ನು ಹೊಂದಿದೆ. ಎಕ್ಕಲ ಅರಸರು ಜಗದೇವನ ಮೇಲೆ ಆಕ್ರಮಣ ನಡೆಸಿದಾಗ ಕೊಳಗನೂರ ಕವಿಯ ಮಗ 'ಕಿಳ್ಳ' ವೀರಮರಣ ಹೊಂದುತ್ತಾನೆ. ಇವನ ಮರಣಕ್ಕೆ ಹೊಯ್ಸಳ ಮಾಂಡಳಿಕ ಕವಿಯೇ ಕಿಳ್ಳನಿಗೆ ಗೌಡನಿಗೆ ಜೊತೆಯಾಗಿ 'ಅರುವತೋಕ್ಕಲುಂ ಐಮಣ್ಣಿಗರುಂ ಬಿಟ್ಟ ಉಂಬಳಿಗದ್ದೆ' ಕೊಳಗ ಧರ್ಮವನ್ನು ಎಲ್ಲರೂ ಚಂದ್ರಾರ್ಕತಾರಾಬರಂ ಪಾಲಿಸಿರುವುದು, ಈ ಉಂಬಳಿಯನ್ನು ಅಳಿದವನಿಗೆ ಗಂಗೆಯ ತಡಿಯಲ್ಲಿ ಕವಿಲೆ (ಹಸು)ಯನ್ನು ಕೊಂದ ಪಾಪ ಎಂಬ ಶಾಸನ ಸೇರಿದೆ.[೪೫]

ಕ್ರಿ.ಶ.೧೧೫೭ರ ಕಾಲದ ಶಿಕಾರಿಪುರ ತಾಲ್ಲೂಕಿನ ಅಡಗಂಟೆ ಗ್ರಾಮದ ಬಸವನ ದೇವಾಲಯದ ಬಳಿಯ ಶಾಸನ ತುರುಗೊಳ್ ಹಾಗೂ ಪೆಣ್ಬುಯ್ಯಲ್ ಎರಡಕ್ಕೂ ಸಾಕ್ಷಿಯಾದ ಶಾಸನವಾಗಿದೆ. ಅಡಿಗಂಟೆಯಲ್ಲಿ ಗೊಗ್ಗಿ ಸೆಟ್ಟಿಯ ಮಗ ಮಾಚಯ್ಯ ಊರಗೌಡನಾಗಿ ಆಡಳಿತ ನಡೆಸುತ್ತಿರುವಾಗ ಬೇಡರ ಘಟ್ಟಿಮಡಿಯ, ಕೇರಿಯನಿರಿದು ತುರುಗಳನ್ನು ಅಪಹರಿಸಿ, ಹೆಣ್ಣುಮಕ್ಕಳ ಉಡೆಯನ್ನು ಬಿಚ್ಚಿದರು ಎಂಬ ಹುಯ್ಯಲನ್ನು ಕೇಳಿ ಕಡೆಗಣಿಸದೆ "ಮಾಚಗಾವುಣ್ಣ" ಹೋರಾಡಿ ಸೈನ್ಯವನ್ನು ಮೂದಲಿಸಿ ಹಲವರನ್ನು ಇರಿದು ಕಡಿಖಣ್ಡಮಾಗಿ ಸುರಲೋಕ ಪ್ರಾಪ್ತನಾಗುತ್ತಾನೆ. ಚಿಟ್ಟಗಾವುಂಡ, ಮಾಚಗೌಡ, ಬಾರ್ಯ್ಯೆ ಚಾಗಿಯಬ್ಬೆ, ಅವರ ಮಗ ನಾಲಯ್ಯನು ಮಿಱ್ಱು ಮತಿಗಟ್ಟದ ಬಯಲಿನಲ್ಲಿ ಬ್ರಾಹ್ಮಣ ಮದುವಯ್ಯಂಗೆ? ಕಾಲನ್ನು ತೊಳೆದು ಧಾರಾಪೂರ್ವಕವಾಗಿ ಬಿಟ್ಟಗದ್ದೆ ಕಮ್ಮ ೩೦ ಬೆಜ್ಜಲೆ ಮತ್ತ ೧ನ್ನು ಈ ಧರ್ಮವನ್ನು ನಡೆಸುವುದು. ತಪ್ಪಿದಲ್ಲಿ ವಾರಣಾಸಿಯಲ್ಲಿ ಬ್ರಾಹ್ಮಣ ಹತ್ಯೆಯ ಪಾಪ ಸಾವಿರ ಗೋವುಗಳ ಕೊಂದ ಪಾಪ ಬರುತ್ತದೆ.

ಎಂದು ಉಲ್ಲೇಖಿಸಲಾಗಿದೆ. ಒಬ್ಬ ವೀರನ ಮರಣಕ್ಕೆ ಬ್ರಾಹ್ಮಣರಿಗೆ ಭೂಮಿಯನ್ನು ನೀಡುತ್ತಿರುವುದು ವಿಶೇಷವಾಗಿದೆ.[೪೬]

ಶಿವಮೊಗ್ಗ ಜಿಲ್ಲೆಯ ಸಾಗರ ರಸ್ತೆಯಲ್ಲಿ ಬರುವ ಚೋರಡಿ ಗ್ರಾಮದ ಕ್ರಿ.ಶ. ೧೩ನೇ ಶತಮಾನದ ಶಾಸನ ಒಂದರ ವಿವರಣೆ ಇತರ ಎಲ್ಲಾ ಶಾಸನಗಳಿಗಿಂತ ಭಿನ್ನವಾಗಿ ಶಾಸನ ಸಾಹಿತ್ಯವನ್ನು ರಚಿಸಲಾಗಿದೆ. ಇಲ್ಲಿ ನೆತ್ತರ ಉಡುಗೆಯನ್ನು ಶಾಸನದ ಆರಂಭದಲ್ಲಿ ದಾಖಲಿಸಿ ಆನಂತರ ಯುದ್ಧದ ವಿವರಣೆಯಿದೆ. "ಆರಂಭದಲ್ಲಿ ಗುಣವನ್ನು ವರ್ಣಿಸಿ ಶ್ರೀ ಮದನಾದಿಯಗ್ರಹಾರಂ ಸೋರಡೆಯ ಅಶೇಷಾಸಾಸಿರ್ಬ್ಬರ್ ತಮ್ಮ ಮಗಂ ಚೀಲದಳಾರ ಬೋಪದಳಾಜಿನ್ಮಣ್ಣಜಾಣ್ಮ ಗೋವಕೊಲ್ಲ ಅಹಿತರನ್ನು ಮಾರ್ಗದಲ್ಲೇ ಗೆದ್ದದ್ದಕ್ಕಾಗಿ ಗದ್ದೆಗಳೆಯ ಮತ್ತ ಒಂದು ಬೆದ್ದಲೆ ಗಳೆಯ ಮತ್ತ ಪನಿ, ಒಕ್ಕಲುದೆಜಿ, ಮನೆದೆಜಿ, ಅನ್ತುವಂ ಕೊಡುಗೆಯನ್ನು ಬಿಟ್ಟುಕೊಟ್ಟಿರುವ ವಿವರಗಳನ್ನು ಮೊದಲು ನಮೂದಿಸಿ ಆನಂತರ ಬೋಪದಳಾಜಿನ ಹೋರಾಟದ ವಿವರವಿದೆ. ಇದು ತುರುಗೊಳ್ ಶಾಸನ ವಿವರಣಾ ಕ್ರಮದಲ್ಲೇ ಭಿನ್ನ ನಿರೂಪಣೆಯನ್ನು ಹೊಂದಿರುವುದು ವಿಶೇಷವಾಗಿದೆ.[೪೭]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕ್ರಿ.ಶ. ೧೧ ನೇ ಶತಮಾನದ ಕುಪ್ಪಟೂರಿನ ಶಾಸನ ದಾನದ ವಿವರಗಳನ್ನು ಒಳಗೊಂಡಿದ್ದು ಶಾಸನ ಸಾಹಿತ್ಯದ ೨೦ ಸಾಲುಗಳನ್ನು ಒಳಗೊಂಡಿದೆ. ಕಡುಗಲಿ ಕೇತಯ್ಯ ನಾಯಕ ಊರಿನ ಸೂಳೆಯ ಮಾನ ರಕ್ಷಣೆ, ಗೋವುಗಳ ರಕ್ಷಣೆಗಾಗಿ ಕಾದಾಡುತ್ತ ಮಡಿದನು. ಅವನ ವೀರಸ್ವರ್ಗಕ್ಕೆ ಮಹಾಜನರು ಮೆಚ್ಚಿ ನೆತ್ತರ ಕೊಡುಗೆಯಾಗಿ ಆತನ ಮನ 'ಮಾಕೆಯನಾಯಕ'ನಿಗೆ ಹಾದಕೆಯ್ಯಮಂ–ಹತ್ತುಕೆಯ್ಯ ಮನೆಯನ್ನು ಸರ್ವಭಾದ ಪರಿಹಾರವಾಗಲು ಚಂದ್ರಾರ್ಕ ತಾರಂಬರಂ ಸಲ್ಲಿಸುವಂತೆ ದಾಖಲಿಸಲಾಗಿದೆ.[೪೮] ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಶಾಸನಗಳು 'ದಾನ'ವನ್ನು ಉಲ್ಲೇಖಿಸುವಲ್ಲಿ ವಿಶೇಷ ಆಸಕ್ತಿ ತಳೆದಂತೆ ಕಾಣುತ್ತದೆ. ಕ್ರಿ.ಶ. ೧೧ನೇ ಶತಮಾನದ ಭದ್ರಾವತಿ ತಾಲ್ಲೂಕಿನ ಸಿದ್ಧಾಪುರ ಗ್ರಾಮದ ಶಾಸನವು 'ಬಿಟ್ಟೆ ಬೋವ' ಎಂಬ ವೀರನ ಮರಣಕ್ಕೆ ನೆತ್ತರ ಕೊಡುಗೆ ನೀಡಲಾಗಿದೆ. ಶಾಸನವು ಸ್ವಲ್ಪ ತ್ರುಟಿತವಾದರೂ ಶಾಸನದಲ್ಲಿ ಬಂಮಗೌಂಡ, ಕೇತಗೌಂಡ, ಮಾದಿಗೌಂಡ, ಕಾಮಗೌಂಡ ಈ ನಾಲ್ಕು ಜನ ಗೌಡರು ಬಿಟ್ಟೆ ಬೋವನ ಮಕ್ಕಳಿಗೆ ಆಚಂದ್ರಾರ್ಕ ಸಲ್ಲುವಂತೆ 'ಕಂಬ ೨೦' ಗದ್ದೆಯನ್ನು ಬಿಟ್ಟುಕೊಡುತ್ತಾರೆ. ಈ ಧರ್ಮವನ್ನು ಯಾರಾದರೂ ಹಾಳುಮಾಡಿದರೆ ನರಕ ಎಂದು ಉಲ್ಲೇಖಿಸಿ ಆ ದಾನವನ್ನು ಶಾಶ್ವತವಾಗಿ ನಡೆಯಿಸುವ ಸಂಕಲ್ಪವನ್ನು ಈ ಶಾಸನದಲ್ಲಿ ಕಾಣಬಹುದು.[೪೯]

ಕ್ರಿ.ಶ.೧೧ನೇ ಶತಮಾನದ ಅಂತ್ಯದ ಶಿವಮೊಗ್ಗ ಜಿಲ್ಲೆ ಸೊರಬದ ಶಾಸನದಲ್ಲಿ 'ಹಿರಿಯ ಸಕುನ'ವನ್ನು ಕಾವದೇವನ ನಾಯಕ ಹಡವಳಮಾಚೇಯ ಆಕ್ರಮಿಸಿ ತುರುಗಳನ್ನು ಕೊಂಡು ಹೋಗುವಾಗ ಬೀರಗೌಡನು ಕಾಳಗೌಡನಾಳು ಕಂಚಗಾರ "ಬಸವೋಜನ ಮಗ"ಹೋರಾಡಿ ಮಡಿಯುತ್ತಾನೆ. ಆತನಿಗೆ ಅಣ್ಣೆಗೆರೆ ಬಳಿ ಕೆರೆಯೊಳಗೆ ಕಮ್ಮ ೫ ಸಲ್ಲಿಸುವುದು(ಮದ್ಯ ಶಾಸನ ತೃಟಿತ) ಇದನ್ನು ಅಲ್ಲಗಳೆದರೆ ಬ್ರಹ್ಮಹತ್ಯೆ ಪಾಪ ಎಂದು ಹೇಳಲಾಗಿದೆ.[೫೦]

ಸೊರಬ ತಾಲ್ಲೂಕಿನ ದೋರವಳ್ಳಿಯ ಕ್ರಿ.ಶ. ೧೨ನೇ ಶತಮಾನದ ಶಾಸನದಲ್ಲಿ ತುರುಗಾಳಗದಲ್ಲಿ ದೋರವಳ್ಳಿಯ ಮಡಿಕಳಗೌಡನ ಮಗ **ಚಂಚನು** ಹಲವರನ್ನು ಕೊಂದು ಹೋರಾಡುತ್ತಲೇ ಮಡಿದು ಸುರಲೋಕ ಪ್ರಾಪ್ತನಾಗುತ್ತಾನೆ. ಆತನಿಗೆ ಕರಿಲಿಗೆಯ ಮಹಾಜನ ಅರೆಮತ್ತರುಕೆಯ ಆಚಂದ್ರಾರ್ಕವಾಗಿ ಸಲ್ಲಿಸುವರು ಎಂಬ ಸಂಕಲ್ಪವನ್ನು ಶಾಸನದಲ್ಲಿ ಕಾಣಬಹುದು. ಈ ಅಂಶಗಳನ್ನು ಗಮನಿಸಿದಾಗ ಯೋಧನ ಮರಣಾನಂತರವೂ ಅವರ ಕುಟುಂಬ ನಿರ್ವಹಣೆಗೆ ಗದ್ದೆ, ಮನೆಗಳನ್ನು ಕೊಟ್ಟು ಆ ಮಾತನ್ನು ಉಳಿಸಿಕೊಳ್ಳುವ ಪ್ರಯತ್ನ ಅಮೋಘವಾದ ಆದರ್ಶ ಆಗಿದೆ.[೫೧]

ಶಿಕಾರಿಪುರ ತಾಲ್ಲೂಕಿನ ಮುತ್ತಿಗೆ ಗ್ರಾಮದಲ್ಲಿ ಸಿದ್ಧರಾಮೇಶ್ವರ ದೇವಾಲಯದ ದಕ್ಷಿಣಕ್ಕೆ ನೆಟ್ಟ ತುರುಗೋಳ್ ಶಾಸನ ಕ್ರಿ.ಶ. ೧೨ನೇ ಶತಮಾನದ್ದು. ಈ ಶಾಸನದಲ್ಲಿ ವೀರನ ಹೆಸರು ತೃಟಿತವಾಗಿದ್ದರೂ ನೆತ್ತರ ಕೊಡುಗೆಯಾಗಿ 'ಹೊಲ ಭಾವಿ ಕೆಳಗೆ ಕೊಟ್ಟರು ಕಂ ೫' ಎಂಬ ಉಲ್ಲೇಖವಿದೆ. ಇದೇ ಸ್ಥಳದಲ್ಲಿರುವ ಇನ್ನೊಂದು ಶಾಸನದಲ್ಲೂ ವೀರನ ಹೆಸರು ತೃಟಿತವಾಗಿದೆ. ಇಲ್ಲಿ **ಯಚೈಯ್ಯನು** ತನ್ನೂರ ಮುಂದಿನ ಕೆರೆಯೊಳ ......... ಸರುವನೊಳಗೆ ಕಂ ೫' ಕೊಟ್ಟರು ಎಂಬ ಉಲ್ಲೇಖವಿದೆ. ಇಂದಿಗೂ ಈ ಪ್ರದೇಶವನ್ನು ಗಮನಿಸಿದಾಗ ಹೊಂಡ, ಸಮೀಪದಲ್ಲಿ ಸಮತಟ್ಟಾದ ಆಳದ ಕೆರೆ, ಆ ಕೆರೆಗೆ ನೀರು ಒದಗಿಸುವ ಮತ್ತು ಅಪಾಯವಲ್ಲದ ಹುಲ್ಲು ಬೆಳೆದ ದನಗಳಿಗೆ ಮೇಯಿಸಲು ಅನುಕೂಲ ಸ್ಥಳ ಗಮನಿಸಿದಾಗ ಪಶುಸಂಗೋಪನೆಗೆ ಹೇಳಿ ಮಾಡಿಸಿದ ವಾತಾವರಣ ಕಂಡುಬರುತ್ತದೆ. ಅಂದು ಸಾಕಷ್ಟು ಸಂಖ್ಯೆಯಲ್ಲಿ ಪಶುಗಳು ಇದ್ದವು, ಪಶುಪಾಲನೆಗೆ ಅನುಕೂಲ ವಾತಾವರಣ ಅದಾಗಿತ್ತು ಎಂಬುದನ್ನು ಊಹಿಸಬಹುದು.[೫೨]

ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಕ್ರಿ.ಶ. ೧೨ನೇ ಶತಮಾನದ ಬೆನ್ನೂರು ಗ್ರಾಮದ ತರುಗೊಳ್ ಶಾಸನದಲ್ಲಿ **'ಮಲಗೌಡ'** (ತಂದೆಯ ಹೆಸರು ತೃಟಿತವಾಗಿದೆ) ವೀರಸ್ವರ್ಗ ಸೇರುತ್ತಾನೆ. ಅವನ ಮರಣಕ್ಕೆ 'ಮಣಿಕಗೌಡನ ಮಗ ಮಲ್ಲಗೌಡ ಲಚರ ಬೈಚಗೆ ಮುತ್ತದ ಬಳಿಯಲು ನೆತ್ತರು ಗೌಡೆಕೆಗೆ ಕಂಬ ೧೦' ಎಂದು ಉಲ್ಲೇಖಿಸಿದೆ. ಇಲ್ಲಿ **'ಲಚರಬೈಚಗೆ'** ಯಾರು? ವ್ಯಕ್ತಿಯೇ, ಅಥವಾ ಗದ್ದೆಯ ಹೆಸರೇ ಎಂಬುದು ಅಸ್ಪಷ್ಟವಾಗಿದೆ.[೫೩]

ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ಮಾಯತಮ್ಮನ ಮಾಚಡಿ ಗ್ರಾಮದ ಕ್ರಿ.ಶ. ೧೨ನೇ ಶತಮಾನದ ತುರುಗೊಳ್ ಶಾಸನದಲ್ಲಿ ಸಾಕಷ್ಟು ಅಂಶಗಳು ತೃಟಿತವಾದರೂ ಹಿರಿಯ ಮುಚುಡಿಯ ಕನಕ ಬೋಕನ ಮಗ **"ಬೀವಬೋಕ"** ನು ಮರಣ ಹೊಂದಿದ ವಿವರಗಳಿದ್ದು, ಆತನಿಗೆ ಪೃಥ್ವೀ ಸೆಟ್ಟಿ ಬೋಮ್ಮಯ್ಯನು ಕಡವೆಗೆರೆಯ ಸರವಿನಲ್ಲಿ ನೆತ್ತರ ಕೊಡುಗೆಯಾಗಿ ಬಿಟ್ಟ ಗದ್ದೆ ಮತ್ತು ಗಾಣ ಎಂಬ ಅಂಶವಿದ್ದು ಮುಂದಿನ ಸಾಲುಗಳು ತೃಟಿತವಾಗಿದೆ.[೫೪]

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಕ್ರಿ.ಶ. ೧೨ನೇ ಶತಮಾನದ ಮಳವಳ್ಳಿಯ ಶಾಸನ **ಮವಬೋವ** ಹೋರಾಡಿ ವೀರಮರಣವನ್ನು ಹೊಂದುತ್ತಾನೆ. ಆತನ ವೀರತ್ವಕ್ಕೆ ಬೊಮ್ಮಿದೇವ ಅರಸರು, ಮಳವಳ್ಳಿಯ ಗೌಡರು, ಪ್ರಜೆಗಳು, ಬೋವನ ಆಳುತನಕ್ಕೆ ಮೆಚ್ಚಿ ನೆತ್ತರ ಕೊಡುಗೆಯಾಗಿ ಗೌಡಕೆರೆಯ ಕೆಳಗೆ ಕ ಇನ್ನು ನೀಡಿದ್ದಾಗಿ ತಿಳಿದು ಬರುತ್ತದೆ. ಕೊನೆಯಲ್ಲಿ ಜೀತೇನಲಭ್ಯತೇ ಲಕ್ಷ್ಮೀ, ಮೃತೇನಾಪಿ ಸುರಾಂಗನಾ ಶ್ಲೋಕವಿದ್ದು, ಅಂತ್ಯದ ಶಾಪಾಶಯ ತೃಟಿತವಾಗಿದೆ.[೫೫]

ಶಿವಮೊಗ್ಗ ಜಿಲ್ಲೆಯ ಹಾರೋಬೆನವಳ್ಳಿ ಗ್ರಾಮದ ಸೋಮೇಶ್ವರ ದೇವಾಲಯದ ಮುಂದಿರುವ ಕ್ರಿ.ಶ. ೧೨ನೇ ಶತಮಾನದ ಶಾಸನದಲ್ಲಿ ಅನೇಕ ಅಂಶಗಳು ತೃಟಿತವಾಗಿದ್ದರೂ, ಶಾಸನದ ಮುಖ್ಯ ಅಂಶಗಳ ಮಾಹಿತಿ ಇದೆ. ಹೊಸಗುಂದದ ಬೊಮ್ಮರಸನವರು ಕೂಡಲಿಯ ಇರಿದು ತುರುಗಳನ್ನು ಕೊಂಡು ಹೋಹಾಗ **ಬೆಣ್ಣವಳ್ಳಿಯ** ಊರಲಿದು, ಹುಯಲ ಹರಿದು ತಳ್ತಿರಿದು ಆ ಬೊಮೆನಾಯ್ಕನ ಹೆಂಡತಿ .......... ಬವೆನಾಯಕಿತ್ತಿ ಮಡಿಯುತ್ತಾಳೆ. ಅವರ ಅಂತ್ಯ ಕ್ರಿಯೆಯನ್ನು ಪಿಳ್ಳೆಯ ನಾಯಕ ಮಾಡಿ. ವೀರಗಲ್ಲನ್ನು ನಿಲ್ಲಿಸಿ ಅದನ್ನು ಪೂಜಿಸುವಂತೆ ಹೊಂನೇಸ್ವರ ದೇವರ ಅಮ್ರಿತಪಡಿಗೆ ಧಾರಾಪೂರ್ವಕವಾಗಿ ಪಿಳ್ಳೆಯನಾಯಕ ಕಾಲನ್ನು ತೊಳೆದು ಧಾರಾಪೂರ್ವಕವಾಗಿ ಕಬಿನಕಟೆಯ ಕೆಳಗೆ ೧೦ ಕಂಬಗದ್ದೆಯನ್ನು ಕೊಟ್ಟು ಆ ಜನೆಯ ಗುರುಗಳ ಅವರ ಸಂತತತಿಯನ್ನು ನಾವು ತ್ರಿಶುದ್ಧಿಯಿಂದ ನಂಬಿದವರು ಮಂಗಳಮಹಾಶ್ರೀ ಎಂದು ಮುಕ್ತಾಯವಾಗಿದೆ. ಇಲ್ಲಿ ಗಮನಿಸಬೇಕಾದ ವಿಶೇಷತೆಯೆಂದರೆ ತುರುಗಾಳದಲ್ಲಿ ಮಡಿದ ತಾಯಿಗೆ ವೀರಗಲ್ಲನ್ನು ನಿಲ್ಲಿಸಿ, ಆ ವೀರಗಲ್ಲಿನ ಪೂಜೆಗೋಸ್ಕರ ೧೦ ಕಂಬ ಗದ್ದೆಯನ್ನು ಪೂಜಿಸಲು ನಿಯೋಜಿಸಿದ ಜನೆಯ ಗುರುಗಳಿಗೆ ನೀಡಿ ಅವರ ನಂತರವೂ ಈ ವೀರಗಲ್ಲನ್ನು ಅವರ ಸಂತತಿಯು ಪೂಜಿಸಿಕೊಂಡು ಹೋಗಬೇಕೆಂದು ತ್ರಿಶುದ್ಧಿಯಿಂದ ಅಂದರೆ ಕಾಯಾ, ವಾಚಾ, ಮನಸಾ, ನಂಬಿರುವುದಾಗಿ ತಿಳಿಸುವ ಅಂಶ ತುರುಗೊಳ್ ಶಾಸನಗಳಲ್ಲೇ ವಿಶೇಷವಾಗಿದೆ.[೫೬]

ತೀರ್ಥಹಳ್ಳಿ ತಾಲ್ಲೂಕಿನ ಒಂದೇ ಒಂದು ತುರುಗೋಳ್ ಶಾಸನ ಮುನ್ನೂರಿನಲ್ಲಿ ಪತ್ತೆಯಾಗಿದೆ. ಅತ್ಯಧಿಕ ಮಳೆಯ ಕಾರಣಕ್ಕೆ ಶಾಸನ ಸಾಹಿತ್ಯ ತೃಟಿತವಾಗಿದ್ದರೂ ಬಾಗಳಮ್ಮ ಮಡಿದ ವಿವರವನ್ನು ನೀಡುತ್ತಿದೆ.

ಹೀಗೆ ಅಂದಿನ ಕಾಲದ ವೀರನು ರಣರಂಗಕ್ಕೆ ಬೆನ್ನುತೋರಿಸಿ ಹೇಡಿಯಂತೆ ಓಡಿ ಹೋಗದೆ, ಸಾವಿಗೂ ಅಂಜದೆ ಹೋರಾಡಿ ಮಡಿದವರು ರಾಜರ, ಗೌಡರ, ಗ್ರಾಮಸ್ಥರ, ಸಮಾಜದ ದೃಷ್ಟಿಯಲ್ಲಿ ದೈವತ್ವವನ್ನು ಪಡೆದು ಸಮಾಜದ ಜನರಿಂದ ಪೂಜಿತರಾಗುತ್ತಿದ್ದರು. ಅವರ ತ್ಯಾಗಕ್ಕೆ ಅವರ ಮರಣದ ನಂತರವೂ ಅವರ ಕುಟುಂಬದ ಸಂಬಂಧಿಗಳಿಗೆ ಮಡಿದ ವೀರನ ಜ್ಞಾಪಕಾರ್ಥ ನೆತ್ತರ ಕೊಡುಗೆಗಳನ್ನು ನೀಡುತ್ತಿದ್ದದ್ದು ನಮ್ಮ ಪೂರ್ವಿಕರ ಮಾನವೀಯ ನೆಲೆಗಳ ಇತಿಹಾಸದ ಪುಟಗಳ ಸತ್ಯ ಘಟನೆಗಳು, ಇಂದಿನ ಸೈನ್ಯ ವ್ಯವಸ್ಥೆಯಲ್ಲಿಯೂ ಮುಂದುವರೆದಿವೆ.

ಸತ್ತ ವೀರನ ಮನೆಯವರಿಗೆ ಕೊಟ್ಟ ದತ್ತಿಯ ಮೇರೆಯನ್ನು ಸೂಚಿಸಲು ಕಲ್ಲುಗಳನ್ನು ನೆಡುತ್ತಿದ್ದರು. ಆ ದತ್ತಿಯನ್ನು 'ಕಲ್ನಾಡು', 'ಕಲ್ನಾಟು', ಕಲ್ನಟ್ಟು ಎಂದು ಕರೆಯುತ್ತಿದ್ದರು. ಭೂಮಿಯನ್ನು ಕೊಟ್ಟಾಗ ಅವುಗಳ ಅಳತೆಯನ್ನು **ಮತ್ತರು** ಮತ್ತು **ಕಮ್ಮ** (ಕಂಬ) ಗಳೆಂಬುದಾಗಿ ಅಳೆಯುತ್ತಿದ್ದರು. ಒಂದು ಮತ್ತರಿಗೆ ೬೦೦ ಕಂಬಗಳು ಎಂಬುದು ಕ್ರಿ.ಶ. ೧೧೯೯ರ ಶಾಸನ ಒಂದರಿಂದ ತಿಳಿಯುತ್ತದೆ.[೫೭] ಆದರೆ ಈ ಪ್ರಮಾಣಗಳ ಬಗ್ಗೆ ಇನ್ನಷ್ಟು ಅಧ್ಯಯನಗಳು ನಡೆಯಬೇಕಿದೆ. ತುರುಗೊಳ್ ಶಾಸನಗಳಲ್ಲಿ ಕಂಬ ಪದ, ಮತ್ತರು ಎಂಬ ಪದ ಅನೇಕ ಶಾಸನಗಳಲ್ಲಿ ನೆತ್ತರ ಕೊಡುಗೆ ನೀಡುವ ಸಂದರ್ಭದಲ್ಲಿ ಬಳಕೆಯಾಗಿದೆ.

ಯಾರೂ ಕೂಡಾ ಸಾವನ್ನು ಸ್ವಾಗತಿಸುವುದಿಲ್ಲ. ಆದರೆ ಲೋಕಹಿತಾರ್ಥವಾಗಿ ಹೋರಾಡುತ್ತಾ ಸಾವು ಬಂದರೆ ಅದು ಸ್ವಾಗತಾರ್ಹ. ಸತ್ತು ಬದುಕುವುದು ವೀರರ ಗುರಿಯಾಗಿತ್ತು ಎಂಬುದನ್ನು ಈ ಶಾಸನಗಳು ಸಾರಿ ಹೇಳಿವೆ. ಆ ವೀರನ ಮರಣದ ನಂತರವೂ ಅವರ ಕುಟುಂಬ ನಿರ್ವಹಣೆಗೆ ನೆತ್ತರ ಕೊಡುಗೆಗಳನ್ನು ನೀಡಿ, ಬಿಡದೆ ಅವರನ್ನು ಸ್ಮರಿಸಲು ವೀರಗಲ್ಲುಗಳನ್ನು ನೆಡಿಸಿ ಸಮಾಜದಲ್ಲಿ ಪೂಜಿಸುವ ರೀತಿ ಕರ್ನಾಟಕದ ವೀರರಿಗೆ ಸಲ್ಲಿಸುತ್ತಿರುವ ಗೌರವವಾಗಿದೆ. ಪಶುಪಾಲನೆಯು ಆರ್ಥಿಕ ಮೂಲದ ಮುಖ್ಯ ಒರತೆಯಾದಂತೆ ಅವುಗಳನ್ನು ಕದಿಯುವ, ಅಪಹರಿಸುವ ಪ್ರವೃತ್ತಿ ಹೆಚ್ಚಾಗತೊಡಗಿತು. ದನಗಳ ರಕ್ಷಣೆಗಾಗಿ ಅನೇಕ ಯುವಕರು ಗ್ರಾಮಗಳಲ್ಲಿ ಸದಾ ಕಾಲ ಜಾಗೃತರಾಗಿ, ದೇಹವನ್ನು ತೃಣವಾಗಿಸಿ ಮೌಲ್ಯಗಳ ಉಳಿವಿಗಾಗಿ ಸದಾ ಹೋರಾಡಲು ಸಿದ್ಧರಾಗಿರುತ್ತಿದ್ದರು. ಪ್ರಾಣ ಕೊಟ್ಟರೂ ತುರುಗಳನ್ನು ಅಪಹರಿಸಲು ಬಿಡುವುದಿಲ್ಲವೆಂಬ ವೀರರು ಒಂದು ಕಡೆ, ಪ್ರಾಣ ನೀಗಿದರೂ ಸರಿ ಅವರ ತುರುಗಳನ್ನು ಅಪಹರಿಸಲೇಬೇಕೆಂಬ ಪ್ರತಿ ವೀರರು ಮತ್ತೊಂದು ಕಡೆ. ಈ ಇಬ್ಬರ ನಡುವೆ ಅಪಾಯಕ್ಕೊಳಗಾಗುತ್ತಿದ್ದುದು ದನಕರುಗಳು ಮತ್ತು ಹೋರಾಟದಲ್ಲಿ ಮಡಿದವರ ಹೆಂಡತಿ ಮಕ್ಕಳು ಕುಟುಂಬದವರು. ಇದರ ಹೊಣೆಯರಿತ ಗ್ರಾಮ ಸಮುದಾಯ ಇಂಥ ಹೋರಾಟದಲ್ಲಿ ಮಡಿದವರ ಕುಟುಂಬದವರಿಗೆ ಭೂಮಿ, ಗ್ರಾಮ,

ಮನೆ, ಹಣವನ್ನು ದಾನವಾಗಿ ನೀಡಿದ ವಿವರಗಳು ನೆತ್ತರ ಕೊಡುಗೆಗಳು ಕರ್ನಾಟಕದ ಶಾಸನಗಳಲ್ಲಿ ಕಂಡುಬರುತ್ತವೆ.[೫೮]

## ಇ. ಸ್ಮಾರಕ ಕೊಡುಗೆದಾರರು

ಪ್ರಾಚೀನ ಕರ್ನಾಟಕದಲ್ಲಿ ಶತ್ರುಗಳು ತುರುಗಳನ್ನು, ಹೆಣ್ಣುಗಳನ್ನು, ಗ್ರಾಮಗಳನ್ನು, ಆಕ್ರಮಿಸಲ್ಪಟ್ಟು ಅಪಾಯಕ್ಕೆ ಸಿಲುಕಿಸಿದಾಗ ಆ ಊರಿನ ಯುವಕರು ಅಥವಾ ಸೈನಿಕರು, ಮತ್ತು ಗ್ರಾಮಸ್ಥರು ಪ್ರಾಣದ ಹಂಗು ತೊರೆದು ಹೋರಾಡುತ್ತಿದ್ದರು. 'ವೀರತ್ವ' ಎಂಬುದು ಹೋರಾಟಗಾರನ ಅರ್ಹತೆಯಾಗಿತ್ತು. ಹೀಗೆ ಯುದ್ಧದಲ್ಲಿ ಬೆನ್ನು ತೋರಿಸಿ ಓಡಿ ಹೋಗದೆ ಎದೆಕೊಟ್ಟು ಹೋರಾಡುತ್ತಾ ಮಡಿಯುವವನು ಸ್ವರ್ಗಕ್ಕೆ ಸೇರುತ್ತಾನೆ, ಎಂಬ ನಂಬಿಕೆಯೇ ಕರ್ನಾಟಕದಲ್ಲಿ ವೀರಪರಂಪರೆ ಒಂದರ ಹುಟ್ಟಿಗೆ ಕಾರಣವಾಗಿದೆ. ಹೀಗೆ ಗ್ರಾಮ, ಗೋವು, ಮತ್ತು ಹೆಣ್ಣಿನ ರಕ್ಷಣೆಯಲ್ಲಿ ತೊಡಗಿ, ಆ ಸಂಬಂಧದ ಹೋರಾಟದಲ್ಲಿ ಮಡಿದವರನ್ನು ದೈವ ಸ್ವರೂಪದಲ್ಲಿ ಕಾಣುತ್ತಿದ್ದರು. ಅವರ ಹೋರಾಟದ ಆದರ್ಶ ಮುಂದಿನ ತಲೆಮಾರಿಗೂ ತಿಳಿಯಲಿ, ಮಡಿದ ವೀರನ ಕುಟುಂಬಕ್ಕೆ ನೀಡಿದ ದಾನವನ್ನು ಮುಂದಿನ ತಲೆಮಾರಿನವರೂ ಗೌರವಿಸಿ, ಆತನಿಗೆ ನೀಡಿದ ನೆತ್ತರ ಕೊಡುಗೆಯನ್ನು ಮುನ್ನಡೆಸಲು ಹಾಗೂ ಗ್ರಾಮಸ್ಥರಿಗೆ ಆ ವೀರನ ಹೋರಾಟದ ಚಿತ್ರಗಳು ಕಣ್ಣಿಗೆ ಕಟ್ಟುವಂತೆ ಶಾಸನಶಿಲ್ಪ ಸಹಿತ ಶಾಸನಗಳನ್ನು ಹಾಕಿಸುತ್ತಿದ್ದರು. ಬಹಳಷ್ಟು ಸಂದರ್ಭದಲ್ಲಿ ಈ ಶಾಸನಗಳನ್ನು ಮಡಿದ ವೀರನ ರಕ್ತ ಸಂಬಂಧಿಗಳು, ಗ್ರಾಮಸ್ಥರು, ಗ್ರಾಮ ಮುಖಂಡರು ಹಾಕಿಸಿರುವುದು ಶಾಸನೋಕ್ತವಾಗಿವೆ. ಈ ಶಾಸನಗಳ ಕೊಡುಗೆದಾರರನ್ನು ಗಮನಿಸಿದಾಗ ಆ ವೀರನ ಕುಟುಂಬದಲ್ಲಿ, ಅವನ ಗ್ರಾಮದಲ್ಲಿ ಮತ್ತು ಗ್ರಾಮ ಮುಖಂಡನಲ್ಲಿ ವೀರನ ಬಗ್ಗೆ ಇದ್ದ ಪ್ರೀತಿ, ಆದರಗಳು ಗಮನಸೆಳೆಯುವಂತಹದ್ದು. ಈ ಭಾಗದಲ್ಲಿ ತುರುಗೊಳ್ ಸ್ಮಾರಕಗಳ ಕೊಡುಗೆದಾರರ ವಿವರಗಳನ್ನು ದಾಖಲಿಸಲಾಗಿದೆ. ಬಹಳಷ್ಟು ತುರುಗೊಳ್ ಶಾಸನಗಳು ವೀರನ ಮರಣ, ಹೋರಾಟಗಳನ್ನು ಮಾತ್ರ ದಾಖಲಿಸಿವೆ. ಆದರೆ ಕೆಲವು ಶಾಸನಗಳಲ್ಲಿ ಆ ಕಲ್ಲನ್ನು ಹಾಕಿಸಿದವರ ಸ್ಮಾರಕಗಳ ಕೊಡುಗೆದಾರರ ವಿವರಗಳನ್ನು ದಾಖಲಿಸಲಾಗಿದೆ.

ಕ್ರಿ.ಶ. ೯ನೇ ಶತಮಾನದ ಕಾಲದ ಭದ್ರಾವತಿ ತಾಲ್ಲೂಕಿನ ಅರಕೆರೆ ಗ್ರಾಮದ ಶಾಸನ ಒಂದರಲ್ಲಿ ತುರುಗಾಳಗದಲ್ಲಿ ಮಡಿದ 'ಬೆಟ್ಟುಗ'ನ ನೆನಪಿಗಾಗಿ 'ಗೋವಿಗಾವುಂಡ' ಎಂಬುವನು ಶಾಸನವನ್ನು ಮಾಡಿಸಿದ ವಿವರಗಳು ತಿಳಿದುಬರುತ್ತವೆ.[೫೯]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಎಲಿವಾಳ ಗ್ರಾಮದ ಕ್ರಿ.ಶ. ೧೦ನೇ ಶತಮಾನದ ಶಾಸನದಲ್ಲಿ 'ಬ್ಯಾಹಯ್ಯ ಸೆಟ್ಟಿ' ತುರುಗೊಳ್ ಕದನದಲ್ಲಿ ಮಡಿಯುತ್ತಾನೆ. ಅವನ ಮಗ ಮಾರಯ್ಯ ಸೆಟ್ಟಿ ಕಲ್ಲನ್ನು ನಿಲ್ಲಿಸಿದ ವಿವರಗಳನ್ನು ಈ ಶಾಸನವು ಒಳಗೊಂಡಿದೆ.[೬೦]

ಮಾರಸುತರ ಕಳೆಯಮ್ಮ ಗಾವುಣ್ಡನ ಮಗ ಹೊರವಣ್ಣಂಗಾವುಂಡ ತುರುವಿಗೆ ಅಡ್ಡ ಬಂದು ದೇವಲೋಕಕ್ಕೆ ಹೋದನು. ಅವನ ವೀರಮರಣಕ್ಕೆ **'ಚಿಕ್ಕೆಯ್ಯಂಗಾವುಂಣ್ಡ'** ಕಲ್ಲನ್ನು ನಿಲ್ಲಿಸಿದನೆಂದು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕ್ರಿ.ಶ.೧೦ನೇ ಶತಮಾನದ ಗುಡವೆಯ ಶಾಸನ ತಿಳಿಸುತ್ತದೆ.[೬೧]

ಸೊರಬ ತಾಲ್ಲೂಕಿನ ಕ್ರಿ.ಶ.೧೦ನೇ ಶತಮಾನದ ಎಲಿವಾಳದ ಗ್ರಾಮದ ಶಾಸನ ಒಂದರಲ್ಲಿ **'ಪೆದ್ದಣ್ಣಂ'** ಹೋರಾಡಿ ಮಡಿದಾಗ ಅವನ ಅಣ್ಣ 'ಚಬ್ಬಯ್ಯ' ಕಲ್ಲನ್ನು ನಿಲ್ಲಿಸಿ ತಮ್ಮನಿಗೆ ಗೌರವ ಸೂಚಿಸುವ ವಿವರಗಳಿವೆ.[೬೨]

ಕ್ರಿ.ಶ.೧೧ನೇ ಶತಮಾನದ ಕವಡಿ ಗ್ರಾಮದ ಶಾಸನದಲ್ಲಿ "ಕನ್ನಡಿಯ ಕಾವೆಯ ನಾಯಕ" ಹೋರಾಡುತ್ತಾ ಮಡಿಯುತ್ತಾನೆ. ಆ ವೀರನ ಮರಣಕ್ಕೆ ಆತನ ತಮ್ಮನಾದ ಕನ್ನಡಿಯ "ಕೇತಯ ನಾಯಕ"ಬೀರಗಲ್ಲನ್ನು ನಿಲ್ಲಿಸಿ ಕೃತಾರ್ಥನಾಗುತ್ತಾನೆ. ಬಹಳಷ್ಟು ಶಾಸನಗಳಲ್ಲಿ ಅಣ್ಣ ಮುಂದೆ ನಿಂತು ಹೋರಾಡಿ ಮಡಿದಾಗ ಅಣ್ಣನ ಮೇಲಿನ ಪ್ರೀತಿಯಿಂದ ತಮ್ಮನು ಶಾಸನವನ್ನು ನಿಲ್ಲಿಸಿದ ಅನೇಕ ಉದಾಹರಣೆಗಳು ನಮ್ಮ ಮುಂದಿವೆ.[೬೩]

ಇದೇ ತಾಲ್ಲೂಕಿನ ಓಟೂರು ಗ್ರಾಮದ ಕ್ರಿ.ಶ. ೧೧ನೇ ಶತಮಾನದ ಶಾಸನದಲ್ಲಿ ಚಿತ್ರಟವಳ್ಳಿಯ(ಇಂದಿನ ಚಿತ್ರಟ್ಟಿಹಳ್ಳಿ) ಕೀರ್ತಿಗಾವುಣ್ಡನ ಮಗ "ಮಿಂಣ್ಡಗಾವುಂಡ" ಓಟೂರ ತುರುಗಾಳಗದಲ್ಲಿ ಮಡಿಯುತ್ತಾನೆ. ವೀರಗೀತೆಯೊಂದಿಗೆ ಮುಕ್ತಾಯವಾಗುವ ಶಾಸನದ ಕೊನೆಯಲ್ಲಿ ಚಾಕಗೌಡ, ಮಾಳಗವುಡ ಕಲ್ಲ ನಿಲ್ಲಿಸಿದರು ಎಂದು ಉಲ್ಲೇಖಿಸಿದ್ದಾರೆ.[೬೪]

ಶಿಕಾರಿಪುರ ತಾಲ್ಲೂಕಿನ ಇಂದಿನ ಪ್ರಾಚೀನ ಕನ್ನಡ ಶಾಸನ ದೊರೆತ ಕದಂಬ ಸಾಮ್ರಾಜ್ಯದ ಹುಟ್ಟಿಗೆ ಕಾರಣವಾದ ತಾಳಗುಂದ ಗ್ರಾಮದ ಕ್ರಿ.ಶ. ೧೧ನೇ ಶತಮಾನದ ಶಾಸನ ಒಂದರಲ್ಲಿ ಚಾಳುಕ್ಯ ಕೇಸೀಮಯ್ಯ ದಾಳಿಯನ್ನು ಮಾಡಿ ತುರುಗಳನ್ನು ಹಿಡಿದು ಹೆಣ್ಣುಮಕ್ಕಳ ಉಡೆಯನ್ನು ಉರ್ಚಿಕೊಂಡು ಹೋಹಾಗ ನಾಡಕುಲತಿಲಕನಾದ ಮುಕ್ಕಡರ ಸೋವಿಸೆಟ್ಟಿಯ ಮಗ "ಕಾಳೇಯ ನಾಯಕ" ಕುದುರೆಯನಿರಿದು, ಹಲವರನ್ನು ಕೊಂದು, ತುರುಗಳನ್ನು ಮರಳಿಸಿ ಮಡಿಯುತ್ತಾನೆ. ಆತನ ವೀರಮರಣಕ್ಕೆ ಆತನ ಮಗ 'ಸೋಮೆಯ ಬಮ್ಮ' ಕಲ್ಲನ್ನು ನಿಲ್ಲಿಸಿದ ವಿವರಗಳು ಶಾಸನದಿಂದ ತಿಳಿದು ಬರುತ್ತದೆ. ಕೊನೆಯಲ್ಲಿ ವೀರಶ್ಲೋಕದಿಂದ ಮುಕ್ತಾಯವಾಗಿದೆ.[೬೫]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಹಿರೇಮಾಗಡಿ ಗ್ರಾಮದ ಕಲ್ಲೇಶ್ವರ ದೇವಾಲಯದ ಬಳಿಯ ಶಾಸನ ಕ್ರಿ.ಶ. ೧೨ನೇ ಶತಮಾನದ್ದು. ಶಾಸನದ ಕೆಲವು ಅಂಶಗಳು ತೃಟಿತವಾದರೂ

ತುರುಗೊಳ್ ಹೋರಾಟದಲ್ಲಿ ಮಡಿದವನು ಹಿರಿಯ ಮಾಗಡಿಯ ಹೆಗ್ಗಡೆ ಕುಪ್ಪಯ್ಯನ ತಮ್ಮ "ಸಂಕಯ್ಯ" ವೀರಮರಣ ಹೊಂದಿದ್ದಾನೆ. ಆತನ ಮಕ್ಕಳಾದ ಕುಪ್ಪಯ್ಯ, ಕಲ್ಲಯ್ಯರು ಕಲ್ಲನ್ನು ನಿಲ್ಲಿಸಿದರು ಎಂಬುದು ಶಾಸನದಲ್ಲಿ ಸ್ಪಷ್ಟವಾಗಿದೆ.[೬೬]

ಇದೇ ತಾಲ್ಲೂಕಿನ ಕಾತವಳ್ಳಿಯ ಕ್ರಿ.ಶ. ೧೨ನೇ ಶತಮಾನದ ತುರುಗೊಳ್ ಶಾಸನದಲ್ಲಿ ಓಜಯ್ಯನ ಮಗ **"ತೈಲಯ"** ನು ನರೆಗಲ್ಲ ಠಾಣಾಂನ್ತರದಲ್ಲಿ ಹನ್ನಿರ್ವ್ವರು ಮನ್ನೆಯರು ಮುತ್ತಿರುವಾಗ ಹಲವರನ್ನು, ಹಿರಿಯರನ್ನು(ಒಡ್ಡ)ಕೊಂದು ಸುರಲೋಕ ಪ್ರಾಪ್ತನಾಗುತ್ತಾನೆ. ಆತನ ಮರಣಕ್ಕೆ ಅವರಣ್ಣ ಮಾಚಿಸೆಟ್ಟಿ ಹಾಗೂ ತಂಗಿ 'ಸಿರಿಯವ್ವೆ' ಯವರು ವೀರಗಲ್ಲನ್ನು ನಿಲ್ಲಿಸಿರುವುದು ಶಾಸನೋಕ್ತವಾಗಿದೆ. ಶಾಸನವು **ಜಿತೇನ ಲಭ್ಯತೇ ಲಕ್ಷ್ಮೀ** ಶ್ಲೋಕದಿಂದ ಕೊನೆಯಾಗಿದೆ.[೬೭]

ಕ್ರಿ.ಶ. ೧೨ನೇ ಶತಮಾನದ ಶಿವಮೊಗ್ಗ ತಾಲ್ಲೂಕಿನ ಹಾರೋಬೆನವಳ್ಳಿಯ ಶಾಸನಗಳು ಬಹಳ ವಿಶೇಷವಾಗಿದೆ. ಎಫಿಗ್ರಫಿ ಆಫ್ ಕರ್ನಾಟಕದ ೧೩ನೇ ಸಂಪುಟದಲ್ಲಿ ಶಿವಮೊಗ್ಗ ೧೦೯ ಎಂದು ನಮೂದಾಗಿರುವ ಶಾಸನದಲ್ಲಿ ಬೊಮ್ಮೆಯ ನಾಯ್ಕನು ಮಡಿದ ಸುದ್ದಿಯಿದ್ದು, ಆತನ ಅಣ್ಣ ಪಿಳೆಯನಾಯಕನು ಶಾಸನವನ್ನು ಹಾಕಿಸಿದ ಅಂಶಗಳು ಶಾಸನೋಕ್ತವಾಗಿದ್ದರೆ, ಅದೇ ಪುಸ್ತಕದ ಅದೇ ಗ್ರಾಮದ ೧೦೮ನೇ ಶಾಸನದಲ್ಲಿ ಬೊಮೆನಾಯ್ಕನ ಹೆಂಡತಿ "ಬವೆನಾಯಕಿತ್ತಿ ತೋಳುಕಯೆಗೊಟ್ಟು" ಮಡಿಯುತ್ತಾಳೆ. ಅವಳಿಗೆ ಅವಳ ಮಗ ಪಿಳ್ಳೆಯನಾಯ್ಕನು ಶಾಸನವನ್ನು ಮಾಡಿಸಿದ ವಿವರಗಳಿವೆ. ಈ ಎರಡೂ ಶಾಸನಗಳ ಅಂಶವನ್ನು ಗಮನಿಸಿದಾಗ ಒಂದೇ ಕದನದಲ್ಲಿ ಗಂಡ-ಹೆಂಡತಿ ಮಡಿದಿರುವ ವಿವರಗಳು ಈ ಶಾಸನಗಳಲ್ಲಿ ಲಭ್ಯವಾಗಿವೆ.[೬೮]

ಶಿವಮೊಗ್ಗ ಜಿಲ್ಲೆಯ ಚೋರಡಿಯ ಕ್ರಿ.ಶ. ೧೨ನೇ ಶತಮಾನದ ಶಾಸನ ಒಂದರಲ್ಲಿ ಮಡಿದ ತಂದೆ 'ಬೋಪದಾಳಾರನಿಗೆ ಮಗ **ಚೀಲದಳಾರ** ಶಾಸನವನ್ನು ಮಾಡಿಸುತ್ತಾನೆ. ಚೋರಡಿಯ ಗ್ರಾಮಸ್ಥರೆಲ್ಲರೂ ನೆತ್ತರ ಕೊಡುಗೆಯನ್ನು ನೀಡಿರುವುದನ್ನು ದಾಖಲಿಸಿದೆ.[೬೯]ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತ್ಯಾಗರ್ತಿ ಅಗ್ರಹಾರದ ಮಾದಿದೇವಸ್ಥಾನ ಬಳಿಯಿರುವ ಶಾಸನ ಕ್ರಿ.ಶ. ೧೩ನೇ ಶತಮಾನದ್ದು. ಈ ಶಾಸನದಲ್ಲಿ ಆರಂಭವು ಸಂಪ್ರದಾಯದಂತೆ ಇದೆ. ಮುಖ್ಯ ವಿಷಯವೆಂದರೆ ಈ ಶಾಸನವು "ತೊರನಾಡ ತಾಗರತಿಯ ಮಹಾಜನಗಳ ಪ್ರಿಯ ಪುತ್ರ ಬೊಂಮೋಜನ ಮಗ ಸಿರಿಯಮಲೋಜನು ಆ ತಾಗರತಿಯನುದಳದೊಳು (ದುರದೋಳು) ಹಾಯಿದು ತುರುಸೆರೆ ಹೋಹಾಗ ಅದಹಾಯದ ... ಯದು ಕೊಂದು ಸರಿಯಮೋಜನು ಕಳ್ಳರ ಬೆಂಬತ್ತಿಯಿರಿದು ತಾನು ಕವಿಳಾಸ (ಕೈಲಾಸ) ಪ್ರಾಪ್ತನಾದನು" ಎಂದಿದೆ.ಆದರೆ ಮುಂದಿನ ಚಿಕ್ಕ ವಾಕ್ಯದಲ್ಲಿ ಇಡೀ ಶಾಸನದ ಮಹತ್ವ ಬೇರೆಯಾಗುತ್ತದೆ. ಮಡಿದ ಸರಿಯಮೋಜನ ವೀರಮರಣವನ್ನು ಗಮನಿಸಿ, ಈ ಶಾಸನವನ್ನು ಮಹಾಜನಂಗಳು ಮಾಡಿಸಿದರು ಎಂಬುದನ್ನು

ಉಲ್ಲೇಖಿಸಲಾಗಿದೆ. ಒಬ್ಬ ವೀರನ ಮರಣಕ್ಕೆ ಇಡೀ ಗ್ರಾಮ ಅವನನ್ನು ಅವನ ಕುಟುಂಬವನ್ನು ಗೌರವಿಸುತ್ತಿತ್ತು ಎಂಬುದಕ್ಕೆ ಇದು ಸಾಕ್ಷಿ.[೨೦]

**ಈ. ಸಮಾಜದಲ್ಲಿ ಈ ವೀರರ ಸ್ಥಾನ**

ಪ್ರಾಚೀನ ಕರ್ನಾಟಕದ ಯುದ್ಧಗಳಲ್ಲಿ, ತುರುಗೊಳ್ ಬಹಳ ಪ್ರಸಿದ್ಧವಾದ ಯುದ್ಧವಾಗಿತ್ತು. ಪ್ರತಿವೀರರು, ಕಳ್ಳರು, ಒಂದು ಗ್ರಾಮದ ಅಥವಾ ಒಬ್ಬ ವ್ಯಕ್ತಿಯ ದನಗಳನ್ನು ಅಪಹರಿಸುವ ಘಟನೆಗೆ ತುರುಗೊಳ್ ಎಂದು ಕರೆಯಲಾಗಿದೆ. ತುರುಗಳ ಮೇಲೆ ದಾಳಿ ನಡೆದಾಗ ತುರುಗಳ ರಕ್ಷಣೆಗೆ ಹೋರಾಡದವನು ಹೇಡಿ ಎನಿಸಿಕೊಳ್ಳುತ್ತಿದ್ದನು. ಕನ್ನಡದ ಕವಿ ರನ್ನನು ತನ್ನ ಗದಾಯುದ್ಧ ಕಾವ್ಯದಲ್ಲಿ

**ತುರುಗೋಳೊಳ್ ಪೆಣ್ಬುಯ್ಯಲೊ**
**ಳೆರೆವೆಸದೊಳ್ ನಂಟ ನಡೆರೊಳೂರಳಿವಿನೊಳಂ ।**
**ತರೆಸಂದು ಗಂಡುತನಮನೆ**
**ನೇರಪದವಂ ಗಂಡನಲ್ಲನೆಂತುಂ ಪಂಡಂ ॥** (೨೨೪)

ಎಂದು ಹೇಳಿರುವನು. ಮೂರು ಕಾರಣಗಳಿಂದ ತುರುಗಾಳಗವು ಮಹತ್ವ ಪಡೆದಿದೆ. ಮೊದಲನೆಯದಾಗಿ ಗೋವು ಪೂಜನೀಯವಾದುದು. ಎರಡನೆಯದಾಗಿ ಅದು ಕಳೆದುಕೊಳ್ಳಲಾರದ ಆಸ್ತಿ. ಮೂರನೆಯದಾಗಿ ಅವುಗಳನ್ನು ಕಳೆದು ಕೊಳ್ಳುವುದರಲ್ಲಿ ಊರಿನ, ವ್ಯಕ್ತಿಯ ಮಾನಾಪಮಾನದ ಪ್ರಶ್ನೆಯೂ ಇದೆ. ಈ ಕಾರಣದಿಂದ ಯೋಧನೊಬ್ಬ ಮಡಿದರೆ ಮರಮರ ಮರಗುತ್ತಿದ್ದ ಸಮಾಜ ಅವನಿಗಾಗಿ ಮಿಡಿಯುತ್ತಿತ್ತು. ಆ ಊರಿನ ಹಿರಿಮೆಯನ್ನು ವೀರತ್ವಕ್ಕೆ ಹೆಸರಾದವನನ್ನು ನೆತ್ತರ ಕೊಡುಗೆಗಳನ್ನು ನೀಡಿ ಅವರ ಕುಟುಂಬ ನಿರ್ವಹಣೆಗೆ ದಾರಿ ಮಾಡುತ್ತಿದ್ದದ್ದು ಶಾಸನಗಳಿಂದ ತಿಳಿದುಬರುತ್ತದೆ.

ತುರುಗಾಳಗದಲ್ಲಿ ಮಡಿದರೆ ಅದು ಪುಣ್ಯ ಮರಣ, ಆತ ದೈವತ್ವ ಪಡೆದ ದೇವಮಾನವನೆಂದು ಭಾವಿಸುತ್ತಿದ್ದರು. ಹೀಗೆ ಇಹಲೋಕದಲ್ಲಿ ಜೀವಧಾರಣ ಮಾಡಲು ಅವಶ್ಯವೆನಿಸಿ, ಯುಗಮೌಲ್ಯವಾಗಿ ಪರಿಗಣಿಸಿದ ಸಮಾಜ ವೀರತನ, ಪರಲೋಕ ಸಾಧ್ಯತೆಯ ಸಾಧನವೆನಿಸಿ, ಜೀವನದ ಪರಮ ಆದರ್ಶವಾಗಿ ಪರಿಗಣಿಸಿತು. ಈ ವಾಕ್ಯಗಳಿಗೆ ಪೂರಕವಾದ ಶಾಸನ ಆಧಾರ ಶ್ಲೋಕ ಈ ರೀತಿ ಇದೆ.

**"ದ್ವಾವಿಮೌ ಪುರಷಾಲೋಕೇ ಸೂರ್ಯ ಮಂಡಲ ಭೇದಿನೌ**
**ಪರಿವ್ರಾಡ್ಯೋಗ ಯುಕ್ತಾಶ್ಚ ರಣೇಚ ಶೂರಮುಖೇ ಹತಃ"**

ಸೌರಮಂಡಲವನ್ನು ಭೇದಿಸಲು ಇಬ್ಬರಿಗೆ ಮಾತ್ರ ಸಾಧ್ಯ. ಒಬ್ಬನು ಸಾಧನೆಯಿಂದ ಸಿದ್ಧಿ ಪಡೆದ ಸಾಧಕನು. ಇನ್ನೊಬ್ಬನು ರಣರಂಗದಲ್ಲಿ ಶೂರಮುಖದಿಂದ ಹೋರಾಡಿ ಮಡಿದವನು" ಎಂಬ ವೀರವಾಕ್ಯ ಅಂದಿನ ಕಾಲದ ಆದರ್ಶವಾಗಿತ್ತು.[೨೧] ತುರುಗಾಳಗವು ಸ್ವ-ರಕ್ಷಣೆಯ ಯುದ್ಧ. ಇಂತಹ ಯುದ್ಧದಲ್ಲಿ ತುರುಗಳ್ಳರ ಬಗ್ಗೆ ಗೌರವ ಇರುತ್ತಿರಲಿಲ್ಲ. ಆದರೆ ಆ ಕಳ್ಳರ ಜೊತೆ ಹೋರಾಡಿ ಮಡಿದ ಅಥವಾ ಆ ದನಗಳನ್ನು ಹಿಂದಿರುಗಿಸುವಂತೆ ಹೋರಾಡಿದ ವೀರನ ಬಗ್ಗೆ ತುಂಬಾ ಗೌರವ ಇರುತ್ತಿತ್ತು. ಆದರೆ ಅರಸನ ಆಜ್ಞೆಯಂತೆ ಶತ್ರು ಪಕ್ಷದ ಮೇಲೆ ದಾಳಿ ಮಾಡಿ ಯುದ್ಧಕ್ಕೆ ಆಹ್ವಾನಿಸುತ್ತಿದ್ದ, ಸವಾಲೆಸೆದು ಬರುತ್ತಿದ್ದ ವೀರನ ಬಗ್ಗೆ ಗೌರವ ಭಾವನೆ ಇದ್ದದ್ದರ ಬಗ್ಗೆ ಅಪರೂಪಕ್ಕೆ ದಾಖಲೆಗಳು ಸಿಗುತ್ತವೆ. ತಮಿಳಿನ **'ಸಂಗಂ'** ಸಾಹಿತ್ಯ ಕೃತಿಯಿಂದ ತುರುಗಳನ್ನು ವೀರತನದಿಂದ ಅಪಹರಿಸುವ ವೀರನನ್ನು ಗೌರವಿಸುತ್ತಿದ್ದರೆನ್ನುವುದು ವ್ಯಕ್ತವಾಗುತ್ತದೆ.[೨೨] ವೀರತ್ವವನ್ನು, ವೀರನೆಂಬ ಅಭಿನಾಮವನ್ನು ಹೊಂದುವುದು ಹೆತ್ತವರಿಗೂ, ಗ್ರಾಮ, ರಾಜ್ಯ, ನಾಡು, ಹಾಗೂ ತನಗೂ ಶ್ರೇಯಸ್ಕರ ಎಂದು ಪ್ರತಿಯೊಬ್ಬ ವೀರನು ಬಯಸಿ ಅದರಂತೆ ಬಾಳಿದ್ದಾರೆ. ಊರಳಿವು, ಗಡಿಕಾಳಗ, ಹುಲಿಬೇಟೆ, ತುರುಕಾಳಗ, ಪೆಣ್ಬುಯ್ಯಲ್‌ಗೆ ಸಂಬಂಧಿಸಿದ ಸಹಸ್ರಾರು ವೀರರ ಘಟನಾವಳಿಗಳು ಶಾಸನೋಕ್ತವಾಗಿವೆ. **"ಚಿಕ್ಕಚವುಟಿಯ ಕಲಿರೂಪ, ಬಾರಂಗಿಯ ಪೆಬ್ಬ, ಎಲೆವಾಳದ ಬ್ಯಾಹಯ್ಯ ಸೆಟ್ಟಿ, ಪೆದ್ದಣ್ಣ, ಬಂದಳಿಕೆಯ ಬಮ್ಮಣ್ಣ, ಕುಣಿತೆಪ್ಪದ ಮಾಚಿಸೆಟ್ಟಿ, ಹಿರೇಚವುಟಿಯ ಕುಮ್ಮಗ ಬಮ್ಮಯ್ಯ, ಚಾವುಂಡಗಾವುಂಡ, ಚಿಕ್ಕಮಾಗಡಿಯ ಏಕಗಾವುಂಡ, ತೈಲಮ, ಮಾಯಿತಮ್ಮನ ಮುಚುಡಿಯ ಸಾದೆಯ, ನಾಗಯ, ನಾಯಕರು, ಅಗಸನಹಳ್ಳಿಯ ಕಾಳಮೊಗ..ಯ್ಯ, ಹಿರೇಮಾಗಡಿಯ ಸಂಕಯ್ಯ, ಬೊಮ್ಮಣ್ಣ, ಕಣಸೋಗೆಯ ವೀರ ಏಚಗೌಡ, ಮಲ್ಲೇನಹಳ್ಳಿಯ ಹೋಚಗಾವುಂಡ, ಮೂಡಿಯ ಸುಣ್ಣದ ಭವ, ತೆವರತೆಪ್ಪದ ಗೊಗ್ಗಿಗೌಡ, ಮಾರ ಮತ್ತು ಕಾಮ ಹಾಗೂ ಕೇತಯ ನಾಯಕರು. ಊರಿನ ಪ್ರತಿಷ್ಠೆಗಾಗಿ ದನಕರುಗಳ ಹಾಗೂ ಹೆಣ್ಣುಮಕ್ಕಳ ಮಾನಪ್ರಾಣ ರಕ್ಷಣೆಗಾಗಿ ಹೋರಾಡಿ ಮಡಿದು ಹೆಸರಾದವರು"** ಇವರಷ್ಟೇ ಅಲ್ಲದೆ ಇಡೀ ಕರ್ನಾಟಕದಲ್ಲೇ ಲಕ್ಷಾಂತರ ಶಾಸನಗಳಲ್ಲಿ ಹೆಚ್ಚಿನ ಪಾಲನ್ನು ಹೊಂದಿರುವ ವೀರಗಲ್ಲುಗಳೆಲ್ಲವೂ ವೀರನಿಗೆ ಗೌರವಾರ್ಥವಾಗಿ, ಆತನ ಜೀವನವನ್ನು ಮಾದರಿಯಾಗಿಸಿ ದೇವಾಲಯದ ಮುಂದೆ, ಅಥವಾ ಎಡ ಬಲಗಳಲ್ಲಿ ಮೌನದಿಂದ ನಿಂತು ಆ ವೀರನ ಕಾರ್ಯವನ್ನು ಹೇಳುತ್ತಿವೆ.[೨೩] ಕನ್ನಡನಾಡಿನ ಜನರ ಗುಣಗಳಲ್ಲಿ ಯೋಧ ಪದವಿ ಮಹತ್ವದ್ದಾಗಿತ್ತು. ಕನ್ನಡದ ಪ್ರಾಚೀನ ಗ್ರಂಥವಾದ ಕವಿರಾಜಮಾರ್ಗದಲ್ಲಿ ಶ್ರೀವಿಜಯ ಈ ರೀತಿ ಹೇಳಿದ್ದಾನೆ.

**"ಸುಭಟರ್ಕಳ್ ಕವಿಗಳ್ ಸು**

**ಪ್ರಭುಗಳ್ ಚೆಲ್ವರ್ಕಳ್ ಅಭಿಜನರ್ಕಳ್ ಗುಣಿಗಳ್**

**ಅಭಿಮಾನಿಗಳ್ ಅತ್ಯುಗ್ರರ್**

**ಗಂಭೀರ ಚಿತ್ತರ್ ವಿವೇಕಿಗಳ್ ನಾಡವರ್ಗಳ್"**

ಎಂಬ ಕಾವ್ಯಭಾಗದಲ್ಲಿ ಯೋಧ ಪದವಿಗೆ ಅಗ್ರಸ್ಥಾನವಿತ್ತು ಎಂಬುದನ್ನು ಸಾಕ್ಷೀಕರಿಸುತ್ತದೆ. ಅಲ್ಲದೆ ಸಾವಿಗೆ ಹೆದರದೆ ಹೋರಾಡುವುದೇ ಸೈನಿಕನ ಪ್ರಧಾನಗುಣ. ದೇಹವನ್ನು ತೃಣವಾಗಿಸಿ ಸತ್ತನಂತರವೂ ಗೌರವಿಸಲ್ಪಡುವ ವೀರ ಮರಣವನ್ನು ಪ್ರತಿಯೊಬ್ಬನೂ ಬಯಸುತ್ತಿದ್ದರು. ಕೊಡಗಿನಲ್ಲಿ ಪ್ರಚಲಿತವಿರುವ ಒಂದು ಗಾದೆ ಗಂಡು ಹೆಣ್ಣಿನ ಜೀವನದ ಸಾರ್ಥಕತೆಯನ್ನು ಪಡೆಯುವ ಕ್ಷಣಗಳು ಯಾವುದು ಎಂಬುದನ್ನು **"ಗಂಡಸು ಯುದ್ಧರಂಗದಲ್ಲಿಯೂ, ಬೇಟೆಯಲ್ಲಿಯೂ, ಹೆಂಗಸು ಹೆರಿಗೆಯಲ್ಲಿಯೂ ಸಾಯಬೇಕು"** ಎಂಬ ಗಾದೆ ವಿವರಿಸುತ್ತದೆ. ವೀರನಿಗೆ ಮರಣ ಬಂದರೆ ಅದು ರಣರಂಗದಲ್ಲಿ ಯುದ್ಧಮಾಡುತ್ತಲೇ ಬರಬೇಕು ಎಂದು ಬಯಸಿ ಮಡಿದವನನ್ನು ಇಡೀ ಸಮಾಜ ಗೌರವಿಸುತ್ತಿತ್ತು.[೭೪] ರನ್ನನ ಗದಾಯುದ್ಧ ಕಾವ್ಯದ ೩ನೇ ಭಾಗವಾದ ಸಂಜಯ ವಚನ ಭಾಗದ ೩ನೇ ಶ್ಲೋಕದಲ್ಲಿ ಒಬ್ಬ ಕ್ಷತ್ರಿಯನ ಕರ್ತವ್ಯ, ವೀರನ ಕರ್ತವ್ಯ ಏನು ಎಂಬುದನ್ನು **"ಈಯಲ್ ಇರಿಯಲ್ ಶರಣ್ಬುಗೆ, ಕಾಯಲ್ ಕ್ಷತ್ರಿಯರೇ ಬಲ್ಲರ್"** ಎಂಬ ಮಾತು ದಾನವನ್ನು ಕೊಡುವುದು ಹಾಗೂ ರಣರಂಗದಲ್ಲಿ ಇರಿಯುವುದು, ಶರಣಾದವರನ್ನು ಕಾಯುವುದು ಕ್ಷತ್ರಿಯನ ಗುಣ ಎಂಬುದನ್ನು ಸಾರಿ ಸಾರಿ ಹೇಳುತ್ತಿವೆ. ಇಂಥ ಗೆಲುವಿಗಾಗಿ ಹೋರಾಡುವುದು ಪ್ರತಿಯೊಬ್ಬ ವೀರನ ಆದರ್ಶ ಮತ್ತು ಕನಸಾಗಿತ್ತು. ಅಂಥ ಒಂದು ಸಂದಿಗ್ಧವನ್ನು ಒಪ್ಪಿಕೊಂಡು ಬಾಳಿ ಬದುಕಿ ಮಡಿದ ವೀರ ಅಶ್ವತ್ಥಾಮನ ಸಾವನ್ನು ಕುರಿತು ಮಾತನಾಡುತ್ತಾ ಆಡುವ ಪದ್ಯದ ಸಾಲುಗಳು ವೀರನಿಗೆ, ವೀರತ್ವಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ.

**'ಗೆಲಲಾಪೋಡಿರಿದು ಗೆಲ್ವುದು**

**ಗೆಲಲಾರದೊಡಣ್ಮಿ ಸಾವುದಾಳ್ಗನಿತೆ ಗುಣಂ**

**ಗೆಲಲುಂ ಸಾಯಲುಮಾರದೆ**

**ತೊಲಗಿದೊಡೆ ನೆಗಳ್ತೆ ತೊಲಗುವಿರ್ಕು (ಮೆ) ಮೆಯ್ಯಂ॥**

ಎಂಬ ಮಾತುಗಳು ವೀರನಾದವನು ಗೆಲ್ಲುವುದಾದರೆ ಶತ್ರುಗಳನ್ನು ಇರಿದು ಗೆಲ್ವುದು, ಗೆಲ್ಲಲು ಸಾಧ್ಯವಾಗದೆ ಇದ್ದರೆ ಹೋರಾಡುತ್ತಲೇ ಸಾಯುವುದು. ಈ ಎರಡೂ ವಿಧದಲ್ಲಿ ವೀರನಿಗೆ ಗೌರವ ಹಾಗೂ ಕೀರ್ತಿ ದೊರೆಯುತ್ತಿತ್ತು. ಇದೇ ವೀರ ಮತ್ತು ಸೈನಿಕರು ಹೊಂದಿರಬೇಕಾದ ಗುಣ. ಒಂದು ವೇಳೆ ಗೆಲ್ಲಲು ಆಗದೆ, ಸಾಯಲೂ ಆಗದೆ ರಣರಂಗದಿಂದ ತೊಲಗಿದರೆ ಆ ವೀರ ಹೊಂದಿದ ಕೀರ್ತಿ ಆತನ ಮೈಯ್ಯನ್ನು ಬಿಟ್ಟು ಹೋಗುವುದಿಲ್ಲವೇ ಎಂಬ ದುರ್ಯೋಧನನ ಮಾತುಗಳು ವೀರತ್ವದ ದ್ಯೋತಕವಾಗಿದೆ.[೭೫]

ಒಂದು ರಾಜಪ್ರಭುತ್ವದಲ್ಲಿ "ವೀರ" ನಾದವನು ಸಾವಿಗೆ ಅಂಜುವಂತಿರಲಿಲ್ಲ ಮತ್ತು ಸಾವಿನ ಬಗ್ಗೆ ಅಷ್ಟೊಂದು ಪವಿತ್ರ ಭಾವನೆ ನೆಲೆಯೂರುವಂತೆ ಪ್ರಭುತ್ವ ರೂಪಿಸಿತ್ತು. ರಾಜಮನ್ನಣೆ, ಪ್ರಜಾಮನ್ನಣೆ, ಹಾಗೂ ತನ್ನ ಪರಿವಾರಕ್ಕೂ ಮನ್ನಣೆಗಳು ದೊರೆಯುತ್ತಿದ್ದದ್ದು ಆ ವೀರನಿಗೆ ಪ್ರೇರಣೆಯಾಗಿತ್ತೆಂದು ಶಾಸನೋಕ್ತವಾಗಿದೆ. ತುರುಗಾಳಗದಲ್ಲಿ ಭಾಗವಹಿಸದೆ ಮೌನವಾಗಿದ್ದ ವೀರನಿಗೆ ಸಮಾಜ ಯಾವ ರೀತಿಯಲ್ಲಿ ತನ್ನ ಪ್ರತಿಕ್ರಿಯೆಯನ್ನು ತೋರಿಸುತ್ತದೆ ಎಂಬುದು ತೆಲುಗಿನ ಒಂದು ಜನಪದ ಗೀತೆಯಲ್ಲಿ ಪ್ರಸ್ತಾಪಿತವಾಗಿದೆ. "ತನ್ನ ರಾಜ್ಯದ ತುರುಗಳನ್ನು ಹೊಡೆದುಕೊಂಡು ಹೋದಾಗ ಆ ರಾಜ್ಯದ ಮಂತ್ರಿ ಪ್ರತಿಭಟನೆ ತೋರದೆ ಮನೆಗೆ ಬರುತ್ತಾನೆ. ಮನೆಗೆ ಬಂದಾಗ ಅವನ ಹೆಂಡತಿ ಕಾಲು ತೊಳೆದುಕೊಳ್ಳಲು ನೀರು ಕೊಡುವ ಬದಲು ಅರಿಷಿಣ, ಕುಂಕುಮ, ಬಳೆ ನೀಡುತ್ತಾಳೆ. ಊಟಕ್ಕೆ ಕೂತಾಗ ಅವನ ತಾಯಿ ಒಡೆದ ಹಾಲನ್ನು ಬಡಿಸುತ್ತಾಳೆ. ಇದು ನನ್ನ ಷಂಡತನಕ್ಕೆ ನೀಡುತ್ತಿರುವ ಪುರಸ್ಕಾರ ಎಂದು ಅವಮಾನಿತನಾಗುತ್ತಾನೆ. ಗಂಡುತನವನ್ನು ಮೆರೆಯಲು ಪುನಃ ಶತ್ರುಗಳ ಮೇಲೆ ಯುದ್ಧಕ್ಕೆ ಹೋಗಿ ಹಸುಗಳನ್ನು ಮರಳಿ ತಂದು ಜಯಿಸಿ ವೀರತನವನ್ನು ಉಳಿಸಿಕೊಳ್ಳುವ ಪರಂಪರೆ ಜನಪದದಲ್ಲೂ ಉಲ್ಲೇಖಿತವಾಗಿದೆ.[೭೬]

ತಾಯಿಯೊಬ್ಬಳಿಗೆ ತನ್ನ ಮಗನ ವೀರತ್ವವನ್ನು ಸಮಾಜ ಗುರುತಿಸಬೇಕು. ಆ ಮೂಲಕ ಸಮಾಜದಲ್ಲಿ ವೀರಮಗನ ತಾಯಿ ಎನಿಸಿಕೊಳ್ಳಬೇಕು ಎಂಬುದನ್ನು ಬಯಸುತ್ತಿದ್ದಳು. ರಣರಂಗದಲ್ಲಿ ಮಡಿದ ಮಗನಿಗಾಗಿ ದುಃಖಿಸುವ ತಾಯಿ ತಾನೊಬ್ಬಳು ವೀರ ಜನನಿ ಎಂಬ ಸಾರ್ಥಕತೆಯನ್ನು ಹೊಂದುತ್ತಿದ್ದಳು. ವೀರನ ಹೆಂಡತಿಯೂ, ಗಂಡನನ್ನು ಕಳೆದುಕೊಂಡು ವಿಧವೆಯಾದರೂ, ಅವಳಿಗೆ ಸಾಮಾನ್ಯ ಕಾರಣಗಳಿಂದ ವಿಧವೆಯಾದ ಹೆಣ್ಣಿಗಿಂತ ಹೆಚ್ಚು ಗೌರವ ದೊರೆಯುತ್ತಿತ್ತು. ರನ್ನನ ಗದಾಯುದ್ಧ ಕೃತಿಯ ದುರ್ಯೋಧನ ವಿಲಾಪಂ ಭಾಗದಲ್ಲಿ ಸುಯೋಧನನ ಶತ್ರುಗಳಾದ ಪಾಂಡವರ ಕಡೆಯಿದ್ದು, ಚಕ್ರವ್ಯೂಹ ಭೇಧಿಸುವಾಗ, ಚಕ್ರವ್ಯೂಹದ ಒಳಹೊಕ್ಕು ವೀರತನದಿಂದಲೇ ಹೋರಾಡುತ್ತಾ ಮಡಿಯುವ ಅಭಿಮನ್ಯುವಿನ ಶವವನ್ನು ಕಂಡು ಶತ್ರುವಾದರೂ ದುಃಖಿಸುತ್ತಾ ಅವನ ಮರಣಕ್ಕೆ ಗೌರವ ನೀಡುವ ಸುಯೋಧನನ ಮಾತುಗಳು "ವೀರ" ತನಕ್ಕೆ ಸಾಕ್ಷಿಯ ನ್ನೊದಗಿಸುತ್ತದೆ.

"ಪಲರಿರ್ದು ಕಾದಿದರ್ ಮೆಯ್
ಗಲಿಗಳ್ ತನ್ನೊಂದೆ ಮೆಯ್ಯೊಳಂ ತವೆ ಕೊಂದಯ್
ಪಲರಂ ನಿನ್ನಂ ಪೆತ್ತಳ್
ಮೊಲೆವೆತ್ತಳೇ ವೀರಜನನಿವೆಸರಂ ಪೆತ್ತಳ್

ನಿನ್ನೊಂದೆ ಮೈಯಲ್ಲಿ ಹಲವಾರು ವೀರರನ್ನು ಇಲ್ಲವಾಗಿಸಿದೆ. ನಿನ್ನ ಹೆತ್ತವಳು ಕೇವಲ ಮೊಲೆಯನ್ನು ಹೊಂದಿದವಳೇ ಅಲ್ಲ. ವೀರ ಜನನಿ, ವೀರನತಾಯಿ ಎಂಬ ಹೆಸರನ್ನು ನೀನು ಹುಟ್ಟಿದಂದೇ ಹೊಂದಿದ್ದಳು, ಎಂಬ ಮಾತುಗಳು ವೀರತನವನ್ನು ಮೆರೆದು ಮಡಿದ ವೀರನ ತಾಯಿಗೂ ಯಾವ ರೀತಿ ಸಮಾಜ ಗೌರವಿಸುತ್ತಿತ್ತು ಎಂಬುದನ್ನು ತಿಳಿಸುತ್ತದೆ. ಮುಂದುವರೆದು, ಮುಂದಿನ ಕಾವ್ಯ ಭಾಗದಲ್ಲಿ ದುರ್ಯೋಧನನು ನಿನ್ನನ್ನು ಇಷ್ಟು ಮಾತ್ರ ಪ್ರಾರ್ಥಿಸುತ್ತೇನೆ ಅಭಿಮನ್ಯು ನಿಜ ಸಾಹಸವಾದ ದೇಶವೇ ಗೌರವಿಸುವಂಥ ಸಾವು ನನಗೂ ಬರಲಿ ಎನ್ನುವುದು ವೀರತನದ ಚಲಬಿಡದ ಯೋಧನ ಬಯಕೆಯಾಗಿತ್ತು ಎಂಬ ಅಂದಿನ ನಂಬಿಕೆಯೇ ಜೀವನದ ಭಾಗವಾದ ವಿಷಯವನ್ನು ಸಾಕ್ಷೀಕರಿಸುತ್ತದೆ.

ಪಂಪಭಾರತದ ದಶಮಾಶ್ವಾಸದಲ್ಲಿ ಇಪ್ಪತ್ತಾರನೆ ಪದ್ಯದಲ್ಲಿ ಯುದ್ಧಕ್ಕೆ ಹೊರಡುವ ಸೈನಿಕರಿಗೆ ಕೊಡುಗೆಯನ್ನು ಕೊಡುತ್ತಿರುವ ವಿವರ ಬರುತ್ತದೆ. ಆ ಸಂದರ್ಭದಲ್ಲಿ ತನ್ನ ವೀರತನವನ್ನು ಸ್ವಾಮಿನಿಷ್ಠೆಯನ್ನು ಒಬ್ಬ ಸೈನಿಕ ಈ ರೀತಿ ಹೇಳಿಕೊಂಡಿದ್ದಾನೆ.

**"ನಾಳೆ ವಿರೋಧಿ ಸಾಧನ ಘಟಾಘಟಿತಾಹವದಲ್ಲಿ ನಿನ್ನ ಕ**
**ಟ್ಟಾಳಿರೆ ಮುಂಚಿತಾಗದೊಡಮಳ್ಕರೆ ತಾಗಿ ವಿರೋಧಿ ಸೈನ್ಯ ಭೂ।**
**ಪಾಳರನೊಂದೆ ಪೊಯ್ಯದೊಡಮೀ ತಲೆ ಪೋದೊಡಮ್ ಅಟ್ಟೆಯಟ್ಟೆ ಕ**
**ಟ್ಟಾಳನೆ ಮುಟ್ಟೆ ತಳ್ತಿರಿಯದಿರ್ದೊಡಮಂಜಿದೆನಾಂ ಮಹೀಪತಿ॥**

ಎಲೆ ರಾಜನೇ, ನಾಳೆ ನಡೆಯಲಿರುವ ಶತ್ರು ಸೈನ್ಯದ ಗಜಯುದ್ಧದಲ್ಲಿ, ನಿನ್ನಂಥ ಶೂರರಿರುವಾಗ ಶತ್ರು ಸೈನ್ಯವನ್ನು ಹಿಮ್ಮೆಟ್ಟಿಸುತ್ತೇನೆ. ಭಯ ಉಂಟಾಗುವಂತೆ ಅವರನ್ನು ತಗುಲಿ ಶತ್ರು ರಾಜರನ್ನು ಒಂದೇ ಸಮನಾಗಿ ಹೊಡೆದು ಹಾಕುತ್ತೇನೆ. ಈ ತಲೆ ಹೋದರು ಮುಂಡವೇ ಶೂರರನ್ನು ಬೆನ್ನಟ್ಟಿ ಹೋಗಿ ತಗುಲಿ ಕತ್ತರಿಸುತ್ತದೆ. ಹಾಗೆ ಮಾಡದಿದ್ದರೆ ನಾನು ಅಂಜಿದವನೆಂದು ತಿಳಿ ಎಂಬ ಕಾವ್ಯ ಭಾಗವು ವೀರತನಕ್ಕೆ ಸಾಕ್ಷಿಯಾಗಿದೆ.

ಇದೇ ಆಶ್ವಾಸದ ನಲವತ್ಮೂರನೇ ಪದ್ಯವು ಜೋಳದ ಪಾಳಿಯನ್ನು ನೆರವೇರಿಸುವುದೇ ವೀರನ ಕರ್ತವ್ಯ ಎಂಬುದನ್ನು ಧ್ವನಿಸುತ್ತದೆ.

**"ಸುರಲೋಕಂ ದೊರೆಕೊಳ್ವುದೊಂದು ಪರಮ ಶ್ರೀಲಕ್ಷ್ಮಿಯುಂ ಬರ್ಪುದಾ**
**ದರದಿಂ ದೇವನಿಕಾಯದೊಳ್ ನೆರವುದೊಂದುತ್ಸಾಹಮುಂ ತನ್ನ ಮೆ ॥**
**ಯ್ಸಿರಿ ಭಾಗ್ಯಂ ನೆರಮುಪ್ಪುದೊಂದೆ ರಣದೊಳ್ ಗೆಲ್ದಾಜಿಯಂ ತಳ್ತು ಸಂ**
**ಗರದೊಳ್ ಜೋಳದಪಾಳಿಯಂ ನೆರಪಿದಂ ಗಂಡಂ ಪೆರಂ ಗಂಡನೇ"**

ಎಂದು ರಣರಂಗದಲ್ಲಿ ಹೋರಾಡಿ ಜೋಳದ ಋಣವನ್ನು ತೀರಿಸುವವನೇ ನಿಜವಾದ ಗಂಡಸು. ಸತ್ತರೆ ಸ್ವರ್ಗ ಜೊತೆಗೆ ಲಕ್ಷ್ಮಿಯೂ ಗೌರವದಿಂದ ಬರುತ್ತಾಳೆ ಎಂಬ ನಂಬಿಕೆ ಕರ್ನಾಟಕದ ವೀರಪರಂಪರೆಗೆ ಸಾಕ್ಷಿಯಾಗಿದೆ. ಮೃತ್ಯು ಹಾಗೂ ಅವಮಾನ ಈ ಎರಡು ಆಯ್ಕೆಗಳಲ್ಲಿ ವೀರನಾದವನು ಮೃತ್ಯುವನ್ನೇ ಆಯ್ಕೆ ಮಾಡಿಕೊಂಡಿದ್ದಾನೆ. ಏಕೆಂದರೆ ಮೃತ್ಯುವು ಕ್ಷಣಿಕ ದುಃಖ ತಂದರೆ ಮಾನಹಾನಿ, ಹೇಡಿ ಎಂಬ ಪಟ್ಟ ದಿನ ದಿನವೂ, ಆತ ಸಾಯುವವರೆಗೂ ಅವಮಾನ, ನೋವು, ದುಃಖವನ್ನು ಸಹಿಸಬೇಕಾಗುತ್ತಿತ್ತು. ಈ ಎಲ್ಲಾ ಅಂಶಗಳನ್ನು ಪ್ರಮಾಣಿಕರಿಸುವ ಅಂಶವು ಬಾದಾಮಿ ಶಾಸನದಲ್ಲಿ ಹೀಗಿದೆ.

**"ವರನ್ ತೇಜಸ್ವಿಗೊ ಮೃತ್ಯನ್ನತು ಮಾನಾವ ಖಣ್ಣನಂ**
**ಮೃತ್ಯು ತತ್ಕಣೀಕೋ ದುಃಖಮ್ಮಾನಭಂಗಂ ದಿನೇದಿನೇ"**

ಅಂದರೆ ವೀರನಾದವನಿಗೆ ಮೃತ್ಯುವಿಗಿಂತ ಮಾನವೇ ಮೇಲು. ಮೃತ್ಯು ಕ್ಷಣದಲ್ಲಿ ಆಗುತ್ತದೆ. ಆದರೆ ಅಪಮಾನದಿಂದಾಗುವ ನೋವು ದಿನೇ ದಿನೇ ನಮ್ಮನ್ನು ನೋವಿಗೆ ದೂಡುತ್ತದೆ. ಎಂಬ ಅಂಶಗಳು ನಮ್ಮ ಸಮಾಜದ ವೀರ ಪರಂಪರೆಯ ದ್ಯೋತಕವಾಗಿವೆ.

## ೨. ಗೋಗ್ರಹಣ ಶಾಸನಗಳಲ್ಲಿ ಸಾಹಿತ್ಯಕ ಅಂಶಗಳು

ಒಂದು ಜನ ಜೀವನದ ದಾಖಲೆಗೆ ಲಿಖಿತ ರೂಪ ಕೊಟ್ಟಾಗ ಅದು ಸಾಹಿತ್ಯವಾಗಿ ಜನಮನದ ದಾಖಲೆಯಾಗಿ ಉಳಿಯುತ್ತದೆ. ಸತ್ಯವನ್ನು ಹೇಳುವ ನಾಲಿಗೆ ಸುಳ್ಳನ್ನು ಹೇಳಬಹುದು ಎಂಬ ಸಂಭಾವ್ಯತೆಯಿಂದ ಬಾಯಿ ಮಾತಿನ ಬೆಲೆ ಇಳಿದು ಹೋಗುತ್ತದೆ. ಆ ವೇಳೆಗೆ ಬರವಣಿಗೆ ಸತ್ಯದ ಪ್ರಮಾಣವಾಗುತ್ತದೆ. ಪ್ರತಿಕಾತ್ಮಕತೆ ಬರವಣಿಗೆಯ ಹುಟ್ಟುಗುಣ. ಬರವಣಿಗೆಯಲ್ಲಿನ ಮೌನವಾದ ಅಕ್ಷರಗಳು ಮಾನವನ ಮಾತಿನ ಶಬ್ದಗಳು. ಮಾತನಾಡುವವನ ಅನುಪಸ್ಥಿತಿಯಲ್ಲಿಯೂ ಈ ಅಕ್ಷರಗಳು ಶಬ್ದವಾಗಿ, ವಾಕ್ಯವಾಗಿ ಪರಿಣಮಿಸುತ್ತವೆ. ಮನುಷ್ಯನ ಸಾನಿಧ್ಯವಿಲ್ಲದೆ, ಅವನಿಲ್ಲದಾಗ ಮತ್ತು ಅವನು ಸತ್ತಮೇಲೂ ಕೂಡ ಬರವಣಿಗೆ ಮಹತ್ವವನ್ನು ಉಳಿಸಿಕೊಂಡಿದ್ದರಿಂದ ಸಾಮ್ರಾಜ್ಯಗಳ ರಾಜರುಗಳಿಂದ ಬರವಣಿಗೆಗೆ, ಶಾಸನ ಬರವಣಿಗೆಗೆ ಪ್ರಾಶಸ್ತ್ಯ ದೊರೆಯಿತು.[೨೭]

ರಾಜನ ಆಜ್ಞೆ, ಶಾಸನವಾದಾಗ ಶಾಸನದ ಮಹತ್ವ ಹೆಚ್ಚಿತು. ಅದರಲ್ಲೂ ಆರಂಭದಲ್ಲಿ ರಾಜಾಜ್ಞೆ ರಾಜರ ವಿಜಯಗಳ ವರ್ಣನೆಗೆ ಸೀಮಿತವಾಗಿದ್ದ ಶಾಸನ ರಚನೆ ಬರುಬರುತ್ತಾ ಬದಲಾಯಿತು. ರಾಜನ ಆಜ್ಞೆಯಂತೆ ಶಾಸನ ಬರೆಯುವವರು ಸುಶೀಕ್ಷಿತರಾದ್ದರಿಂದ ಶಾಸನಗಳ ಬರವಣಿಗೆಯ ಶೈಲಿಯಲ್ಲಿ ಸಾಹಿತ್ಯಿಕ ಅಂಶಗಳು ಹೇರಳವಾಗಿ ಸಿಗುತ್ತವೆ. ತುರುಗೋಳ್ ಶಾಸನಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, 'ವೀರನೊಬ್ಬನು ಗೋವುಗಳ, ಸ್ತ್ರೀಯರ, ಊರಿನ

ರಕ್ಷಣೆಗಾಗಿ ಮಡಿದ ವಿವರಗಳ ದಾಖಲೆ' ಅಂದರೆ ಅಂದಿನ ಸಮಾಜದಲ್ಲಿ ಮೌಲ್ಯಗಳು ತಾನು ಧರಿಸಿದ ಉಸಿರಿಗಿಂತ ಮೌಲ್ಯವಾದದ್ದು ಎಂಬುದನ್ನು ತಿಳಿಸುತ್ತದೆ. ತನ್ನೂರಿನ ಗೋವುಗಳ ರಕ್ಷಣೆಗಾಗಿ ಹೋರಾಡಿದ ರೀತಿ, ಯಾವ ರಾಜರು ಅಥವಾ ಜನ, ರಣರಂಗ ಅವನ ಹೋರಾಟಕ್ಕೆ ಯಾವ ರೀತಿಯಾಗಿತ್ತು, ಅವನು ಶತ್ರುಗಳನ್ನು ಯಾವರೀತಿಯಾಗಿ ತುಂಡರಿಸಿದ, ಹೇಗೆ ಹೋರಾಡುತ್ತಾ ಮಡಿದ, ಅವನನ್ನು ಸುರಾಂಗನೆಯರು ಹೇಗೆ ಒಯ್ದರು, ಎಂಬ ವಿವರಗಳನ್ನು ಶಬ್ದ, ಅರ್ಥ, ಭಾವ, ಅಲಂಕಾರ, ರಸಾತ್ಮಕವಾಗಿ ಹಿಡಿದಿಡುವ ಕಾರ್ಯವನ್ನು ಶಾಸನ ಸಾಹಿತ್ಯ ಮಾಡುತ್ತದೆ. ಬರಹವು ಅಂದಿನ ಕಾಲದ ಇಡೀ ನಾಗರಿಕತೆಯ, ಅಂದಿನ ಸಂಸ್ಕೃತಿಯ, ಹಾಗೂ ಜೀವನ ವಿಧಾನಗಳ ಮಾನದಂಡವಾಗಿದೆ.

ಸಾಮ್ರಾಟ್ ಅಶೋಕನು ತನ್ನಾಜ್ಞೆಗಳ ಬರವಣಿಗೆಯನ್ನು ಆ ಕಾಲದಲ್ಲಿ ಭಾರತದ ವಿವಿಧ ಭಾಗಗಳಲ್ಲಿ ಅಂದಿನ ಕಾಲದಲ್ಲಿ ಬಳಕೆಯಲ್ಲಿದ್ದ ಲಿಪಿಗಳಲ್ಲಿ ಬರೆಸುವುದನ್ನು ಆರಂಭಿಸಿದರೆ, ಅದು ಮುಂದುವರೆದು ಅಂದಿನ ಜನಜೀವನವನ್ನು ಉಳಿಸಲು, ಬೆಳಸಲು, ಬದುಕಲು ಸಹಾಯ ವಾಯಿತು.[೨೮]

ತುರುಗೊಳ್ ವೀರಗಲ್ಲು ಶಾಸನಪರಂಪರೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪ್ರತಿಯೊಂದು ತುರುಗೊಳ್ ಶಾಸನವು ಅಂದಿನ ಸಾಮಾಜಿಕ ಮೌಲ್ಯಗಳಾದ ಚಾಗ(ತ್ಯಾಗ), ಬೀರ(ವೀರ) ಗುಣಗಳನ್ನು ವೈಭವೀಕರಿಸಿ ಹೇಳುತ್ತವೆ. ಸಂಪಾದಿಸಿದ ಹಣವನ್ನು ಉದಾರವಾಗಿ ದಾನಮಾಡಬೇಕು. ಯುದ್ಧದಲ್ಲಿ ಧೈರ್ಯದಿಂದ ಹೋರಾಡಬೇಕು. ಇವೆರಡೂ ಆದರ್ಶಗಳನ್ನು ಶಾಸನ ಸಾಹಿತ್ಯದ ಪ್ರತಿ ಅಕ್ಷರಗಳಲ್ಲಿಯೂ ತುಂಬಲಾಗಿದೆ. ಮರಣಹೊಂದಿದ ವೀರನಿಗೆ ನೀಡಿದ ಮರಣೋತ್ತರ ಗೌರವಗಳನ್ನು, ಕೊಡುಗೆಗಳನ್ನು ಶಾಸ್ತ್ರಬದ್ಧವಾಗಿ, ಶಾಸನ ಶಿಲ್ಪಿಗಳು ಶಿಲಾಶಾಸನಗಳಲ್ಲಿ ಸಹಸ್ರಾರು ವರ್ಷಗಳು ನೆನಪಿನಲ್ಲಿ ಉಳಿಯುವಂತೆ ಮಾಡಿದ್ದಾರೆ.[೨೯] ಅಂದಿನ ಕಾಲದ ಜನಜೀವನದ ಭಾಗವಾಗಿದ್ದ ಅಸ್ತಿತ್ವದ ಹೋರಾಟದ ವರ್ಣನೆಯನ್ನು ಸಾಹಿತ್ಯದಲ್ಲಿ ದಾಖಲಿಸುವ ಪ್ರಯತ್ನವನ್ನು ಶಾಸನಗಳಲ್ಲಿ ಕಾಣಬಹುದು. ಈ ಭಾಗದಲ್ಲಿ ತುರುಗೊಳ್ ಶಾಸನಗಳಲ್ಲಿ ಅಡಕವಾಗಿರುವ ವರ್ಣನೆಗಳು, ಚಿತ್ರಣಗಳು, ಉಪಮೆಗಳು, ರೂಪಕಗಳು, ಹೀಗೆ ಸಾಹಿತ್ಯದ ಪ್ರಯೋಗಗಳ ಬಗ್ಗೆ ಗಮನಿಸಲಾಗಿದೆ.

**ಅ. ಗ್ರಾಮ ವರ್ಣನೆ**

ತುರುಗೋಳ್ ಶಾಸನಗಳು ವಿಶೇಷವಾಗಿ ಆಳುತ್ತಿರುವ ರಾಜ, ಗ್ರಾಮ ಮುಖಂಡ, ದಾಳಿ ಮಾಡಿದವರ ವಿವರಗಳನ್ನು ತಿಳಿಸಿ ಮುಖ್ಯವಾಗಿ ಯುದ್ಧದಲ್ಲಿ ವೀರನು ಹಸುಗಳನ್ನು ಬೆನ್ನ

ಹಿಂದಿಕ್ಕಿ ಹೋರಾಡಿ ಮಡಿದ ವಿವರಗಳನ್ನು ಹೆಚ್ಚಾಗಿ ಹೊಂದಿರುತ್ತವೆ. ಅನೇಕ ಶಾಸನಗಳು ಆ ವೀರನ ಮರಣಾನಂತರ ಜನರು, ರಾಜ, ಗೌಡ, ನೀಡಿದ ನೆತ್ತರ ಕೊಡುಗೆಗಳನ್ನು ಉಲ್ಲೇಖಿಸುತ್ತವೆ. ಶಾಸನದ ಆರಂಭದ ಸಾಲುಗಳಲ್ಲಿ ಗಮನಿಸುವುದಾದರೆ

**'ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪೃಥಿವೀವಲ್ಲಭಂ ಮಹಾರಾಜಾಧಿರಾಜಂ ರಾಜ ಪರಮೇಶ್ವರಂ ಪರಮ ಭಟ್ಟಾರಕಂ, ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರಿಭುವನ ಮಲ್ಲದೇ ವರು ವಿಜಯ ರಾಜ್ಯಂ ಉತ್ತರೋತ್ತರ ಅಭಿವೃದ್ಧಿಮಾ ಚಂದ್ರಾರ್ಕತಾರಂಬರಂ ಸಲುತ್ತಮಿ ರೆ ತತ್ಪಾದ ಪದ್ಮೋಪ ಜೀವಿ ಸ್ವಸ್ತಿ ಶ್ರೀ...**

ಎಂದು ಮುಂದೆ ಇವರ ಆಶ್ರಯದ, ಗ್ರಾಮದ ಗೌಡನನ್ನು ಉಲ್ಲೇಖಿಸಿ, ಅವನ ಸೈನ್ಯದ, ಗ್ರಾಮದ, ವೀರನು ಯಾರ ವಿರುದ್ಧ? ಹೇಗೆ ಹೋರಾಡಿದ ಎಂಬ ವಿವರಗಳನ್ನು ಶಾಸನಗಳು ಹೊಂದಿವೆ. ಹೆಚ್ಚಿನ ಶಾಸನಗಳು ಈ ಮಾದರಿಯನ್ನು ಅನುಸರಿಸಿವೆ.[೮೦] ಗ್ರಾಮದ ವರ್ಣನೆಗಿಂತ ಆಳಿದ ರಾಜರು, ಗ್ರಾಮದ ಮುಖಂಡ, ಹೋರಾಡಿದ ವೀರನ ಸಂಬಂಧಿಗಳ ವಿವರಗಳೊಂದಿಗೆ ವೀರನ ಹೋರಾಟವೇ ಮುಖ್ಯವಾಗಿರುವುದರಿಂದ ಗ್ರಾಮದ ಉಲ್ಲೇಖದ ಹೊರತು, ಹೆಚ್ಚಿನ ವಿವರಗಳನ್ನು ದಾಖಲಿಸುವಲ್ಲಿ ಗೋಗ್ರಹಣ ಶಾಸನಗಳು ಆಸಕ್ತಿ ವಹಿಸಿಲ್ಲ. ಆದರೂ ಅಪವಾದವೆಂಬಂತೆ ಕೆಲವು ಶಾಸನಗಳಲ್ಲಿ ಗ್ರಾಮದ ವರ್ಣನೆ ಸಂಕ್ಷಿಪ್ತವಾಗಿ ಕಂಡು ಬರುತ್ತದೆ. ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕುಪ್ಪಟೂರು ಗ್ರಾಮದ ಕ್ರಿ.ಶ. ೧೧ನೇ ಶತಮಾನದ ಶಾಸನವೊಂದರಲ್ಲಿ

**'ಬನವಸೆನಾಡಂ ಹಚಿದಿಂ**

**ತನುನಯದಿಂ ವಿಕ್ರಮಾಂಕನಾಳುತ್ತಿರಲಾ**

**ಮನುನೀತಿ ಮಾರ್ಗ್ಗವೊಪ್ಪು**

**ವಧನದ ಶ್ರೀ ಕುಪ್ಪಟೂರ ಸಾಸಿರ್ವರ್ಕ್ಕಳ್' ಸುಖವಿರಲನ್ತಾ ವೂರಂ, ಮುಖಮಂ ಕಿಡಿಪಸುರನಸ್ತೆ ಕಿಡಿಸಲು ಬರ್ಪ್ಪಾಸುಖರ ಹಿತಗವುಡ ಸಾಮಿಯ ಸಖರೊಳಗಾಗೆಯ್ದೆ ಪಿಡಿಯ ಪಾರ್ವ್ವರು ಸೆರೆಯ॥**

ಉಲ್ಲೇಖಿಸಿರುವುದು ಗಮನಾರ್ಹ.[೮೧] ಇಲ್ಲಿ ಗಮನಿಸಬೇಕಾದ ಅಂಶಗಳೆಂದರೆ ಗ್ರಾಮವು ಸುಭೀಕ್ಷವಾಗಿದ್ದು ಅದನ್ನು ಕೆಡಿಸಲು ಹಂದಿಯಂತೆ ಹಿತಗವುಡ ಬಂದು ಕೆಡಿಸುವ ಪ್ರಯತ್ನದ ಅಂಶಗಳು ಗಮನಸೆಳೆಯುತ್ತವೆ. ಇಲ್ಲಿ ಊರ ಮುಖವನ್ನು ಕೆಡಿಸಲು ಬಂದ ಶತ್ರುವನ್ನು ಹಂದಿಗೆ ಹೋಲಿಸಲಾಗಿದೆ. ಹೆಚ್ಚಿನ ಸಂಖ್ಯೆಯ ಶಾಸನಗಳಲ್ಲಿ ಗ್ರಾಮದ ವರ್ಣನೆಗಿಂತ ವೀರನ ಹೋರಾಟದ ವಿವರಗಳಿಗೆ ಹೆಚ್ಚಿನ ಮಹತ್ವ ನೀಡಲಾಗಿದೆ.

### ಆ. ವ್ಯಕ್ತಿ ವರ್ಣನೆ

ತುರುಗೋಳ್ ಶಾಸನಗಳು ಹೋರಾಡಿ ಮಡಿದ ವೀರನ ಯುದ್ಧದ ಕ್ಷಣಗಳನ್ನು ಸಾಹಿತ್ಯದ ಮೂಲಕ ನಮ್ಮ ಕಣ್ಣ ಮುಂದೆ ತೆರೆದಿಡುವ ಪ್ರಯತ್ನವನ್ನು ಮಾಡುತ್ತದೆ. ಊರಿನಮಾನ ಹಾಗೂ ಗೋವುಗಳ ರಕ್ಷಣೆಗಾಗಿ, ಸ್ತ್ರೀಯರ ರಕ್ಷಣೆಗಾಗಿ ಹೋರಾಡಿ ಮಡಿದವೀರ ಜನರ ದೃಷ್ಟಿಯಲ್ಲಿ ಸಾಂಸ್ಕೃತಿಕ ನಾಯಕನಾಗಿ, ಆರಾಧಿಸುವ ಮಹಾನ್ ವ್ಯಕ್ತಿಯಾಗಿ ಸಮಾಜ ಮನ್ನಣೆಯನ್ನು ಹೊಂದುತ್ತಿದ್ದನು. ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕ್ರಿ.ಶ.೧೦ನೇ ಶತಮಾನದ 'ಚಿಕ್ಕ ಚವುಟಿ' ಗ್ರಾಮದ ತುರುಗೋಳ್ ಶಾಸನದಲ್ಲಿ ವೀರನನ್ನು ವಿಶೇಷಣಗಳಿಂದ ಕರೆಯಲಾಗಿದೆ. ಆರಂಭದ ಕೆಲವು ಸಾಲುಗಳು ತೃಟಿತವಾಗಿವೆ. ಮುಖ್ಯ ಅಂಶಗಳನ್ನು ಗಮನಿಸುವುದಾದರೆ 'ಶ್ರೀ ಕನ್ನರದೇವ ರಾಜ್ಯಂಗೆಯ್ಯೆ ................. ಬನವಾಸಿ ಪನ್ನಿಚ್ಛಸಿರದ ಭರಮ ಶ್ರೀ ಕಲಿವಿಟ್ಟರಸನ ........ ಗರಸಣ್ಣ ಯಳ್ದುತ್ತ ಕಂಗಲಿಂಡಿಗನಾಳ್ಗವುಣ್ಡುಗೆಯೆ ...... ಸುರತುರುವಂ ಬೇಡಕಳ್ಳಪೋಗೆ ಪಿರಿಯ ತಳ್ದೊದಟ್ಟಿಯ ಗಉಣ್ಡ ಕಚ್ಛವಿಕುಲತಿಲಕ ಕಲಿರೂಪಂ ಅಲ್ಲಿ ಬನ್ದು ಕಳಳೆರ ಲೋಕಕ್ಕೆ ಸನ್ದ ಆತಂಗೆ ಭುಮಿದಾನಂ ಸತ್ತಗಣ್ಡಂಕೆಯ್ಯ ೧೫.' ಆತನ ಮಗಂ ಕರುವಯ್ಯನು ಅಮ್ಮಣ್ಣನು ಕಲ್ಲಂಮಾಡಿಸಿ, ನಿಲಿಸಿದದಿದಂ ಕೆಡೊಂಗೆ ಅಷ್ಟವಿಧಪಲಂ ಅಳಿದಾತಂಗಂ ಪಂಚ ಮಹಾಪತಮಕ್ಕುಂ' ಎಂದಿರುವ ಶಾಸನದಲ್ಲಿ ವೀರನ ಹೆಸರನ್ನು **'ಕಚ್ಛವಿಕುಲತಿಲಕ, ಕಲಿರೂಪ'** ಬಂದು ಬೇಡ ಕಳ್ಳರೊಂದಿಗೆ ಹೋರಾಡಿ ಮಡಿದ ಆವೀರ–ಆ ಗ್ರಾಮದ ತಿಲಕಪ್ರಾಯನೇ ಸರಿ.[೮೮]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕ್ರಿ.ಶ.೧೦ನೇ ಶತಮಾನದ ಅಂತ್ಯ ಭಾಗದ ಕುಣಿತೆಪ್ಪದ ಶಾಸನ ವಿಶಿಷ್ಟವಾಗಿದೆ. ಶಾಸನದ ಆರಂಭದಲ್ಲಿ ಆ ಸಾಮ್ರಾಜ್ಯದ ಸ್ತುತಿ ಬರುತ್ತದೆ. ಆನಂತರ ಅವರ ಆಶ್ರಯದಲ್ಲಿರುವ ಮಹಾಪಂಚರು, ಮಹಾಸಾಮನ್ತಾಧಿಪತಿ, ಮಹಾ ಪ್ರಚಂಣ್ಡ ದಂಡನಾಯಕ, ಸಾನ್ತಳಿಗೆ, ಜಿಡ್ಡುಳಿಗೆ ೭೦, ನಾಗರಖಂಡ ೭೦ ಆಳುತ್ತಿರಲು, ಆ ವೇಳೆಗೆ ನಾಗರ ಖಂಡ೭೦ನ್ನು ಬೊಪ್ಪಣ್ಣಗೌಡರು,ನೋಡಿಕೊಳ್ಳುತ್ತಿದ್ದರು. ಆವೇಳೆಗೆ ಕೊಡದತೆಪ್ಪದ ನಾಗಗೌಡ, ಊರಿನ ಗೌಡಿಕೆಯನ್ನು ನಡೆಸುತ್ತಲಿದ್ದ ಕಾಲದಲ್ಲಿ, ಹಸುವೆಣ್ಣೆಯರ ನಾಗಿಸೆಟ್ಟಿಯ ಮಗಂ– ಮಾಚಿಸೆಟ್ಟಿ ಗಂಡರಗಂಡ, ತೊಡರ್‌ಬಲ್‌ಗಂಡ, ಕೊಡದತೆಪ್ಪದ ತುರುಹರಿವಲ್ಲಿ ಕಲ್ಲಿಗಟ್ಟೆಯ ಬಯಲಿನಲ್ಲಿ ಹೋರಾಡುತ್ತಾ ಮಡಿದು ಸುರಲೋಕ ಪ್ರಾಪ್ತನಾಗುತ್ತಾನೆ. ಈ ಶಾಸನದಲ್ಲಿ ಮಾಚಿ ಸೆಟ್ಟಿಯನ್ನು ಗಂಡರಗಂಡ, ತೊಡರ್‌ಬಲ್‌ಗಂಡ ಎಂದು ಉಲ್ಲೇಖಿಸಿರುವುದು ವಿಶೇಷವಾಗಿದೆ.[೮೯]

ಸೊರಬ ತಾಲ್ಲೂಕಿನ ಕಲ್ಲೂರು ಗ್ರಾಮದ ಕ್ರಿಶ.೧೨ನೇ ಶತಮಾನದ ಶಾಸನ ಒಂದರಲ್ಲಿ ಕುಪ್ಪಟೂರ ಅಗ್ರಹಾರದ ಮೇಲೆ ದಾಳಿ ನಡೆದಾಗ ಹೋರಾಡಿ ಮಡಿದ ಹಡವಳ ಬೀರಯ್ಯನನ್ನು

ಘಟಸರ್ಪಕ್ಕೆ ಹೋಲಿಸಿದ್ದಾರೆ. ಇಲ್ಲಿ ಹಡವಳ ಬೀರಯ್ಯನ ಕೋಪ, ರೋಷ ಎಂಥಹದ್ದಾಗಿತ್ತು ಎಂಬುದನ್ನು ಸರ್ಪ ನಮಗೆ ಹೋಲಿಸಲು ಅವಕಾಶಮಾಡಿಕೊಡುತ್ತದೆ.[೮೪]

ಒಂದು ಶಾಸನದ ವಿಷಯ ಅತ್ತಿತ್ತ ಆಗಿ ಆ ಘಟನೆಯ ಪ್ರಾಮುಖ್ಯತೆ ಅಳಿಯದಂತೆ ನೋಡಿಕೊಂಡಿರುವುದು ತುರುಗೊಳ್ ಶಾಸನ ಸಾಹಿತ್ಯದ ವಿಶೇಷವಾಗಿದೆ. ತುರುಗೊಳ್ ಶಾಸನದಲ್ಲಿ ನಾಡಪ್ರಭುವನ್ನು ಹೆಚ್ಚಾಗಿ ವರ್ಣಿಸಿದ್ದಾರೆ. ಅನೇಕ ಬಿರುದುಗಳಿಂದ ಚಿತ್ರಿಸಿ ಹೊಗಳಿದ್ದಾರೆ. ಆದರೆ ತುರುಗೊಳ್ ವೀರನನ್ನು ಬೆರಳೆಣಿಕೆಯ ಶಾಸನಗಳಲ್ಲಿ ವರ್ಣಿಸಿದ್ದರೂ, ಅವರ ರಣರಂಗದ ವೀರತನವನ್ನು ಹೆಚ್ಚಿನ ಶಾಸನಗಳು ವರ್ಣಿಸುವಲ್ಲಿ ಆಸಕ್ತಿ ತೋರಿವೆ. ತುರುಗೋಳ್ ಶಾಸನಗಳಲ್ಲಿಯೂ ಅನೇಕ ಬಿರುದುಗಳನ್ನು ವೀರರಿಗೆ ಅನ್ವಯಿಸಿ ಹೇಳಿರುವುದನ್ನು ಗುರುತಿಸಬಹುದು. ಯುದ್ಧದಲ್ಲಿ ಕಾದಾಡಿದ ಶತ್ರುಗಳನ್ನು ಸೋಲಿಸಿದ ಸಂಕೇತವಾಗಿ, ಅವರು ಹೊಂದಿದ ಗುಣ, ವ್ಯಕ್ತಿತ್ವಕ್ಕೆ ತಕ್ಕಂತೆ ಈ ಬಿರುದುಗಳನ್ನು ಆ ವೀರರುಗಳಿಗೆ, ರಾಜರಿಗೆ ನೀಡಿ ಸಮಾಜ ಗೌರವಿಸಿದೆ.

ಬಿರುದುಗಳನ್ನು ಗಮನಿಸುವುದಾದರೆ **ಸಮಕ್ತ್ವ ಚೂಡಾಮಣಿ,** ಅಂದರೆ ರತ್ನಗಳಲ್ಲೇ ಅಪರೂಪವಾದ ಚೂಡಾಮಣಿಯ ಗುಣವನ್ನು ಹೊಂದಿದವರು, ಅಮೂಲ್ಯವಾದ, ಎಂಬರ್ಥದಲ್ಲಿ ಬಳಸಲಾಗಿದೆ.

**ಮಲೆ ರಾಜರಾಜ:** ಮಲೆಪರೊಡನೆ, ಬೆಟ್ಟಗಳಲ್ಲಿ ವಾಸಿಸುವ ಬೇಡ ಜನರನ್ನು ಬಂಡುಕೋರರನ್ನು ಹಿಮ್ಮೆಟ್ಟಿಸಿದ ಹಿರಿಮೆಯ ಪ್ರತಿಷ್ಟೆಯ ಸಂಖೇತವಾಗಿ ಈ ಬಿರುದನ್ನು ಬಳಸಿದ್ದಾರೆ.

**ಮಲೆಪರೊಳುಗಂಡ:** ಮಲೆಯ ಪಂಗಡಗಳಲ್ಲೇ ಅತ್ಯಂತ ಬಲಿಷ್ಠನಾದವನು.

**ಗಂಡಭೇರುಂಡ** :ಇದನ್ನು ಇಂದು ಕರ್ನಾಟಕ ಸಾರಿಗೆ ಸಂಸ್ಥೆಯ ಲಾಂಛನವನ್ನಾಗಿ ಬಳಸಲಾಗಿದೆ. ಸಾಂಕೇತಿಕವಾಗಿ ಊಹಿಸುವುದಾದರೆ ಈ ಪಕ್ಷಿಗೆ ಎರಡು ತಲೆ, ನಾಲ್ಕು ಕಣ್ಣು, ಎರಡು ಮೆದುಳು. ಇದರಿಂದ ಎಲ್ಲರಿಗಿಂತ ವಿಶೇಷವಾಗಿ ಎರಡರಷ್ಟು ಯೋಚಿಸುವ ಹಾಗೂ ಸೂಕ್ಷ್ಮವಾಗಿ ಗಮನಿಸುವ ಕ್ಷಮತೆಯನ್ನು ಹೊಂದಿದವನು ಎಂಬರ್ಥ.

**ಕದನಪ್ರಚಂಡ:** ಯುದ್ಧದಲ್ಲಿ ಈತನ ಎದುರು ನಿಲ್ಲುವಂತಹ ವೀರರಾರೂ ಇಲ್ಲ. ಯುದ್ಧ ಆರಂಭವಾದರೆ ಈತ ಸಮರ ಕಲೆಗಳ ನಿಪುಣ,ರಣರಂಗದಲ್ಲಿ ಇವನನ್ನು ಎದುರಿಸುವವ ಇನ್ನೊಬ್ಬರಿಲ್ಲ ಎಂಬುದನ್ನು ಸೂಚಿಸುತ್ತದೆ.

**ಏಂಕಾಗವೀರ:** ಸೈನ್ಯದ ಸಹಾಯವಿಲ್ಲದೆಯೂ ಒಬ್ಬನೇ ಯುದ್ಧವನ್ನು ಗೆಲ್ಲಬಲ್ಲಂಥ ಶಕ್ತಿಯನ್ನು ಹೊಂದಿದವನು.

**ಗಿರಿದುರ್ಗಮಲ್ಲ:** ಬೆಟ್ಟಗಳಿಂದ ಆವೃತವಾದ, ಕೋಟೆಕಾಳಗದಲ್ಲಿ ಇವನನ್ನು ಗೆಲ್ಲುವವರಿಲ್ಲ ಎಂಬುದು.

ಹೀಗೆ ಗಮನಿಸಿದರೆ ಶನಿವಾರಸಿದ್ಧಿ, ಛಲದಂಕಮಲ್ಲ, ಶ್ರೀ ಪೃಥ್ವೀವಲ್ಲಭ, ಮಹಾರಾಜಾಧಿರಾಜಂ, ಸತ್ಯಾಶ್ರಯ ಕುಲತಿಲಕ, **ಪರನಾರಿಸಹೋದರ**(ಇಲ್ಲಿ ಬೇರೆ ಹೆಣ್ಣುಮಕ್ಕಳನ್ನು ರಕ್ಷಿಸುವ ಸಹೋದರ, ಎಂಬುದು ಇಂದಿನ ಕಾಲಕ್ಕೂ ಮಹತ್ವ ಪಡೆಯುತ್ತದೆ.) ತ್ರಿಭುವನಮಲ್ಲ, ಸಹಾಯಶೂರ, ಮಾಂಡಲೀಕರ ಗಂಡ, ಭುಜಬಲ ಚಕ್ರವರ್ತಿ, ಭಾಷೆಗೆ ತಪ್ಪುವರಾಯರ ಗಂಡ, ಕಲಿಗಳ ಒಡೆಯ, ಅಡವಿಗೊಡೆಯ, ಮುಂತಾದ ಬಿರುದುಗಳು ತುರುಗೊಳ್ ಶಾಸನಗಳಲ್ಲಿ ರಾಜರನ್ನು, ವೀರನನ್ನು ಸ್ತುತಿಸುವ ಜೊತೆಗೆ ಈ ರಾಜ್ಯದ ಹೆಮ್ಮೆ, ಈ ವೀರ ಎಂಬಂತೆ ಶಾಸನಗಳು ವೀರನಿಗೆ ಮಹತ್ವವನ್ನು ಕಲ್ಪಿಸುತ್ತವೆ.

ತುರುಗೊಳ್ ಶಾಸನಗಳು ಗೋವುಗಳ ರಕ್ಷಣೆಯಲ್ಲಿ ಮಡಿದ ವೀರನನ್ನು ಉದ್ಧಾತ್ತೀಕರಿಸುವ ಪ್ರಯತ್ನದ ಫಲಕವಾಗಿರುವುದರಿಂದ ವೀರನು ಯಾರೊಂದಿಗೆ, ಯಾವ ಉದ್ದೇಶಕ್ಕಾಗಿ ಹೋರಾಡಿ ಮಡಿದನೆಂಬುದನ್ನೇ ವರ್ಣಿಸಿ, ವೈಭವೀಕರಿಸಿ ಹೇಳಿದ್ದಾರೆ. ವೀರನ ಹೆಸರು ಜನಮಾನಸದಲ್ಲಿ ನೆಲೆನಿಂತು ಆತನು ಗ್ರಾಮದ, ರಾಜ್ಯದ, ಗೋವುಗಳನ್ನು ರಕ್ಷಿಸಲು ತನ್ನ ಪ್ರಾಣವನ್ನೇ ತೃಣವಾಗಿಸಿಕೊಂಡ ವೀರ ಎಂಬುದನ್ನು ಸಾರಿ ಹೇಳುತ್ತಿವೆ. ಇಂದು ಆ ಶಾಸನಗಳು ಯಾವುದೋ ಕೆರೆ ಅಂಗಳದಲ್ಲಿ, ಬೇಲಿಯಲ್ಲಿ, ಪಾಳುಬಿದ್ದ ಭೂಮಿಯಲ್ಲಿ ಧ್ವನಿ ಕಳೆದುಕೊಂಡು ಮೂಕರೋದನ ಮಾಡುತ್ತಾ ನಿಂತಿವೆ. ಆ ಶಾಸನದ ಸಾಹಿತ್ಯಕ್ಕೆ ಮತ್ತೆ ಧ್ವನಿ ಬರಬೇಕಿದೆ.

**ಇ. ತುರುಗೊಳ್ ಶಾಸನಗಳಲ್ಲಿ ಕಾವ್ಯಾತ್ಮಕ ಅಂಶಗಳು**

ತುರುಗೊಳ್ ಶಾಸನಗಳು ನಾಡಿನ ವೀರ ಪರಂಪರೆಯ ಸಾಕ್ಷಿಯಾಗಿವೆ. ಅಂದಿನ ಸಮಾಜದಲ್ಲಿ ನಡೆದ ಹೋರಾಟವೊಂದರ ಚಿತ್ರಣವನ್ನು ನಮ್ಮ ಮುಂದೆ ಕಟ್ಟಿಕೊಡುತ್ತವೆ. ಅಂದಿನ ಕಾಲ ಪ್ರಾಚೀನ ಹಳೆಗನ್ನಡ-ನಡುಗನ್ನಡದ ಬದಲಾವಣೆಯ ಪರ್ವಕಾಲವಾದ್ದರಿಂದ ಕಾವ್ಯ ಪ್ರಕಾರಗಳು ಹೆಚ್ಚು ಪ್ರಚಾರ ಪಡೆದಿದ್ದವು. ಜನತೆ ಒಂದು ಘಟನೆಯನ್ನು ನೆನಪಿಟ್ಟುಕೊಳ್ಳಲು ಆ ಘಟನೆಗಳನ್ನು, ವ್ಯಕ್ತಿ ಚಿತ್ರಣಗಳನ್ನು ಪದ್ಯಮಯವಾಗಿ ಶಾಸನಗಳಲ್ಲಿ ದಾಖಲಿಸಿದ್ದಾರೆ. ಶಾಸನ ಸಾಹಿತ್ಯದ ಆರಂಭದಲ್ಲೂ ಹೆಚ್ಚಿನ ಶಾಸನಗಳು ಸ್ವಸ್ತಿಶ್ರೀ ಎಂದು ಆರಂಭವಾಗಿರುತ್ತವೆ. ಇನ್ನು ಹಲವು ಶಾಸನಗಳಲ್ಲಿ ಬಳಕೆಯಾಗಿರುವ ಈ ಶ್ಲೋಕದಲ್ಲಿ

**ನಮಸ್ತುಂಗ ಶಿರಸ್ಚುಂಬಿ ಚಂದ್ರಚಾಮರ ಚಾರವೇ**

**ತ್ರೈಲೋಕ್ಯ ನಗರಾರಂಭಂ ಮೂಲಸ್ತಂಭಾಯಶಂಭವೇ॥**

ಅಂತ್ಯ ಪ್ರಾಸವನ್ನು ಬಳಸಿರುವುದನ್ನು ಕಾಣಬಹುದು. ಅಂತ್ಯ ಪ್ರಾಸದಿಂದ ಕಾವ್ಯ ಶ್ರವಣ ಮನೋಹರವಾಗಿ ಕೇಳುವಂತೆ ಮಾಡಿದ್ದಾರೆ. ಅಲ್ಲದೆ ತುರುಗೋಳ್ ಶಾಸನಗಳ ರಚನೆಯಲ್ಲಿ ಖ್ಯಾತ ಕರ್ನಾಟಕ ವೃತ್ತಗಳನ್ನು ಬಳಸಿದ್ದಾರೆ. 'ವೃತ್ತ' ಎಂದು ನಮೂದಿಸಿದ್ದರೂ ಶಿಲ್ಪಿಯ ಕಣ್ ತಪ್ಪಿನಿಂದಾಗಿ ಅನೇಕ ಶಾಸನಗಳಲ್ಲಿ ಈ ವೃತ್ತಗಳು ಅಸ್ಪಷ್ಟವಾಗಿ ದಾಖಲಾಗಿ ಬಿಟ್ಟಿವೆ. (ಹಲವು ಶಾಸನಗಳಲ್ಲಿ ತೃಟಿತವಾಗಿವೆ. ಅಥವಾ ಕೆಲವು ಸಾಲುಗಳು ತಪ್ಪಾಗಿವೆ). ಕೆಲವು ಶಾಸನಗಳಲ್ಲಿ ಆರಂಭದಲ್ಲಿ ನಿಗದಿಮಾಡಿಕೊಂಡ ವೃತ್ತದಲ್ಲಿ ರಚಿಸ ಹೊರಟರೂ ಮೊದಲನೆ ಸಾಲಿನ ನಂತರ ವೃತ್ತಗಳ ಬಿಗಿತಪ್ಪಿ ಗಣ ವ್ಯತ್ಯಾಸಗಳಾಗಿವೆ. ಉದಾಹರಣೆಗೆ ಸೊರಬ ತಾಲ್ಲೂಕಿನ ಕ್ರಿ.ಶ. ೧೦ನೆ ಶತಮಾನದ ಕೊರಕೋಡು ಶಾಸನ ಅತ್ಯಂತ ಪ್ರಸಿದ್ಧವಾದದ್ದು. ಅದರಲ್ಲಿ ಒಂದು ವೃತ್ತ

ᴗᴗᴗ |ᴗ – ᴗ | – ᴗ ᴗ |ᴗ– ᴗ| ᴗ – ᴗ| ᴗ – ᴗ | – ᴗ–

**ಮಲೆದಿ।ದಿರಾಂತ।ಮೌರ್ವ್ವ್ವಲ।ವನಳ್ಕ।ಜಿತಾಗಿ।ಭುಜಪ್ರತಾಪದಿಂ**

ಇದನ್ನು ಚಂಪಕ ಮಾಲಾವೃತ್ತದಲ್ಲಿ ಆರಂಭಿಸಿದ್ದರು. ನಂತರದ ಸಾಲುಗಳಲ್ಲಿ ವ್ಯತ್ಯಾಸವಾಗಿದೆ. ಇಲ್ಲಿ 'ನಜಭಜಜಜರ' ಎಂಬ ಅಕ್ಷರಗಣ ಸಂಯೋಜನೆಯನ್ನು ಹೋದಿರುವುದನ್ನು ಕಾಣಬಹುದು. ಆದರೆ ಅಂದಿನ ಕಾಲದಲ್ಲಿ ಸತತ ನಡೆದ ಯುದ್ಧಗಳ ಪರಿಣಾಮವಾಗಿ ಹಲವು ವೀರರ ಶಾಸನಗಳನ್ನು ಹಾಕಿಸುವ ಕಾರ್ಯ ನಡೆದಿದ್ದರಿಂದ ಯಾವುದೋ ಕವಿ ಯಾವುದೋ ಶಾಸನಕ್ಕೆ ಬರೆದ ಪ್ರಸಿದ್ಧ ಪದ್ಯಗಳನ್ನು, ಇತರ ವೀರರಿಗೂ ಅನ್ವಯಿಸಿ ಶಾಸನಗಳಲ್ಲಿ ಬಳಸಿರುವುದನ್ನು ಗಮನಿಸಬೇಕಾಗುತ್ತದೆ. ಹಾಗೆ ಪದ್ಯ ವಿವಿಧ ಶಾಸನಗಳಲ್ಲಿ ಬಳಕೆಯಾಗುತ್ತಾ ಸಾಗಿದಾಗ ಅಕ್ಷರ ವ್ಯತ್ಯಾಸ ಹೊಂದುತ್ತಾ ಅನೇಕ ಒತ್ತಕ್ಷರ, ಪದ, ಬದಲಾಗುತ್ತಾ ಸಾಗಿರುವುದನ್ನು ಗುರುತಿಸಬಹುದು. ಹಾಗೆ ಬದಲಾದಾಗ ಆರಂಭದ ಸಾಲುಗಳು ಮೂಲ ರೂಪದಲ್ಲಿದ್ದರೂ, ನಂತರದ ಸಾಲುಗಳ ವ್ಯತ್ಯಾಸಕ್ಕೆ ಶಿಲ್ಪಿಯ ಮಾರ್ಪಾಡುಗಳು ಕಾರಣವಾಗಿವೆ. ಹಾಗಾಗಿಯೇ ಕೆಲವು ಸಾಲುಗಳು ಮೊದಲ ಸಾಲಿನ ಗಣ ಸಂಯೋಜನೆಯಂತೆಯೇ ಸಾಗಿದರೂ ಕೆಲವೆಡೆಗಳಲ್ಲಿ ಗಣ ಸಂಯೋಜನೆ ತಪ್ಪಾಗುತ್ತಾ ಸಾಗಿರುವುದನ್ನು ಗುರುತಿಸಬಹುದು.

ಕ್ರಿ.ಶ. ೧೧ನೇ ಶತಮಾನದ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕಾತವಳ್ಳಿಯ ತುರುಗೊಳ್ ಶಾಸನಗಳನ್ನು ಗಮನಿಸಿದಾಗ ಒಂದು ಬೃಹತ್ ಕದನಕ್ಕೆ ಸಾಕ್ಷಿಯನ್ನು ಈ ಗ್ರಾಮ ಒದಗಿಸುತ್ತದೆ. ಈ ಗ್ರಾಮದಲ್ಲಿ ಹಲವು ಶಾಸನಗಳು ದೊರೆತರೂ ಈ ಶಾಸನ ಮುಖ್ಯವಾಗಿವೆ.೭೫೮ ಈ ಶಾಸನದಲ್ಲಿ ಕಂದ ಪದ್ಯಗಳನ್ನು ಹಾಗೂ ಖ್ಯಾತ ಕರ್ನಾಟಕದ ವೃತ್ತಳನ್ನು ಬಳಸಿ ಇಡೀ ಶಾಸನ ಕಾವ್ಯಮಯವಾಗುವಂತೆ ಮಾಡಿದ್ದಾರೆ. ಉತ್ಪಲ ಮಾಲಾವೃತ್ತದ ಒಂದು ಸಾಲನ್ನು ಹೋಲುವ ಪದ್ಯ ಒಂದಿದ್ದು ಮೊದಲ ಸಾಲಿನ ನಂತರದ ಮೂರು ಸಾಲುಗಳಲ್ಲಿ ಅನೇಕ

ಅಕ್ಷರಗಳು ತೃಟಿತಗೊಂಡಿರುವುದರಿಂದ ಪದ್ಯ ಪ್ರಸ್ತಾರ ಹಾಕುವಾಗ ಗಣ ಗುರುತಿಸಲು ಕಷ್ಟ. ಆದರೆ 'ಎತ್ತಿದಮಾರ್ವ್ವಲಕ್ಕಿದಿರನಳ್ಕದೆ ತಾಗಿದ ವೀರರೆಲ್ಲ...' ಎಂಬ ಪದ್ಯದ ಈ ಮೊದಲ ಸಾಲು ಗಣಸಂಯೋಜನೆ ಗುರುತಿಸಿದಾಗ **'ಭರನ ಭಭ ರ + ∪ –'**ಉಳಿಯುತ್ತದೆ. ಆದರೆ ನಂತರದಲ್ಲಿ ಸಾಲುಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ.

ಇದೇ ಶಾಸನದಲ್ಲಿ ಇನ್ನೊಂದು ವೃತ್ತವನ್ನು ಚಂಪಕಮಾಲಾ ವೃತ್ತವೆಂದು ಚೆನ್ನಾಗಿ ಗುರುತಿಸಬಹುದು. ಚಂಪಕಮಾಲಾ ವೃತ್ತ ನಾಲ್ಕು ಸಾಲಿನ ವೃತ್ತವಾಗಿದ್ದು **'ನಜಭಜಜಜರ'** ಎಂಬ ಅಕ್ಷರಗಣದಿಂದ ಕೂಡಿರುತ್ತದೆ. ಪದ್ಯವನ್ನು ಗಮನಿಸುವುದಾದರೆ,

**'ಅದಿರದಿದಿರ್ಚ್ಚಿಕಾದಿದರಿಸೇನೆಯೊಳಾಂತು ಭುಜಪ್ರತಾಪದಿಂ**
**ಕದನದೊಳಾಂತವೀರಭರಿ(ತನ್)ತವೆ ಕೊಂದ ಮಹಾನುಭಾವನಂ**
**ಕದಕಲಿ ವೀರನಂ ಜಗದ ಭುಂಭುಕನಂ ರಣರಂಗಧೀರನೆಂ**
**ದಿದಿರದಿ ... ರ್ತ್ರಿಯಂ ಪಡೆದ ಕಂನೆಯ ನೀಗಳೀದೇಂ ಕ್ರಿತಾರ್ತ್ಥನೋ॥'**

ಇಲ್ಲಿ ಎರಡನೇ ಸಾಲಿನಲ್ಲಿ 'ತನ್' ಎಂದು ಊಹಿಸಿದ್ದೇನೆ. ಹಾಗೂ ನಾಲ್ಕನೇ ಸಾಲಿನಲ್ಲಿ ಎರಡು ಅಕ್ಷರ ತೃಟಿತವಾಗಿದ್ದು ಅದು ಒಂದು ಹೃಸ್ವಾಕ್ಷರ ಆಗಿದೆ ಎಂಬ ಎರಡು ಅಂಶಗಳನ್ನು ಎಚ್ಚರದಿಂದ ಗಮನಿಸಿ ನಿರ್ಣಯಿಸಿದರೆ ಇದು ಚಂಪಕಮಾಲಾ ವೃತ್ತವೆಂದು ಸೊಗಸಾಗಿ ನಿಶ್ಚಯಿಸಬಹುದು.[೮೫] ಕ್ರಿ.ಶ. ೧೦ನೇ ಶತಮಾನದ ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಮಾವಲಿಯ ಶಾಸನಗಳಲ್ಲಿ ಇದೇ ವೃತ್ತವನ್ನು ಬಳಸಲಾಗಿದೆ. ಆದರೆ ಒಂದು ಶಾಸನಕ್ಕೂ ಇನ್ನೊಂದು ಶಾಸನಕ್ಕೂ ತಾಳೆ ನೋಡಿದಾಗ ಒಂದೇ ಊರಿನ ಶಾಸನಗಳಾದರೂ ಒಂದೇ ಪದ್ಯ ಎರಡು ಶಾಸನಗಳಲ್ಲಿ ಬಳಕೆಯಾದರೂ, ಒಂದು ಶಾಸನಕ್ಕೂ ಇನ್ನೊಂದು ಶಾಸನಕ್ಕೂ ಸಾಲುಗಳ ಪದಗಳಲ್ಲಿ ವ್ಯತ್ಯಾಸ ಕಂಡು ಬರುತ್ತದೆ. ಇಡೀ ಪದ್ಯ ರಣರಂಗದಲ್ಲಿ ಯಾರು ದೊರೆ ಎಂದು ಪ್ರಶ್ನಿಸುತ್ತಾ ಇಡೀ ರಣರಂಗ ಯಮಉಂಡು ಕಾರಿ(ಕಕ್ಕಿ)ಕೊಂಡಂತೆ ಇತ್ತು ಎಂದು ಶಕ್ತಿಯುತವಾಗಿ ಧ್ವನಿಸಿದೆ.**'ಅಣಕಮಿದೇನೊ ಕಾಳಗದೊಳಾರ್ದ್ದೊರೆ ಯಕ್ಕಲರಂಕ ಮಿಕ್ಕಬ'** ಎಂದು ಆರಂಭವಾಗುವ ಪದ್ಯದ ಮೂರನೇ ಸಾಲಿನಲ್ಲಿ ಒಂದು ಶಾಸನದಲ್ಲಿ **'ಜವನುಂಡು ಕಾರಿದಂತೆ ಎಂದಿದ್ದರೆ'** ಇನ್ನೊಂದು ಶಾಸನದಲ್ಲಿ **'ಜವನುಂಡುಯ್ಯನೆ ಕಾರಿದಂತೆ'** ಎಂದಿದೆ. ಹಾಗೂ ಕೆಲವು ಪದಗಳು ತಪ್ಪಾಗಿರುವುದನ್ನು ಗಮನಿಸಬೇಕಾಗುತ್ತದೆ. ಈ ಪದ್ಯದ ಮೊದಲ ಸಾಲನ್ನು ಗಮನಿಸಿ ಪ್ರಸ್ತಾರ ಹಾಕಿದರೆ ಇದು ಖ್ಯಾತ ಕರ್ನಾಟಕಗಳಲ್ಲೇ ಪ್ರಸಿದ್ಧವಾದ ವೃತ್ತವಾಗಿರುವ ಚಂಪಕಮಾಲಾ ವೃತ್ತ ಎಂದು ಗುರುತಿಸಬಹುದು.[೮೬]

ಹೀಗೆ ಹಲವು ಶಾಸನಗಳಲ್ಲಿ ಸ್ಪಷ್ಟವಾದ ವೃತ್ತಗಳು ಮುದ್ರಿತವಾಗಿದ್ದರೂ ಸಮಾಜದ ಜನರ ನಿರ್ಲಕ್ಷ್ಯದಿಂದ ಹಲವು ಅಕ್ಷರಗಳು ತೃಟಿತವಾಗಿರುವುದು ಮತ್ತು ಸಾಲುಗಳನ್ನು ವಿಭಾಗಿಸದೆ ಶಾಸನಗಳಲ್ಲಿ ನಿಗದಿತ ಸ್ಥಳಕ್ಕೆ ಹೊಂದಿಸಲೇ ಬೇಕಾದ ಅನಿವಾರ್ಯತೆ, ಶಿಲ್ಪಕ್ಕೆ ತಕ್ಕಂತೆ ಜೋಡಿಸಲು ಸಾಲುಗಳನ್ನು ದೀರ್ಘವಾಗಿ ರಚಿಸಿರುವುದು, ಕೆಲವು ಪದ್ಯಗಳನ್ನು ಗುರುತಿಸಲು ತೊಡಕಾಗಿದೆ. ಆದರೂ ತುರುಗೊಳ್ ಶಾಸನಗಳಲ್ಲಿ ವೃತ್ತಗಳನ್ನು ಬಳಸಿ ಇಡೀ ಶಾಸನ ಸಂಸ್ಕೃತಿಯನ್ನೇ ಕಾವ್ಯಮಯವಾಗುವಂತೆ ಮಾಡಿದ್ದಾರೆ.

ಇನ್ನು ಕಂದ ಪದ್ಯಗಳಂತೂ ಅನೇಕ ಸಿಗುತ್ತವೆ. ಈ ಕಾವ್ಯ ಪ್ರಕಾರವನ್ನು ಪಂಪ, ರನ್ನರು ತಮ್ಮ ಕೃತಿಗಳಲ್ಲಿ ಅದ್ಭುತವಾಗಿ ಬಳಸಿದ್ದಾರೆ. ಚಂಪು ಯುಗದ ಸಾಹಿತ್ಯದ ಪ್ರಾಣವೇ 'ಕಂದ' ಪದ್ಯವಾಗಿದೆ. ಇದು ನಾಲ್ಕು ಸಾಲುಗಳ ಪದ್ಯವಾಗಿದೆ. ಕನ್ನಡದ ಶಾಸನಗಳಲ್ಲಿ ಗೋಚರಿಸಿದ ಕಂದ ಕನ್ನಡದ ಕಾವ್ಯಗಳ ಉದ್ದಕ್ಕೂ ಇಡಿಯಾಗಿ ಅಥವಾ ಬಿಡಿಯಾಗಿ ಬಳಕೆಯಾಗಿದೆ. ಇದರ ಇತಿಹಾಸದ ಬಗ್ಗೆ ಇಲ್ಲಿ ವಿವರಿಸದೆ ಕೇವಲ ಲಕ್ಷಣವನ್ನು ಗಮನಿಸುವುದು ಸೂಕ್ತವೆನಿಸುತ್ತದೆ.

**ಲಕ್ಷಣ**

೧. ನಾಲ್ಕು ಸಾಲಿನ ಪದ್ಯ

೨. ಒಂದು ಮತ್ತು ಮೂರು ಹಾಗೂ ಎರಡು ಮತ್ತು ನಾಲ್ಕನೇ ಸಾಲುಗಳು ಸಮವಿರುತ್ತವೆ.

೩. ಒಂದು ಮತ್ತು ಮೂರನೆಯ ಸಾಲಿನಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳು ಸಿಗುತ್ತವೆ.

೪. ವಿಷಮ ಸ್ಥಾನದಲ್ಲಿ (೩, ೫, ೭) ಜಗಣ (∪– ∪) ಬರುವಂತಿಲ್ಲ, ಆದರೆ ಆರನೆಯ ಗಣವು ಕಡ್ಡಾಯವಾಗಿ ಜಗಣ (∪ – ∪) ಅಥವಾ ಸರ್ವ ಲಘುಗಣ ಬರಬೇಕು.

೫. ಒಟ್ಟು ನಾಲ್ಕು ಸಾಲುಗಳಿಂದ ೬೪ ಮಾತ್ರೆಗಳು ಇರುತ್ತವೆ.

ಉದಾಹರಣೆ: ೪ ೪ ೪ ೧೨

೪ ೪ ೪ ೪ ೪ ೨೦

೪ ೪ ೪ ೧೨

೪ ೪ ೪ ೪ ೪ ೨೦

ಒಟ್ಟು ೬೪ ಮಾತ್ರೆಗಳು

ಒಟ್ಟು ೬೪ ಮಾತ್ರೆಗಳಿಂದ ಕೂಡಿರುತ್ತದೆ. ಎಂಬುದನ್ನು ಗಮನಿಸಬಹುದು. ಈ ಆಧಾರವನ್ನು ಪ್ರಧಾನವಾಗಿ ಪರಿಗಣಿಸಿದ ಅಂದಿನ ಕವಿಗಳು ಶಾಸನಗಳಲ್ಲೂ ಈ ಕಂದ ಪದ್ಯಗಳನ್ನು ರಚಿಸಿದ್ದಾರೆ. ಕ್ರಿ.ಶ. ೧೨೩೭ರ ಕಾಲದ ಸೊರಬ ತಾಲೂಕು ಶಿವಮೊಗ್ಗ ಜಿಲ್ಲೆಯ ಕುಪ್ಪಟೂರು ಗ್ರಾಮದ ತುರುಗೊಳ್ ಶಾಸನದಲ್ಲಿನ 'ಕಂದ' ಮನಮೋಹಕವಾಗಿದೆ.

–UU|U – U |UUUU

ಆಸುರ|ದಿಬರ್ಪ್ಪ|ಬಲಮುಮ = ೧೨

– UU | UU – | U – U| – – | UUUU

ನೋಸರಿ|ಸಿದೆ ಪೊ|ಕ್ಕು ಮಾರ|ಕಾಮಂ| ರಣದೊಳು = ೨೦

– – | U – U | – –

ಪೇಸೇ |ಚಿಹೊಯ್ದು| ಕೊಂದಿಂ = ೧೨

– UU| – UU | UUUU| – – |UU –

ತಾಸುಕ|ರಂ ಬೆರ|ಸುತವಿಸ|ಿದರ್ಮ್ಮ|ರ್ಪಡೆಮಂ = ೨೦

ಒಟ್ಟು = ೬೪

ಇಲ್ಲಿ ಒಟ್ಟು ೬೪ ಮಾತ್ರೆಗಳಿದ್ದು ಪೂರ್ವಾರ್ಧ ಮತ್ತು ಉತ್ತರಾರ್ಧದಲ್ಲಿ ಆರನೇ ಗಣ ಜಗಣ, ಹಾಗೂ ಉತ್ತರಾರ್ಧದ ಆರನೇ ಗಣ ಸರ್ವ ಲಘು ಗಣ ಬಂದಿರುವುದನ್ನು ಗುರುತಿಸಬಹುದು.

ಕ್ರಿ.ಶ. ೧೨೬೫ರ ಕಾಲಕ್ಕೆ ಸರಿಹೊಂದುವ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಹೊಸಗುಂದ ಅನೇಕ ಬೃಹತ್ ವೀರಗಲ್ಲುಗಳು ಇಲ್ಲಿನ ಇತಿಹಾಸದ ಮಹತ್ವವನ್ನು ಸಾರುತ್ತಿವೆ. ಹಾಗೂ ಎಲ್ಲ ವೀರಗಲ್ಲುಗಳೂ ೬ ರಿಂದ ೮ ಹಂತದವರೆಗೆ ಶಾಸನಗಳ ಶಿಲ್ಪ ಚಿತ್ರಿತವಾಗಿರುವುದು ವಿಶೇಷ. ಇಲ್ಲಿನ ತುರುಗೊಳ್ ಶಾಸನವನ್ನು ಗಮನಿಸಿದಾಗ ಇಡೀ ಶಾಸನ ಕಾವ್ಯಮಯವಾಗಿ ರಚಿತವಾಗಿದೆ.[೮೭]

**ವೀರನೊಳು ವಿತರಣದೊಳು**

**ಕಾರುಂಣ್ಯಾಕರತೆಯೊಳ್ಳುಮಂಜಸತನದೊಳು**

**ಬೀರರಸನತನಯಂಗಿಂ**

**ನಾರುಂಟೆಣೆಧಾತ್ರಿಯಲ್ಲಿ ಬಂಮ್ಮರಸಂಗೇಂ ॥**

**ಎಡವೀಡೆಗೆವೀಳ್ಳೆಂಗಂ**

**ತೊಡೆಯನು ಮಾಗಿರ್ದ್ದು ಕಡೆಯ ಚಂದದಕಾವೆಂ**

**ಗಿಡವಂ ಸಿಡಿಲಂ ನನನೆಂ**

**ದಡರಿತ್ತಂದೇಸುನಾಯಕಂ ಗುತ್ಸವದಿಂ**

ಈ ಎರಡೂ ಪದ್ಯಗಳನ್ನು ಬಿಡಿಯಾಗಿ ಗಮನಿಸಿದಾಗ ಒಂದು ಮತ್ತು ಮೂರನೇ ಪಾದಗಳಲ್ಲಿ ನಾಲ್ಕು ಮಾತ್ರೆಯ ಮೂರು ಗಣ ಹಾಗೂ ಎರಡು ಮತ್ತು ನಾಲ್ಕನೆ ಪಾದಗಳಲ್ಲಿ ನಾಲ್ಕು ಮಾತ್ರೆಯ ಐದು ಗಣ ಬರುತ್ತವೆ. ಒಟ್ಟು ಪ್ರತೀ ಪದ್ಯ ೬೪ ಮಾತ್ರೆಗಳಿಂದ ಕೂಡಿರುವುದನ್ನು ಗಮನಿಸಬಹುದು. ಅದೇ ಶಾಸನದಲ್ಲಿ ಇನ್ನೊಂದು ಕಂದ ಪದ್ಯ ಈ ರೀತಿ ಇದೆ.

**'ಸಿಡಿಲನ ಮಗನಾಸಂಗಂ**

**ಗೊಡೆಯಂ ಹೋಸಣ ನರೇಶ್ವರಂ ನರಸಿಂಹಂ**

**ಕಡುವುರ್ಗಾ ಬಂಗಿರಿಸಲು**

**ಕಡುಗಲಿ ಕೂಡಲಿಯೊಳಿರ್ದ್ದ ದಾಳಿಯನಿಟ್ಟರು'**

ಈ ಪದ್ಯದಲ್ಲಿಯೂ ಒಂದು ಮತ್ತು ಮೂರನೇ ಸಾಲುಗಳು ಸಮವಾಗಿದ್ದು ನಾಲ್ಕು ಮಾತ್ರೆಯ ಮೂರು ಗಣದಿಂದ ಕೂಡಿವೆ. ಹಾಗೂ ಎರಡು ಮತ್ತು ನಾಲ್ಕನೆ ಪಾದಗಳಲ್ಲಿ ನಾಲ್ಕು ಮಾತ್ರೆಯ ಐದು ಗಣಗಳಿಂದ ಕೂಡಿ ಒಟ್ಟು ೬೪ ಮಾತ್ರೆಗಳಿಂದ ಕೂಡಿದೆ.

ಕ್ರಿ.ಶ. ೧೧೭೭ರ ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಕುಪ್ಪಟೂರಿನ ಈ ಶಾಸನವು ತುರುಗೊಳ್ ಹಾಗೂ ಪೆಣ್ಬುಯಲ್ ಸಂಗತಿಯನ್ನು ಹೊಂದಿರುವ ಶಾಸನವಾಗಿದೆ. **ಕಡುಗಲಿಕೇತೆಯ ನಾಯಕ** ವೀರಮರಣ ಹೊಂದಿದ ಅಂಶ ಶಾಸನೋಕ್ತವಾಗಿದೆ. ಇದರಲ್ಲಿರುವ ಒಂದು 'ಕಂದ' ಪದ್ಯ ಈ ರೀತಿ ಇದೆ.[೮೮]

**'ಬನವಸೆ ನಾಡಂ ಹಂಚಿದಿಂ**

**ತನುನಯದಿಂ ವಿಕ್ರಮಾಂಕನಾಳುತ್ತಿರಲಾ**

**ಮನು ನೀತಿ ಮಾರ್ಗ್ಗವೊಪ್ಪು**

**ವಧನದ ಶ್ರೀಕುಪ್ಪಟೂರ ಸಾಸಿರ್ವರ್ಕ್ಕಳ್'**

ಎಂದಿರುವ ಪದ್ಯದಲ್ಲಿ ಕಂದ ಪದ್ಯದ ಲಕ್ಷಣವನ್ನು ಹೊಂದಿರುವುದನ್ನು ಗಮನಿಸಬಹುದು. ಈ ಪದ್ಯದಲ್ಲಿ ವಿಕ್ರಮಾಂಕ ರಾಜ್ಯವನಾಳುತ್ತಿರುವ ವಿಚಾರ ತಿಳಿದು ಬರುತ್ತದೆ. ಇದೇ ಗ್ರಾಮದಲ್ಲಿ ದೊರೆತಿರುವ ಶಾಸನ ಕಾಲ ಕ್ರಿ.ಶ.೧೨೩೭ಕ್ಕೆ ಹೊಂದುತ್ತದೆ. ಈ ಶಾಸನದಲ್ಲಿರುವ 'ಕಂದ' ಪದ್ಯ ಗಮನಿಸುವುದಾದರೆ

**'ಅಸುರದಿ ಬರ್ಪ್ಪಬಲಮುಮ**

**ನೋಸರಿಸದೆ ಪೊಕ್ಕುಮಾರಕಾಮಂರಣದೊಟು**

**ಪೇಸೇಟಿ೯ಹೊಯ್ದು ಕೊಂದಿಂ**

**ತಾಸುಕರಂ ಬರೆಸುತವಿಸಿದರ್ಮ್ಮಾರ್ಪಡೆಯಂ'**

ಎಂದಿರುವ ಪದ್ಯದಲ್ಲಿ ಒಟ್ಟು ೬೪ ಮಾತ್ರೆಗಳು ಹಾಗೂ ಪ್ರತಿ ಸಾಲಿನಲ್ಲಿ ಗಣಗಳು ನಿಗದಿಯಂತೆ ಸಂಯೋಜಿಸಲ್ಪಟಿರುವುದನ್ನು ಕಾಣಬಹುದು.

ಕ್ರಿ.ಶ.೧೨೨೮ರ ಕಾಲದ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಗುಡುವೆಯ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಮುಂದೆ ನೆಟ್ಟ ವೀರಗಲ್ಲಿನ ಕಂದ ಪದ್ಯ ವೀರನ ತತ್‌ಕ್ಷಣದ ದಾಳಿಯ ವೇಗವನ್ನು ಸಿಡಿಲಿಗೆ ಹೋಲಿಸಿ ವರ್ಣಿಸಿರುವ ಈ ಕಂದ ಪದ್ಯ ಮಾತ್ರೆಗಳ ಲೆಕ್ಕಾಚಾರದಲ್ಲೂ ವ್ಯತ್ಯಾಸವಿಲ್ಲದೆ ತುರುಗೊಳ್ ಕದನದ ಕಥೆ ಹೇಳುತ್ತಿದೆ. ಪದ್ಯವನ್ನು ಗಮನಿಸುವುದಾದರೆ,

**'ಬರಸಿಡಿಲ ಮಾಳ್ಕೆಯಿಂ ಬಂ**

**ದುಱಿಮಿಗೆ ಕೊಡಕಣಿಯ ಭೀಮನದಟಿಂರಿಪುವಂ**

**ನೆಱಿ ನಿಜಭುಜಾಸಿಯಿಂ ದಂ**

**ತುಱುಗೊಳೊಳು ಕಾದಿ ಕೊಂದುಂ ಸಗ್ಗಕೆ ಸನ್ದಂ॥**

ಇಲ್ಲಿ ಮೊದಲ ಹಾಗೂ ಮೂರನೆ ಸಾಲುಗಳಲ್ಲಿ ನಾಲ್ಕು ಮಾತ್ರೆಯ ಮೂರು ಗಣ ಹಾಗೂ ಎರಡು ಮತ್ತು ನಾಲ್ಕನೆ ಪಾದಗಳಲ್ಲಿ ನಾಲ್ಕು ಮಾತ್ರೆಯ ಐದು ಗಣಗಳು ಬರುವುದನ್ನು ಗಮನಿಸಬಹುದು.[೮೯]

ಇದೇ ಶಾಸನದಲ್ಲಿರುವ ಇನ್ನೊಂದು ಕಂದ ಪದ್ಯ ಈ ರೀತಿ ಇದೆ.

**ದುರದೊ.....ಗಿದಬಿರು ದರ**

**ತಲೆಯಂ।ಪೋಗೆ ।ಚ್ಚೊಡಾಗ।ಳರಿಬಲ।ಮೆಲ್ಲಂ**

**ಸರಳಮ।ಯಮಾಗಿ।ಕಳಱಿದೊರ**

**ಪಂಜರ।ದೊಳುಕಂ।ನಗೋಸಿ।ಮಱಿದೊಱ।ಗಿಲ್ದಿ**

ಇಲ್ಲಿಯೂ ತೃಟಿತವಾಗಿರುವ ಅಕ್ಷರಗಳನ್ನು ಗುರುತಿಸಿದಲ್ಲಿ ಇನ್ನೊಂದು ಕಂದ ಪದ್ಯ ದೊರೆಯುತ್ತದೆ. ಶಾಸನದಲ್ಲಿ ಕಂದ ಎಂದು ದಾಖಲಾಗಿದ್ದರೂ ಕೆಲವು ಅಕ್ಷರಗಳು ತೃಟಿತವಾಗಿ ಕಾವ್ಯದಲ್ಲಿ ವ್ಯತ್ಯಾಸಗಳು ಕಂಡುಬಂದಿವೆ. ಇದೊಂದೇ ಶಾಸನದಲ್ಲಿ ಎರೆಡು ಕಂದ ಹಾಗೂ ಒಂದು ವೃತ್ತ ಪದ್ಯವನ್ನು ಗಮನಿಸಿ ಗುರುತಿಸಬಹುದಾಗಿದೆ.

ಡಿ.ಎಸ್. ಕರ್ಕಿಯವರು ವ್ಯಕ್ತಪಡಿಸಿದ 'ಕಂದ'ದ ಬಗೆಗಿನ ಅಭಿಪ್ರಾಯ ಬಹಳ ಮುಖ್ಯವಾಗಿದೆ. 'ಕಂದ ನದಿಯಂತೆ ತುಂಬಿ ಗಂಭೀರವಾಗಿ ಪ್ರವಹಿಸುವ ಛಂದೋಲಯವಲ್ಲ,

ಚಿಲುಮೆಯಂತೆ ಚಿಮ್ಮುವ ಲಯ.' ಕನ್ನಡದ ಚಿಕ್ಕ ಚಿಕ್ಕ ಭಾವಗಳನ್ನು ಚೊಕ್ಕವಾಗಿ ಅಭಿವ್ಯಕ್ತಿಸಬಲ್ಲದು. ಹಸಿಗೋಡೆಯಲ್ಲಿ ಹರಳುನೆಟ್ಟಂತೆ ಅದರ ಪರಿಣಾಮ.[೬೦]ಎಂಬ ಅಭಿಪ್ರಾಯವನ್ನು ಗಮನಿಸಿದಾಗ ಶಾಸನಗಳ ಚಿಕ್ಕ ಬರಹಗಳಲ್ಲಿಯೂ ವೀರಾವೇಶದ ಹೋರಾಟ, ರಾಜನ ಗುಣಗಳನ್ನು, ಸಂದರ್ಭಗಳನ್ನು ಶಾಸನಗಳಲ್ಲಿ ಕಂದ ಪದ್ಯದಲ್ಲಿ ಹಿಡಿದಿಡುವ ಪ್ರಯತ್ನ ತುರುಗೊಳ್ ಶಾಸನಗಳಲ್ಲಿ 'ಮಿಂಚಿನ' ಸಂಚಲನವನ್ನುಂಟು ಮಾಡಿವೆ.

**ಈ. ತುರುಗೊಳ್ ಶಾಸನಗಳಲ್ಲಿ ಉಪಮೆಗಳು**

ತುರುಗೊಳ್ ಶಾಸನಗಳು ವೀರನ ಹೋರಾಟವನ್ನು ಚಿತ್ರಿಸುತ್ತಾ, ಅವನನ್ನು ಆ ಸಂದರ್ಭದ ಸಾಂಸ್ಕೃತಿಕ ನಾಯಕನನ್ನಾಗಿ ಚಿತ್ರಿಸುತ್ತದೆ. ಇಲ್ಲಿ ವೀರನನ್ನು ಪರಾಕ್ರಮಕ್ಕೆ ಹೆಸರಾದ ಪ್ರಾಣಿಗಳೊಂದಿಗೆ, ಸ್ವಂತಿಕೆಯಿಂದ ತಮ್ಮನ್ನು ರಕ್ಷಿಸಿಕೊಳ್ಳುವ ವಿಶೇಷ ಜೀವಿಗಳೊಂದಿಗೆ ಹೋಲಿಸಿ ವೀರನನ್ನು ಇನ್ನಷ್ಟು ವರ್ಣರಂಜಿತವಾಗಿ ಚಿತ್ರಿಸಲು ತುರುಗೊಳ್ ಶಾಸನಗಳಲ್ಲಿ ಉಪಮೆಗಳನ್ನು ಬಳಸಲಾಗಿದೆ. **'ಉಪಮೆ'** ಎಂದರೆ ಅರ್ಥಾಲಂಕಾರಗಳಲ್ಲಿ ಒಂದಾಗಿದ್ದು, ಒಬ್ಬ ವ್ಯಕ್ತಿಯನ್ನು, ಸ್ಥಳ, ವಸ್ತುವನ್ನು ಇನ್ನೊಂದು ವಸ್ತು, ವ್ಯಕ್ತಿ, ಸ್ಥಳ, ಪ್ರಾಣಿಗಳೊಂದಿಗೆ ಹೋಲಿಸುವುದಕ್ಕೆ **'ಉಪಮೆ'** ಯನ್ನು ಬಳಸಲಾಗಿದೆ. ಅವುಗಳನ್ನು ಗಮನಿಸುವುದಾದರೆ,

ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕುಪ್ಪಟೂರ ಕ್ರಿ.ಶ. ೧೧೭೭ರ ಶಾಸನ ಗಮನಿಸುವಂಥದ್ದು. ಈ ಶಾಸನದ ಪಾಠದಲ್ಲಿ ಉಡುಕೆಯ ನಾಯಕ "ತನೂಜನಂ ಕರೆದು ಕಡುಗಲಿ ಕೇತನಾಯಕನಿಂದ ಬಿಡಿಸಿದ ವಿಚಾರದೊಂದಿಗೆ"

> **'ಅನ್ತು ಬೆಸಸುವುದು ಮಾರಿಯ ಮಸ್ತಕದನ್ತೆ ಮಾಮಸಕಂ ಮಸಗಿ**
> **ಪಲವರಂ ತಳುತ್ತಿರಿದು ಸೆರೆಯಂ, ಜೀವನಧನಮುಮಂ ಮಗುಳ್ಚಿ**
> **ಸುರಲೋಕ ಪ್ರಾಪ್ತನಾದ'**

ಎಂಬ ವಾಕ್ಯಗಳನ್ನು ಗಮನಿಸಿದಾಗ ವೀರನು ಮಾರಿಯ, ಮೃತ್ಯುವಿನ ಮುಖದಂತೆ ಹಲ್ಲು ಕಡಿದು ಸಾವೇ ಮೈದಾಳಿನಿಂತು ಹೋರಾಡಿದಂತೆ ಹಲವರನ್ನು ಕೊಂದು ಸುರಲೋಕ ಪ್ರಾಪ್ತನಾದ ಸಂಗತಿಯನ್ನು ಮಾರಿಯ ಮುಖಕ್ಕೆ ಹೋಲಿಸಿ ಹೋರಾಟದ ಘಟನೆಯನ್ನು ಇನ್ನಷ್ಟು ರಂಜಿತವಾಗಿಸಿದೆ.[೬೧]

ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಹಳೆ ಸೊರಬದ ಕ್ರಿ.ಶ.೧೧೮೧ರ ಕಾಲದ ಶಾಸನದ ಯುದ್ಧವೀರನನ್ನು ಅರ್ಜುನನಿಗೆ ಹೋಲಿಸಿದೆ. ಸೊರಬದ ಶಾಸನದಲ್ಲಿ 'ಮಸಣಗಾವುಂಡನ ಅಳಿಯ ಕಾಮಗಾವುಂಡ ಪರೋಪಕಾರಾರ್ತ್ಥಮಿದಂ ಶರೀರಂ' ಎಂಬ ವಾಕ್ಯಾರ್ಥವನ್ನು ಬಗೆದು ಯಾವ ರೀತಿ ಹೋರಾಡಿದನು ಎಂಬುದನ್ನು,

**'ಬಳ್ಳಿಪರ್ವ್ವದವೊಲಾಗಿ ಬಿಂನಣಮಂ ನಿಮಿರ್ಚ್ಚುತುಂ ಚಂಚಲದಿರೆದೇಹಕಿ**
**ಕ್ಕಿರಿದು ಬೊಬ್ಬಿರಿದಾರ್ದ್ದರೆ ಪೋಗು ಪೋಗೆನುತ್ತ ಲಘುಭುಜಪ್ರತಾಪದೆರೆ**
**ದೀ ಸೊರಂಬದ ಕಾಮಗಉಡನಾ ಕಲಹದೊಳನ್ನಕೌರವರೊಳರ್ಜ್ಜುನನಂತಿರೆ ಪೊಣ್ದುಕಾದಿದಂ॥**

ಎಂದು ವರ್ಣಿಸಿರುವ ಶಾಸನದಲ್ಲಿ ವೀರನನ್ನು ಕೌರವರನ್ನು ಎದುರಿಸಿ ಅರ್ಜುನ ಹೋರಾಡಿದಂತೆ ಕಾಮಗೌಡನು ಹೋರಾಡಿದನು, ಎಂಬಲ್ಲಿ ತುರುಗೋಳ್ ಯುದ್ಧ ವೀರನನ್ನು ಮಹಾಭಾರತದ ಅರ್ಜುನನಿಗೆ ಹೋಲಿಸಿರುವುದು ವಿಶೇಷವಾಗಿದೆ. ಎಂಬುದು ಯುದ್ಧದ ಭೀಕರತೆಯನ್ನು ತಿಳಿಸುತ್ತದೆ.[೨]

ಸೊರಬ ತಾಲೂಕಿನ ಚಿಟ್ಟೂರಿನ ಕ್ರಿ.ಶ.೧೨೫೮ರ ಶಾಸನವೊಂದರಲ್ಲಿ ಅನೇಕ ಅಂಶಗಳು ತ್ರುಟಿತವಾಗಿವೆ. ಈ ಶಾಸನವು ತುರುಗೊಳ್ ಹಾಗೂ ಪೆಣ್ಬುಯ್ಯಲ್ ಎರಡೂ ಘಟನೆಗಳ ಸಾಕ್ಷಿಯಾಗಿದೆ. ಇಲ್ಲಿನ ಯುದ್ಧ ವೀರ **'ರಾಮಗಾವುಂಡ'** ತುರುಗಳನ್ನು ಹಿಂದಿರುಗಿಸಿ ಮಡಿಯುತ್ತಾನೆ. ಅದು ಹೇಗೆಂದರೆ ಎಂದು ವಿವರಿಸುವ ಮುಂದಿನ ಸಾಲಿನ ಉಪಮೆ ಆಕರ್ಷಣೀಯವಾಗಿದೆ.

**ಪೊಳೆವಸಿಡಿಲಂತೆ ಜವನಂ ತಳವಡಿಸುವ ಕಾಲಮ್ರಿತ್ತುವೆಂಬಂತೆ'** ಎಂಬ ವಾಕ್ಯ ರಾಮಗಾವುಂಡನ ಆಕ್ರಮಣ ಅಥವಾ ಶತ್ರುಗಳ ಮೇಲೆ ತಿರುಗಿಬಿದ್ದ ವೇಗವನ್ನು ಮಿಂಚಿಗೆ ಹೋಲಿಸಿರುವುದನ್ನು ಕಾಣಬಹುದು. ಅಂದರೆ ತುರುಗೊಳ್ ಯುದ್ಧದ ಆರಂಭ ಹೇಗಿರುತ್ತಿತ್ತು ಎಂದರೆ ಕ್ಷಿಪ್ರವಾಗಿ, ಮುಂಗಾರು ಮಳೆಯ ಆರಂಭದಲ್ಲಿ ಗುಡುಗು ಮಿಂಚುಗಳ ಶಬ್ದದಂತೆ, ಸಿಡಿಲಿನ ವೇಗದಂತೆ ತುರುಗೊಳ್ ಯುದ್ಧಗಳು ನಡೆದುಬಿಡುತ್ತಿದ್ದವು. ಅದರ ಪರಿಣಾಮವೂ ಭೀಕರವಾಗಿರುತ್ತಿತ್ತು.[೩]

ಕ್ರಿ.ಶ. ೧೨೬೫ ಶಿವಮೊಗ್ಗ ಜಿಲ್ಲೆ ಸಾಗರ ತಾಲೂಕಿನ ಹೊಸಗುಂದದ ಶಾಸನ ಅನೇಕ ಕಂದ ಪದ್ಯಗಳಿಂದ ಕೂಡಿದೆ. **'ದೇಸುನಾಯಕ'** ಹುಯ್ಯಲನ್ನು ಕೇಳಿ **'ಕೆಣಕಿದ ಕಿಚ್ಚಿನತೆರೆದಿಂದಣ ಕದಕಲಿ'** ಎಂಬಲ್ಲಿ ಬೆಂಕಿಗೆ ನಾಯಕನನ್ನು ಹೋಲಿಸಿ ವರ್ಣಿಸಲಾಗಿದೆ. ಬೆಂಕಿಯೊಂದಿಗೆ ಸರಸವಾಡಿದರೆ ಯಾರೂ ಉಳಿಯುವುದಿಲ್ಲ. ಹಾಗೇ ದೇಸು ನಾಯಕನನ್ನು ಕೆಣಕಿ ಉಳಿಯು ವುದುಂಟೇ ಎಂದು ವೀರನ ಸಾಹಸವನ್ನು ಬೆಂಕಿಗೆ ಹೋಲಿಸಲಾಗಿದೆ. ಇಡೀ ಶಾಸನವು ಕಾವ್ಯಮಯವಾಗಿರುವುದು ಹಾಗೂ ಶಾಸನ ಶಿಲ್ಪದ ದೃಷ್ಟಿಯಿಂದಲೂ ಪ್ರಾಮುಖ್ಯತೆ ಗಳಿಸಿದೆ.[೪] ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಮಾವಲಿಯ ಕ್ರಿ.ಶ.೧೦ನೆ ಶತಮಾನದ ಶಾಸನ ರಣರಂಗದ ವರ್ಣನೆ ಮನಮೋಹಕವಾಗಿ ಯುದ್ಧರಂಗದ ಭೀಕರತೆಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದೆ.

**'ಅಣಕಮಿದೇನೊ ಕಾಳಗದೊಳಾರ್ದ್ವೊರೆ ಯಕ್ಕಲಮ್ಮುಕ್ಕಿ ಮಿಕ್ಕ ಬ**

**ಲ್ಕಣೆಗಳ ನೊಕ್ಕಲಿಕ್ಕಿ ಜಿವನುಂಡು ಕಾರಿದಂತ್ತೆ ಪೆರ್ಬ್ಬೆಣದ್ಬಣಂ**

**ಬೆಪೆರ್ಗ್ಗರುಳುತಿಂತ್ತಿಣೆ ನೆತ್ತರದಿರ್ವ್ವೊನುಲ್ಲುಳಿಂತಣೆಪಿದೆ ನಾಂತುಚಾಂ**

**ಉಗೌಂಡ ಪಿಸಾಚ ಕೋಟಿಯಂ** ........... (ಮುಂದಿನ ಸಾಲುಗಳು ತೃಟಿತವಾಗಿವೆ.)

ಇಲ್ಲಿ ಯುದ್ಧದಲ್ಲಿ ಯಾರು ದೊರೆ ಹೆಣಗಳ ಬಣವಿಯನ್ನು ಹಾಕಿ ಯಮ ಒಕ್ಕಲು ಹಾಕಿದಂತೆ, ಮಹಾ ಮಹಾ ವೀರರನ್ನು ಯಮಧರ್ಮ ತನ್ನ ಸಾವಿನ ಕುಣಿಕೆಗೆ ಸಿಲುಕಿಸಿ ಆ ಮರಣ ಹೊಂದಿದವರನ್ನು ಉಂಡು, ಆನಂತರ ಮತ್ತೆ ಕಕ್ಕಿದಂತೆ(ವಾಂತಿ ಮಾಡಿದಂತೆ) ಕಾರಿಕೊಂಡಂತೆ ಯುದ್ಧ ಭೂಮಿ ಕಾಣುತ್ತಿತ್ತು ಎಂಬಲ್ಲಿ ಯುದ್ಧವನ್ನು ಯಮನ ಊಟಕ್ಕೆ ಹೋಲಿಸಿ ಕಾವ್ಯಮಯವಾಗಿ ವರ್ಣಿಸಿದ್ದಾನೆ. ಅಂದಿನ ಕಾಲಕ್ಕೆ ಯುದ್ಧಕ್ಕೆ ಎಲ್ಲರೂ ಬಲಿಯಾಗಲೇ ಬೇಕು. ಯುದ್ಧ ಯಾರಿಗೂ ಸುಖವನ್ನುಂಟು ಮಾಡುವುದಿಲ್ಲ. ಎಂಬ ಜೀವಪರವಾದ ನಿಲುವು, ಯುದ್ಧದಲ್ಲಿ ಯಾರಿಗೂ ಗೆಲುವು–ಸೋಲುಗಳಿಲ್ಲ. ಎಲ್ಲರೂ ಯಮನಿಗೆ ಆಹಾರ ಎನ್ನುವ ಅಂತರಂಗದ ಮಾತು ಯುದ್ಧ ವಿರೋಧಿ ನಿಲುವನ್ನು ತಾಳುತ್ತಿರುವುದಕ್ಕೆ ಸಾಕ್ಷಿಯಾಗಿದೆ.[೫]

ಕ್ರಿ.ಶ.೧೧ನೆ ಶತಮಾನದ ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಕೊರಕೋಡು ತುರುಗೊಳ್ ಶಾಸನಗಳ ಸಾಲಿನಲ್ಲಿ ಅತ್ಯಂತ ಪ್ರಮುಖವಾದದ್ದು. ಈ ಶಾಸನದಲ್ಲಿ ವೀರರ ಹೋರಾಟವನ್ನು ವರ್ಣರಂಜಿತವಾಗಿ ಚಿತ್ರಿಸಿದ್ದಾರೆ. ಈ ಶಾಸನವು ಪೆಣ್ಬುಯ್ಯಲ್ ಹಾಗೂ ತುರುಗೊಳ್ ಎರಡೂ ಸಂಗತಿಗಳನ್ನು ವಿವರಿಸಿದೆ. ಇಲ್ಲಿ ಮಹಾಮಾಂಡಲೇಶ್ವರರ ಜಗದೇವರಸರ ಆಣತಿಯಂತೆ **'ಕಾಳರಸ'** ಕುಪ್ಪಗಡ್ಡೆಯ ಹಳ್ಳಿ ಕೊರಕೋಡನ್ನು ಆಕ್ರಮಿಸಿ ಹಸುಗಳನ್ನು ಅಪಹರಿಸಿ, ಹೆಣ್ಣುಮಕ್ಕಳ ಉಡೆಯುರ್ಚಿ ಹೋಗುವಾಗ ಅಲ್ಲಿಯೇ ಹುಟ್ಟಿದ ಬಾವಗಾವುಂಡನ ಮಗಂದಿರಾದ ದೇವಗಾವುಂಡ ಹಾಗೂ ಮಲ್ಲಗಾವುಂಡನು ಬಿಲ್ಲು, ಅಂಬುಗಳನ್ನು ತೆಗೆದುಕೊಂಡು ಹೋರಾಟಕ್ಕೆ ಇಳಿಯುತ್ತಾರೆ. ಈ ವರ್ಣನೆ, ಯುದ್ಧಭೂಮಿಯಲ್ಲಿ ವೀರರು ಹೋರಾಡುವ ಮನಸ್ಥಿತಿಯನ್ನು ಅಂದಿನ ಹೋರಾಟದ ವೀರರಸದ ಸವಿಯನ್ನು ನಮಗೆ ಉಣಬಡಿಸುತ್ತದೆ. ದೇವಗಾವುಂಡ, ಮಲ್ಲಗಾವುದ ಯಾವ ರೀತಿ ಹೋರಾಟಕ್ಕೆ ನಿಂತರೆಂದರೆ 'ಹೆಬ್ಬಾಗಿಲಿಗೆ ಅಡ್ಡ ನಿಂತರು, ಅದು ಹೇಗೆಂದರೆ

**"ಸ್ವಸ್ತಿ ಶ್ರೀಮಚ್ಚಾಳುಕ್ಯ ಚಕ್ರವರ್ತ್ತಿ ತ್ರೈಳೋ(ಕ್ಯ) ಮಲ್ಲದೇವಂ ಸುಖದಿಂ**

**ರಾಜ್ಯಂಗೆಯ್ಯುತ್ತಿರೆ ಸಕ ನ್ರಿಪಕಾಳಾತೀತ ಸಂವತ್ಸರಂಗ(ಳ್)೧೧೭೭ನೆಯ**

**ಯುವ ಸಂವತ್ಸರದಧಿಕ ಫಾಲ್ಗುಣ ಬಹುಳ ೩ ಸೋಮವಾರದಂದು ಶ್ರೀಮನ್ಮಹಾ**

**ಮಂಡಳೇಶ್ವರ ಜಗದೇವರಸರ ಬೆಸದಿಂ ಮದಸಾಲೆಯ ಕಾಲರಸಂ ಸಮಸ್ತ**

**ಸಾಮಾತ್ತಿಯಂಬೆರಸು ಬಂದು ಶ್ರೀ ಮದನಾದಿಯಗ್ರಹಾರಂ ಕುಪ್ಪಗಡ್ಡೆಯ ಹಳ್ಳಿ**

ಕೊರಕೋಡನಿಱಿದು ತುಳುವಂ ಕೊಂಡುಡೆಯುರ್ಚ್ಚಿ ಹೋಹಾಗಳಲ್ಲಿ ಹುಟ್ಟಿದ
ಬಾವಗಾವುಂಡನ ಮಗಂದಿರು ದೇವಗಾವುಂಡನುಂ ಮಲ್ಲಗಾವುಂಡನುಂ
ಬಿಲ್ಲಮಂಬುಮಂ ಕೊಂಡಿರ್ವ್ವರುಂ ಹೆಬ್ಬಾಗಿಲೊಳಡ್ಡಂ ನಿಂದು ಗುಹೆಯ ಬಾಗಿಲೊ(ಳ್)
ಸಿಂಹನಿರ್ಪ್ಪಂತೆ ತಾಗಿತಳ್ತೆಸುವಾಗ(ಳ್) ಕಾರಮಳೆ ಕಱೆದಂತೆಯುಂ ಕಡಂದುಱುಹುಟ್ಟಿಯ
ಕೆಣಕಿದಂತೆಯುಂ ಕವಿದ ಕಾಲಬಾಯೊಳಂ ಜವನೊ(ಕ್ಕ)ಲಿಕ್ಕಿದಂತೆ
ತೊತ್ತಳದುಳಿದ ವೋಲುತಂ ಕಯ್ಯನೆರೆದುಂ ಬಿಲ್ಲುತಿರುಮಂ ಪಱಿವಂನ್ನ(ಮೆ)ಚ್ಚು
ನೆಱೆಯದೆ ಕಟ್ಟಿದಲಗಂ ಕಿತ್ತು ಘಿಘಿ ಲ್ಲುಟಿಯ ಹಿಂಡಂ ತೋಳಂ ಪೊಕ್ಕಂತೆಯುಂ
ಕರ್ಬ್ಬುದದೋಂಟವನಾನೆ ಪೊಕ್ಕಂಎಯುಂ ನಿಕ್ಕುರಳಿಲುಪೊಕ್ಕುದೊಳಹಿಂಡು ಕುತ್ತಿ
ನೂಂಕುತ್ತ ಬಪ್ಪಾಗ(ಳ್)
ವೃತ್ತ ॥
ಮಲೆದಿದಿರಾಂತ ಮಾರ್ವ್ವಲವನಳ್ಕುಱೆ ತಾಗಿ ಭುಜಪ್ರತಾಪದಿಂ
ದಲಗನೆಕಿ(ರ್ತ್ತು) ಪೊಯ್ಯೆ ನಿರುತಂ ಕಣಕಾಲ್ಮೊಳಕಾಲ್ಮುಖಂ ಭು(ಜಂ)
ತಲೆಬಳೆಯಾಗೆ ಸಂಬಳಿತ ಯೋಪಿನದೊಂದೆರಡಟ್ಟಿಯೋಡಲುಂ
ತೊಲಗದೆ ನಿಂದು (ತಳ್ತಿ)ಱಿದರಿರ್ಬ್ಬರುಮಾಹವರಂಗಭೂಮಿಯೊಳ್
ವ॥ ಅಂತವರಿರ್ಬ್ಬರುಂ ಪೋಗದೆ ನಿಂದುದಂ ಕಂಡು(ಪ)ರಿದಾಳು
ಕುದುರೆಯಮೊರ್ಬ್ಬಂ ತಾಗಿಯೆ ಸಲ್ವಿಱೆಯಲುಂ ಕೋಲ್ಕೊಂತಂಗಳೂಡಾಗಿ ಬಿರ್ದ್ದು
ಸುರಲೋಕಪ್ರಾಪ್ರರಾದವರಿರ್ಬ್ಬರ ಪೆಣನಂ ಮೆಟ್ಟಿ ತುಳುಪರಿಯಲವರಿಬ್ಬರಿಂ ಕಿಱಿಯ
ಬೊಪ್ಪಗಾವುಂಡಂ ತಂಮಂಣಂದಿರಿಬ್ಬರ ಕಳೇಬರವಂ ಕಂಡು ಸೈರಿಸಲಾಱದೆ
ನಿಮ್ಮಾದುದನಪ್ಪೆನಲ್ಲದೊಡೇಂ ತುಳುವಂ ಮಗುಳ್ಚಿ ಬಪ್ಪೆನಿರದೊಂದೆಮೆಯ್ಯೊ(ಳ್)
ಹಿಂದಹತ್ತಲಾತಂಗೆ ಪಡಿಬಲದಾಗಿ ಮಂಡಳಿಕಂ (ಉ)ದ್ದರೆಯೆಯಕ್ಕಲರಸ
ನಾಳ್ಕುದುರೆಯಂ ಹೇಳಲಾ ನೆಱವಂ ಕೂಡಿಕೊಂಡು ಹಾಲ್ಗಟ್ಟದ ಬಯಲಲೊಡ್ಡ
ನೊಡ್ಡಿದರಿಬಲವಂ ಬೊಪ್ಪಗಾವುಂಡಂ ಕೊಂದು ತುಳುವಂ ಮಗುಳ್ಚಿ
ಕೊಂಡುಬಂದಣ್ಣಂದಿರಂ ಸಂಸ್ಕಾರಿಸಿ ಜಲದಾನಕ್ರಿಯೆ (ಯಮಂ) ಪರೋಕ್ಷ
ವಿನಯಮುಮಂ ಮಾಡಿಯಿರ್ಬ್ಬರ್ಗ್ಗಂ ಕಲ್ಲನಿಱಿಸಿದಲ್ಲಿ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ

ಗುಹೆಯ ಬಾಗಿಲೊಳು ಸಿಂಹ ನಿರ್ಪಂತೆ ನಿಂತು ಕಾದಾಟ ಆರಂಭಿಸಿದರೆ ಆ ಯುದ್ಧವು ಕಾರಮಳೆ ಕರೆದಂತೆ, ಉರಹುಟ್ಟಿಯನ್ನು ಕೆಣಕಿದಂತೆ' ಇಲ್ಲಿ ಉರಹುಟ್ಟಿಯನ್ನು ಕಡಜೀರಿಗೆ ಹುಳಗಳ (ಕಡಜ)ದಗೂಡನ್ನು ಕೆಣಕಿದಾಗ ಆ ಹುಳಗಳ ದಾಳಿಯ ವೇದನೆ ಸಹಿಸಲು

ಸಾಧ್ಯವಿಲ್ಲವೋ ಹಾಗೆ ಈ ಇಬ್ಬರೂ ವೀರರು ಹೋರಾಡತೊಡಗಿದರು. ಅವನು ಒಕ್ಕಲು ಮಾಡಲು ಬಣವಿಯನ್ನು ಹಾಕಿದಂತೆ ಹೆಣಗಳನ್ನು ತೊತಳತುಳಿದು, ಹೋರಾಟವನ್ನು ಮುಂದುವರೆಸಿ ಕುರಿಯ ಹಿಂಡನ್ನು ತೋಳ ಹೊಕ್ಕಂತೆ, ಕಬ್ಬಿನ ತೋಟವನ್ನು ಆನೆ ಹೊಕ್ಕರೆ ಕಬ್ಬನ್ನು ಹೇಗೆ ನಾಶಮಾಡುವುದೋ ಹಾಗೆ, ಶತ್ರುಗಳನ್ನು ನಾಶಪಡಿಸುತ್ತಾ, ಹೋರಾಡುತ್ತಲೇ ಮಡಿಯುತ್ತಾರೆ. ಇವರ ಮರಣದ ನಂತರ ಇವರಿಬ್ಬರಿಗಿಂತ ಕಿರಿಯನಾದ ಬೊಪ್ಪಗಾವುಂಡ 'ನೀವಾದುದಂ ನಾನಾಗುವೆ, ಇಲ್ಲವೆ ತುರುಗಳನ್ನು ಮರಳಿಸುವೆ' ಎಂದು ಸಂಕಲ್ಪದೊಂದಿಗೆ ಯುದ್ಧವನ್ನು ಮುಂದುವರೆಸುತ್ತಾನೆ. ಇಲ್ಲಿ ಯುದ್ಧದಲ್ಲಿ ವೀರರನ್ನು ಸಿಂಹಕ್ಕೆ, ಕಡಜೀರಿಗೆ ಹುಳಕ್ಕೆ, ತೋಳಕ್ಕೆ, ಆನೆಗೆ ಹೋಲಿಸಿರುವುದು ವಿಶೇಷವಾಗಿದೆ. ಹಾಗೂ ಇಡೀ ತುರುಗೊಳ್ ಶಾಸನ ಪರಂಪರೆಯಲ್ಲೇ ವರ್ಣರಂಜಿತ ವಿವರಗಳನ್ನು ಹೊಂದಿರುವ ಶಾಸನವಾಗಿ ಪ್ರಾಮುಖ್ಯತೆ ಪಡೆದಿದೆ.[೭]

ಮಾವಲಿ ಗ್ರಾಮದಲ್ಲಿ ದೊರೆತ ಇನ್ನೊಂದು ಶಾಸನ ಕ್ರಿ.ಶ. ೧೧೪೪ರ ಶಾಸನವೊಂದರಲ್ಲಿ ಕ್ರಿ.ಶ. ೧೧ನೆ ಶತಮಾನದ ಶಾಸನದಲ್ಲಿ ದೊರೆತ ವಿವರಗಳೇ ಪುನರಾವರ್ತನೆಯಾಗಿದ್ದರೂ ಪದ್ಯವನ್ನು ಗಮನಿಸಿದರೆ **'ಅಣಕಮಿದೇನೋ ಕಾಳಗದೊಳದ್ರೋರೆಯಕ್ಕಲಮ್ಯಕ್ಕಿಮಿಕ್ಕ ಬಲ್ಕುಣೆಗಳ ನೊಕ್ಕಲಿಕ್ಕಿ ಜವನುಂಡುಯ್ಯನೆ ಕಾರಿದಂತ್ತೆ'** ಎಂದು ಆರಂಭವಾಗಿರುವ ಪದ್ಯದಲ್ಲಿ ಯಮನುಂಡು **'ಉಯ್ಯನೆ'** ಅಂದರೆ ಅವಸರದಲ್ಲಿ ತಿಂದು ಕಕ್ಕುವಂತೆ ಕಾರಿಕೊಂಡಿದ್ದಾನೆ. ಹೆಣಗಳ ಬಣವೆಯನ್ನು ಹಾಕಿಕೊಂಡು ರಕ್ತ ದೊಡ್ಡ ಸಮುದ್ರದಂತೆ ಅಲ್ಲಿ ಹರಿದಿರಲು ಉತ್ತಗೌಡನು ಪಿಶಾಚ ಕೋಟಿಯನ್ನು ಸೇರಿದ, ಎಂಬಲ್ಲಿ ಸಾವೂ ಅವಸರದಲ್ಲಿ ಆಗುವಂತೆ ತುರುಗೊಳ್ ಯುದ್ಧ ಕ್ಷಿಪ್ರವಾಗಿ ನಡೆದಿರುವುದಕ್ಕೆ ಸಂಕೇತವಾಗಿ ಊಹಿಸಲು **'ಉಯ್ಯನೆ'** ಎಂಬ ಪದ ಅನುವು ಮಾಡಿಕೊಡುತ್ತದೆ.[೮]

ಕ್ರಿ.ಶ. ೧೧೭೭ರ ಸೊರಬ ತಾಲೂಕಿನ ಕುಪ್ಪಟೂರ ಶಾಸನದಲ್ಲಿ

**'ಸುಖವಿರಲನ್ತಾವೂರಂ ಮುಖಮಂ ಕಿಡಿಪ ಸುರನನ್ತೆ ಕಿಡಿಸಲು ಬರ್ಪ್ಪಾಸು**

**ಖರ ಹಿತಗವುಡಸಾಮಿಯ ಸಖರೊಳಗಾಗೆಯ್ದೆ ಪಿಡಿಯೆ ಪಾರ್ವ್ವರು ಸೆರೆಯ॥**

ಇಲ್ಲಿ ದಾಳಿಮಾಡಿದ ಹಿತಗವುಡಸಾಮಿಯನ್ನು 'ಹಂದಿಯಂತೆ' ಎಂದು ಹೋಲಿಸಿರುವುದು ವಿಶೇಷವಾಗಿದೆ. ಗೋವುಗಳ ಮೇಲೆ, ಹೆಣ್ಣುಮಕ್ಕಳ ಮೇಲೆ ದಾಳಿ ಮಾಡಿದವರನ್ನು ಸೂಖರಕ್ಕೆ ಹೋಲಿಸಿರುವುದು ಅವರ ಮಾನಸಿಕ ಸ್ಥಿತಿಯನ್ನು ಹಂದಿಗೆ ಹೋಲಿಸಿರುವುದು, ಅವರ ವೀರತ್ವವನ್ನು ಹೀನಗೊಳಿಸಿದೆ.[೯]

ಸಾಗರ ತಾಲ್ಲೂಕಿನ ಬೈರಾಪುರ ಗ್ರಾಮದಲ್ಲಿನ ತುರುಗೊಳ್ ವೀರಗಲ್ಲು ಶಾಸನ ಒಂದರಲ್ಲಿ ಕಾಳಗದ ವಿಸ್ತೃತ ವಿವರಣೆಯು ಈ ರೀತಿ ಇದೆ. "ಕ್ರಿ.ಶ೧೧೬೪ರಲ್ಲಿ ಮೂಡನಾಡ ದೇಸಿಂಗ

ವೆರ್ಗಡೆ ಮತ್ತು ಸಿರಿಯಮ ವೆರ್ಗಡೆಯರು ಹಿರಿಯಹಾರಕ ಗ್ರಾಮಕ್ಕೆ ದಾಳಿಮಾಡಿ ತುರುಗಳನ್ನು ಅಪಹರಿಸಿದಾಗ **ಬೆಳೆಯ** ಎಂಬ ವೀರನು ತುರುಗಳ ರಕ್ಷಣೆಗೆ ಧಾವಿಸಿ ಶತ್ರುಗಳೊಂದಿಗೆ ಹೋರಾಡಿದನು. ಕಕ್ಕಂಬು, ಮೊನೆಯಂಬು, ಕೆಲ್ಲಂಬು, ಮೊದಲಾದ ಬಾಣಗಳನ್ನು ಒಂದಾದ ಮೇಲೊಂದರಂತೆ ಬಿಟ್ಟು ಶತ್ರುಗಳ ತಲೆ ತೆಗೆದು ಅಂತಿಮವಾಗಿ ತಾನೂ ಮರಣಿಸಿ ಸುರಲೋಕ ಪ್ರಾಪ್ತನಾದನು" ಈ ಶಾಸನ ಪಠ್ಯದಲ್ಲಿ ಯುದ್ಧರಂಗದ ಚಿತ್ರಣವನ್ನು ಕಾವ್ಯದ ಶೈಲಿಯಲ್ಲಿ ವರ್ಣಿಸಿದೆ. ಬೆಳೆಯನು ಶತ್ರು ಸೈನಿಕರ ತಲೆಗಳನ್ನು ತೆಗೆಯುವುದನ್ನು ಕಂಡು ಪಿಶಾಚಿಗಳು ಸಂತಸದಿಂದ ಕೇಕೆ ಹಾಕಿದವು. ಮೃತ ದೇಹಗಳ ಮೊಣಕಾಲಿನ ಮಾಂಸತಿಂದು ನರಿಗಳು ಕಾರಿಕೊಂಡವು. ರಣಹದ್ದುಗಳು ರಣರಂಗದಲ್ಲಿ ಹಾರಾಡಿದವು ಎಂದಿದೆ.[೧೦೦]

ಅಂದಿನ ಕ್ರಿ.ಶ. ೮ನೆ ಶತಮಾನದಿಂದ ೧೨ನೆ ಶತಮಾನದ ಅಂತ್ಯ ಭಾಗದವರೆಗೆ ಅತೀ ಹೆಚ್ಚು ಕಂಡು ಬರುವ ತುರುಗೊಳ್ ಶಾಸನದ ಯುದ್ಧ ಭಾಗದಲ್ಲಿ ವೀರನನ್ನು, ಆತನ ಹೋರಾಟವನ್ನು ಅನೇಕ ಸಂಗತಿಗಳಿಗೆ ಹೋಲಿಸಿ ವೀರತ್ವವನ್ನು, ಆತನ ಹೋರಾಟದ ಘಟನೆಗಳನ್ನು ವೈಭವೀಕರಿಸಲು, ಉದಾತ್ತೀಕರಿಸಲು ಉಪಮೆ ಬಳಕೆಯಾಗಿದೆ. ಅಂದಿನ ಕವಿಗಳ ಅಸಾಮಾನ್ಯ ಕವಿತಾಗುಣ ಶಾಸನಗಳಲ್ಲಿ ಕಂಡು ಬಂದ ಸಾಹಿತ್ಯ ಭಾಗವು ವೀರನ ಕುಟುಂಬ, ಘಟನೆಯ ವಿವರಗಳಿಗೆ ಮಾತ್ರ ಸೀಮಿತವಾಯಿತು. ೧೧ ಮತ್ತು ೧೨ನೇ ಶತಮಾನದ ಅಂತ್ಯದಲ್ಲಿ ಶಾಸನ ಶಿಲ್ಪಿಗಳು ಪ್ರಾಮುಖ್ಯತೆ ಕಳೆದುಕೊಳ್ಳುವ ಮುನ್ನವೇ ಅಲಂಕಾರದ ಒಂದು ಮಜಲನ್ನು ತಲುಪಿಯಾಗಿತ್ತು. ಆ ಹೊತ್ತಿಗೆ ತುರುಗೊಳ್ ಶಾಸನಗಳು ಕಂದ, ವೃತ್ತ, ಉಪಮೆಗಳಿಂದ ಸಾಧ್ಯವಾದಷ್ಟು ಅಲಂಕಾರಯುತವಾದ ಶಾಸನ ಸಾಹಿತ್ಯ ರಚನೆಯಾಗಿರುವುದನ್ನು ಗುರುತಿಸಬಹುದು.

**ಉ. ತುರುಗೊಳ್ ಶಾಸನ ಕವಿಗಳು–ಶಿಲ್ಪಿಗಳು**

ಶಿವಮೊಗ್ಗ ಜಿಲ್ಲೆಯ ತುರುಗೊಳ್ ಶಾಸನಗಳನ್ನು ಗಮನಿಸಿದಾಗ ಕವಿಗಳ ಹೆಸರನ್ನು ಹೆಚ್ಚಿನ ಶಾಸನಗಳಲ್ಲಿ ಉಲ್ಲೇಖಿಸಿಲ್ಲ. ಆದರೂ ಬೆರಳೆಣಿಕೆಯ ಶಾಸನಗಳಲ್ಲಿ ಶಾಸನವನ್ನು ರಚಿಸಿದವರ ಹೆಸರನ್ನು ಉಲ್ಲೇಖಿಸಲಾಗಿದೆ. ವೀರನ ಜೀವನದ ತ್ಯಾಗದ ಮುಂದೆ ಅವರ ಚರಿತ್ರೆಯಲ್ಲಿ ತಮ್ಮ ಹೆಸರನ್ನು ಸೇರಿಸುವುದು ಕವಿಗಳಿಗೆ ಅಂದಿನ ಕಾಲದಲ್ಲಿ ಪ್ರಾಮುಖ್ಯವೆನಿಸಿರಲಿಲ್ಲ. ಆದ್ದರಿಂದಲೇ ಬಹುಸಂಖ್ಯೆಯ ಶಾಸನಗಳಲ್ಲಿ ಕವಿಗಳು ತಮ್ಮ ಹೆಸರನ್ನು ಉಲ್ಲೇಖಿಸಿಲ್ಲ ಎಂಬುದನ್ನು ಊಹಿಸಲು ಅವಕಾಶವಿದೆ. ಉಲ್ಲೇಖಿತವಾಗಿರುವ ಕೆಲವು ಶಾಸನಗಳನ್ನು ಇಲ್ಲಿ ಗಮನಿಸಬಹುದು.

**ಮಾಸೋಜ:** ಕ್ರಿ.ಶ. ೧೨–೧೩ನೇ ಶತಮಾನದ ಶಿವಮೊಗ್ಗ ತಾಲೂಕಿನ ಚೋರಡಿ ಗ್ರಾಮದ ಪೂರ್ವಕ್ಕೆ ಇರುವ ಶಾಸನದಲ್ಲಿ ಶಾಸನವನ್ನು ಕಂಡರಿಸಿದವರು 'ಮಾಸೋಜ' ಎಂದು ಉಲ್ಲೇಖಿತವಾಗಿದೆ.[೧೦೧]

ಸೊರಬ ತಾಲೂಕಿನ ಕಾನಳ್ಳಿಯ ಕ್ರಿ.ಶ. ೧೩ನೆಯ ಶತಮಾನದ ಶಾಸನವನ್ನು ಮಾಡಿದವರ ಹೆಸರನ್ನು ಒಳಗೊಂಡಿದೆ.ಆ ಶಾಸನವನ್ನು ಗಮನಿಸುವುದಾದರೆ

"ಸ್ವಸ್ತಿ ಸ[ಮ]ಸ್ತಭುವನಾಸ್ರಯಂ ಶ್ರೀ ಪ್ರಿತ್ವೀವಲ್ಲಭಮಹಾರಾಜಾಧಿರಾಜ ಪರಮೇಸ್ವರಂ ಪರ। ಮಭಟ್ಟಾರಕಂ ಸಾತ್ಯಸ್ವೆಯಕಲ್ತಿಲ್ಕಂಚಳ್ಕ್ಯಭ [ರ]ಣ ಶ್ರೀಮತುತ್ರಿಭುವನಮಲ್ಲ ದೇವರರಾ ಜ [ ್ಯ] ಮತರೋತರಾಭಿವಿದ್ಧಿ ಸಖವರಿಸ್ಸ೧೨೪ ವಿಕ್ರಮ ಕೆಲದ ೨೮ನೇ ಸುಭಾನುಸಂವಚ್ಚರ ಚೈತ್ರ ಬಹ್ಳ ೧೨ ಮಂಗ[ಳ]ವಾರ ಕ್ರಿ.ಶ. ೧೩೪೩ರ ಏಪ್ರಿಲ್ ೨೨ ಮಂಗಳವಾರಕ್ಕೆ ಸರಿಹೊಂದುತ್ತದೆ. ಇದೇ ಕಾಲದ ಹಾಗೂ ಒಂದು ದಿನ ಮೊದಲು ಸೋಮವಾರ ನಡೆದ ಯುದ್ಧ ಶಾಸನ. ಈ ಯುದ್ಧ ಎರೆಡುದಿನ ನಡೆದಿದೆ ಎಂಬುದು ಯುದ್ಧದ ಸುದೀರ್ಘ ಸಮಯವನ್ನು ಊಹಿಸಲು ಅವಕಾಶವಿದೆ.

**"ಶ್ರೀಮತು ಅನಂತಪಾಳದಣ್ಣನಾಯಕ ಬನವಸೆಪನ್ನಿರ್ಚ್ಛಾ[ಸಿ]ರಮನಾಳ್ವಿತಮಂ ।**
**ಕರಿಯಗೋಈನ್ದಾರಸಬಳ್ಳಿಗಾಮೆಯಾ ಆಮೆಆಳ್ಕೆ ಅಧ್ಧಿಪತಿಆಗಿರ ಸ್ವಸ್ತಿ**
**ಸ[ಮ]ಧ್ಧಿಗತ ಪಂಞ್ಚಮಾಹಸಬ್ಧ ಮಾಹಮಣ್ಡಳೇಸ್ವರಂ ಬನವಾಸಿಪುರವರೇಸ್ವರಂ**
**ಅಜ್ಜಾದೇವೀಲಬುಧವರ ಪ್ರಸಾದ॥**
**ನಾಮಾಧಿಸ [ಮಸ್ತ] ಪ್ರಸಸ್ತ ಸಹಿತಂ ಶ್ರೀಮತು ಕಡಂಬರ ತೈಲ್ಪ ದೇವನ ಮಗರ್ಕ್ತಿದೇವ**
**ನಕಾಯ್ಯ ಕಾಳುಕಾನಪಳ್ಳಿಯ ತುರುವಂತೆಂಖಣತೈಲ್ಪನಾಳು ಹಟ್ಟಿಪು**
**ಪ್ಪಯನ ಕೊಣ್ಡುಪೋಗೆ ಕಾನಪಳ್ಳಿಯ ಚವಗಾವುಣ್ಣನಮಗ ಮಚಣ್ಣ**
**ತುರುವಿಂಗೆ ಅಡಬಂದ್ದು ಕದಿತಳ್ತಿರಿದು ದೇವಲೋಕ**
**ಕ್ಕೆ ಸಂನ್ದ ॥ ಇಕಲುಹೋಜಮಾಡಿದಂ."**

ಎಂದಿರುವ ಶಾಸನದ ಕೊನೆಯ ಸಾಲಿನಲ್ಲಿ ಈ ಕಲ್ಲನ್ನು ಹೋಜ ಎಂಬುವನು ಮಾಡಿದ ಎಂದು ಉಲ್ಲೇಖಿತವಾಗಿದೆ. ಆದರೆ ಈ ಶಾಸನ ರಚಿಸಿದವನು "ಹೋಜ" ನಾದರೆ ಬರೆದುಕೊಟ್ಟವರು ಯಾರು ಎಂಬ ಸಂದೇಹ ಹಾಗೆ ಉಳಿಯುತ್ತದೆ. ಕಲ್ಲನ್ನು ರಚಿಸಿದವನು 'ಹೋಜ' ಎಂದು ಸ್ಪಷ್ಟವಾಗುತ್ತದೆ.[೧೦೨]

**ಕವಿ ಕರಊರ ವೀರಜ್ಜ ಹಾಗೂ ಶಿಲ್ಪಿ ಹರಿಯ ಕೋಪದ ದುಗೋಜ:**

ಕ್ರಿ.ಶ. ೧೪೨೦ ಅಕ್ಟೋಬರ್ ೧೪ಕ್ಕೆ ಸರಿಹೊಂದುವ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಹೊಸಮನೆ ಗ್ರಾಮದ ತುರುಗೊಳ್ ಶಾಸನ ಹಾಗೂ ಮಡಿದ ಪತಿಯೊಂದಿಗೆ ಮಡಿದ ಸತಿಹೋದ ವಿಷಯದೊಂದಿಗೆ ಶಾಸನ ಕವಿಯನ್ನು ತಿಳಿಸಿದೆ.

"ಸ್ವಸ್ತಿ ಸಮಸ್ತ ಪ್ರಸಸ್ತಿಸಹಿತಂ
ಶ್ರೀನ್ಮುಂ ಮಹಾರಾಜರಾಜರಾಜಪರ[ಮೇ]
ಸ್ವರಶ್ರೀ ವೀರದೇವರಾಯರು ಸುಖಂ
ರಾಜ್ಯಂಗೆಯ್ಯೆ ಕಾಲದ (ಲದ)ರ
ಕವಕುಶ ೧೩೪೩ ದಸಾರ್ವ್ವರಿ
ಸಂವತ್ಸರ ಕಾರ್ತ್ತಿಕಸು
ದ ೭ ಸೋ । ಶ್ರೀಮತುಸಬ
ಳಗ ಚಾಮಗೌಡರನು ಸಬಾಯ್ತುರು ತುರುಸೆರೆಯ ಹಿಡಿದಲ್ಲಿ ಆ ಚಾಮಗೌಡರು
ಸೆರೆತುರುವ ಮರಳಿಚಿ । ಮಡಿದವನು ಹದಸೆಯ ಬೀರಗಉಡನು ಹಾಯ್ದು
ಹೊಯಿಸಿಕೊಂಡು ಬಿದಲ್ಲಿ ಆತನಮದವಳಿಗೆ ಗಾರಾಯಿ ಸಹಗಮನವ ಮಾಡಿ
ವೀರಸ್ವರ್ಗವ ಪಡದರುಯಿಸಾಸನವ ಬರದವನಂ ಕರಉರವಿರಜ್ಯನು
ಕಲಮಾಡಿದಾತ ಹರಿಯ ಕೋಪದದುಗೋಜ'

ಇಲ್ಲಿ ಶಾಸನವನ್ನುಬರೆದವನು 'ಕರಉರವಿರಜ್ಯನು' ಎಂದು ಉಲ್ಲೇಖಿಸಿದೆ. ಹಾಗೂ ಕಲ್ಲನ್ನು ಮಾಡಿದಾತ ಹರಿಯಕೋಪದ 'ದುಗೋಜ' ಎಂದು ಉಲ್ಲೇಖಿಸಿರುವುದು ವಿಶೇಷವಾಗಿದೆ. ಶಾಸನ ಬರೆದವನು ಹಾಗೂ ಶಾಸನ ಶಿಲ್ಪಿ 'ದುಗೋಜ' ನನ್ನು ದಾಖಲಿಸಿರುವುದರ ಜೊತೆಗೆ ಶಾಸನವೀರನೊಂದೊಗೆ ಮಡಿದ 'ಗಾರಾಯಿ' ಸಹಗಮನ ಮಾಡಿದ ವಿವರಗಳನ್ನು ಈ ಶಾಸನ ಹೊಂದಿರುವುದು ತುರುಗೊಳ್ ಶಾಸನಗಳಲ್ಲಿ ಪ್ರಮುಖವಾಗಿ ಗುರುತಿಸಬಹುದು.[೧೦೩]

**ಭೀಮಯ್ಯ:** ಕ್ರಿ.ಶ. ೯ನೇ ಶತಮಾನದ ಶಿವಮೊಗ್ಗ ಜಿಲ್ಲೆಯ ಹುನವಳ್ಳಿಯ ಸೊರಬ ತಾಲೂಕಿನ ಗ್ರಾಮ. ಅಲ್ಲಿನ ಶಾಸನ ಒಂದರಲ್ಲಿ **'ಬಿಟ್ಟಿಗನೆ ಪೆರ್ಗ್ಗಡೆ ದಾಸಯ್ಯನ ಮಗಂ ಭೀಮಯ್ಯಂ ಬರೆದ'** ಎಂದು ಶಾಸನ ಕವಿಯನ್ನು ಉಲ್ಲೇಖಿಸಿದ್ದಾರೆ. ಈ ಶಾಸನವು ನಿಲ್ಲಿಸಿದವನು 'ಕನ್ನಯ್ಯಂ' ಎಂದು ದಾಖಲಾಗಿದೆ. ಇಲ್ಲಿ ಪುನುವಾಲವಳ್ಳಿಯ ಗಾಯಿಗಂ ಮಾದಗರ 'ರಿಮರ್ಮ್ಮ' (ಅರಿವಾರ್ಮ) ತುರುಗೊಳ್ ಕದನದಲ್ಲಿ ಮಡಿದ ವಿವರವಿದೆ.[೧೦೪]

**ಸಲುಗಯ್ಯ:** ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲೂಕಿನ ಕನ್ನಡದ ಅತಿ ಪ್ರಾಚೀನ ಶಾಸನ ದೊರೆತಿರುವ ತಾಳಗುಂದದ ಕ್ರಿ.ಶ. ೧೦ನೇ ಶತಮಾನದ ಶಾಸನವೊಂದರಲ್ಲಿ 'ಯುನಾವಿದರ' 'ಗೆಸಾಸಿಗುಲುಗಂ' ಸತ್ತು ಸುರಲೋಕಕ್ಕೆ ಸೇರುತ್ತಾನೆ. ಆತನ ಹೆಂಡತಿ 'ಹುಕ್ಕಬ್ಬೆ' ಮಗ 'ಜಿಯಸನು' ಕಲ್ಲ ನಿಲಿಸಿದ ವಿಷಯದ ಜೊತೆಗೆ ಈ ಶಾಸನ ಬರೆದವ ಎಂದು 'ಸಲುಗಯ್ಯ' ಎಂದು

ಉಲ್ಲೇಖಿತವಾಗಿದೆ ಹಾಗೂ ಈ ಶಾಸನ ತುರುಗೊಳ್ ಹಾಗೂ ಪೆಣ್ಬುಯ್ಯಲ್ ಅಂಶಗಳನ್ನ ಹೊಂದಿರುವ ಎಂಟು ಸಾಲಿನ ಶಾಸನವಾಗಿದೆ.[೧೦೫]

**ಮಾವೋಜ:** ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಕುಣಿತೆಪ್ಪ ಗ್ರಾಮದ ಕ್ರಿ.ಶ. ೧೧ನೇ ಶತಮಾನದ ಶಾಸನವೊಂದರಲ್ಲಿ ತುರುಗೊಳ್ ಊರಳಿವು ಹಾಗೂ ಪೆಣ್ಬುಯ್ಯಲ್ ಘಟನೆಗಳನ್ನು ಒಳಗೊಂಡ ೧೨ ಸಾಲಿನ ಶಾಸನವಾಗಿದೆ. ಊರಿಳಿವಿನ ತುರುಗೊಳ್ ಹಾಗೂ ಹೆಣ್ಣುಮಕ್ಕಳ ಉಡುಗೆಯನ್ನು ಉರ್ಚುವ ವೇಳೆಗೆ ನಾಗರಖಂಡ ೭೦ ರ ಪ್ರಭು ಕುಳಿಯತೆಪ್ಪದ ಮಲಗುಣ್ಡನಳಿಯ ಮಕ್ಕಳ ಮಣಿಗಟಾಅಸಂ ಸರಿಗಿರಿದು ಸುರಲೋಕ ಪ್ರಾಪ್ತನಾದವಿಷಯವಿದ್ದು ಈ ಕಲ್ಲನ್ನು ನಿಲಿಸಿ ಆತನ ಗೋವಂ ಮಲ್ಲಗವುಣ್ಡನು, ಮೇರಿಸೆಟ್ಟಿಯು ಬವಗವುಣ್ಣನು ಬೆಸಗೆಯ್ದು ಬಳಿಗೆ ... **'ಮಾವೋಜ ಬರೆದ'** ಎಂದು ಉಲ್ಲೇಖಿಸಲಾಗಿದೆ. ಇಲ್ಲಿ ಶಾಸವನವನ್ನು ಬರೆದವನು 'ಮಾವೋಜ' ಎಂಬುದು ಸ್ಪಷ್ಟವಾಗಿ ಉಲ್ಲೇಖಿತವಾಗಿದೆ.[೧೦೬]

**ಚೊಮಗವುಂಡ** : ಕ್ರಿ.ಶ. ೧೧ನೇ ಶತಮಾನದ ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಕಲ್ಲೂರು ಗ್ರಾಮದ ಶಾಸನವೊಂದರಲ್ಲಿ ತಡೆಯೂರ ಕಗ್ಗಜ್ಜನ ಮಗ **'ದೊಡ್ಡ ಬೇಳೆಯ'** ಹೋರಾಡಿ ಮಡಿಯುತ್ತಾನೆ. ಹಾಗೂ ಈ ಶಾಸನವನ್ನು ಹೇಳಿ ಬರೆಯಿಸಿದವನು **'ತಳವೆಯ ದಾಸೋಜ'** ಹಾಗೂ ಬರೆದವನು **'ಚೋಮಗವುಂಡ'** ಎಂದು ಶಾಸನ ಕವಿಯನ್ನು ಉಲ್ಲೇಖಿಸಿದ್ದಾರೆ.[೧೦೭]

**ಶಿಲ್ಪಿ ಸಿಗ್ಗೋಜ** : ಕ್ರಿ.ಶ. ೧೧ನೇ ಶತಮಾನದ ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಕವಡಿ ಗ್ರಾಮದ ಶಾಸನವು **'ಕನ್ನಡಿಕಾವೆಯ ನಾಯಕ'** ತುರುಗೊಳ ಕದನದಲ್ಲಿ ಮಡಿದು ವೀರಸ್ವರ್ಗ ಸೇರುತ್ತಾನೆ. ಆತನ ತಮ್ಮ ಕನ್ನಡಿಯ ಕೇತಯನಾಯಕ ಕಲ್ಲ ನಿಲ್ಲಿಸಿ ಕೃತಾರ್ಥನಾಗುತ್ತಾನೆ. ಹಾಗೂ ಈ ಶಾಸನವನ್ನು ಕಲ್ಲುಕುಟಿಗ **'ಸಿಗ್ಗೋಜ'** ಮಾಡಿದರು ಎಂದು ಉಲ್ಲೇಖವಾಗಿದೆ.[೧೦೮]

**ಕುಪ್ಪಯಸಾವಗೋಜ** : ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕು ಹಸಿರಿನಿಂದ ಕಂಗೊಳಿಸುವ ಪಶುಸಂಗೋಪನೆಗೆ ಅನುಕೂಲ ವಾತಾವರಣವನ್ನು ಹೊಂದಿತ್ತು ಎಂಬುದು ಈ ತಾಲೂಕಿನಲ್ಲಿ ದೊರೆತಿರುವ ತುರುಗೊಳ್ ಶಾಸನಗಳ ಸಂಖ್ಯೆಗಳೇ ಅಂದಿನ ಗೋಸಂಪತ್ತನ್ನು ಊಹಿಸಿಕೊಳ್ಳಲು ಆಧಾರವಾಗಿದೆ. ಈ ತಾಲೂಕಿನ ಐತಿಹಾಸಿಕ ಗ್ರಾಮ ಮಾವಲಿ ಅನೇಕ ಶಾಸನಗಳನ್ನು ಹೊಂದಿದೆ. ಇಲ್ಲಿನ ಕ್ರಿ.ಶ. ೧೧ಳಳರ ಶಾಸನವೊಂದರಲ್ಲಿ ಉತ್ತಾಗಾವುಂಡ ಗೋಗ್ರಹಣದಲ್ಲಿ ಮಡಿಯುತ್ತಾನೆ. ಈ ಶಾಸನದಲ್ಲಿ ರಣರಂಗದ ವರ್ಣನೆ ಮನಮೋಹಕವಾಗಿದೆ. 'ಯುದ್ಧದಲ್ಲಿ ಯಾರು ದೊರೆ? ಬಲವಾದ ಹೆಣಗಳ ರಾಶಿಯನ್ನು ಹಾಕಿ ಯಮನು ಉಂಡು ಕಾರಿದಂತೆ ಉತ್ತಗವುಡ ಹೋರಾಡುತ್ತಾ ಪಿಶಾಚಕೋಟಿಯನು ಸೇರಿದ. ಆದರೆ ಅವನ ಕಲಿತನವನ್ನು

ದೇವತೆಗಳೂ ಮೆಚ್ಚುವಂತೆ ಹೋರಾಡಿದ' ಎಂದು ವೃತ್ತ ಪದ್ಯಗಳಲ್ಲಿ ಯುದ್ಧದ ವಿವರಗಳನ್ನು ವರ್ಣಿಸಿದ್ದಾರೆ. ಅಲ್ಲದೆ ಈ ಶಾಸನದ ಕೊನೆಯಲ್ಲಿ ಈ ಕಲ್ಲನ್ನು **'ಕುಪ್ಪಯಸಾವಗೋಜ'** ಎಂಬುವನು ಮಾಡಿದ ಎಂದು ಶಾಸನ ಸಾಹಿತ್ಯದಲ್ಲಿ ದಾಖಲಾಗಿದೆ.

ಹೀಗೆ ಸಹಸ್ರಾರು ಸಂಖ್ಯೆಯ ತುರುಗೊಳ್ ಶಾಸನಗಳು ದೊರೆತರೂ ಶಾಸನ ಕವಿಗಳ ಉಲ್ಲೇಖ ಕೆಲವೇ ಶಾಸನಗಳಲ್ಲಿ ಕಂಡು ಬರಲು ಕಾರಣ, ಈ ಶಾಸನದ ಮುಖ್ಯ ಭಾಗವೇ ವೀರನು ನಂಬಿದ ಮೌಲ್ಯಕ್ಕೆ ಜೀವವನ್ನು ತ್ಯಾಗಮಾಡಿದ್ದಾಗಿದೆ. ಆ ವೀರನ ತ್ಯಾಗ ಚಿರವಾಗಿಸಲು ನಮಗೆ ಅವಕಾಶ ದೊರೆತುದೇ ಧನ್ಯ, ಎಂಬ ಧನ್ಯತಾಭಾವ ಶಾಸನ ಕವಿಗಳಿಗೆ ಇದ್ದಿರಬೇಕು. ಅಲ್ಲದೆ ಸ್ಥಳೀಯವಾಗಿ ಅಲ್ಪ ಸ್ವಲ್ಪ ಸಾಹಿತ್ಯ ಜ್ಞಾನ ಇರುವವರೂ ಕೂಡಾ ಶಾಸನವನ್ನು ರಚಿಸುತ್ತಿದ್ದರು. ಇವರು ತಮ್ಮ ಹೆಸರನ್ನು ಹಾಕಿಸಲು ಹಿಂಜರಿಯುತ್ತಿದ್ದಿರಬೇಕು. ಅಲ್ಲದೆ ಕುಲಕರ್ಣಿ, ಬ್ರಾಹ್ಮಣರೂ ಕೂಡ ಗದ್ಯ ರೂಪದ ಪಾಠಗಳನ್ನು ಬರೆದುಕೊಡುತ್ತಿದ್ದರೆಂದು ತೋರುತ್ತದೆ. ಸ್ಥಳಾವಕಾಶದ ಕೊರತೆಯಿಂದಲೂ ಶಾಸನ ಕವಿಗಳು/ಶಿಲ್ಪಿಗಳು ಸ್ಥಾನ ಪಡೆಯದೆ ಹೋಗಿರಬಹುದು. ಈ ಕಾರಣದಿಂದ ಅತ್ಯಂತ ಅದ್ಭುತ ಶಾಸನ ಸಾಹಿತ್ಯ ರಚಿಸಿದರೂ ಆ ಕವಿಗಳು ತೆರೆಮರೆಯಲ್ಲಿ ನಿಂತು ವೀರರನ್ನೇ ಮುಖ್ಯ ಭೂಮಿಕೆಯಲ್ಲಿ, ಚಿತ್ರಿಸಿದ್ದಾರೆ.

### ೩. ತುರುಗೋಳ್ ಶಾಸನಶಿಲ್ಪ

ಶಾಸನ ಶಿಲ್ಪವು ಭಾರತೀಯ ಶಿಲ್ಪಶಾಸ್ತ್ರದ ಬೆಳವಣಿಗೆಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ವೈವಿಧ್ಯತೆಯ ದೃಷ್ಟಿಯಿಂದಲೂ ಮತ್ತು ಸಂಖ್ಯೆಯ ದೃಷ್ಟಿಯಿಂದಲೂ ಶಾಸನ ಶಿಲ್ಪಗಳು ಕರ್ನಾಟಕದಲ್ಲಿ ವಿಶೇಷವಾಗಿ ದೊರೆಯುತ್ತವೆ. ಶಾಸನ ಶಿಲೆಗಳಲ್ಲಿ ಶಾಸನಶಿಲ್ಪ ರೂಪ ತಾಳಲು ಬಹಳ ಮುಖ್ಯವಾದ ಕಾರಣವೇನೆಂದರೆ ಅನಕ್ಷರಸ್ಥರಿಗೂ ವಿಷಯ ತಿಳಿಯಲಿ ಎಂಬುದು. ಶಿಲ್ಪಿಗಳಿಗೆ ನಿಜವಾಗಿಯೂ ಸವಾಲಾಗಿ ನಿಂತದ್ದು ಸ್ಮಾರಕ ಶಿಲೆಗಳು. ವೀರನ ತ್ಯಾಗ, ಬಲಿದಾನ, ಮಹಾಸತಿಯರ ಆದರ್ಶಗುಣಗಳನ್ನು ಎಲ್ಲರಿಗೂ ಅರಿವಾಗುವಂತೆ ಹೇಳಬೇಕಾಗುತ್ತಿತ್ತು. ಅದನ್ನು ಶಾಸನ ಶಿಲ್ಪಗಳು ತಮ್ಮ ಕಲೆಯಲ್ಲಿ ಅನಾವರಣಗೊಳಿಸಿದರು. ಶಾಸನಗಳ ಶಿಲ್ಪವನ್ನು ಗಮನಿಸಿಯೇ ಆ ಶಾಸನ ಯಾವಪ್ರಕಾರದ್ದು ಎಂದು ಗುರುತಿಸುವಷ್ಟರ ಮಟ್ಟಿಗೆ ಶಾಸನಶಿಲ್ಪ ವೈವಿಧ್ಯಮಯವಾಗಿ ಬೆಳವಣಿಗೆ ಹೊಂದಿದೆ. ಅವುಗಳಲ್ಲಿ ತುರುಗೊಳ್ ಶಾಸನಶಿಲ್ಪದ ಮಹತ್ವವನ್ನು, ಅವುಗಳ ವೈವಿಧ್ಯವನ್ನು ಈ ಅಧ್ಯಾಯದಲ್ಲಿ ಗಮನಿಸಬಹುದು.

#### ಅ. ಶಾಸನಶಿಲ್ಪದ ಮಹತ್ವ

ಶಾಸನವನ್ನು ಹಾಕಿಸುವ ಮುಖ್ಯ ಉದ್ದೇಶವೆಂದರೆ ತಾವು ನೀಡಿದ ದಾನಧರ್ಮಗಳನ್ನು ಎಲ್ಲರಿಗೂ ತಿಳಿಸುವುದೇ ಆಗಿದೆ. ವೀರನೊಬ್ಬನ ಆದರ್ಶದ ಹೋರಾಟವನ್ನು ಮುಂದಿನ

ತಲೆಮಾರಿಗೆ ತಲುಪಿಸುವುದು ಶಾಸನ ಹಾಕಿಸುವ ಉದ್ದೇಶವಾಗಿತ್ತು. ಶಾಸನ ಎಂದರೆ ಮೂಲ ಅರ್ಥ ರಾಜರಿಂದ ಹೊರಡಿಸಿದ ಆಜ್ಞೆಗಳು ಎಂಬುದಾಗಿದೆ. ಈ ಆಜ್ಞೆಗಳು ಎಲ್ಲರಿಗೂ ತಿಳಿಯಲಿ ಮತ್ತು ಮುಂದಿನ ತಲೆಮಾರಿಗೂ ತಿಳಿಯಲಿ ಎಂದು ಶಿಲೆಗಳ ಮೇಲೆ, ಶಿಲಾಫಲಕಗಳ ಮೇಲೆ ಅಥವಾ ಬಹುಕಾಲ ಬಾಳಿಕೆ ಬರುವ ವಸ್ತುಗಳ ಮೇಲೆ ಕೆತ್ತುತ್ತಿದ್ದರು. ಇದು ಸಾರ್ವಜನಿಕರ ಮನದಲ್ಲಿ ಬಹಳ ಪರಿಣಾಮ ಬೀರುತ್ತಿತ್ತು. ಯಾರೂ ಇದನ್ನು ಮೀರುತ್ತಿರಲಿಲ್ಲ. ಹೀಗಾಗಿ ಕಾಲಕ್ರಮೇಣ ದಾನ ನೀಡುವ ಸಾಮಾನ್ಯರೂ ಕೂಡ ತಾವು ನೀಡಿದ ದಾನ ಶಾಶ್ವತವಾಗಿರಲಿ ಎಂದು ಶಾಸನನೆಡಲು ತೊಡಗಿದರು. ನಂತರ ಈ ಕ್ರಿಯೆ ಸಾರ್ವತ್ರಿಕ ಮನ್ನಣೆಯನ್ನು ಪಡೆಯಿತು. ಕಾಲಾನಂತರ ದಾನದ ವಿಷಯಗಳನ್ನು ಮಾತ್ರವಲ್ಲದೆ ಆಯಾಕಾಲದ ಪ್ರಮುಖ ಘಟನೆಗಳನ್ನು ಶಾಸನ ರೂಪದಲ್ಲಿ ನಿರೂಪಿಸುವ ಪದ್ಧತಿ ಬೆಳೆಯಿತು. ಇದರಿಂದಾಗಿ ಸಮಾಜದ ವಿವಿಧ ಪರಿಧಿಗಳ ಸಾಂಸ್ಕೃತಿಕ ಚಟುವಟಿಕೆಯ ಅಂಶಗಳು ಶಾಸನಗಳಲ್ಲಿ ಸ್ಥಾನ ಪಡೆಯಿತು. ಶಾಸನ ನೆಡಿಸುವುದು ಉಳ್ಳವರಿಗೆ ಸುಲಭವಾಯಿತು. ಆದರೆ ಹಿಂದುಳಿದವರು ಶಾಸನ ನೆಡುವ ಕಾರ್ಯದಿಂದ ದೂರವೇ ಇದ್ದರು. ಅನೇಕ ಶಾಸನಗಳಲ್ಲಿ ಹಿಂದುಳಿದ ವರ್ಗಗಳ/ಕಸುಬಿನವರ ಉಲ್ಲೇಖವಿದ್ದರೂ ಅದು ಉಳ್ಳವರಿಗೆ ಬೆಂಬಲ ನೀಡಲೋ ಅಥವಾ ಅವರ ಮಾನ ಉಳಿಸಿದವರೆಂದೂ ಉಲ್ಲೇಖವಾಗಿದ್ದಾರೆ.

ಶಾಸನ ನೆಡುವ ಪದ್ಧತಿ ಬೆಳೆದುಬಂದಂತೆಲ್ಲ ಶಾಸನಗಳ ಸ್ವರೂಪದಲ್ಲಿ ಬದಲಾವಣೆ ಕಂಡು ಬಂದಿತು. ವಿನ್ಯಾಸದಲ್ಲಿ ಅನೇಕ ರೀತಿಯ ಮಜಲುಗಳನ್ನು ಪಡೆಯಲು ಪ್ರಾರಂಭಿಸಿತು. ಸ್ವರೂಪದ ದೃಷ್ಟಿಯಿಂದ ಶಾಸನದ ತಲೆಯ ಮೇಲೆ ಮತಕ್ಕನುಗುಣವಾಗಿ ಬೇರೆ ಬೇರೆ ಚಿತ್ರಗಳಿರುತ್ತವೆ. 'ಆಕಳು, ಕರು, ಖಡ್ಗ, ಸೂರ್ಯ, ಚಂದ್ರರ, ಚಿತ್ರ ಸರ್ವೇ ಸಾಮಾನ್ಯ. ಕಾಲಾ ನಂತರ ಈ ಚಿತ್ರಗಳು ಬರವಣಿಗೆಗಿಂತಲೂ ಪ್ರಭಾವಶಾಲಿಯಾದ ಮತ್ತು ಪ್ರಧಾನವಾದ ಸ್ಥಾನವನ್ನು ಪಡೆಯಿತು. ಈ ರೀತಿ ಬರವಣಿಗೆಯೊಂದಿಗೆ ಇರುವ ಶಿಲ್ಪಗಳನ್ನು 'ಶಾಸನಶಿಲ್ಪ' ಎಂದು ಕರೆಯುವರು.

**ಆ. ಶಾಸನಶಿಲ್ಪ ಶೈಲಿ**

ಶಾಸನ ಶಿಲ್ಪವು ತಾಂತ್ರಿಕವಾಗಿ ಉಬ್ಬು ಶಿಲ್ಪದ ಒಂದು ಪ್ರಕಾರ. ಭಾರತೀಯ ಶಿಲ್ಪಶಾಸ್ತ್ರದಲ್ಲಿ ಉಬ್ಬು ಶಿಲ್ಪವು ಬಹಳ ದೊಡ್ಡ ವಿಭಾಗವಾಗಿದೆ.[೧೯] ಉಬ್ಬು ಶಿಲ್ಪವನ್ನು ಇದಿರಿನಿಂದ ನೋಡುವಂತೆ ಚಿತ್ರಿಸಿರುತ್ತಾರೆ. ಮಾಧ್ಯಮವು (ಶಿಲೆ) ಒಂದೇ ಆದರೂ ಶಿಲ್ಪ ಹಾಗೂ ಶಾಸನ ಶಿಲ್ಪಗಳನ್ನು ನಿರ್ಮಿಸುವ ತಂತ್ರಗಳು ಬೇರೆ ಬೇರೆಯಾಗುತ್ತವೆ. ಶಿಲ್ಪವನ್ನು ನಾಲ್ಕುಕಡೆ ಕೆತ್ತಬೇಕು. ಆದರೆ ಶಾಸನ ಶಿಲ್ಪವನ್ನು ದೃಶ್ಯದ ಮುಂಭಾಗ ಕಾಣುವಂತೆ ಕೆತ್ತಿದರೆ ಸಾಕು. ಅಂದರೆ ಎದುರು ನಿಂತು

ನೋಡಿದಾಗ ಕಾಣುವಂತೆ ನಿರ್ಮಿಸಿರುತ್ತಾರೆ. ಶಾಸನ ಶಿಲ್ಪದಲ್ಲಿ ಒಂದು ಘಟನೆಗೆ ಸಂಬಂಧಿಸಿದ ಎಲ್ಲಾ ವ್ಯಕ್ತಿಗಳನ್ನು, ಶಿಲ್ಪಿಯು ನಿರೂಪಿಸಲು ಪ್ರಯತ್ನಿಸುತ್ತಾನೆ. ಶಿಲ್ಪದಲ್ಲಿ ಒಂದು ಘಟನೆಯನ್ನು ಒಂದು ಭಂಗಿಯನ್ನು ಮಾತ್ರ ಕೆತ್ತಿದರೆ, ಶಾಸನ ಶಿಲ್ಪದಲ್ಲಿ ಏಕಕಾಲದಲ್ಲಿನ ಹಲವು ಘಟನೆಗಳನ್ನು ಚಿತ್ರಿಸಬಹುದು. ವೀರಗಲ್ಲು ಹಾಗೂ ಮಾಸ್ತಿಗಲ್ಲಿನ ಶಿಲ್ಪಗಳಲ್ಲಿ ಈ ತಂತ್ರವನ್ನೇ ನಾವು ಪ್ರಧಾನವಾಗಿ ಕಾಣುವುದು. ಶಿಲ್ಪ ಮೂಲತಃ ಮನಸ್ಸಿನಿಂದ ಹುಟ್ಟಿ ಧಾರ್ಮಿಕ ಚೌಕಟ್ಟಿನಲ್ಲಿ ಬೆಳೆದಿದೆ. ಅದು ಹೆಚ್ಚಾಗಿ ಭಕ್ತಿಯನ್ನು ಉದ್ಧೀಪನಗೊಳಿಸುತ್ತದೆ. ಶಾಸನ ಶಿಲ್ಪವು ಸಾಮಾಜಿಕ ಕಳಕಳಿಯಿಂದ ಹುಟ್ಟಿದಂಥದ್ದು, ಇದು ಮೊದಲಿಗೆ ಸಾಂಸ್ಕೃತಿಕ ಆಕರವಾಗಿದ್ದು ನಂತರ ಕಲಾ ಮಾಧ್ಯಮವಾಗಿದೆ.

ತುರುಗೊಳ್ ಶಾಸನಶಿಲ್ಪ ತಯಾರಿಕೆಯ ಸಂದರ್ಭದಲ್ಲಿ ಶಿಲ್ಪಿಗೆ ನೆರವಾಗುವ ಅಂಶಗಳಾವುವೆಂದರೆ, ನಡೆದ ಘಟನೆಯ ವಿವರ ಮತ್ತು ಶಿಲಾಫಲದಕದಲ್ಲಿ ದೊರೆಯುವ ಸ್ಥಳಾ ವಕಾಶ. ಸ್ಥಳವು ಕಡಿಮೆಯಿದ್ದು, ಘಟನೆಯು ವಿಸ್ತಾರವಾಗಿದ್ದರೆ ಶಿಲ್ಪಿಗೆ ಬಹಳ ಕಷ್ಟವಾಗುತ್ತದೆ. ವಿಷಯಕ್ಕೆ ಸಾಕಾಗುವಷ್ಟು ಉದ್ದ, ಅಗಲ ಮತ್ತು ಗಾತ್ರ ಹೊಂದಿಕೆಯಾಗುವ ಶಿಲೆಯನ್ನು ಶಾಸನ ರಚಿಸಲು ಆಯ್ಕೆ ಮಾಡಿಕೊಂಡು ಸಿದ್ಧತೆ ಮಾಡಿಕೊಳ್ಳಬೇಕು. ಈ ಕಾರಣದಿಂದಲೇ ಒಂದು ಹಂತದಿಂದ ಏಳು ಹಂತದವರೆಗಿನ ಶಾಸನಶಿಲ್ಪಗಳನ್ನು ಕಾಣಬಹುದಾಗಿದೆ. ಇಲ್ಲಿ ಘಟನೆಯನ್ನು ಆರಂಭದಿಂದ ಕೊನೆಯವರೆಗೂ ಹಂತಹಂತವಾಗಿ ನಿರೂಪಿಸಲಾಗಿರುತ್ತದೆ. ಶಾಸನಶಿಲ್ಪಗಳು ಹುಟ್ಟಿದ್ದು ಯಾವುದಾದರೂ ಘಟನೆಯ ವಿವರಗಳನ್ನು ತಿಳಿಸಲು ಜನರ ಬದುಕನ್ನೇ ಪ್ರೇರಣೆಯಾಗಿಸಿ ಕೊಂಡಿರುವ ಶಾಸನಶಿಲ್ಪದಲ್ಲಿ ಸಾಮಾಜಿಕ ಕಳಕಳಿಯೇ ಮುಖ್ಯವಾಗಿ ಕಂಡುಬರುತ್ತದೆ. ಉನ್ನತ ಮೌಲ್ಯಗಳು, ನಂಬಿಕೆಗಳು, ಆಚರಣೆಗಳು ಮುಂದಿನ ತಲೆಮಾರಿನವರಿಗೆ ಮಾದರಿಯಾಗಿರಲಿ ಎಂಬ ಮಹಾ ಆಶಯ ಶಾಸನಶಿಲ್ಪಗಳಲ್ಲಿ ಅಡಕವಾಗಿದೆ.

ಶಾಸನಗಳಂತೆಯೇ ಶಾಸನಶಿಲ್ಪಗಳೂ ಕೂಡ ತಕ್ಕಮಟ್ಟಿಗೆ ಆಯಾ ಕಾಲದ ಆಚರಣೆಗಳನ್ನು ವೇಷ-ಭೂಷಣಗಳನ್ನು ತಿಳಿಯಲು ನೆರವಾಗುತ್ತವೆ. ಒಟ್ಟಾರೆ ಶಾಸನ ಶಿಲ್ಪಗಳು ಲಿಪಿಯನ್ನು ಓದಲಾಗದವರಿಗೂ ಆ ಘಟನೆಯ, ಶಾಸನದ ಆಂತರ್ಯದ ಸೂಕ್ಷ್ಮ ಗ್ರಹಿಕೆಗೆ, ತಮ್ಮ ಕಾಲದ ಸಾಂಸ್ಕೃತಿಕ ಬದುಕಿನ ಚಹರೆಯನ್ನು ಸಾಧ್ಯವಿದ್ದಷ್ಟು ಅಧಿಕೃತವಾಗಿ ಹೇಳುವ, ಧ್ವನಿಸುವ, ಮನನ ಮಾಡಿಸುವ ದಾಖಲೆಗಳಾಗಿವೆ. ಇಂದಿಗೂ ಹಳ್ಳಿಗಳಲ್ಲಿ ಲಭ್ಯವಿರುವ ಸ್ಮಾರಕ ಶಿಲೆಗಳನ್ನು ಗುರುತಿಸುವುದು ಅದರ ಮೇಲಿನ ಚಿತ್ರಗಳಿಂದಲೇ ಹೊರತು ಅದರ ಬರಹದಿಂದಲ್ಲ. ಬರಹ ಮಾತ್ರವಿರುವ ಸ್ಮಾರಕ ಶಿಲೆಗಳನ್ನು ವೀರಗಲ್ಲು, ಮಾಸ್ತಿಗಲ್ಲಿ ಎಂದು ಕರೆಯದೆ ಲಿಪಿಕಲ್ಲು ಅಥವಾ ಅಕ್ಷರದ ಕಲ್ಲು ಎಂದು ಗುರುತಿಸುತ್ತಾರೆ. ಈ ಒಂದು ಅಂಶದಿಂದಲೇ ನಾವು ಶಿಲ್ಪಿಗಳು ಬರಹದ ಜೊತೆಯಲ್ಲಿ ಶಿಲ್ಪಕ್ಕೂ ಏಕೆ ಪ್ರಾಮುಖ್ಯತೆ ನೀಡಿದರೆಂಬುದನ್ನು ತಿಳಿಯಬಹುದು.

ಅಕ್ಷರ ತಿಳಿಯದವರೂ ಕೂಡ ಶಿಲ್ಪವನ್ನು ನೋಡಿ, ತ್ಯಾಗ ಬಲಿದಾನವನ್ನು ಮಾಡಿದವರ ಉದಾತ್ತ ಮನಸ್ಸನ್ನು ಅರ್ಥಮಾಡಿಕೊಳ್ಳಲಿ, ಅದರಲ್ಲಿ ವ್ಯಕ್ತವಾದ ಮೌಲ್ಯವನ್ನು ತಿಳಿಯಲಿ, ಎಂಬ ಘನ ಉದ್ದೇಶದಿಂದ ಶಾಸನ ಶಿಲ್ಪಕ್ಕೆ ಪ್ರಾಮುಖ್ಯತೆಯನ್ನು ನೀಡಿದರು.

ಶಾಸನ ಶಿಲ್ಪದ ಬೆಳವಣಿಗೆಯನ್ನು ಗುರುತಿಸುವಲ್ಲಿ ದಾನಶಾಸನಗಳಿಗಿಂತಲೂ ಸ್ಮಾರಕ ಶಾಸನಗಳು ಹೆಚ್ಚು ನೆರವಾಗುತ್ತದೆ. ಈ ತುರುಗೊಳ್ ಶಾಸನಗಳು ಕರ್ನಾಟಕದ ಸಂದರ್ಭದಲ್ಲಿ ವಿವಿಧ ರಾಜರ ಆಡಳಿತಾವಧಿಯಲ್ಲಿ ಶಾಸನಗಳ ಪ್ರಾಮುಖ್ಯತೆ ಹೇಗೆ ಬದಲಾಯಿತು. ಶಾಸನ ಶಿಲ್ಪದ ಬೆಳವಣಿಗೆ ಹೇಗೆ ಪ್ರಾಮುಖ್ಯತೆ ಪಡೆಯಿತು ಎಂಬುದನ್ನು ಮುಂದಿನ ಹಂತದಲ್ಲಿ ಗಮನಿಸಲಾಗಿದೆ.

**ಅ. ಶಾತವಾಹನರು**

ಶಾತವಾಹನರ ಕಾಲದ ಕ್ರಿ.ಶ.೨ನೇ ಶತಮಾನದ ಸಿವಸಿರಿ ಪುಳುಮಾವಿ ಶಾಸನ, ಬನವಾಸಿಯ ಕ್ರಿ.ಶ. ೩ನೇ ಶತಮಾನದ ನಾಗಶಿಲಾಶಾಸನ, ಗುಲ್ಬರ್ಗ ಜಿಲ್ಲೆಯ ಬೆಳವಾಡಿಗೆ ಗ್ರಾಮದ ಕಲಕನ ಶಾಸನ, ಅದೇ ಜಿಲ್ಲೆಯ ಸನ್ನತಿ ಶಾಸನಗಳು ಕದಂಬರ ಶಾಸನಗಳಿಗೆ ಪ್ರೇರಣೆ ನೀಡಿದವು. ಇವರ ಕಾಲದಲ್ಲಿ ತುರುಗೊಳ್ ಶಾಸನಗಳು ಅಷ್ಟಾಗಿ ಬೆಳವಣಿಗೆ ಹೊಂದಿರಲಿಲ್ಲ ಎನ್ನಬಹುದು. ಆದರೆ ಶಾಸನಗಳ ಹಾಕಿಸುವ ಪದ್ಧತಿಯ ಆರಂಭದ ಹಂತ ಇದಾಗಿತ್ತು.

**ಆ. ಕದಂಬರು**

ಶಾತವಾಹನರ ಕಾಲದಲ್ಲಿ ಅರಳಲು ಪ್ರಾರಂಭಿಸಿದ ಶಾಸನ ಕಲೆಯು ಕದಂಬರ ಕಾಲದಲ್ಲಿ ಅಷ್ಟಾಗಿ ಬೆಳೆಯಲಿಲ್ಲ. ಇದಕ್ಕೆ ಕಾರಣಗಳೆಂದರೆ

೧. ಕದಂಬರ ಕಾಲದಲ್ಲಿ ಶಾಸನ ನೆಡುವ ಕ್ರಿಯೆ ಇನ್ನು ಸಾರ್ವತ್ರಿಕ ರೂಪ ಪಡೆಯದೇ ಇದ್ದದ್ದು.

೨. ಅರಮನೆಯಿಂದ ಪ್ರಕಟಗೊಂಡು ನಿರ್ಮಾಣವಾದ ಶಾಸನಗಳಲ್ಲಿ ವಿಷಯವನ್ನು ಹೇಳುವುದೇ ಮುಖ್ಯವಾಗಿತ್ತು.

೩. ಶಾಸನಗಳು ತನ್ನ ಅರ್ಥವ್ಯಾಪ್ತಿಯ ಮಿತಿಯಲ್ಲೇ ಪ್ರಕಟಗೊಂಡವು.

೪. ಶಾಸನಗಳೂ ಕಲೆಯ ಮಾಧ್ಯಮವಾಗಬಲ್ಲವು ಎಂಬ ಅರಿವು ಅವರಿಗೆ ಉಂಟಾಗದೇ ಇದ್ದದ್ದು.

ಈ ಕಾರಣಗಳಿಂದ ಕದಂಬರ ಕಾಲದಲ್ಲಿ ಶಾಸನಶಿಲ್ಪ ವಿಕಸನ ಹೊಂದದೇ ಹೋಯಿತು.

### ಇ. ಬಾದಾಮಿಯ ಚಾಲುಕ್ಯರು

ಬಾದಾಮಿ ಚಾಲುಕ್ಯರು ವಾಸ್ತುಶಿಲ್ಪದಲ್ಲಿ ಪ್ರಯೋಗಗಳನ್ನು ನಡೆಸಿ ಯಶಸ್ವಿಯಾದಂತೆ ಶಾಸನಶಿಲ್ಪಗಳಲ್ಲಿ ಯಶಸ್ವಿಯಾಗಲಿಲ್ಲ. ಅಲ್ಲದೆ ಇವರ ಕಾಲದ ಶಾಸನಗಳು ಹೆಚ್ಚಾಗಿ ದೇವಾಲಯದ ಗೋಡೆಗಳ ಮೇಲೆ ಹಾಗೂ ಕಂಬಗಳ ಮೇಲೆ ಪ್ರಕಟಗೊಂಡವು. ಹೀಗಾಗಿ ಆ ಸ್ಥಳದಲ್ಲೇ ತಮ್ಮ ಕೈ ಚಳಕವನ್ನು ತೋರಲು ಹಿಂಜರಿದರೆಂದು ಊಹಿಸಬಹುದು. ಬೆಳಗಲಿ ಗ್ರಾಮದ ಕೀರ್ತಿವರ್ಮನ ಶಾಸನ, ಬನ್ನಿಕೊಪ್ಪ ಗ್ರಾಮದ ವಿಜಯಾದಿತ್ಯನ ಶಾಸನ, ಎರಡನೆಯ ಪುಲುಕೇಶಿ, ವಿನಯಾದಿತ್ಯ, ವಿಜಯಾದಿತ್ಯ, ವಿಕ್ರಮಾದಿತ್ಯನ ಶಾಸನಗಳು ಮೊದಲಾದ ಶಾಸನಗಳು ಶಿಲ್ಪರಹಿತ ಶಾಸನಗಳಾಗಿವೆ. ಬಾದಾಮಿ ಚಾಲುಕ್ಯರ ಕಾಲದ ಸ್ಮಾರಕ ಶಿಲೆಗಳೂ ಸಹ ಶೈಲಿಯ ದೃಷ್ಟಿಯಿಂದ ಸಪ್ಪೆಯಾಗುತ್ತದೆ.

### ಈ. ರಾಷ್ಟ್ರಕೂಟ

ರಾಷ್ಟ್ರಕೂಟರ ಅವಧಿಯಲ್ಲಿ ಶಾಸನಶಿಲ್ಪ ಒಂದು ಹೆಜ್ಜೆ ಮುಂದುವರೆಯುವುದರ ಮೂಲಕ ಅದರ ಬೆಳವಣಿಗೆಗೆ ಚಾಲನೆ ಸಿಕ್ಕಿತು. ಸ್ಮಾರಕ ಶಿಲೆಗಳ ಶಿಲ್ಪವಂತೂ ರಾಷ್ಟ್ರಕೂಟರ ಕಾಲದಲ್ಲಿ ಆಶ್ಚರ್ಯಕರ ರೀತಿಯಲ್ಲಿ ಬೆಳವಣಿಗೆಯನ್ನು ಪಡೆದು, ವಿನ್ಯಾಸದಲ್ಲಿ ಹೊಸತನವನ್ನು ಪಡೆಯಿತು. ಇವರ ಕಾಲದ ಶಾಸನಗಳಲ್ಲಿ ಬಾದಾಮಿ ಚಾಲುಕ್ಯರ ಶಿಲ್ಪ ಶೈಲಿಯ ಪ್ರಭಾವವನ್ನು ಗುರುತಿಸಬಹುದು. ರಾಷ್ಟ್ರಕೂಟರ ಕಾಲದ ಬಹುತೇಕ ವೀರಗಲ್ಲುಗಳಲ್ಲಿ ವೀರನು ಸ್ವರ್ಗಕ್ಕೆ ಹೋಗುವ ಹಂತದಲ್ಲಿ, ಆಕಾಶದಲ್ಲಿ ಮೋಡಗಳ ನಡುವೆ ಹಾರುತ್ತಿರುವಂತೆ ಚಿತ್ರಿಸಲಾಗಿರುತ್ತದೆ. ಈ ರೀತಿಯ ಚಿತ್ರಣ ಬಾದಾಮಿಯ ಒಂದನೆ ಗುಹೆಯ ಮೇಲ್ಚಾವಣಿಯಲ್ಲಿ ಕಾಣಬಹುದು. ಇಲ್ಲಿ ಗಂಧರ್ವದಂಪತಿಗಳು ಮೋಡದ ನಡುವೆ ಹಾರುತ್ತಿರವ ಚಿತ್ರಣವಿದೆ. ಇದೇ ಚಿತ್ರಣದ ಪ್ರಭಾವವನ್ನು ರಾಷ್ಟ್ರಕೂಟರ ವೀರಗಲ್ಲುಗಳಲ್ಲಿ ಕಾಣುತ್ತೇವೆ. ರಾಷ್ಟ್ರಕೂಟರ ಕಾಲದ ಸ್ಮಾರಕ ಶಾಸನಗಳ ಮತ್ತೊಂದು ವೈಶಿಷ್ಟ್ಯವೆಂದರೆ, ಬೃಹದಾಕಾರ. ಅವು ಸುಮಾರು ೫ ರಿಂದ ೮ ಅಡಿಗಳ ಎತ್ತರದವರೆಗೂ, ಮೂರರಿಂದ ಆರುಅಡಿ ಅಗಲವಾಗಿಯೂ ಮತ್ತು ಒಂದೂವರೆ ಅಡಿ ದಪ್ಪವಾಗಿಯೂ ಇರುತ್ತವೆ. ಬೃಹದಾಕಾರವಾಗಿದ್ದರೂ ಕೂಡ ಶಿಲ್ಪದ ವಿವರಗಳನ್ನು, ಅವು ವ್ಯಕ್ತಪಡಿಸುವ ಭಾವನೆಗಳನ್ನು ಶಿಲ್ಪಿ ಸಮರ್ಥವಾಗಿ ಕಂಡರಿಸಿದ್ದಾನೆ. ಹೋರಾಟದ ಹಂತದಲ್ಲಿ ವೀರನ ಹಾಗೂ ಎದುರಾಳಿಯ ಜೊತೆಯ ಯೋಧರ ಸಂಖ್ಯೆ ಹೆಚ್ಚಾಗಿರುತ್ತದೆ. ಅಪ್ಸರೆಯರ ಹಾಗೂ ವಾದ್ಯಕಾರರ ಸಂಖ್ಯೆಯೂ ಹೆಚ್ಚಾಗಿರುತ್ತದೆ. ಅಪ್ಸರೆಯರ ಹೆಗಲಮೇಲೆ ಎರಡೂ ಕೈಗಳನ್ನು ಹಾಕಿಕೊಂಡು ವೀರನು ಮೋಡಗಳ ನಡುವೆ ಸ್ವರ್ಗಕ್ಕೆ ಹಾರುತ್ತಿರುವ ಚಿತ್ರಣ ಮುಂದಿನ ಅವಧಿಯ ಶಾಸನಗಳಲ್ಲಿ ಕಂಡುಬರುವುದಿಲ್ಲ. ಇವರ ಕಾಲದ ಮತ್ತೊಂದು ವಿಶೇಷವೆಂದರೆ ಶಾಸನಗಳಲ್ಲಿ ತಮ್ಮ ಅರಸೊತ್ತಿಗೆಯ ಲಾಂಛನವಾದ ನೇಗಿಲನ್ನು ಚಿತ್ರಿಸಿರುವುದು. ಹಿರೇಮಾಗಡಿ, ತಾಳಗುಂದ, ತತ್ತೂರು, ಮಾವಲಿ

ಮೊದಲಾದ ಗ್ರಾಮದ ಶಾಸನಗಳಲ್ಲಿ ನೇಗಿಲಿನ ಚಿತ್ರಣವಿದೆ. ಹೀಗೆ ರಾಷ್ಟ್ರಕೂಟರ ಕಾಲದಲ್ಲಿ ಶಾಸನ ಶಿಲ್ಪವು ಹಲವು ವೈಶಿಷ್ಟ್ಯಗಳಿಂದ ಕೂಡಿ, ಒಂದು ನಿರ್ದಿಷ್ಟ ರೂಪವನ್ನು ಪಡೆಯಲು ಪ್ರಯತ್ನಿಸಿತು. ತುರುಗೊಳ್ ಶಾಸನ ಶಿಲ್ಪಗಳೂ ವೈವಿಧ್ಯತೆಯ ದೃಷ್ಟಿಯಿಂದಅಲಂಕಾರಿಕ ರೂಪವನ್ನು ಪಡೆದು ಶಾಸನಗಳು ಸೌಂದರ್ಯವನ್ನು ಹೊಂದಿದವು.

**ಉ. ಗಂಗರು**

ಕೋಲಾರ, ಬೆಂಗಳೂರು ಮತ್ತು ತುಮಕೂರು ಪ್ರದೇಶದ ಪರಿಸರದಲ್ಲಿ ದೊರೆಯುವ ಗಂಗರ ಶಾಸನಗಳು ಶಾಸನ ಶಿಲ್ಪದ ಬೆಳವಣಿಗೆಯಲ್ಲಿ ಮೊದಲ ಹೆಜ್ಜೆಗಳೆಂದು ಹೇಳಬಹುದು. ಕ್ರಿ.ಶ.೯ ಮತ್ತು ೧೦ನೇ ಶತಮಾನದಲ್ಲಿ ದೊರೆಯುವ ರಾಷ್ಟ್ರಕೂಟರ ಶಾಸನಶಿಲ್ಪ ಮುಂದುವರೆದು ಶೈಲಿಯಾಗಿರುವುದು ಕಂಡುಬರುತ್ತದೆ. ಗಂಗರ ಕಾಲದ ಸ್ಮಾರಕ ಶಿಲೆಗಳ ಚಿತ್ರಣದಲ್ಲಿ ಒಂದು ನಿಶ್ಚಿತ ಕ್ರಮವಿಲ್ಲ. ಅಲ್ಲದೆ ಅವರು ಬಳಸಿರುವ ಶಿಲೆಯೂ ಒರಟು ಹಾಗೂ ಆ ಶಿಲೆಗಳೂ ಇಂತಹದ್ದೇ ಆಕಾರದಲ್ಲಿರಬೇಕು ಎಂಬ ನಿಯಮವೂ ಇಲ್ಲ. ವೀರನನ್ನು ದೊಡ್ಡದಾಗಿ ಚಿತ್ರಿಸಿ ಮಿಕ್ಕ ವಿವರಗಳನ್ನು ಯಾವುದಾದರೂ ಒಂದು ಮೂಲೆಯಲ್ಲಿ ಚಿಕ್ಕದಾಗಿ ಚಿತ್ರಿಸಿರುತ್ತಾರೆ. ವೀರನ ಕೈಯಲ್ಲಿ ಬಿಲ್ಲು ಅಥವಾ ಬಾಕುವನ್ನು ಚಿತ್ರಿಸಿರುತ್ತಾರೆ. ತಲೆಯ ಕೂದಲನ್ನು ನೆತ್ತಿಯ ಮೇಲೆ ದುಂಡಾಗಿ ಗಂಟುಹಾಕಿದ್ದು, ಆ ಗಂಟನ್ನು ಬಟ್ಟೆಯ ಪಟ್ಟಿಯಿಂದ ಬಿಗಿದುಕೊಂಡಿರುವಂತೆ ಕಾಣುತ್ತದೆ.[೧೧೦]

**ಊ. ಚಾಲುಕ್ಯ**

ಕಲ್ಯಾಣ ಚಾಲುಕ್ಯ ಹಾಗೂ ಕಲಚೂರಿಗಳ ಕಾಲದ ಶಾಸನಶಿಲ್ಪಗಳು ಬಹುತೇಕವಾಗಿ ಒಂದೇ ರೀತಿಯಲ್ಲಿರುತ್ತವೆ. ಈ ಅವಧಿಯಲ್ಲಿ ದಾನ ಶಾಸನಗಳ ಮೇಲ್ಭಾಗ ಒಂದು ನಿಶ್ಚಿತ ರೂಪವನ್ನು ಪಡೆಯಿತು. ಅಲ್ಲದೆ ಈ ಅವಧಿಯಲ್ಲಿ ಶಾಸನ ನೆಡೆಸುವ ಪದ್ಧತಿ ಸರ್ವವ್ಯಾಪಿಯಾಯಿತು. ರಾಜರು ಮತ್ತು ಪ್ರಮುಖರು ಮಾತ್ರವೇ ಶಾಸನ ನೆಡಿಸಬೇಕೆಂಬ ಪದ್ಧತಿ ಬದಲಾಗಿ ಜನಸಾಮಾನ್ಯರು ಶಾಸನ ಹಾಕಿಸುವುದಕ್ಕೆ ಮುಂದಾದರು. ಹೀಗಾಗಿ ಶಾಸನಗಳ ಸಂಖ್ಯೆ ಹೆಚ್ಚಿತು. ವೈವಿಧ್ಯತೆಯುಳ್ಳ ವಿಷಯಗಳು ಶಾಸನದಲ್ಲಿ ಸ್ಥಾನ ಪಡೆದವು. ಸಮಾಜದಲ್ಲಿದ್ದ ವಿವಿಧ ಪದ್ಧತಿಗಳು ಈ ಅವಧಿಯಲ್ಲಿ ಕಾಣಿಸಿಕೊಂಡವು. ಸ್ಮಾರಕ ಶಿಲೆಗಳ ಹಂತ ಹಂತಗಳಲ್ಲಿ ವಿಷಯ ನಿರೂಪಣಾ ಪದ್ಧತಿ ಬೆಳೆದು ಬಂದಿತು. ಘಟನೆಯ ಚಿತ್ರಣಕ್ಕೆ ನೈಜತೆಯನ್ನು ತರಲು ಪ್ರಯತ್ನಿಸಲಾಯಿತು. ವಿಷಯವನ್ನು ಕಾವ್ಯಾತ್ಮಕವಾಗಿ ನಿರೂಪಣೆ ಮಾಡುವುದರ ಜೊತೆಗೆ ಶಾಸನಗಳನ್ನು ಕಲಾತ್ಮಕವಾಗಿ ಕಾಣುವಂತೆ ಮಾಡಲು ಪ್ರಯತ್ನಿಸಿದರು. ಒಂದೊಂದು ಶಾಸನ ಪ್ರಕಾರಕ್ಕೂ ಒಂದೊಂದು ಸೂತ್ರವನ್ನು ಅನುಸರಿಸಿದರು. ತುರುಗೊಳ್ ವೀರಗಲ್ಲುಗಳ ಹೋರಾಟದ ಹಂತದಲ್ಲಿ ವೀರನ ಹಿಂಭಾಗದಲ್ಲಿ

ದನಗಳನ್ನು ಕಡ್ಡಾಯವಾಗಿ ಚಿತ್ರಿಸುತ್ತಿದ್ದರು. ಇದರಿಂದ ಶಾಸನವಿಲ್ಲದಿದ್ದರೂ ಅದರ ಶಿಲ್ಪದ ಆಧಾರದಿಂದ ಈ ವೀರಗಲ್ಲು ತುರುಗೊಳ್ ಯುದ್ಧದ ವೀರಗಲ್ಲೆಂದು ಗುರುತಿಸಲು ಸುಲಭವಾಗುವಂತೆ ಚಿತ್ರಿಸಿರುವುದು ವಿಶೇಷವಾಗಿದೆ.

ಈ ಕಾಲದ ವೀರಗಲ್ಲುಗಳಲ್ಲಿ ವೀರನನ್ನು ಚಿತ್ರಿಸುವ ರೀತಿ ಬದಲಾಗಿರುವುದನ್ನು ಗಮನಿಸಬಹುದು. ವೀರನ ಜೊತೆ ಅನ್ಯ ವಿವರಗಳಿಗೂ ಆಸ್ಪದ ನೀಡಲಾಯಿತು. ಇದರ ಫಲವಾಗಿ ಕೆಲವು ವೀರಗಲ್ಲುಗಳಲ್ಲಿ ವೀರನಷ್ಟೇ ಪ್ರಾಧಾನ್ಯವನ್ನು ವೈರಿಗಳಿಗೂ ನೀಡಿದರು. ಸೈನಿಕರನ್ನು, ಮಹಾಸತಿಯರನ್ನು ವೀರನಿಗೆ ಸರಿಸಮವಾಗಿ ಚಿತ್ರಿಸುವ ಪರಿಪಾಠ ಆರಂಭವಾಯಿತು. ಈ ಪರಿಪಾಠ ಶಾಸನಶಿಲ್ಪಗಳ ಆರೋಗ್ಯಪೂರ್ಣ ಬೆಳವಣಿಗೆಗೆ ನಾಂದಿಯಾಯಿತು. ತುರುಗಾಳಗದ ಸಮಯದಲ್ಲಿ ದನಗಳನ್ನು ಅಹರಿಸುವ ಚಿತ್ರಣದ ಜೊತೆಗೆ ಸ್ತ್ರೀ ಮಾನಭಂಗದ ಪ್ರಯತ್ನಗಳನ್ನೂ ನೋಡುಗನಿಗೆ ಕಟ್ಟಿಕೊಡುವ ಚಿತ್ರಣವೂ ಇರುತ್ತದೆ. ಉದಾಹರಣೆಗೆ ಅಬ್ಬಲೂರು, ಮಳವಳ್ಳಿ, ಹಿರೇಜಂಬೂರು, ಅಡಗಂಟಿ, ಶಾಸನಗಳನ್ನು ಗಮನಿಸಬಹುದು. ಈ ಎಲ್ಲ ಪ್ರಯತ್ನಗಳೂ ಶಾಸನಗಳಲ್ಲಿ ಕಲೆಗಾರಿಕೆ, ಕಲಾತ್ಮಕತೆ ಮೈದಾಳಲು ಸಹಾಯಮಾಡಿತು.

**೩. ಹೊಯ್ಸಳರ ಕಾಲ**

ಕಲ್ಯಾಣ ಚಾಲುಕ್ಯರ ಹಾಗೂ ಕಲಚೂರಿಗಳ ಕಾಲದಲ್ಲಿ ಬೆಳೆದ ಶಾಸನಶಿಲ್ಪದ ಕಲೆಗಾರಿಕೆ, ಹೊಯ್ಸಳರ ಕಾಲಕ್ಕೆ ಸೂಕ್ಷ್ಮತೆಯ ಪರಾಕಾಷ್ಠೆಯನ್ನು ಮುಟ್ಟಿತು. ದೇವಾಲಯಗಳ ಶಿಲ್ಪಗಳಂತೆ ಶಾಸನಗಳ ಶಿಲ್ಪವೂ ಕೂಡ ಸೂಕ್ಷ್ಮ ಕೆತ್ತನೆಯಿಂದ ನಿರ್ಮಾಣವಾಗತೊಡಗಿತು. ಉಡುಪು, ಆಭರಣ, ಕೇಶಶೃಂಗಾರ, ಭಾವ–ಭಂಗಿಗಳು ಪ್ರಧಾನ ಸ್ಥಾನ ಪಡೆದವು. ಗಾಂಭೀರ್ಯತೆಗಿಂತಲೂ ಸೂಕ್ಷ್ಮ ಕಲೆಗಾರಿಕೆಗೆ ಮಹತ್ವ ಉಂಟಾಯಿತು. ಇವರ ಲಾಂಛನವಾದ ಹುಲಿಯನ್ನು ಕೊಲ್ಲುತ್ತಿರುವ ಸಳನ ಚಿತ್ರವು ಬಹುತೇಕ ದೇವಾಲಯಗಳ ಗೋಪುರದ ಮುಂಭಾಗದಲ್ಲಿ ಕಂಡುಬರುತ್ತದೆ. ಗಂಗರ ಕಾಲದಲ್ಲಿ ಅವರ ರಾಜಲಾಂಛನವಾದ ಆನೆಯಚಿತ್ರಣವು ಅವರ ಶಿಲಾಶಾಸನ ಹಾಗೂ ತಾಮ್ರದ ಉಂಗುರದ ಮೇಲೆ ಇದೆ. ಕದಂಬರ ಕಾಲದ ಉಂಗುರ, ತಾಮ್ರ ಶಾಸನಗಳಲ್ಲಿ ಸಿಂಹಲಾಂಛನ, ರಾಷ್ಟ್ರಕೂಟರ ಶಾಸನಗಳ ಮೇಲೆ ನೇಗಿಲು ಮತ್ತು ವಿಜಯನಗರ ಅರಸರ ಕೆಲವು ಶಾಸನಗಳಲ್ಲಿ ವರಾಹದ ಚಿನ್ಹೆ ಕಾಣಬರುತ್ತದೆ. **ಯಾಳಿ(ಸಿಂಹಮುಖ)**ವಿಶೇಷವಾಗಿ ಹೊಯ್ಸಳ ಶಾಸನಗಳಲ್ಲಿ ಅಲಂಕಾರಿಕ ಲಾಂಛನವಾಗಿ ಬಳಕೆಯಾಯಿತು.

**೪. ವಿಜಯನಗರ**

ವಿಜಯನಗರ ಅರಸರ ಕಾಲದಲ್ಲಿ ಹೊಯ್ಸಳರ ಸೂಕ್ಷ್ಮ ಶೈಲಿಯು ಬದಲಾಗಿ ಒರಟುತನ ಪ್ರಧಾನವಾಯಿತು. ಶಾಸನಗಳಲ್ಲಿ ಶಿಲ್ಪವನ್ನು ಸೂಕ್ಷ್ಮವಾಗಿ ಚಿತ್ರಿಸುವ ಗೋಜಿಗೆ ಹೋಗದೆ

ಸ್ಥೂಲವಾಗಿ ಚಿತ್ರಿಸುವ ವಿಧಾನ ಬೆಳೆಯಿತು. ಕಲೆಗಾರಿಕೆ ಗೌಣವಾಗಿ, ವಿಷಯವನ್ನು ತಿಳಿಸುವುದೇ ಮುಖ್ಯ ಕೆಲಸವಾಯಿತು. ದಾನಶಾಸನಗಳಲ್ಲಿ ಧಾರ್ಮಿಕ ಚಿನ್ಹೆಗಳನ್ನು, ಮಹಾಸತಿ ಶಾಸನಗಳಲ್ಲಿ ಸತಿಯನ್ನು ಅಥವಾ ಅವಳ ತೋಳನ್ನು ವೀರಗಲ್ಲುಗಳಲ್ಲಿ ವೀರ ಹಾಗೂ ಎದುರಾಳಿಯನ್ನು ಮಾತ್ರ ಚಿತ್ರಿಸುವ ರೂಢಿ ಬೆಳೆಯಿತು. ಅಲ್ಲದೆ ಲಿಪಿಯಿಲ್ಲದ ಸ್ಮಾರಕ ಶಿಲೆಗಳು ಸಂಖ್ಯೆಯಲ್ಲಿ ಹೆಚ್ಚಾದವು. ಈ ಕಾಲದಲ್ಲಿ ಶಾಸನ ಕಲೆಯು ಅವನತಿಯ ಹಾದಿ ಹಿಡಿದು, ಶಾಸನ ನೆಡುವ ಪದ್ಧತಿ ಕೇವಲ ಒಂದು ಸಂಪ್ರದಾಯವಾಗಿ ಬೆಳೆಯಿತು.

**ಎ. ತುರುಗೊಳ್ ಶಾಸನಶಿಲ್ಪ**

ಕರ್ನಾಟಕದ ಶಾಸನಗಳ ಪ್ರಕಾರಗಳಲ್ಲಿ ವೀರಗಲ್ಲುಗಳ ಸಂಖ್ಯೆಯೇ ಅಧಿಕವಾದುದು. ಇವುಗಳ ಶಿಲ್ಪವನ್ನು ಶಾಸನಸಹಿತ ಶಿಲ್ಪ ಮತ್ತು ಶಾಸನರಹಿತ ಶಿಲ್ಪವೆಂದು ಎರಡು ಭಾಗ ಮಾಡಬಹುದು. ಶಾಸನ ಇರಲಿ ಅಥವಾ ಇಲ್ಲದಿರಲಿ ಆ ವೀರಗಲ್ಲಿನ ಉದ್ದೇಶ ಒಂದೇ ಆಗಿರುತ್ತದೆ. ಶಿಲ್ಪದ ಆಧಾರದಿಂದ ಹಲವು ವಿಧವಾಗಿ ವಿಂಗಡಿಸಿ ಅಧ್ಯಯನ ಮಾಡಬಹುದು. ವ್ಯಕ್ತಿ-ವ್ಯಕ್ತಿಗಳ ಹೋರಾಟ ಶಿಲ್ಪ, ವ್ಯಕ್ತಿ ಪ್ರಾಣಿಗಳ ಹೋರಾಟ ಶಿಲ್ಪ, ವೀರಸ್ಥಂಭಗಳ ಶಿಲ್ಪ ಎಂದು ವಿಭಾಗಿಸಿಕೊಳ್ಳಬಹುದು. ಇಲ್ಲಿ ಮುಖ್ಯವಾಗಿ ವ್ಯಕ್ತಿ-ವ್ಯಕ್ತಿಗಳ ಹೋರಾಟ ಶಿಲ್ಪವನ್ನು ಗಮನಿಸಿದಾಗ ಇದರಲ್ಲಿ ತನ್ನ ಪ್ರಾಣ ರಕ್ಷಣೆಗಾಗಿಯೊ ಅಥವಾ ಆಸ್ತಿ, ಸ್ತ್ರೀ, ದನಕರುಗಳ ರಕ್ಷಣೆಗಾಗಿ ಶತ್ರುಗಳ ಜೊತೆ ಹೋರಾಡುತ್ತಿರುವುದನ್ನು ಸೂಚಿಸುವ ಶಿಲ್ಪಗಳು ಬಹು ಸಂಖ್ಯೆಯಲ್ಲಿ ಕಂಡುಬರುತ್ತವೆ. ಇವುಗಳನ್ನು ಅಧ್ಯಯನದ ದೃಷ್ಟಿಯಿಂದ ತುರುಗೊಳ್‌ಶಿಲ್ಪ, ಪೆಣ್ಬುಯ್ಯಲ್ ಶಿಲ್ಪ, ಊರಳಿವು ಶಿಲ್ಪ, ಗಡಿಕಾಳಗ ಶಿಲ್ಪ ಹಾಗೂ ಕಳ್ಳರೊಡನೆ ಹೋರಾಟದ ಶಿಲ್ಪ ಎಂದು ವಿಭಾಗಿಸಲಾಗಿದೆ. ಇದರಲ್ಲಿ ಮುಖ್ಯವಾಗಿ ತುರುಗೊಳ್ ಶಿಲ್ಪವನ್ನು ಗಮನಿಸಬಹುದು.

ಆ ಕಾಲದಲ್ಲಿ ತುರುಗಳನ್ನು ರಕ್ಷಿಸುವುದು, ಸ್ತ್ರೀಯರ ಮಾನ ಕಾಪಾಡುವುದು, ಊರುಗಳನ್ನು ರಕ್ಷಿಸುವುದು, ಗಂಡಸರ ಪರಮ ಕರ್ತವ್ಯವಾಗಿತ್ತೆಂದು ತಿಳಿದುಬರುತ್ತದೆ. ಯಾವ ಕಾರಣದಿಂದಲಾದರೂ ಶತ್ರುಗಳು ದನಗಳನ್ನು ಅಪಹರಿಸಿದಾಗ ಆ ದನಗಳನ್ನು ರಕ್ಷಿಸಿಕೊಳ್ಳಲು ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದರು. ಆ ಹೋರಾಟದಲ್ಲಿ ಕೆಲವರು ಗೆದ್ದು ಹಿಂತಿರುಗಿ ಬಂದರೆ ಮತ್ತೆ ಕೆಲವರು ಸಾವನ್ನಪ್ಪುತ್ತಿದ್ದರು. ಇಂಥಹ ವೀರರ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲುಗಳನ್ನು ನಾವು ಸುಲಭವಾಗಿ ಗುರುತಿಸಬಹುದು. ವೀರಗಲ್ಲುಗಳ ಹೋರಾಟದ ಹಂತದ ಶಿಲ್ಪದಲ್ಲಿ ಯಾವುದಾದರೂ ಒಂದು ಕಡೆ ಕೆಲವು ದನಗಳು ನಿಂತಿರುವಂತೆ ಚಿತ್ರಿಸಿರುತ್ತಾರೆ. ಆರಂಭಕಾಲದ ವೀರಗಲ್ಲುಗಳಲ್ಲಿ ವೀರನ ಸಮೀಪ ಸಣ್ಣದಾಗಿ ದನಗಳ ಚಿತ್ರವನ್ನು ಬಿಡಿಸುವ ಪದ್ಧತಿಯಿದ್ದು, ಒಂದೇ ಹಂತದಲ್ಲಿ ಶಿಲ್ಪವಿರುತ್ತಿತ್ತು. ನಂತರದ ಕಾಲದ ವೀರಗಲ್ಲುಗಳಲ್ಲಿ ಎರಡರಿಂದ ನಾಲ್ಕು ಹಂತದವರೆಗೆ

ಶಿಲ್ಪವಿದ್ದು ಹೋರಾಟದ ಹಂತದಲ್ಲಿ ದನಗಳು ಸಾಲಾಗಿ ನಿಂತಿರುವಂತೆ ಬಿಡಿಸಲಾಗಿರುತ್ತದೆ. ಶಿವಮೊಗ್ಗ ಜಿಲ್ಲೆಯ ಕೆಲವು ಶಾಸನಗಳನ್ನು ಗಮನಿಸೋಣ. ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲೂಕಿನ ಅಡಗಂಟಿಯ ಶಾಸನ ೬ ಅಡಿ ಎತ್ತರವಿದ್ದು, ೪ ಅಡಿಗಳಷ್ಟು ಅಗಲ, ಅರ್ಧ ಅಡಿ ದಪ್ಪವಿದೆ. ಶಾಸನದ ಕೆಳಭಾಗದ ಹೋರಾಟದ ಚಿತ್ರಣದಲ್ಲಿ ವೀರ ಭರ್ಚಿಯಿಂದ ಶತ್ರುಗಳನ್ನು ಇರಿಯುವಂತೆ ಚಿತ್ರಿಸಲಾಗಿದೆ. ವೀರನಕಾಲ ಅಡಿಯಲ್ಲಿ ಹೆಣಗಳನ್ನು ಚಿತ್ರಿಸಲಾಗಿದೆ. ಆನಂತರದ ಪಟ್ಟಿಯಲ್ಲಿ ವೀರನನ್ನು ದೇವತೆಗಳು ಎತ್ತಿಕೊಂಡು ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಮೇಲ್ಭಾಗವನ್ನು ಎಡಗಡೆ ವೀರ ಕುಳಿತಿರುವಂತೆಯೂ, ಪಕ್ಕದಲ್ಲಿ ಯತಿಯೊಬ್ಬ ಶಿವಪೂಜೆ ಮಾಡುತ್ತಿರುವಂತೆಯೂ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಕೆತ್ತಲಾಗಿದ್ದು, ತುರುಗೊಳ್ ಹಾಗೂ ಪೆಣ್ಬುಯ್ಯಲ್ ಎರಡಕ್ಕೂ ಉದಾಹರಣೆಯಾಗಿದೆ.[೧೧೧]

ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕು ಬಂದಳಿಕೆ ಗ್ರಾಮದ ಶಾಸನಗಳು ಸುಂದರವಾಗಿವೆ. ಒಂದು ಶಾಸನದಲ್ಲಿ ಕೆಳಭಾಗದ ಹೋರಾಟದ ಚಿತ್ರಣದ ಭಾಗದಲ್ಲಿ ಹಸುಗಳನ್ನು ಹಿಂದೆ ಇಟ್ಟುಕೊಂಡು ಕುದುರೆಯ ಮೇಲೆ ಕುಳಿತವರೊಂದಿಗೆ ನೆಲದಲ್ಲಿ ನಿಂತೇ ವೀರ ಹೋರಾಡುತ್ತಿದ್ದಾನೆ. ಇದು ಕೋಟೆಯಲ್ಲಿ ನಡೆದ ಕದನ ಎಂಬುದುಕ್ಕೆ, ಮೇಲ್ಭಾಗಕ್ಕೆ ಕೋಟೆಯ ತುದಿಗಳನ್ನು ಚಿತ್ರಿಸಿರುವುದು ಸಾಕ್ಷಿಯಾಗಿದೆ. ಶತ್ರುವಿನ ರುಂಡ ಇಲ್ಲದ ಮುಂಡ ಒಂದು ವೀರನ ಕಾಲಿನ ಕೆಳಗೆ ಬಿದ್ದಿದೆ. ಎರಡನೆಯ ಹಂತದ ಚಿತ್ರಣದಲ್ಲಿ ವೀರನನ್ನು ಮಂಟಪದಲ್ಲಿ ಕೂರಿಸಿಕೊಂಡು ನಾಲ್ಕು ಜನ ದೇವಕನ್ನೆಯರು ಗಾಳಿಯಲ್ಲಿ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಅದೇ ಭಾಗದ ಮಂಟಪದ ಮೇಲ್ಭಾಗದಲ್ಲಿ ವಾದ್ಯಗಾರರನ್ನು ಚಿತ್ರಿಸಲಾಗಿದೆ. ಮೂರನೆ ಹಂತದ ಮೇಲ್ಭಾಗದಲ್ಲಿ ಮಂಟಪ ಚಿತ್ರಿಸಿ ಶಿವಪೂಜೆ ನಡೆಯುತ್ತಿರುವಂತೆಯೂ, ಎಡಗಡೆ ವೀರ ಕುಳಿತಿದ್ದಾನೆ. ಬಲಗಡೆಯಲ್ಲಿ ನಂದಿ ವಿಗ್ರಹವನ್ನು ಕೆತ್ತಲಾಗಿದೆ. ಹೋರಾಟದ ಭಾಗದಲ್ಲಿ ಕುದುರೆಯಲ್ಲಿ ಕೂತ ವೀರರ ಹಾಗೂ ಶತ್ರುಗಳ ಭಂಗಿಗಳಿಗಿರುವ ವೇಗವೇ ಯುದ್ಧದ ಭೀಕರತೆಯನ್ನು ವರ್ಣಿಸುತ್ತವೆ.[೧೧೨]

ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಹೊಸಗುಂದದ ತುರುಗೊಳ್ ವೀರಗಲ್ಲು ಶಿಲ್ಪದ ದೃಷ್ಟಿಯಿಂದ ಅದ್ಭುತವಾಗಿದೆ. ಕೆಳಭಾಗದ ಮೊದಲ ಭಾಗದಲ್ಲಿ ಹಸುಗಳನ್ನು, ಸ್ತ್ರೀಯರನ್ನು ಹಿಂದೆ ಮಾಡಿಕೊಂಡು ಹೋರಾಡುತ್ತಿರುವ ವೀರ ಒಬ್ಬ ರಾಜ ಎಂಬುದನ್ನು ಅವನ ತಲೆಯ ಮೇಲೆ ಚಿತ್ರಿಸಿರುವ ರಾಜಛತ್ರ ತಿಳಿಸುತ್ತದೆ. ವೀರನ ಮುಂದಿನ ಕಾಲಿನ ಬುಡದಲ್ಲಿ ಹೆಣಗಳ ರಾಶಿ ಬಿದ್ದಿರುವಂತೆ ಚಿತ್ರಿಸಲಾಗಿದೆ. ಶತ್ರುಗಳ ಕೈಯಲ್ಲಿ ಉದ್ದದ ಆಯುಧಗಳಿವೆ. ಎರಡನೆಯ ಪಟ್ಟಿಯನ್ನು ಮತ್ತೊಮ್ಮೆ ಭೀಕರ ಯುದ್ಧದ ವರ್ಣಣೆಗೆ ಮೀಸಲಿಟ್ಟಿರುವುದು ತುರುಗೊಳ್ ಶಾಸನಗಳಲ್ಲೇ ವಿಶೇಷವಾಗಿದೆ. ಇಲ್ಲಿ ಸಾಲು ಹೆಣಗಳನ್ನು ಮೊದಲು ಚಿತ್ರಿಸಿ ಆ ಹೆಣಗಳ

ಮೇಲೆ ವಾದ್ಯಗಳನ್ನು ನುಡಿಸುತ್ತಿರುವಂತೆ, ಗುರಾಣಿಗಳನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಅವರ ತಲೆಯ ಮೇಲೆ ಒಂದು ಮಾನವನ ಕತ್ತರಿಸಿದ ಅಂಗಾಂಗಗಳನ್ನೇ ಸಾಲು ಎಂಬಂತೆ ಕಲಾತ್ಮಕವಾಗಿ ಯುದ್ಧದ ಭೀಕರತೆಯನ್ನು ಸಾರುವಂತೆ ಮಾನವ ಕೈಕಾಲು ಕತ್ತರಿಸಿದ ಹೊಟ್ಟೆಗಳನ್ನು ಚಿತ್ರಿಸಲಾಗಿದೆ. ಅದೇ ಚೌಕದ ಬಲಪಾರ್ಶ್ವದಲ್ಲಿ ವೀರ ಸೈನಿಕರ ಬಿಲ್ಲುಬಾಣಗಳನ್ನು ಕುದುರೆಯ ಮೇಲೆ ಕೂತ ಯೋಧ ರಾಜ ಛತ್ರಿ ಹಿಡಿಸಿಕೊಂಡು, ಭರ್ಜಿಯನ್ನು ವೀರನ ಕಡೆಗೆ ಎಸೆಯುತ್ತಿದ್ದಾನೆ. ಇಲ್ಲಿಯೂ ಒಂದು ಅರ್ಧ ಭಾಗ ಎಡದಿಂದ ಅಟ್ಟದಂತೆ ನಿರ್ಮಿಸಿ ಅದರ ಮೇಲೆ ಹಸುಗಳನ್ನು ಬೆನ್ನಹಿಂದೆ ಮಾಡಿಕೊಂಡು ರಾಜ ಛತ್ರಿಯನ್ನು ಹೊಂದಿ ವೀರ ಹೋರಾಡುತ್ತಿದ್ದಾನೆ. ಆ ಯುದ್ಧದ ಮಾನವನ ಅಂಗಾಂಗಗಳ ಸಾಲಿನಲ್ಲಿ ಖಡಿಖಂಡವಾಗಿ ಬಿದ್ದಿರುವ ದೇಹದ ಕರುಳುಗಳನ್ನು ಒಂದು ಪ್ರಾಣಿ(ನಾಯಿಯಂತೆ ಕಾಣುತ್ತದೆ)ಕಿತ್ತು ತಿನ್ನುತ್ತಿರುವುದು ಯುದ್ಧದ ಭೀಕರತೆಗೆ ಸಾಕ್ಷಿಯಾಗಿದೆ. ಇಲ್ಲಿಯೂ ಹಸುಗಳೊಂದಿಗೆ ಮಕ್ಕಳನ್ನು ಎತ್ತಿಕೊಂಡಿರುವ ತಾಯಂದಿರನ್ನು ಚಿತ್ರಿಸಿರುವುದು ಪೆಣ್ಬುಯ್ಯಲ್‌ಗೂ ಸಾಕ್ಷಿಯಾಗಿದೆ. ನಂತರದ ಪಟ್ಟಿಯಲ್ಲಿ ೯ ಜನ ವಾದ್ಯಕಾರರು ಡೋಲು, ತಾಳ, ಜಾಗಟೆ, ಬೊಂಬಿನ ವಾದ್ಯಗಳನ್ನು ಹಿಡಿದು ವೀರನನ್ನು ಸ್ವಾಗತಿಸಲು ನಿಂತಿದ್ದಾರೆ. ನಂತರದ ಪಟ್ಟಿಯ ಮಧ್ಯಭಾಗದಲ್ಲಿ ಮಂಟಪದಲ್ಲಿ ಕೂತ ವೀರನನ್ನು ಚಿತ್ರಿಸಿ ಅದನ್ನು ದೇವಕನ್ನೆಯರು ಹಿಡಿದಿರುವಂತೆಯೂ ಅದೇ ಮಂಟಪದ ಎಡಬಲಗಳಲ್ಲಿ ದೇವತಾ ಸ್ತ್ರಿಯರು ವೀರನನ್ನು ಸ್ವಾಗತಿಸಲು ನಿಂತಿರುವಂತೆ ಚಿತ್ರಿಸಿದ್ದಾರೆ. ನಂತರದ ಹಂತದಲ್ಲಿ ಮಧ್ಯ ಒಂದು ಮಂಟಪದಲ್ಲಿ ಲಿಂಗವನ್ನು ಪೂಜಿಸುವ ಯತಿ, ಹಾಗೂ ಕೈಮುಗಿದು ನಿಂತಿರುವ ವೀರನನ್ನು ಸಣ್ಣದಾಗಿ ಚಿತ್ರಿಸಿದ್ದಾರೆ. ಈ ಮಂಟಪದ ಎಡಭಾಗದಲ್ಲಿ ವೀರನು ವಜ್ರಾಸನದಲ್ಲಿ ಕೈಮುಗಿದು ಕುಳಿತಿರುವಂತೆಯೂ, ಮಂಟಪದ ಬಲಗಡೆ ನಂದಿಯನ್ನು, ಹೋರಾಡಲು ಸಿದ್ಧವಾಗಿರುವ ಯೋಧನನ್ನು ಚಿತ್ರಿಸಿದ್ದಾರೆ. ಇಡೀ ಶಾಸನಶಿಲ್ಪವೇ ಬೇರೆ ಶಾಸನಗಳಿಗಿಂತ ಭಿನ್ನವೂ ೭ ಅಡಿಗಳಷ್ಟು ಎತ್ತರವೂ ಆಗಿದ್ದು, ಬೃಹತ್ ಗಾತ್ರದ ಈ ಶಾಸನ ಹೊಸಗುಂದದ ವಿಶೇಷ.[೧೧೩]

ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಕುಬಟೂರು ಶಾಸನ ವಿಶೇಷ ಶಾಸನಶಿಲ್ಪ ಎನ್ನಬಹುದು. ಒಂದೇ ಶಾಸನದಲ್ಲಿ ಎರಡು ಜನ ವೀರರ ಹೋರಾಟವನ್ನು ಎಡಬಲಗಳಲ್ಲಿ ಪಟ್ಟಿಯಂತೆ ಕಂಡ್ರಿಸಿರುವುದು ವಿಶೇಷವಾಗಿದೆ. ಶಾಸನದಲ್ಲಿ ಕೆಳಭಾಗದ ಚಿತ್ರಗಳಲ್ಲಿ ಎರಡು ಜನ ವೀರರು ತುರುಗಳನ್ನು ಹಿಂದಿಟ್ಟು ಬೃಹತ್ ಬಿಲ್ಲುಗಳನ್ನು ಹಿಡಿದು ಹೋರಾಡುತ್ತಿರುವಂತೆ, ಆ ವೀರನನ್ನು ಮಂಟಪದಲ್ಲಿ ಕೂರಿಸಿ ಒಯ್ಯುತ್ತಿರುವಂತೆ, ಇಬ್ಬರೂ ಶಿವಲಿಂಗದ ಬಳಿ ಯತಿಗಳು ಪೂಜಿಸುತ್ತಿರುವಾಗ ವೀರ ಕೈಮುಗಿದು ಕೂತಿರುವಂತೆ ಪ್ರತ್ಯೇಕವಾಗಿ ಚಿತ್ರಿಸಿದ್ದಾರೆ. ಇಬ್ಬರಿಗೂ ಸೂರ್ಯಚಂದ್ರರನ್ನು ಪ್ರತ್ಯೇಕವಾಗಿ ಚಿತ್ರಿಸಿದ್ದಾರೆ.[೧೧೪]

ಸೊರಬ ತಾಲೂಕಿನ ಕೋಟಿಪುರದ ತುರುಗೊಳ್ ಶಾಸನಶಿಲ್ಪವನ್ನು ಗಮನಿಸಿದಾಗ ಕೆಳಭಾಗದಲ್ಲಿ ಸಾಲಾಗಿ ಗೋವುಗಳನ್ನು ಅಂಚುಕಟ್ಟಿದ ರೀತಿಯಲ್ಲಿ ಚಿತ್ರಿಸಲಾಗಿದೆ. ಆನಂತರ ವೀರನೊಬ್ಬ ಕತ್ತಿ ಗುರಾಣಿಗಳನ್ನು ಹಿಡಿದು ಹೋರಾಡುತ್ತಿರುವಂತೆ ಆತನು ಗುರಾಣಿಯಿಂದ ಶತ್ರುಗಳು ಭರ್ಜಿಯಿಂದ ಚುಚ್ಚುತ್ತಿರುವ ಏಟನ್ನು ತಪ್ಪಿಸಿಕೊಳ್ಳುತ್ತಿರುವಂತೆ, ವೀರನ ಹಿಂದೆಯೂ ಬಿಲ್ಲು ಕತ್ತಿಗಳನ್ನು ಹಿಡಿದು ನೋಡುತ್ತಿರುವ ಸೈನಿಕರನ್ನು ಚಿತ್ರಿಸಲಾಗಿದೆ. ಆನಂತರದ ಪಟ್ಟಿಯಲ್ಲಿ ಮಂಟಪದಲ್ಲಿ ಕೂತ ವೀರ ಯೋಧ ಆ ಮಂಟಪವನ್ನು ಎರಡು ಜನ ಕಿನ್ನರರು ಎತ್ತಿ ಹಿಡಿದಿದ್ದರೆ, ಒಬ್ಬ ಡೋಲುಬಡಿಯುತ್ತಿದ್ದಾನೆ. ಆ ಮಂಟಪವನ್ನು ನಾಲ್ಕು ದೇವತೆಗಳು ಎಡಬಲದ ಕಂಬಗಳನ್ನು ಹಿಡಿದು ನಿಂತಿದ್ದಾರೆ. ಮೇಲ್ಭಾಗದ ಮಧ್ಯದಲ್ಲಿ ಶಿವಲಿಂಗನವನ್ನು ಪೂಜಿಸುತ್ತಿರುವ ಜಡೆ ಬಿಟ್ಟ ಯತಿ, ಎಡದಲ್ಲಿ ಕೈ ಮುಗಿದು ಕೂತ ವೀರ ಬಲದಲ್ಲಿ ನಂದಿ ಇರುವುದು ಹಾಗೂ ಮೇಲ್ಭಾಗವನ್ನು ಮಾಲೆಯಿಂದ ಅಲಂಕರಿಸಿರುವಂತೆ ಕಂಡುಬರುತ್ತದೆ. ಇಲ್ಲಿ ದೇವತೆಗಳು ಕಿರೀಟ ಹಾಕಿರುವುದು ವಿಶೇಷವಾಗಿದೆ.[೧೧೫]

ಶಿಕಾರಿಪುರ ತಾಲೂಕು ಮುಳವಳ್ಳಿ ಗ್ರಾಮದ ಹೊರವಲಯದಲ್ಲಿರುವ ತುರುಗೊಳ್ ಶಾಸನ ವ್ಯವಸ್ಥಿತವಾಗಿ ರೂಪುಗೊಂಡಿದೆ. ವೀರಗಲ್ಲಿನ ಕೆಳಭಾಗದಲ್ಲಿ ವೀರನ ಹಿಂಬದಿಯಲ್ಲಿ ಕೆಳಸಾಲಿನಲ್ಲಿ ನಾಲ್ಕು ಜನ ಸ್ತ್ರೀಯರನ್ನು ಚಿತ್ರಿಸಲಾಗಿದೆ. ಅದರಲ್ಲಿ ಒಬ್ಬಳು ಮಗುವನ್ನು ಎತ್ತಿಕೊಂಡಿದ್ದಾಳೆ. ಆ ವೀರನು ಶತ್ರುವನ್ನು ಖಡ್ಗದಿಂದ ಇರಿದು ಕರುಳುಗಳನ್ನು ಬಗೆದಿದ್ದಾನೆ. ಆ ಶತ್ರುವಿನ ಹಿಂಭಾಗದಲ್ಲಿ ಕುದುರೆಗಳನ್ನು, ಕುದುರೆ ಸವಾರರನ್ನು ಚಿತ್ರಿಸಲಾಗಿದೆ. ಅದೇ ಕುದುರೆಗಳ ಸಾಲುಗಳ ಮೇಲೆ ಗುರಾಣಿ ಹಿಡಿದು ಹೋರಾಡುತ್ತಿರುವ ಶತ್ರುಸೈನಿಕರನ್ನು ಚಿತ್ರಿಸಲಾಗಿದೆ. ವೀರನ ಹಿಂಭಾಗದ ಮಹಿಳೆಯರ ಸಾಲಿನ ಮೇಲೆ ಸುಂದರ ಕೊಂಬುಳ್ಳ ಅದ್ಭುತ ದೇಹಸೌಷ್ಠವ ಹೊಂದಿದ ದನಗಳ ಚಿತ್ರ ಬಿಡಿಸಲಾಗಿದೆ. ಅದರಲ್ಲಿ ಒಂದು ದನದ ಬಾಲ ನಿಮಿರಿಸಿಕೊಂಡು ಬೆದರಿ ನಿಂತಿರುವ ಭಂಗಿ ಯುದ್ಧದ ಭೀಕರತೆ, ಕೂಗು ಕೇಕೆಗಳನ್ನು ಊಹಿಸಲು ಅವಕಾಶ ಮಾಡಿಕೊಡುತ್ತದೆ. ನಂತರ ಲಿಪಿ ಪಟ್ಟಿಯ ಭಾಗದ ಮೇಲಿನ ಪಟ್ಟಿಯಲ್ಲಿ ವೀರನು ಸುಂದರ ಮಂಟಪದಲ್ಲಿ ಕುಳಿತಿರುವಂತೆಯೂ ಚೌರಿಧಾರಿ ದೇವತೆಗಳು ಮಂಟಪನವನ್ನು ಹಿಡಿದು ನಿಂತಿರುವಂತೆಯೂ, ಎಡ–ಬಲಗಳಲ್ಲಿ ಡೋಲುವಾದಕರು ಡೋಲು ನುಡಿಸುತ್ತಿರುವಂತೆ, ಎಡ ಬಲಗಳ ಮೇಲ್ಭಾಗದ ಮೂಲೆಗಳಲ್ಲಿ ಕಳಸದೊಂದಿಗೆ ಹಾರುತ್ತಿರುವಂತೆ ದೇವತೆಗಳನ್ನು ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಶಿವಲಿಂಗ, ಬಸವ, ವೀರಾಸನದಲ್ಲಿ ಕೂತವೀರ, ಪೂಜೆಮಾಡುತ್ತಿರುವ ಯತಿ, ಕತ್ತಿ ಹಿಡಿದ ವೀರನನ್ನು, ಸೂರ್ಯ, ಚಂದ್ರರನ್ನು ಚಿತ್ರಿಸಲಾಗಿದೆ. ವೀರ ಶತ್ರುವಿನ ಎದೆ ಬಗಿದು ಕರುಳುಗನ್ನು ಕಿತ್ತು ರೌದ್ರಾವತಾರ ತಾಳಿ ಹೆಣಗಳ ಮೇಲೆ ನಿಂತಿರುವುದು ಯುದ್ಧದ ಭೀಕರತೆಗೆ ಸಾಕ್ಷಿಯಾಗಿದೆ.[೧೧೬]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಮಳೆಕೊಪ್ಪ ಕೋಟೆಯ ಊರ ಹೊರಗಿನ ಮಂಟಪದ ಬೇಲಿಯಲ್ಲಿ ಶಾಸನವೊಂದು ಇವುಗಳಿಗಿಂತ ಭಿನ್ನವಾಗಿದೆ. ಕೆಳಭಾಗದ ಯುದ್ಧದ ಪಟ್ಟಿಯಲ್ಲಿ ಉದ್ದನೆ ಕಂಬಗಳನ್ನು ಸಾಲಾಗಿ ನೆಟ್ಟು ಆ ಗೂಟಗಳ/ಕಂಬಗಳ ಮೇಲ್ಭಾಗವನ್ನು ಚೂಪು ಮಾಡಲಾದ ಸ್ಥಿತಿಯಲ್ಲಿ ಬೇಲಿಯಂತೆ ನೆಡಲಾಗಿದೆ. ಅವುಗಳಲ್ಲಿ ದನಗಳ ಚಿತ್ರವನ್ನು ಬಿಡಿಸಲಾಗಿದೆ. ಶಿರಸ್ತ್ರಾಣ ಹಾಕಿಕೊಂಡಿರುವ ಹಾಗೂ ಕೈಕತ್ತಿ ಹಿಡಿದ ಯೋಧರನ್ನು ಸುಂದರವಾಗಿ ಬಿಡಿಸಲಾಗಿದೆ. ಇವರನ್ನೆಲ್ಲ ಹಿಂದೆ ಮಾಡಿಕೊಂಡು ವೀರನು ಶವಗಳ ನಡುವೆ ಕುದುರೆ ಸವಾರರೊಂದಿಗೆ ಹೋರಾಡುತ್ತಿದ್ದಾನೆ. ಶತ್ರುಗಳು ಶಿರಸ್ತ್ರಾಣಗಳನ್ನು ಹಾಕಿಕೊಂಡು ಉದ್ದನೆಯ ಕತ್ತಿಗಳನ್ನು ಹಿಡಿದಿರುವುದು ವಿಶೇಷವಾಗಿದೆ. ನಂತರ ಮಂಟಪದಲ್ಲಿ ವೀರ ಕೂತಿರುವಂತೆ ಎಡ ಬಲಗಳಲ್ಲಿ ದೇವತೆಗಳು ಮಂಟಪವನ್ನು ಹಿಡಿದಿರುವಂತೆ ಹಾಗೂ ಮಂಟಪದ ಮೇಲೆ ಗೋಪುರದ ಸಮಕ್ಕೆ ಡೋಲು ಬಾರಿಸುತ್ತಿರುವ, ನರ್ತನ ಮಾಡುತ್ತಿರುವ, ತಾಳ ಬಾರಿಸುತ್ತಿರುವ ಆರುಜನ ಸ್ವಾಗತಕಾರರನ್ನು ಬಿಡಿಸಲಾಗಿದೆ. ನಂತರದ ಭಾಗದಲ್ಲಿ ಶಿವಲಿಂಗವನ್ನು ಪೂಜಿಸುತ್ತಿರುವ ಉದ್ದ ಜಡೆಯ ಯತಿ, ಕೈ ಮುಗಿದು ನಿಂತ ವೀರ ಮಧ್ಯ ಮಂಟಪದಲ್ಲಿ ಹಾಗೂ ಮಂಟಪದ ಎಡಭಾಗದಲ್ಲಿ ವೀರ ಕೈಮುಗಿದು ನಿಂತಿರುವಂತೆಯೂ, ಬಲಭಾಗದಲ್ಲಿ ನಂದಿ ಕುಳಿತಿರುವಂತೆಯೂ ಚಿತ್ರಿಸಲಾಗಿದೆ. ವೀರಗಲ್ಲಿನ ಮೇಲ್ಭಾಗದ ಅಲಂಕಾರ ಭಾಗ ಒಡೆದು ಹೋಗಿದ್ದು, ಸೂರ್ಯಚಂದ್ರರನ್ನು ಗುರುತಿಸಬಹುದು. ಹಾಗೂ ಶಾಸನಕ್ಕೆ ಶಂಕದ ಆಕಾರದ ಅಲಂಕಾರ ಮಾಡಲಾಗಿದೆ. ಸಂಶೋಧಕರಾದ ಡಾ. ಡಿ.ವಿ.ಪರಮಶಿವಮೂರ್ತಿಯವರು ಈ ಚಿತ್ರದಲ್ಲಿರುವ ಗೂಟದ ಬೇಲಿಯನ್ನು ಗಮನಿಸಿ, ಇದು ತುರುಹಟ್ಟಿ ಇರಬಹುದು ಎಂದು ಊಹಿಸಿದ್ದಾರೆ. ಗೋವುಗಳನ್ನು ಸಾಕುವ ಕೊಟ್ಟಿಗೆಯ ಮೇಲೂ ದಾಳಿಮಾಡುತ್ತಿದ್ದರು ಎಂಬುದನ್ನು ಈ ಶಾಸನಶಿಲ್ಪದಿಂದ ಊಹಿಸ ಬಹುದಾಗಿದೆ.[೧೧೭]

ಸೊರಬ ತಾಲೂಕಿನ ಪುರ ಗ್ರಾಮದ ತುರುಗೊಳ್ ವೀರಗಲ್ಲು ವಿಭಿನ್ನವಾಗಿದೆ. ಇಲ್ಲಿ ಎರಡು ತುರುಗೊಳ್ ಶಾಸನಗಳು ದೊರೆತಿದ್ದು, ಅದರಲ್ಲಿ ಒಂದು ಶಾಸನ ವಿಭಿನ್ನವಾಗಿದೆ. ಈ ಶಾಸನ ಎರಡು ಸಾಲಿನ ಪೂರ್ಣಗೊಳ್ಳದ ಬರವಣಿಗೆಯನ್ನು ಹೊಂದಿದೆ. ಆದರೆ ಶಾಸನ ಶಿಲ್ಪವನ್ನು ಮಾತ್ರ ಹೊಂದಿದೆ. ಶಿಲ್ಪಿ ಯಾವ ಕಾರಣಕ್ಕೆ ಲಿಪಿಯನ್ನು ಕೆತ್ತಲಿಲ್ಲ ಎಂಬುದು ಕುತೂಹಲದ ಪ್ರಶ್ನೆ. ಆದರೆ ಶಾಸನ ಶಿಲ್ಪವಂತೂ ಅದ್ಭುತವಾಗಿದ್ದು ಒಂದೇ ಶಾಸನದಲ್ಲಿ ವೀರರಿಬ್ಬರ ಹೋರಾಟವನ್ನು ಚಿತ್ರಿಸಿದೆ. ಶಾಸನವನ್ನು ಗಮನಿಸಿದಾಗ ಶಾಸನದ ಕೆಳಭಾಗದ ಮೊದಲ ಪಟ್ಟಿಯಲ್ಲಿ ವೀರರಿಬ್ಬರು ಮಧ್ಯೆ ಬೆನ್ನು ಮಾಡಿಕೊಂಡು ಎಡಬಲಕ್ಕೆ ಮುಖಮಾಡಿ ತಮ್ಮೆದುರಿನ ಶತ್ರುಗಳೊಂದಿಗೆ ಬೃಹತ್ ಗಾತ್ರದ ಬಿಲ್ಲುಗಳನ್ನು ಹಿಡಿದು ಹೋರಾಡುತ್ತಿದ್ದಾರೆ.

ಎಡಬಲಗಳಿಂದ ಆ ಇಬ್ಬರು ವೀರರ ಮೇಲೆ ಭರ್ಜಿಗಳನ್ನು ಹಿಡಿದು ದಾಳಿಮಾಡಿರುವ ಕುದುರೆ ಸವಾರರು ಆ ಇಬ್ಬರು ನಡುವಿನ ವೀರರಿಗೂ ಒಂದೇ ರಾಜಛತ್ರವನ್ನು ಬಿಡಿಸಿರುವುದು ಆ ವೀರರು ಪ್ರಮುಖ ವ್ಯಕ್ತಿಗಳೆಂಬುದನ್ನು ತಿಳಿಸುತ್ತದೆ. ಎಡಬಲದ ಕುದುರೆಗಳ ಮೇಲ್ಭಾಗದಲ್ಲಿ, ವಾದ್ಯಕಾರರನ್ನೂ ಚಿತ್ರಿಸಿರುವುದು ಈ ಶಾಸನದ ವಿಶೇಷ. ಎಡಬಲಗಳಲ್ಲಿ ಕ್ರಮವಾಗಿ ಕುದುರೆಗಳ ಮೇಲೆ ಉದ್ದನೆಯ ತುತ್ತೂರಿ ಊದುತ್ತಿರುವ, ತಮಟೆ ಬಾರಿಸುತ್ತಿರುವ, ಡೋಲು ಬಾರಿಸುತ್ತಿರುವವರ ಜೊತೆಗೆ ಗುರಾಣಿ, ಕತ್ತಿ ಹಿಡಿದ ಸೈನಿಕರನ್ನೂ ಚಿತ್ರಿಸಿದ್ದಾರೆ. ಇದು ಯುದ್ಧ ಭೂಮಿಯಲ್ಲಿ ರಣದುಂದುಭಿಯನ್ನು ಮಾಡುವ ವಾಧ್ಯಕಾರರಾಗಿದ್ದಿರಬೇಕು. ಆ ವೀರರ ಕಾಲುಗಳ ನಡುವೆ ರುಂಡ ಹಾಗೂ ಮುಂಡ ಬಿದ್ದಿರುವುದನ್ನು ಚಿತ್ರಿಸಲಾಗಿದೆ. ಈ ಪಟ್ಟಿಯೊಂದನ್ನೇ ನೋಡಿದರೆ ಇದು ಒಂದು ವೀರಗಲ್ಲು ಎಂದು ಊಹಿಸಬಹುದು. ಅಂದರೆ ಈ ಭಾಗದಲ್ಲಿ ಎಲ್ಲಿಯೂ ದನಗಳನ್ನು ಚಿತ್ರಿಸಿಲ್ಲ. ಆದ್ದರಿಂದ ಮೊದಲ ನೋಟಕ್ಕೆ ಇದನ್ನು ವೀರಗಲ್ಲು ಎಂದೇ ಭಾವಿಸಲು ಅವಕಾಶವಿದೆ. ಆದರೆ ಎರಡನೆಯ ಪಟ್ಟಿಯ ಶಿಲ್ಪ ವಿಶೇಷವಾಗಿದೆ.

ಇಬ್ಬರು ವೀರರೂ ಒಬ್ಬರಿಗೊಬ್ಬರು ಬೆನ್ನುಮಾಡಿ ಒಂದು ಕೈಯಲ್ಲಿ ಬಿಲ್ಲು ಇನ್ನೊಂದು ಕೈಯಲ್ಲಿ ಕತ್ತಿಯನ್ನು ಹಿಡಿದು ಖಡ್ಗದಿಂದ ಶತ್ರುವಿನ ಎದೆಯನ್ನು ತಿವಿದು ಕರುಳುಗಳು ಛಿದ್ರವಾಗಿರುವಂತೆ ಚಿತ್ರಿಸಲಾಗಿದೆ. ಅವರಲ್ಲಿ ಎಡಬದಿಯ ವೀರನ ಮುಂದೆ ಎರಡು ಕುದುರೆ ಏರಿದ ಭಟರು ಹಾಗೂ ನಾಲ್ಕು ಜನ ಕತ್ತಿ ಗುರಾಣಿಗಳನ್ನು ಹಿಡಿದು ಹೋರಾಡುತ್ತಿದ್ದಾರೆ. ಬಲಬದಿಯ ವೀರನ ಮುಂಭಾಗದಲ್ಲಿ ಕುದುರೆ ಏರಿದ ಭಟರು ಗುರಾಣಿ ಹಿಡಿದು ಹೋರಾಡು ತ್ತಿರುವಂತೆ ಚಿತ್ರಿಸಲಾಗಿದೆ. ಒಬ್ಬ ಜಾಗಟೆ ಬಡಿಯುವ ಹಾಗೂ ಒಬ್ಬ ಡೋಲು ಬಾರಿಸುತ್ತಿರುವಂತೆ ಚಿತ್ರಿಸಲಾಗಿದೆ. ಇದು ಹುಯ್ಯಲನ್ನು ಮಾಡುತ್ತಿದ್ದಾರೆಂದು ಊಹಿಸಬಹುದು. ಎಡ ಬಲಗಳ ಕಡೆ ಮುಖ ಮಾಡಿ ನಿಂತಿರುವ ಇಬ್ಬರೂ ವೀರರ ಖಡ್ಗದ ಒರೆಗಳ ತುದಿಗಳು ಒಂದಕ್ಕೊಂದು ತಾಕಿವೆ. ಆ ಇಬ್ಬರು ವೀರರ ನಡುವಿನಲ್ಲಿ ರಾಜ ಛತ್ರ ಹಿಡಿದಿರುವ ಒಬ್ಬನನ್ನು ಚಿತ್ರಿಸಲಾಗಿದೆ. ಇದು ಆ ಇಬ್ಬರು ವೀರರು ಪ್ರಮುಖ ವ್ಯಕ್ತಿಗಳು ಎಂಬುದನ್ನು ಸೂಚಿಸುತ್ತದೆ. ಆ ಛತ್ರಿಯ ಕೆಳಭಾಗದಲ್ಲಿ ಇಬ್ಬರು ವೀರನನ್ನು ನೋಡುತ್ತಿರುವಂತೆ ಕೆಳಗಿನ ಎರಡು ಹಸುಗಳ ಮುಖ ಎಡಕ್ಕೂ ಅದರ ಮೇಲಿನ ಎರಡು ಮುಖ ಬಲಕ್ಕೂ ನೋಡುತ್ತಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಹಸುಗಳನ್ನು ಇಡಿಯಾಗಿ ಬಿಡಿಸದೆ ಕೇವಲ ತಲೆಗಳನ್ನು ಮಾತ್ರ ಬಿಡಿಸಿರುವುದು ವಿಶೇಷವಾಗಿದೆ. ಇಲ್ಲಿ ದನಗಳ ತಲೆಗಳನ್ನು ತುರುಗೊಳ್ ಸಂಕೇತದಂತೆ ಚಿತ್ರಿಸಿರುವುದು ವಿಶೇಷವಾಗಿದೆ.

ನಂತರದ ಮೂರನೆಯ ಹಂತದಲ್ಲಿ ಒಂದೇ ಪಟ್ಟಿಯಲ್ಲಿ ಎರಡು ಪ್ರತ್ಯೇಕ ವಿಭಾಗ ಎನ್ನುವಂತೆ ಚಿತ್ರಿಸಿದ್ದಾರೆ. ಇಲ್ಲಿ ಮಂಟಪದ ಕಂಬದವರೆಗಿನ ಭಾಗ ಒಂದು, ಆನಂತರದ

ಗೋಪುರದ ಭಾಗ ಒಂದು ಎಂಬಂತೆ ಚಿತ್ರಿಸಲಾಗಿದೆ. ಮಂಟಪದಲ್ಲಿ ಎರಡು ಜನ ವೀರರು ಕುಳಿತಿರುವಂತೆಯೂ, ಆ ಮಂಟಪವನ್ನು ಎಡ, ಬಲ, ಹಾಗೂ ಮಧ್ಯದಲ್ಲಿ ಮೂರು ಜನ ಸೇವಕರು ಎತ್ತಿ ಹಿಡಿದಿರುವಂತೆಯೂ, ಆ ಮಂಟಪದ ಕಂಬಕ್ಕೆ ಹಿಡಿಕೆಯನ್ನು ಬಿಡಿಸಲಾಗಿದೆ. ಆ ಹಿಡಿಕೆಗಳನ್ನು ಎಡಬಲಗಳಲ್ಲಿ ಮೂರು ಚೌರಿಧಾರಿ ದೇವತೆಗಳು ಹಿಡಿದು ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಗೋಪುರದ ಭಾಗದಲ್ಲಿ ೧೭ ಜನ ವಾದ್ಯಕಾರರನ್ನು ಬಿಡಿಸಲಾಗಿದೆ. ಅವರು ತುತ್ತೂರಿ, ಮೃದಂಗ, ತಾಳ, ಎರಡು ಜನ ನಾಗವಾದ್ಯ(ಇವು ಉದ್ದನೆಯ ಪಟ್ಟಿಯಲ್ಲಿ ತಂತಿವಾದ್ಯ ಆಧುನಿಕ ಗಿಟಾರ್‌ನ್ನು ನೆನಪಿಸುವಂತಿದೆ) ತುತ್ತೂರಿಯನ್ನು ಹಿಡಿದು ಮಂಗಳವಾದ್ಯ ಮಾಡುತ್ತಾ ನರ್ತಿಸುತ್ತಿರುವುದು ಕಂಡು ಬರುತ್ತದೆ. ಈ ಶಾಸನದಲ್ಲಿ ಅತ್ಯಂತ ಹೆಚ್ಚು ವಾದ್ಯಕಾರರನ್ನು ಚಿತ್ರಿಸಿರುವುದು ವಿಶೇಷವಾಗಿದೆ. ನಂತರ ಸುಂದರವಾದ ಹೂವಿನ ಅಲಂಕಾರದ ಪಟ್ಟಿಯನ್ನು ವಾದ್ಯಕಾರರ ತಲೆಯ ಮೇಲ್ಭಾಗದಲ್ಲಿ ಚಿತ್ರಿಸಲಾಗಿದೆ.

ಆನಂತರದ ಮೇಲ್ಭಾಗದ ಹಂತದಲ್ಲಿಯೂ ಮೂರು ಸುಂದರ ಮಂಟಪಗಳನ್ನು ಬಿಡಿಸಿ ಎಡಭಾಗದ ಮಂಟಪದಲ್ಲಿ ಇಬ್ಬರು ವೀರರು ಕೈಮುಗಿದು ಕುಳಿತಿರುವಂತೆಯೂ, ಪ್ರಧಾನ ಮಂಟಪದಲ್ಲಿ ಶಿವಲಿಂಗನವನ್ನು ಹಾಗೂ ಅದನ್ನು ಗಂಟಾನಾದದೊಂದಿಗೆ ಪೂಜಿಸುತ್ತಿರುವ ಯತಿಯನ್ನು ಚಿತ್ರಿಸಲಾಗಿದೆ. ಇಲ್ಲಿ ಒಂದು ವಿಶೇಷವೆಂದರೆ ಶಿವಲಿಂಗಕ್ಕೆ ರುದ್ರಾಕ್ಷಿಯ ಕಿರೀಟ ತೊಡಿಸಿರುವುದು ವಿಶೇಷವಾಗಿ ಕಂಡುಬರುತ್ತದೆ. ಬಲಭಾಗದ ಮಂಟಪದಲ್ಲಿ ನಂದಿಯನ್ನು ಕುಳಿತಿರುವ ಭಂಗಿಯಲ್ಲಿ ಬಿಡಿಸಲಾಗಿದ್ದು, ನಂದಿಗೆ ಹೊಟ್ಟೆಗೆ ಹಾಕಿರುವ ಗೆಜ್ಜೆಪಟ್ಟಿ, ಕೊರಳ ದಂಡೆಗಳು, ಹಣೆಪಟ್ಟಿಯನ್ನು ಸುಂದರವಾಗಿ ಬಿಡಿಸಲಾಗಿದೆ. ಇಲ್ಲಿ ಇನ್ನೊಂದು ವಿಶೇಷವೆಂದರೆ ಒಬ್ಬ ನಂದಿಯ ಮೇಲೆ ಶಾಶ್ವತವಾಗಿ ಬೆಣೆಯ ಸಹಾಯದಿಂದ ಮೇಲ್ಭಾವಣಿಗೆಗೆ ಅಂಟಿಕೊಂಡಂತಿರುವ(ಸಿಗಿಸಿರುವ) ಡೋಲನ್ನು ಕೋಲುಗಳಿಂದ ಬಡಿಯುತ್ತಿರುವಂತೆ ಚಿತ್ರಿಸಲಾಗಿದೆ. ಇದು ಇಂದು ದೇವಸ್ಥಾನಗಳಲ್ಲಿ ಹಾಕುವ ಮಂಗಳ ವಾದ್ಯದ ಮಿಷಿನ್ ನಂತೆಯೇ ಕಾಣುವುದು ವಿಶೇಷವಾಗಿದೆ. ನಂತರ ಮೂರು ಗೋಪುರದ ಮೇಲ್ಭಾಗದಲ್ಲಿ ಮಧ್ಯ ಗೋಪುರದ ಎಡಕ್ಕೆ ಚಂದ್ರನನ್ನು, ಬಲಕ್ಕೆ ಸೂರ್ಯನನ್ನು ಚಿತ್ರಿಸಲಾಗಿದೆ. ಶಾಸನಕ್ಕೆ ಎರಡು ಇಂಚಿನ ಪಟ್ಟಿಯನ್ನು ಕೊಟ್ಟಿದ್ದಾರೆ. ಶಾಸನದ ಮೇಲ್ಭಾಗದಲ್ಲಿ ಪಟ್ಟಿಯ ಮೇಲೆ ಸಿಂಹಲಾಂಛನ ಯಾಳಿಯನ್ನು ಬಿಡಿಸಿರುವುದು ವಿಶೇಷವಾಗಿದೆ.[೧೧೮]

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಹಿರೇಜಂಬೂರಿನಲ್ಲಿ ಅನೇಕ ವೀರಗಲ್ಲುಗಳು ಇದ್ದು, ಅವುಗಳಲ್ಲಿ ಎರಡು ತುರುಗೊಳ್ ಶಾಸನಗಳಾಗಿವೆ. ಈ ಎರಡು ಶಾಸನಗಳಲ್ಲಿ ಒಂದು ಪೆಣ್ಬುಯ್ಯಲ್, ತುರುಗೊಳ್ ಎರಡೂ ಅಂಶ ಹೊಂದಿದೆ. ಇನ್ನೊಂದು ಇತ್ತೀಚೆಗೆ ಪತ್ತೆಯಾಗಿದ್ದು,

ಅಕ್ಷರಗಳು ತೃಟಿತವಾಗಿವೆ. ಆದರೆ ಶಾಸನಶಿಲ್ಪದ ದೃಷ್ಟಿಯಿಂದ ಅದ್ಭುತ ವಿನ್ಯಾಸವನ್ನು ಹೊಂದಿದೆ. ಈ ಗ್ರಾಮದ ದೊಡ್ಡಕೆರೆ ಏರಿ ಕೆಳಗಿರುವ ಕೆಳಗಿನ ಮಲ್ಲಪ್ಪನ ದೇವಾಲಯದ ಮುಂಭಾಗದ ಬೇಲಿಯಲ್ಲಿ ಮರೆಯಾಗಿದ್ದ ಈ ಶಾಸನ, ಈಗ ಕಾಣುವಂತೆ ಗ್ರಾಮಸ್ಥರು ಸ್ವಚ್ಛಗೊಳಿಸಿದ್ದಾರೆ. ಶಾಸನದ ಕೆಳಭಾಗದ ಪಟ್ಟಿಯಲ್ಲಿ ಎಡಗಡೆಗೆ ಆರು ದನಗಳನ್ನು ಯದ್ಧದ ಕಡೆ ಮುಖ ಮಾಡಿ ನಿಂತಿರುವಂತೆ ಚಿತ್ರಿಸಲಾಗಿದೆ. ಆನಂತರ ವೀರರ ಗುಂಪು ಬಿಲ್ಲು ಬಾಣಗಳನ್ನು ಹಿಡಿದು ಹೋರಾಡುತ್ತಾ ನಿಂತಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಯೋಧನೊಬ್ಬನ ಕೇಶ ವಿನ್ಯಾಸದ ಹೆಣಿಗೆ ಆಕರ್ಷಣೀಯವಾಗಿ ಚಿತ್ರಿಸಲಾಗಿದೆ. ಈಪಟ್ಟಿಯ ಆನಂತರದ ಬರವಣಿಗೆಯ ಭಾಗದಲ್ಲಿ ಒಂದು ಆಯುಧದ ಚಿತ್ರವಿದೆ. ಇದು ಅಂಕುಶವನ್ನು ಹೋಲುತ್ತಿದ್ದು ಎರೆಡು ವೃತ್ತಗಳ ಚಿತ್ರ ಅದರಲ್ಲಿ ಒಂದು ದೊಡ್ಡದು ಮತ್ತೊಂದು ಚಿಕ್ಕದಾಗಿ ಚಿತ್ರಿಸಲಾಗಿದೆ.

ಮೇಲಿನ ಚಿತ್ರಗಳ ಪಟ್ಟಿಯಲ್ಲಿ ಕೆಳಭಾಗದಲ್ಲಿ ಬಿದ್ದಿರುವ ಹೆಣಗಳ ಮೇಲೆ ನಾಲ್ಕು ಜನ ಯೋಧರು ಎಡದಿಂದ ಬಲಕ್ಕೆ ನೋಡಿದರೆ ಇವರ ಶಿರ (ತಲೆ) ಬಿಲ್ಲು ಹಿಡಿಯುವ ಜಾಗದಲ್ಲಿ ಬಿಲ್ಲಿನ ಜೊತೆಗೆ ತಮ್ಮ ತಲೆಗಳನ್ನು ನೆಲಕ್ಕೆ ಬೀಳದಂತೆ ಕೈಯಲ್ಲಿ ಹಿಡಿದು ಬಿಲ್ಲನ್ನು ಇಳಿಸಿ ನಿಂತಿರುವಂತೆ ಚಿತ್ರಿಸಲಾಗಿದೆ. ಇವರ ಮುಂಡದ ಮೇಲ್ಭಾಗದಲ್ಲಿ ಮತ್ತೆ ಮೂರು ಜನ ಬಿಲ್ಲು ಹಿಡಿದು ಯುದ್ಧ ಮಾಡಲು ಓಡುತ್ತಿರುವಂತೆ ಚಿತ್ರಿಸಲಾಗಿದೆ. ಈ ಎಲ್ಲವನ್ನು ಶಾಸನದ ಬಲ ಭಾಗದಲ್ಲಿರುವ ದನಗಳ ಮಂದೆ ಗಾಬರಿಯಿಂದ ನೋಡುತ್ತಿರುವಂತೆ ಚಿತ್ರಿಸಿದ್ದಾರೆ. ಈ ಚಿತ್ರದ ಮೇಲ್ಭಾಗದಲ್ಲಿ ಎರಡು ಸಾಲಿನ ಲಿಪಿಯಿದ್ದು ಸಾಕಷ್ಟು ತೃಟಿತವಾಗಿದೆ. ಅದರ ಮೇಲ್ಭಾಗದಲ್ಲಿ ಎಂಟು ಜನ ವೀರರು ಸಾಲಾಗಿ ಕೈ ಮುಗಿದು ಕುಳಿತಿದ್ದಾರೆ. ವೀರರ ಸಾಲಿನ ಎಡಭಾಗದಲ್ಲಿ ಒಂದು ಹೋರಿಯನ್ನು ಬಾಲಎತ್ತಿ ನಿಂತಿರುವಂತೆಯೂ, ಎಡಗಡೆಯ ಮೊದಲ ವೀರನ ಭುಜದ ಮೇಲೆ ಹಿಂಗಾಲನ್ನು ಹಾಗೂ ಎರಡನೆಯ ವೀರನ ತಲೆಯ ಮೇಲೆ ಮುಂಗಾಲನ್ನು ಇಟ್ಟು ನಿಂತಿರುವಂತೆ ಚಿತ್ರಿಸಿರುವುದು ವಿಶೇಷವಾಗಿದೆ. ಆ ಹೋರಿಯ ಮುಂದೆ ಯತಿಯೊಬ್ಬ ಶಿವಲಿಂಗವನ್ನು ಪೂಜಿಸುತ್ತಿರುವಂತೆಯೂ, ಅದರ ಬಲಗಡೆಗೆ ನಂದಿ ಕುಳಿತಿರುವಂತೆಯೂ ಕಂಡ್ರಿಸಲಾಗಿದೆ. ಇಲ್ಲಿ ಯುದ್ಧದಲ್ಲಿ ದನವೂ ಒಂದು ಮಡಿದಿರುವಂತೆ ಚಿತ್ರಿಸಿರುವುದು, ಅದು ದೇವರ ಸಾನಿಧ್ಯದಲ್ಲಿ ತಲುಪಿರುವುದು ವಿಶೇಷವಾಗಿದೆ. ತುರುಗೊಳ್ ಯುದ್ಧ, ಸಾವಿಗಿಂತ ಬದುಕು, ಅಸ್ತಿತ್ವ ದೊಡ್ಡದಿತ್ತು ಎಂಬುದನ್ನು ವೀರರು ಕೈಯಲ್ಲಿ ಹಿಡಿದುಕೊಂಡಿರುವ ರುಂಡಗಳೇ ಆ ವೀರ ಶೌರ್ಯವನ್ನು ಸಾರಿ ಹೇಳುತ್ತಿವೆ.[೧೯೯]

ಶಿಕಾರಿಪುರ ತಾಲ್ಲೂಕಿನ ಮಲ್ಲೇನಹಳ್ಳಿಯ ಶಾಸನ ಶಿಲ್ಪದ ದೃಷ್ಟಿಯಿಂದ ಹಾಗೂ ತುರುಗೊಳ್ ಶಾಸನಗಳ ಕದನಗಳ ತೀವ್ರತೆಗೆ ಸಾಕ್ಷಿಯಾಗಿ ನಿಲ್ಲುತ್ತವೆ. ಈ ಗ್ರಾಮದ ಆಂಜನೇಯ

ಸ್ವಾಮಿ, ಈಶ್ವರ ದೇವಸ್ಥಾನ ಅಗಸಿ ಬಾಗಿಲಿನಲ್ಲಿದೆ. ಈ ದೇವಾಲಯದ ಬಲ ಭಾಗಕ್ಕೆ ಎರೆಡು ತುರುಗೊಳ್ ಶಾಸನಗಳು ಹಾಗೂ ನಾಲ್ಕು ಮಾಸ್ತಿಗಲ್ಲುಗಳು ಇವೆ. ಇವು ಯುದ್ಧ ವೀರರ ಜೊತೆಗೆ ಪ್ರಾಣಾರ್ಪಣೆ ಮಾಡಿದ ಮಹಾಸತಿಯರನ್ನು ಇವು ಸೂಚಿಸುತ್ತಿವೆ. ಇಲ್ಲಿರುವ ಮಾಸ್ತಿಗಲ್ಲುಗಳಲ್ಲಿ ಒಂದು ಮಾಸ್ತಿಯಲ್ಲಿ ಬಲಗೈ ಕೆಳಗೆ ವೀರನನ್ನು ಚಿತ್ರಿಸಿ ಅವನ ಕೆಳಗಡೆ ಎರೆಡು ಹಸುಗಳನ್ನು, ಒಂದು ನಾಯಿಯನ್ನು ಚಿತ್ರಿಸಿದ್ದಾರೆ. ಇದು ತುರುಗೊಳ್ ಯುದ್ಧದಲ್ಲಿ ಮಡಿದ ಗಂಡನೊಂದಿಗೆ ಸತಿಹೋದ ಅಂಶವನ್ನು ಇದು ಪುಷ್ಟೀಕರಿಸುತ್ತದೆ. ಈ ಎರಡು ಶಾಸನಗಳಲ್ಲಿ ಒಂದು ಶಾಸನ ಎಲ್ಲಾ ತುರುಗೊಳ್ ಶಾಸನಗಳಂತೆ ಸರಳವಾಗಿ ಮೂರು ಹಂತದಲ್ಲಿ ರಚನೆಯಾಗಿದೆ. ಆದರೆ ಈ ಮಾಸ್ತಿಗಲ್ಲುಗಳ ಪಕ್ಕದಲ್ಲಿರುವ ತುರುಗೊಳ್ ಶಾಸನ ವಿಶೇಷವಾಗಿದೆ. ಶಾಸನದ ಕೆಳಭಾಗದ ಚಿತ್ರದ ಪಟ್ಟಿಯಲ್ಲಿ ಒಬ್ಬ ವೀರನನ್ನು ಬಿಲ್ಲು ಹಿಡಿದು ನಿಂತಿರುವಂತೆ ಚಿತ್ರಿಸಿದ್ದಾರೆ. ಆ ವೀರ ಕೆಳಗೆ ಬಿದ್ದ ಒಬ್ಬ ಶತ್ರುವಿನ ಸ್ವಂಟವನ್ನು ಮೆಟ್ಟಿನಿಂತು ಶತ್ರುಗಳನ್ನು ಹಿಮ್ಮೆಟ್ಟಿಸಲು ಹೋರಾಡುತ್ತಿದ್ದಾನೆ. ಶತ್ರುಗಳು ಎರೆಡು ಸಾಲಿನಲ್ಲಿ ಬಲಗಡೆಗೆ ಚಿತ್ರಿತವಾಗಿದ್ದು ಕೆಳಗಿನ ಸಾಲಿನ ಮೂರು ಜನ ಈಟಿ, ಖಡ್ಗ, ಭರ್ಚಿ, ಗುರಾಣಿಗಳನ್ನು ಹಿಡಿದು ಹೋರಾಡುತ್ತಿದ್ದಾರೆ. ಅವರ ಮೇಲಿನ ಪಂಕ್ತಿಯಲ್ಲಿ ಶತ್ರು ವೀರನೊಬ್ಬ ಕತ್ತಿಯಿಂದ ತುರುಗೊಳ್ ವೀರನನ್ನು ಎದುರಿಸುತ್ತಿರುವಂತೆ ಚಿತ್ರಿಸಲಾಗಿದೆ. ವೀರನ ಹಿಂದೆ ಎರಡು ಜನ ಬಿಲ್ಲು, ಖಡ್ಗ,ಗುರಾಣಿ ಹಿಡಿದು ವೀರನಿಗೆ ಬೆಂಬಲವಾಗಿ ಯುದ್ಧ ಮಾಡುತ್ತಿರುವಂತೆ ಚಿತ್ರಿಸಿದ್ದಾರೆ. ಆ ವೀರನ ಹೋರಾಟಕ್ಕೆ ಬೆನ್ನು ಮಾಡಿ ನಿಂತಿರುವಂತೆ ೧೨ ಹಸುಗಳನ್ನು ಚಿತ್ರಿಸಲಾಗಿದೆ. ಹೆಚ್ಚಿನ ಶಾಸನಗಳಲ್ಲಿ ಹಸುಗಳ ಗುಂಪನ್ನು ಯುದ್ಧದ ಕಡೆಗೆ ಮುಖ ಮಾಡಿ ನಿಂತಿರುವಂತೆಯೇ ಹಸುಗಳನ್ನು ಚಿತ್ರಿಸಿರುವುದು ಕಂಡುಬಂದರೂ ಇಲ್ಲಿ ಯುದ್ಧಕ್ಕೆ ಬೆನ್ನು ಮಾಡಿರುವುದು ವಿಶೇಷವಾಗಿದೆ. ನಂತರ ಲಿಪಿ ಪಟ್ಟಿಯಲ್ಲಿ ಸುಂದರ ಲಿಪಿಯಿದೆ. ಅದನ್ನು ಹಿಂದಿನ ಭಾಗದಲ್ಲಿ ಉಲ್ಲೇಖಿಸಲಾಗಿದೆ. ಮುಂದುವರೆದು ಆ ಲಿಪಿ ಪಟ್ಟಿಯ ಮೇಲೆ ಎಂಟು ಜನ ವಾದ್ಯಕಾರರು ಡೋಲು, ಕೊಳಲು, ತಾಳ, ಮುಂತಾದ ವಾದ್ಯಗಳನ್ನು ಹಿಡಿದು ವೀರನನ್ನು ಸ್ವಾಗತಿಸಲು ನಿಂತಿರುವಂತೆ ಕೆಳ ಸಾಲಿನಲ್ಲಿ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ದೇವಕನ್ನೆಯರು, ಅವರ ಹಿಂಭಾಗದಲ್ಲಿ ತುತ್ತೂರಿ ಊದುತ್ತಿರುವ ತಮಟೆ ಭಾರಿಸುತ್ತಾ ನರ್ತಿಸುತ್ತಿರುವ ಆರು ಜನ ನರ್ತನಕಾರರನ್ನು ಚಿತ್ರಿಸಲಾಗಿದೆ. ಅವರ ತಲೆಯ ಮೇಲೆ ಮುಂಭಾಗದಲ್ಲಿ ದೇವಕನ್ನೆಯರು ವೀರನನ್ನು ಎತ್ತಿಕೊಂಡು ಹಾರುತ್ತಿರುವಂತೆ ಚಿತ್ರಿಸಿದೆ. ನಂತರ ಲಿಪಿ ಬಂದು ಅದರ ಮೇಲ್ಭಾಗದ ಮದ್ಯದ ಮಂಟಪದಲ್ಲಿ ಶಿವಲಿಂಗವನ್ನು ಪೂಜಿಸುತ್ತಿರುವ ಯತಿ, ಮಂಟಪದ ಹೊರ ಭಾಗದಲ್ಲಿ ಎಡಗಡೆ ವೀರ ಕುಳಿತಿರುವಂತೆ ಚಿತ್ರಿಸಲಾಗಿದೆ. ಗೋಪುರದ ಎಡಕ್ಕೆ ಸೂರ್ಯನನ್ನೂ ಬಲಕ್ಕೆ ಚಂದ್ರನನ್ನೂ ಬಿಡಿಸಲಾಗಿದೆ. ಮಂಟಪದ ಬಲಕ್ಕೆ ನಂದಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಅಂದಿನ ತುರುಗೊಳ್ ಯುದ್ಧದ

ಪರಿಣಾಮಗಳು ಕೇವಲ ಗ್ರಾಮ, ರಾಜ್ಯ, ಸೈನಿಕರ ಮೇಲೆ ಮಾತ್ರ ಆಗದೆ ಇಡೀ ಕುಟುಂಬದ ಮೇಲೂ ಆಗುತ್ತಿತ್ತು, ಎಂಬುದಕ್ಕೆ ಇಲ್ಲಿರುವ ತುರುಗೊಳ್ ಶಾಸನದೊಂದಿಗೆ ಇರುವ ಮಾಸ್ತಿಗಲ್ಲುಗಳು ಸಾಕ್ಷಿಯಾಗಿ ನಿಂತಿವೆ.

ಹೀಗೆ ತುರುಗೊಳ್ ಶಾಸನಗಳು ವೀರರ ಕಥೆಯನ್ನು ಹೇಳುವುದರ ಜೊತೆಗೆ ಅಂದಿನ ಕಾಲದ ಯುದ್ಧದ ಚಿತ್ರಣಗಳನ್ನು ಕಲ್ಪಿಸಿಕೊಳ್ಳಲು ಆ ಶಾಸನದ ಶಾಸನಶಿಲ್ಪಗಳು ಸಹಕಾರಿಯಾಗಿವೆ. ಆ ಸಂದರ್ಭದಲ್ಲಿ ಶಿಲ್ಪಿಗೆ ದೊರೆತ ಶಿಲೆಯ ಅಳತೆಗೆ ತಕ್ಕಂತೆ ಈ ಶಾಸನಶಿಲ್ಪಗಳು ವರ್ಣನಾತ್ಮಕ ವಾಗಿ ಮೂಡಿವೆ. ಹಸುಗಳ ಗುಂಪುಗಳನ್ನು ವೈವಿಧ್ಯಮಯವಾಗಿ ಭಿನ್ನ, ಭಿನ್ನ,ರೀತಿಯಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಬಿಡಿಸುವ ಮೂಲಕ ಶಾಸನ ಶಿಲ್ಪದ ಏಕತಾನತೆಯನ್ನು ಹೋಗಲಾಡಿಸಿವೆ. ಇದು ಪ್ರದೇಶದಿಂದ ಪ್ರದೇಶಕ್ಕೆ, ಅಲ್ಲಿ ದೊರೆಯುವ ಶಿಲೆಗೆ ತಕ್ಕಂತೆ, ಶಿಲ್ಪಿಯ ಸಾಮರ್ಥ್ಯಕ್ಕೆ ತಕ್ಕಂತೆ ಶಾಸನ ರಚನೆಯಲ್ಲೂ ವೈವಿಧ್ಯತೆ ಕಂಡುಬರುತ್ತದೆ. ಶಿವಮೊಗ್ಗ ಜಿಲ್ಲೆಯ ತುರುಗೊಳ್ ಶಾಸನಗಳನ್ನು ಗಮನಿಸಿದಾಗ, ಕೆತ್ತನೆಯಲ್ಲಿ ಒಂದು ಕ್ರಮ, ಹಾಗೂ ದೃಶ್ಯ ವೈವಿದ್ಯತೆ, ಶಿಲ್ಪಿಯ ಕಲಾ ಸಾಮರ್ಥದ ಅನಾವರಣ, ಒಂದು ಸೌಂದರ್ಯ ಪ್ರಜ್ಞೆ ರೂಪಗೊಂಡಿವೆ.

ಈ ಜಿಲ್ಲೆಯ ಶಾಸನಕವಿಗಳು/ಶಾಸನಶಿಲ್ಪಿಗಳು ಕುಶಲಕರ್ಮಿಗಳಾಗಿದ್ದರು. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ, ವಿಜಯನಗರ ಶೈಲಿಯಲ್ಲಿ ಪರಿಣಿತಿ ಹೊಂದಿದ್ದ ಶಿಲ್ಪಿಗಳು ಶಾಸನ ಶಿಲ್ಪಗಳನ್ನು ರೂಪಿಸಿರುವುದರಿಂದ ಆ ಶಾಸನಶಿಲ್ಪಗಳು ವೈವಿಧ್ಯತೆಯಿಂದ ಕೂಡಿವೆ. ತುರುಗಾಳಗದ ತೀವ್ರತೆಯನ್ನು, ಅದರ ಪರಿಣಾಮಗಳನ್ನು, ಯಶಸ್ವಿಯಾಗಿ ಹಿಡಿದಿಟ್ಟಿದ್ದಾರೆ. ಆದರೆ ಶಾಸನಪಾಠಗಳಲ್ಲಿನ ವರ್ಣನೆ ಶಾಸನಶಿಲ್ಪದಲ್ಲಿ ಪೂರ್ಣವಾಗಿ ಅನುಷ್ಠಾನಗೊಂಡಿಲ್ಲ. ಆದರೂ ಆಯಾ ಕಾಲದ ಶಿಲ್ಪಶೈಲಿಯಿಂದ ಅವರ ವೇಷ–ಭೂಷಣ, ಆಭರಣಗಳು, ಕೇಶಶೃಂಗಾರ, ಉಡುಪಿನ ವಿನ್ಯಾಸ, ಆಯುಧಗಳು ನಮ್ಮ ಗಮನಸೆಳೆಯುತ್ತವೆ. ಶಾಸನಶಿಲ್ಪಿಯ ಕಲೆಯ ಅನಾವರಣಕ್ಕೂ ವೇದಿಕೆಯಾಗಿದ್ದ ಶಾಸನಶಿಲ್ಪ ಇತಿಹಾಸದ ಪುಟಗಳನ್ನು, ಅಂದಿನ ವೀರರ ಸಾಮಾಜಿಕ ಮೌಲ್ಯಗಳಾಗಿದ್ದ ಯುದ್ಧ ಮತ್ತು ಅಸಹಾಯಕರ ರಕ್ಷಣೆ ವೀರನ ಪರಮ ಕರ್ತವ್ಯ ಎಂದು ಬಾಳಿ ಬದುಕಿದ, ತುರುಗೊಳ್ ವೀರರ ಬದುಕನ್ನು ಇಂದಿನ ಜನಾಂಗಕ್ಕೆ ತಲುಪಿಸುವಲ್ಲಿ ತುರುಗೊಳ್ ಶಾಸನಗಳು ಯಶಸ್ವಿಯಾಗಿವೆ.

**ಅಡಿಟಿಪ್ಪಣಿಗಳು**

೧. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೧೪

೨. ಡಿ.ವಿ.ಪರಮಶಿವಮೂರ್ತಿ, ತುಱುಗೊಳ್ ಸಂಕಥನ, ಪು.೧೫

೩. ಆರ್.ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪು.೧೦೦

೪. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೨೭೪

೫. ಎಫಿಗ್ರಫಿಯಾ ಕರ್ನಾಟಕ ಸಂ ೭. ಶಾಸನ ಸಂಖ್ಯೆ ೫೮

೬. ವಿ.ಆರ್.ರಾಮಂದ್ರ ದೀಕ್ಷಿತ, ಶಿಲಪ್ಪದಿಗಾರಂ, ಪು.೧೮೬

೭. ಬಿ.ವಿ.ವಸಂತ್ ಕುಮಾರ್, ಶಿಕಾರಿಪುರ ತಾಲ್ಲೂಕಿನ ಸಾಂಸ್ಕೃತಿಕ ಸಂಕಥನ, ಪು.೨೪೯

೮. ಡಾ.ಮೀರಾಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲರ ಬುಡಕಟ್ಟು ವೀರರು

೯. ಡಾ.ಮೀರಾಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲರ ಬುಡಕಟ್ಟು ವೀರರು, ಪು.೯೨

೧೦. ಎಫಿಗ್ರಫಿಯಾ ಕರ್ನಾಟಕ ಸಂ ೭, ಸೊರಬ ೪೫

೧೧. ಅದೇ, ಸೊರಬ ೧೭೫

೧೨. ಎಫಿಗ್ರಫಿಯಾ ಕರ್ನಾಟಕ ಸಂ ೮, ೧೮೧

೧೩. ಅದೇ, ಶಿಕಾ ೨೬೮

೧೪. ಅದೇ, ಶಿಕಾ ೧೭೫

೧೫. ಅದೇ, ೭೫

೧೬. ಅದೇ, ೧೮೧

೧೭. ಅದೇ, ೧೭೩

೧೮. ಅದೇ ೧೭೫

೧೯. ಅದೇ, ೨೬೮

೨೦. ಅದೇ, ೫೭

೨೧. ಎಫಿಗ್ರಫಿಯಾ ಕರ್ನಾಟಕ ಸಂ.೭, ಸೊರಬ ೪೫

೨೨. ಎಫಿಗ್ರಫಿಯಾ ಕರ್ನಾಟಕ ಸಂ.೮, ೧೪೯

೨೩. ಎಫಿಗ್ರಫಿಯಾ ಕರ್ನಾಟಕ ಸಂ.೭, ೧೨

೨೪. ಅದೇ, ೫೨೫

೨೫. ಅದೇ, ೭೨

೨೬. ಅದೇ, ೫೪

೨೭. ಎಫಿಗ್ರಫಿಯಾ ಕರ್ನಾಟಕ ಸಂ.೮, ಶಿಕಾರಿಪುರ ೧೬೨

೨೮. ಎಫಿಗ್ರಫಿಯಾ ಕರ್ನಾಟಕ ಸಂ.೮, ಸೊರಬ ೩೭೨

೨೯. ಎಫಿಗ್ರಫಿಯಾ ಕರ್ನಾಟಕ ಸಂ.೧೩, ಶಿವಮೊಗ್ಗ ೧೩

೩೦. ಅದೇ, ೧೩

೩೧. ಎಫಿಗ್ರಫಿಯಾ ಕರ್ನಾಟಕ ಸಂ.೮, ಸೊರಬ ೪೭

೩೨. ಎಂ.ಎಂ.ಆರ್ ೧೯೨೮ ಸೊರಬ ೮೦

೩೩. ಎಫಿಗ್ರಫಿಯಾ ಕರ್ನಾಟಕ ಸಂ.೮, ಶಿಕಾರಿಪುರ ೨೮೦

೩೪. ಅದೇ, ಸೊರಬ ೩೦

೩೫. ಅದೇ, ಸೊರಬ ೪೧೨

೩೬. ಅದೇ, ಸೊರಬ ೪೦೪

೩೭. ಅದೇ, ಸೊರಬ ೩೫

೩೮. ಅದೇ, ಸೊರಬ ೨೨೧

೩೯. ಅದೇ, ಸೊರಬ ೯೪

೪೦. ಅದೇ, ಸೊರಬ ೫೫

೪೧. ಅದೇ, ಸಾಗರ ೭೪

೪೨. ಅದೇ, ಸಾಗರ ೧೬೭

೪೩. ಅದೇ, ಸೊರಬ ೨೪೦

೪೪. ಅದೇ, ಶಿಕಾ ೭೦

೪೫. ಅದೇ, ಸೊರಬ ೧೯೩

೪೬. ಅದೇ, ಶಿಕಾರಿಪುರ ೮೩

೪೭. ಎಫಿಗ್ರಫಿಯಾ ಕರ್ನಾಟಕ ಸಂ.೧೩, ಶಿವಮೊಗ್ಗ ೫೮

೪೮. ಎಫಿಗ್ರಪಿಯಾ ಕರ್ನಾಟಕ ಸಂ.೮, ೨೫೧

೪೯. ಎಫಿಗ್ರಪಿಯಾ ಕರ್ನಾಟಕ ಸಂ.೧೩ ಭದ್ರಾವತಿ ೨೬

೫೦. ಎಫಿಗ್ರಪಿಯಾ ಕರ್ನಾಟಕ ಸಂ.೮, ೩೦

೫೧. ಅದೇ, ೩೦೯

೫೨. ಅದೇ, ೬೮-೬೯

೫೩. ಅದೇ, ೩೬೨

೫೪. ಅದೇ, ೨೭೩

೫೫. ಅದೇ, ೨೬೮

೫೬. ಎಫಿಗ್ರಪಿಯಾ ಕರ್ನಾಟಕ ಸಂ.೧೩, ಶಿವಮೊಗ್ಗ ೧೦೮

೫೭. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೩೭

೫೮. ಡಿ.ವಿ.ಪರಮಶಿವಮೂರ್ತಿ, ತುಳುಗೊಳ್ ಸಂಕಥನ, ಪು.೩

೫೯. ಎಫಿಗ್ರಪಿಯಾ ಕರ್ನಾಟಕ ಸಂ.೧೩, ಭದ್ರಾವತಿ ೨

೬೦. ಎಫಿಗ್ರಪಿಯಾ ಕರ್ನಾಟಕ ಸಂ.೮. ೩೮೫

೬೧. ಅದೇ, ೬೨

೬೨. ಅದೇ, ೩೮೫

೬೩. ಅದೇ, ೫೨೫

೬೪. ಎಫಿಗ್ರಪಿಯಾ ಕರ್ನಾಟಕ ಸಂ.೭, ೭೨

೬೫. ಅದೇ, ೧೮೧

೬೬. ಅದೇ, ೪೧೨

೬೭. ಅದೇ, ೩೭೦

೬೮. ಎಫಿಗ್ರಪಿಯಾ ಕರ್ನಾಟಕ ಸ.೧೩, ಶಿವಮೊಗ್ಗ ೧೦೮-೧೦೯

೬೯. ಅದೇ, ಶಿವಮೊಗ್ಗ ೫೮

೭೦. ಎಫಿಗ್ರಫಿಯಾ ಕರ್ನಾಟಕ ಸಂ. ೭, ೫೭

೭೧. ಆರ್. ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪು.೩೩

೭೨. ವಿ.ಆರ್.ರಾಮಚಂದ್ರ ದೀಕ್ಷಿತ, ಶಿಲಪ್ಪದಿಗಾರಂ, ಪರಿಚಯ, ಪು.೧೮೬

೭೩. ನಾಗರಖಂಡ ೭೦, ಒಂದು ಅಧ್ಯಯನ, ಪು.೧೮೬

೭೪. ಮೀರಾಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲರ ಬುಡಕಟ್ಟುವೀರರು,

೭೫. ರನ್ನನ ಗದಾಯುದ್ಧ(ಸಂಗ್ರಹ), ಪು.೧೦

೭೬. ಆರ್.ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪು.೩೪

೭೭. ಕೀರ್ತಿನಾಥ ಕೋಟಿ, ಕನ್ನಡ ಸಾಹಿತ್ಯ ಸಂಗಾತಿ, ಪು.೧೯

೭೮. ದೇವರ ಕೊಂಡಾರೆಡ್ಡಿ, ಲಿಪಿ ಹುಟ್ಟು-ಬೆಳವಣಿಗೆ ಪು.೯

೭೯. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೨೭೩

೮೦. ಎಫಿಗ್ರಫಿಯಾ ಕರ್ನಾಟಕ ಸಂ.೮, ೧೪

೮೧. ಅದೇ, ೨೫೧

೮೨. ಅದೇ, ೨೪೦

೮೩. ಅದೇ, ೩೩೬

೮೪. ಅದೇ, ೩೬೯

೮೫. ಅದೇ, ೩೬೯

೮೬. ಅದೇ, ೩

೮೭. ಅದೇ.೧೪೦

೮೮. ಡಿ.ಎಸ್.ಕರ್ಕಿ, ಕನ್ನಡ ಛಂದೋವಿಕಾಸ, ಪು.೧೦೦

೮೯. ಎಫಿಗ್ರಫಿಯಾ ಕರ್ನಾಟಕ ಸಂ.೮, ೨೫೧

೯೦. ಅದೇ, ೪೭

೯೧. ಅದೇ, ೫೧೭

೯೨. ಅದೇ, ೧೪೦

೯೩. ಅದೇ, ೩

೯೪. ಅದೇ, ೧೭೫

೯೫. ಡಾ.ಕೆ.ಆರ್ ಗಣೇಶ್, ಶಾಸನ ಸರಸ್ವತಿ,

೯೬. ಎಫಿಗ್ರಫಿಯಾ ಕರ್ನಾಟಕ ಸಂ.೮ ಸೊರಬ ೧೨

೯೭. ಎಫಿಗ್ರಫಿಯಾ ಕರ್ನಾಟಕ ಸಂ.೮ ಸೊರಬ ೨೫೧

೯೮. ಕೆ.ಪ್ರಬಾಕರ ರಾವ್, ಮಧ್ಯಕಾಲೀನ ಕರ್ನಾಟಕದಲ್ಲಿ ಯುದ್ಧಗಳು, ಪು.೧೦೧

೯೯. ಎಫಿಗ್ರಫಿಯಾ ಕರ್ನಾಟಕ ಸಂ.೧೩ ೫೮

೧೦೦. ಎಫಿಗ್ರಫಿಯಾ ಕರ್ನಾಟಕ ಸಂ.೮, ಸೊರಬ ೫೬೪

೧೦೧. ಅದೇ, ಸಾಗರ ೭೪

೧೦೨. ಅದೇ, ಸೊರಬ ೫೩೧

೧೦೩. ಎಫಿಗ್ರಫಿಯಾ ಕರ್ನಾಟಕ ಸಂ.೭, ಶಿಕಾರಿಪುರ ೧೯೫

೧೦೪. ಎಫಿಗ್ರಫಿಯಾ ಕರ್ನಾಟಕ ಸಂ.೮, ಸೊರಬ ೩೩೭

೧೦೫. ಅದೇ, ಸೊರಬ ೨೮೯

೧೦೬. ಅದೇ, ಸೊರಬ ೫೨೫

೧೦೭. ಉಬ್ಬು ಶಿಲ್ಪದ ವಿವರಗಳಿಗೆ ಕನ್ನಡ ಶಾಸನ ಶಿಲ್ಪ ಪು.೭ನ್ನು ಗಮನಿಸಬಹುದು

೧೦೮. ಶಾಸನಶಿಲ್ಪ, ಪು.೩೩

೧೦೯. ಚಿತ್ರ, ಅಡಗಂಟಿ

೧೧೦. ಚಿತ್ರ, ಬಂದಳಿಕೆ ೨

೧೧೧. ಚಿತ್ರ, ಹೊಸಗುಂದ

೧೧೨. ಚಿತ್ರ, ಕುಬಟೂರು

೧೧೩. ಚಿತ್ರ, ಕೋಟಿಪುರ

೧೧೪. ಚಿತ್ರ, ಮಳವಳ್ಳಿ

೧೧೫. ಚಿತ್ರ, ಮಳೆಕೊಪ್ಪ ಕೋಟೆ

೧೧೬. ಚಿತ್ರ, ಪುರಗ್ರಾಮ

೧೧೭. ಚಿತ್ರ, ಹಿರೇಜಂಬೂರು

೧೧೮. ಚಿತ್ರ, ಮಲ್ಲೇನಹಳ್ಳಿ

೧೧೯. ಚಿತ್ರ, ಹಿರೇಜಂಬೂರು

ಅಧ್ಯಾಯ: ಆರು

# ಗೋಗ್ರಹಣದ ಕಾರಣ-ಪರಿಣಾಮಗಳು

ಪ್ರಾಚೀನ ಕಾಲದಲ್ಲಿ ತುರುಗಾಳಗವು ಅನಿವಾರ್ಯವಾದ ಮತ್ತು ಗ್ರಾಮಗಳ ಅಸ್ತಿತ್ವದ ಹೋರಾಟವಾಗಿತ್ತು. ತುರುಗಳನ್ನು ಕಳೆದುಕೊಂಡವರು ತಮ್ಮ ಮಾನವನ್ನೇ ಕಳೆದುಕೊಂಡ ಹೇಡಿ ಎನಿಸಿಕೊಳ್ಳುತ್ತಿದ್ದರು. ಅಲ್ಲದೆ ಸಮಾಜದಲ್ಲಿ ಅವರು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಧಾರ್ಮಿಕ ಕಾರಣಗಳಿಂದ ಅವಮಾನಿತರಾಗುತ್ತಿದ್ದರು. ತುರುಗಾಳಗವು ಯಶಸ್ವಿಯಾದರೆ ಆ ತುರುಗಳ್ಳರಿಗೆ ವಿಶೇಷ ಗೌರವಾದರಗಳು ದೊರೆಯುತ್ತಿದ್ದವು. ಒಂದು ಗ್ರಾಮ, ರಾಜ್ಯ ತನ್ನ ಶಕ್ತಿಯನ್ನು ಒರೆಗೆ ಹಚ್ಚುವ ಪ್ರಯತ್ನ ಈ ಗೋಗ್ರಹಣಗಳಿಂದ ಆಗುತ್ತಿತ್ತು. ಪ್ರತಿಯೊಬ್ಬ ವೀರನೂ ತನ್ನ ಪ್ರಾಣವನ್ನು ಲೆಕ್ಕಿಸದೆ ಗೋವುಗಳ ರಕ್ಷಣೆಗೆ ಹೋರಾಡುವುದು ಅಂದಿನ ಕಾಲದಲ್ಲಿ ಸಾಮಾನ್ಯವಾಗಿತ್ತು. ಗೋವುಗಳನ್ನು ಸೆರೆ ಹಿಡಿದು ಶತ್ರು ರಾಜರಿಗೆ ಸವಾಲೆಸೆದು ಬಂದರೆ, ಆ ಸವಾಲನ್ನು ಸ್ವೀಕರಿಸಿ ಗೋವುಗಳನ್ನು ಕದ್ದ ಗುಂಪಿನೊಂದಿಗೆ ಯುದ್ಧ ಮಾಡುವುದು ಮತ್ತು ಗೆಲ್ಲುವುದು ಅನಿವಾರ್ಯವಾಗುತ್ತಿತ್ತು. ಕುಮಾರವ್ಯಾಸ ಭಾರತದಲ್ಲಿ ಕೌರವರು ವಿರಾಟನ ಗೋವುಗಳನ್ನು ಸೆರೆಹಿಡಿದು ಗೋವಳರ ಮೂಗಿಗೆ ಸುಣ್ಣ ಬಳಿದು, ಈ ಯುದ್ಧ ನಿಮ್ಮಂಥ ಗೋವಳಿಗರಿಗಲ್ಲ. ಯಾರಾದರೂ ವೀರರಿದ್ದರೆ ಕಳಿಸು ಎಂದು ಸವಾಲೆಸೆ ಯುವುದನ್ನು ಕಾಣುತ್ತೇವೆ. ಹೀಗೆ ಸವಾಲನ್ನು ಸ್ವೀಕರಿಸಿ ಗೆಲುವಿನ ವಿಜಯ ಮಾಲೆಯನ್ನು ಧರಿಸುವುದು ಪ್ರತಿಯೊಬ್ಬ ವೀರನ ಕನಸಾಗಿತ್ತು. ಅಲ್ಲದೆ ತುರುಗೊಳ್ ಕದನದಲ್ಲಿ ಗೋವುಗಳ ರಕ್ಷಣೆ ಮಾಡುತ್ತಾ ವೀರ ಮರಣವನ್ನು ಹೊಂದಿದರೆ ಆತ ಸ್ವರ್ಗಕ್ಕೆ ಸಲ್ಲುತ್ತಾನೆ ಎಂಬ ಆದರ್ಶ ಕಲ್ಪನೆ ವೀರತ್ವಕ್ಕೆ ಸಾಕ್ಷಿಯಾಗಿದೆ.

ಒಂದು ಕುಟುಂಬದ, ಗ್ರಾಮದ, ರಾಜ್ಯದ ಗೋವುಗಳ ಸಮೃದ್ಧಿ ಆ ನಾಡಿನ ಗ್ರಾಮದ ಕುಟುಂಬದ ಸಿರಿತನದ ಸಂಕೇತವೆಂದು ಗ್ರಾಮ ಸಮುದಾಯ ಭಾವಿಸುತ್ತದೆ. ವಿನಿಮಯದ

ವಸ್ತುಗಳಾಗಿ ತುಪ್ಪ, ಬೆಣ್ಣೆ, ಹಾಲು, ಚಲಾವಣೆಯಲ್ಲಿದ್ದವು. ಅಲ್ಲದೆ ಹೆಚ್ಚಿನ ಮೌಲ್ಯದ ವಸ್ತುಗಳ ವಿನಿಮಯಕ್ಕೆ ದನಗಳನ್ನೂ ಬಳಸಲಾಗುತ್ತಿತ್ತು. ಹೀಗೆ ವ್ಯವಹಾರದ ವಿನಿಮಯದ ದ್ಯೋತಕವಾದ ಗೋವುಗಳನ್ನು ಕಳೆದುಕೊಂಡಲ್ಲಿ ಅವರ ಆರ್ಥಿಕ ಚಟುವಟಿಕೆಯೇ ನಾಶವಾಗಿ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿದ್ದರು. ಆ ಅಸ್ತಿತ್ವದ ಉಳಿವಿನ ಹೋರಾಟದ ಕಾರಣ, ಪರಿಣಾಮಗಳನ್ನು ನಾಲ್ಕು ಕವಲುಗಳಾಗಿ ಅಧ್ಯಯನ ಮಾಡಬಹುದು. ಅವುಗಳೆಂದರೆ

೧. ಸಾಮಾಜಿಕ ಕಾರಣಗಳು

೨. ಆರ್ಥಿಕ ಕಾರಣಗಳು

೩. ರಾಜಕೀಯ ಕಾರಣಗಳು

೪. ಧಾರ್ಮಿಕ ಕಾರಣಗಳು

ಇವುಗಳಲ್ಲಿ ಮೊದಲು ಸಾಮಾಜಿಕ ಕಾರಣಗಳನ್ನು ನೋಡಬಹುದಾಗಿದೆ.

### ೧. ಸಾಮಾಜಿಕ ಕಾರಣಗಳು

ತುರುಗೊಳ್ ಯುದ್ಧಗಳ ನೇರ ಪರಿಣಾಮವು ಒಂದು ಗ್ರಾಮ, ರಾಜ್ಯ, ಕುಟುಂಬ, ಸಮಾಜದ ಮೇಲಾಗುತ್ತಿತ್ತು. ತುರುಗೊಳ್ ಕದನಗಳು ತತ್‌ಕ್ಷಣದಲ್ಲಿ ಆಕಸ್ಮಿಕವಾಗಿ ನಡೆಯುವ ವಿದ್ಯಾಮಾನವಾದ್ದರಿಂದ ಸಾವು ನೋವುಗಳು ಹೆಚ್ಚಾಗುತ್ತಿದ್ದವು. ಅವಮಾನಗಳ ಜೊತೆಗೆ ವೀರನಾದ ತನ್ನ ಗಂಡನನ್ನು ಕಳೆದುಕೊಂಡ ಹೆಣ್ಣಿನ ಗೋಳಾಟ, ಕುಟುಂಬದ ತೊಳಲಾಟ, ಚರಿತ್ರೆಯ ಪುಟಗಳಲ್ಲಿ ಪ್ರಾಮುಖ್ಯತೆ ಪಡೆಯದಿದ್ದರೂ ವೀರನಿಗೆ ನೀಡಿದ ನೆತ್ತರ ಕೊಡುಗೆಗಳು ಮರಣ ಹೊಂದಿದ ವೀರನ ಗೌರವವನ್ನು ದಾಖಲಿಸುತ್ತವೆ. ಗೋವುಗಳ ಅಪಹರಣ ಒಂದು ರೀತಿಯಲ್ಲಿ ಕೃಷಿ ಪರಂಪರೆಯ ಮೇಲೆಯೇ ಪ್ರಭಾವಯುತವಾದ ಗದಾ ಪ್ರಹಾರವಾಗಿತ್ತು.

ಭಾರತದ ಋಷಿ ಪರಂಪರೆ ಮತ್ತು ಕೃಷಿ ಪರಂಪರೆಯಲ್ಲಿ ಗೋವುಗಳ ಪ್ರಾಮುಖ್ಯತೆ ಹಾಗೂ ಅವುಗಳನ್ನು ತಮ್ಮ ಒಡಹುಟ್ಟಿದವರಂತೆ ಕಾಣುವ ಭಾವನಾತ್ಮಕ ಸಂಬಂಧ ಒಂದು ವೀರ ಪರಂಪರೆಯ ಹುಟ್ಟಿಗೂ ಕಾರಣವಾಗಿದೆ. **"ಅನ್ನತೋ ಪ್ರಾಣಃ ಪ್ರಾಣತೋ ಪರಾಕ್ರಮಃ"** ಎಂಬ ಉಕ್ತಿಯಂತೆ ಶರೀರಕ್ಕೆ ಪ್ರಾಣವೂ, ಪ್ರಾಣಕ್ಕೆ ಅನ್ನ(ಆಹಾರ)ವೂ ಅಧಾರವಾಗಿದೆ. ಹಾಗೆಯೇ ಉಪನಿಷತ್ತುಗಳೂ ಸಹ

**"ಅನ್ನ ಬ್ರಹ್ಮೇತಿ ವ್ಯಜಾನಾತ್।**
**ಅನ್ನಾದ್ಯೇವ ಖಲ್ವಿಮಾನಿ ಭೂತಾಗಿ ಜಾಯಂತಿ॥**
**ಅನ್ನೇನ ಜಾತಾನಿ ಜೀವಂತಿ।**
**ಅನ್ನಂ ಪ್ರಯಂತ್ಯಭಿಶಂವಿಶಂತೀ॥**

ಅನ್ನವೇ ಬ್ರಹ್ಮವೆಂದೂ, ಅನ್ನದಿಂದಲೇ ಜೀವ ಜಗತ್ತಿನ ಉತ್ಪತ್ತಿಯೆಂತಲೂ, ಉತ್ಪತ್ತಿಯಾದ ಜೀವರಾಶಿಯು ಬದುಕುವುದು ಅನ್ನದಿಂದಲೇ ಆಗಿದ್ದು ಇಂಥಹ ಅನ್ನಕ್ಕೆ ಸಮಾನವಾದುದು ಮೊತ್ತೊಂದಿಲ್ಲ ಎಂದಿದ್ದಾರೆ. ಅಂತಹ ಆಹಾರ ಉತ್ಪಾದನೆಯಲ್ಲಿ ಗೋವುಗಳ ಪಾತ್ರ ಮಹತ್ವದ್ದು.[೧] ಮಾನವನ ದೈಹಿಕ ಪೋಷಣೆಗೆ ಅಗತ್ಯವಾದ ಆಹಾರವನ್ನು ಉತ್ಪಾದಿಸುವ ಸಮಗ್ರ ಪ್ರಕ್ರಿಯೆಯನ್ನು ಕೃಷಿ ಎಂದು ಕರೆಯಲಾಗಿದೆ. ಈ ಕೃಷಿ ಮಾಡುವುದು ಗೌರವ ಸ್ಥಾನ ಎಂದು ಬಿಂಬಿತವಾಗಿದ್ದರಿಂದ ಕೃಷಿ ಕಾರ್ಯ ಕೈಗೊಳ್ಳುವ ರೈತನಿಗೂ ಅವನ ಜೊತೆಗಾರ ಗೋವುಗಳಿಗೂ ಪ್ರಧಾನ ಸ್ಥಾನ ದೊರೆತವು. ಸಾಗುವಳಿಯ ಜಮೀನನ್ನು **ದೇವಮಾತೃಕ** ಮತ್ತು **ನದಿಮಾತೃಕ** ಎಂದು ವಿಂಗಡಿಸಬಹುದು. ಕೇವಲ ಮಳೆಯ ನೀರನ್ನೇ ಆಶ್ರಯಿಸಿ ಬೆಳೆಯುವ ಹೊಲಗಳು ದೇವ ಮಾತೃಕಗಳು. ನದಿ, ಕೆರೆ, ಮುಂತಾದವನ್ನು ಆಶ್ರಯಿಸಿರುವ ಹೊಲಗಳು ನದಿಮಾತೃಕಗಳು ಎಂದು ಕರೆಯಲಾಗಿದೆ. ಕರ್ನಾಟಕದಲ್ಲೂ ಪ್ರಾಚೀನ ಕಾಲದಿಂದಲೂ ವ್ಯವಸಾಯವೇ ಅತೀ ಪ್ರಮುಖವಾದ ಜೀವನೋಪಾಯವಾಗಿತ್ತು. ತನ್ನ ಗರ್ಭದಿಂದ ಹೊರಟ ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದು, ಬೆಳೆಗಳನ್ನು ಬೆಳೆಯುವ ರೈತನನ್ನು ಭೂದೇವಿಯ ಮಕ್ಕಳೆಂದೂ ಶಾಸನವೊಂದು ಕರೆದಿದೆ. ಆ ಶಾಸನವನ್ನು ಗಮನಿಸುವುದಾದರೆ **"ಅನ್ನದಾನ ಸಂಪೂರ್ಣರುಂ ಭುಮಿ ಪುತ್ರಕರುಮಪ್ಪ ಚಂದಗೌಡ"** ಎಂದು ಕರೆದಿದೆ. ರೈತನನ್ನು ಒಕ್ಕಲ ಮಕ್ಕಳೆಂದೂ ಶಾಸನಗಳು ಕರೆದಿವೆ. ವ್ಯವಸಾಯದ ವೃತ್ತಿಗೆ ಪ್ರತಿ ಹಂತದಲ್ಲಿಯೂ ಸಹಾಯಕವಾಗುವ ಪಶುಪಾಲನೆಯೂ ಜೊತೆಯಾಗಿ ರೈತನ ಜೀವನಾಡಿಯೇ ಆಯಿತು. ಒಂದೊಂದು ಊರಿನಲ್ಲಿಯೂ ಕೃಷಿಗೆ ಅಗತ್ಯ ಪ್ರಾಣಿಗಳಾದ ಗೋವುಗಳು ಮೇಯಲು ಪ್ರತ್ಯೇಕವಾದ ಜಾಗವನ್ನು ಸಾರ್ವಜನಿಕರಿಗಾಗಿ ಹುಲ್ಲುಗಾವಲು ಬಿಡುತ್ತಿದ್ದರು. ಇವುಗಳನ್ನು ಕಾವಲುಗಳು ಅಥವಾ ಗೋಮಾಳಗಳು ಎಂದು ಕರೆಯುತ್ತೇವೆ. ಈ ಹುಲ್ಲುಗಾವಲು ಕೇಂದ್ರಾಡಳಿತ ಅಧೀನದಲ್ಲಿರುತ್ತಿದ್ದಿತು.

ರೈತಾಪಿವರ್ಗದವರು ದನಗಳ ಗೊಬ್ಬರವನ್ನು ಹೊಲಗಳಿಗೆ ಬಳಸುತ್ತಿದ್ದರು. ದನಗಳನ್ನು ಮೇಯಿಸಲು ಹಿಂದಿನಿಂದಲೂ ಗ್ರಾಮದಲ್ಲಿ ನಿಗದಿಯಾದ ದನಗಾಹಿ ಇರುತ್ತಿದ್ದ. ಅವನ ಕೂಗನ್ನು ಕೇಳಿ ಪ್ರತಿ ಮನೆಯವರೂ ತಮ್ಮ ದನಗಳನ್ನು ಬಿಟ್ಟು ಆ ಗೋಗಾಯಿಯೊಂದಿಗೆ ಕಳಿಸಿಕೊಡುತ್ತಿದ್ದರು. ಆ ಗೋಪಾಲಕ ಅಥವಾ ದನ ಕಾಯುವವನು ಆ ದನಗಳನ್ನು ಸಂಜೆ ಸೂರ್ಯ ಮುಳುಗುವವರೆಗೆ ಮೇಯಿಸಿಕೊಂಡು ಮನೆಗೆ ಕರೆತರುತ್ತಿದ್ದನು. ದನಗಳನ್ನು ಮೇಯಿಸಿದಕ್ಕೆ ವಾರ್ಷಿಕವಾಗಿ ಧಾನ್ಯ, ಬಟ್ಟೆ, ಧನ ಮಾತಾಡಿಕೊಂಡಂತೆ ಪ್ರತಿಫಲವನ್ನು ಪಡೆಯುತ್ತಿದ್ದನು. ಹೀಗೆ ದನಗಳನ್ನು ಮೇಯಿಸಲು ಅಟ್ಟಿಕೊಂಡು ಹೋಗುವ ಮುನ್ನ ಊರಿನ ಹೆಬ್ಬಾಗಿಲ ಬಳಿ

ಅಥವಾ ಅಗಸಿ ಬಾಗಿಲಲ್ಲಿ ಸ್ವಲ್ಪ ಕಾಲ ನಿಂತು, ಎಲ್ಲ ಜನರ ದನಗಳು ಬಂದು ಸೇರುವವರೆಗೂ ನಿಲ್ಲಿಸುತ್ತಿದ್ದರು. ಅಲ್ಲಿ ಸಗಣಿಯನ್ನು ಸಂಗ್ರಹಿಸಿ ಗೊಬ್ಬರವನ್ನು ತಯಾರು ಮಾಡುವವರು ಊರಿಗೆ ಹಣವನ್ನು ನೀಡಬೇಕಿತ್ತು. ಇತ್ತೀಚಿನವರೆಗೂ ಅಗಸಿ ಬಾಗಿಲಲ್ಲಿ ಸಗಣಿ ಹಿಡಿಯುವ ಕಾಯಕವನ್ನು ಹರಾಜು ಮಾಡುವ ಮೂಲಕಗ್ರಾಮದ ಅಭಿವೃದ್ಧಿಗೆ ಹಣ ಸಂಗ್ರಹಿಸಲಾಗುತ್ತಿತ್ತು. ಇಂತಿಷ್ಟು ವರ್ಷಗಳೆಂಬ ಕರಾರಿನೊಂದಿಗೆ ಯಾರು ಹೆಚ್ಚು ಬೆಲೆ ಕೂಗುತ್ತಾರೋ ಅವರಿಗೆ ಅಗಸಿಯಲ್ಲಿ ಸಗಣಿ ಹಿಡಿಯುವ ಹಕ್ಕು ದೊರೆಯುತ್ತಿತ್ತು. ಊರಿನಲ್ಲಿ ತಮ್ಮ ಹಸುಗಳು ಗರ್ಭಕಟ್ಟುವಂತೆ ಮಾಡಲು, ಬೀಜ ಕಟ್ಟಿಸಲು ಸಾರ್ವಜನಿಕವಾದ "ವೃಷಭ" ವನ್ನು ಸಾಕುತ್ತಿದ್ದರು. ಇದನ್ನು ದೇವರಿಗೆ ಬಿಡುವುದು, ಅಥವಾ ಗೂಳಿ ಬಿಡುವುದು ಎಂದೂ ಸಹ ಕರೆಯುತ್ತಾರೆ. ಹೀಗೆ ಬಿಟ್ಟ ವೃಷಭ (ಹೋರಿ) ಊರಿನ ಯಾವ ಹೊಲದಲ್ಲಾದರೂ ಯಾರ ನಿರ್ಬಂಧವೂ ಇಲ್ಲದೇ ಮೇಯಬಹುದಿತ್ತು. ಇಂದಿಗೂ ಈ ವ್ಯವಸ್ಥೆ ಇದೆ. ಹೊಲಗಳನ್ನು ಉಳಲು, ತೋಟಗಳಲ್ಲಿ ಏತವನ್ನೆಳೆಯಲು, (ಆರಂಭದ ದಿನಗಳಲ್ಲಿ ನೀರಾವರಿ ಎಂದರೆ ತಮ್ಮ ಗದ್ದೆಯಲ್ಲಿ ಬಾವಿ ತೋಡಿಸಿ ಎತ್ತುಗಳ ಸಹಾಯದಿಂದ ತಮ್ಮ ಗದ್ದೆಗೆ ನೀರನ್ನು ಹಾಯಿಸುವ ಏತ ನೀರಾವರಿ ಪ್ರಾಮುಖ್ಯತೆ ಪಡೆದಿತ್ತು. ಇದು ಸಂಪ್ರದಾಯವಾಗಿ ಬಂದ ಕೃಷಿ ಪದ್ಧತಿ ಬದಲಾಗುವಾಗಲೂ ಗೋವುಗಳ ಮಹತ್ವವನ್ನು ಹೆಚ್ಚಿಸಿತ್ತು.) ಸಾಮಾನುಗಳನ್ನು ಸಾಗಿಸಲು, ಭೂಮಿಯನ್ನು ಉಳುಮೆ ಮಾಡಲು ಎತ್ತುಗಳನ್ನು, ಕೆಲವು ಕಡೆ ಕೋಣಗಳನ್ನು ಬಳಸುವುದನ್ನು ಕಾಣುತ್ತೇವೆ. ಗೋವುಗಳಿಗೆ ಸಂಬಂಧಿಸಿದಂತೆ ಗಾಣದ ತೆಱಿ = ಗಾಣದ ಮೇಲಿನ ತೆರಿಗೆ, ತಿಪ್ಪೆಸುಂಕ = ತಿಪ್ಪೆ ಮೇಲಿನ ಸುಂಕ, ತುಪ್ಪದೆಱಿ = ತುಪ್ಪದ ಮೇಲಿನ ತೆರಿಗೆ, **ಬಾಲವಣ?**ಇದು ಎತ್ತುಗಳ ಮೇಲೆ ಹಾಕುತ್ತಿದ್ದ ತೆರಿಗೆ, ಮುಂತಾದ ತೆರಿಗೆಗಳು  ಪಶು ಸಂಗೋಪನೆಯ ಮೇಲಿದ್ದವು. ಇದಕ್ಕೆ ಶಬ್ಧಮಣಿ ದರ್ಪಣದ **'ಬಾಲವಣಂ ಬೇಡುವನೊಂದೆ ಗೊಂದೆಗಮನಂಗಾರತಿಯಂ ಹೈಹಯಂ'** ಎಂಬ ಮಾತು. ಅಂದರೆ 'ಹೈಹಯನು ಶಿವನ ಎತ್ತಾದರೂ ಸರಿಯೆ ಬಾಲವಣವನ್ನು ಕೇಳದೆ ಬಿಡುವವನಲ್ಲ.' ಎಂಬ ಮಾತು ಶಬ್ದಮಣಿದರ್ಪಣ ಕೃತಿಯಲ್ಲಿ ಉಲ್ಲೇಖಿತವಾಗಿದೆ. ತೆರಿಗೆ ಹಾಕುವಾಗ "ಒಂದು ಹಸುವಿಗೆ" ಎಂದು ಹೇಳುವ ಬದಲು 'ಒಂದು ಬಾಲಕ್ಕೆ' ಎಂದು ಹೇಳುವ ಸಂಪ್ರದಾಯವು ಈಗಲೂ ಉತ್ತರ ಭಾರತದಲ್ಲಿದೆ. ಹಾಗೆಯೇ 'ಪುಚ್ಚೀ' ಎಂಬುದು ದನಗಳ ಹುಲ್ಲುಗಾವಲಿನಲ್ಲಿ ಮೇವನ್ನು ತಿನ್ನುವುದಕ್ಕೆ ತೆರಿಗೆ. ಮುಂತಾದ ತೆರಿಗೆಗಳು ಗೋ ಸಂಬಂಧಿಯಾಗಿವೆ.[೨]

ಅಂದಿನ ಕಾಲದಲ್ಲಿ ಸಮಾಜದ ಉತ್ಪಾದನಾ ಕ್ಷೇತ್ರ ಎಂದರೆ ಕೃಷಿ, ವ್ಯಾಪಾರ ಮುಖ್ಯವಾಗಿತ್ತು. ಭೂಮಿ ಉಳ್ಳವರು ಕೃಷಿಕರಾದರೆ ಆ ಕೃಷಿ ಚಟುವಟಿಕೆಗಳಿಗೆ ಪೂರಕವಾಗಿ ಪಶುಸಂಗೋಪನೆ

ವಿಶೇಷ ಸ್ಥಾನ ಪಡೆದಿದ್ದಿತು. ಉತ್ಪಾದನೆಯಾದ ಆಹಾರ ಪದಾರ್ಥಗಳ ಲೇವಾದೇವಿ ವ್ಯವಹಾರದಿಂದ ವ್ಯಾಪಾರ ಮಾಡುವವರು ಪ್ರಾಮುಖ್ಯತೆ ಪಡೆದಿದ್ದರು. ಇವುಗಳ ಹೊರತಾಗಿ ಬಡಗಿ, ಕುಂಬಾರಿಕೆ, ನೇಕಾರಿಕೆ ಗಾಣ ನಡೆಸುವವರು, ಕೃಷಿಗೆ ಪೂರಕ ಕೆಲಸ ಮಾಡಿಕೊಡುವವರು ಒಂದು ಗುಂಪಾದರೆ, ಯುದ್ಧೋಪಕರಣ ಮಾಡುವುದು ಒಂದು ಗುಂಪಿನ ಕೆಲಸವಾಗಿತ್ತು. ಹಾಗಾಗಿ ಅಂದಿನ ಸಮಾಜದಲ್ಲಿ ಕೃಷಿ, ವ್ಯಾಪಾರ, ಹೊರತುಪಡಿಸಿದರೆ ರಾಜನ ಸೇವೆಗಾಗಿಯೇ 'ದಂಡಿಗೆ' ಸೇರುವುದು ಅಂದರೆ ಸೈನ್ಯಕ್ಕೆ ಸೇರುವುದು ಅನಿವಾರ್ಯವೂ ಅಂದಿನ ಜೀವನದ ಅಗತ್ಯವೂ ಆಗಿತ್ತು. ವ್ಯಾಪಾರಿಯ ವಸ್ತುಗಳನ್ನು ಕಾಪಾಡಿಕೊಳ್ಳಲು, ಸಾರ್ಥದ ರಕ್ಷಣೆಯಲ್ಲಿ, ಊರಿನ ರಕ್ಷಣೆಯಲ್ಲಿ, ರಾಜರ ರಕ್ಷಣೆಯಲ್ಲಿ, ಸೈನ್ಯದ ಪ್ರಾಮುಖ್ಯತೆ ಹೆಚ್ಚಿದಂತೆ ಆ ಸೈನಿಕರ ಹೋರಾಟಕ್ಕೆ ವಿಶೇಷವಾದ ಮನ್ನಣೆಗಳು, ಗೌರವಗಳು ಸಿಗತೊಡಗಿದವು. ಅಂದಿನ ಸಮಾಜದಲ್ಲಿ ಸೈನಿಕನ ಸ್ಥಾನಮಾನಗಳು ಉನ್ನತವಾಗಿದ್ದರಿಂದ ಸೈನ್ಯ ಸೇರುವುದು ಅಂದಿನ ವಿಶೇಷ ಆಸಕ್ತಿಯ ಕ್ಷೇತ್ರವಾಗಿ ಸಮಾಜ ಕಾಣುತ್ತಿತ್ತು.

ರಾಜ್ಯದ ರಕ್ಷಣೆಗೆ ಸೈನ್ಯ ಅನಿವಾರ್ಯ ಆದಂತೆ ಸೈನಿಕರಿಗೆ ನೀಡುವ ಸೌಕರ್ಯಗಳನ್ನು ವಿಶೇಷವಾಗಿ ರಾಜ ಪ್ರಕಟಿಸುತ್ತಿದ್ದ. ಅಲ್ಲದೆ ಯುದ್ಧ ನಡೆದಾಗ ಸೈನಿಕರು ಬೇರೆ ನಾಡಿನ ಗ್ರಾಮಗಳನ್ನು ದೋಚಲು ಅವಕಾಶಗಳು ದೊರೆಯುತ್ತಿದ್ದವು. ಇದರಿಂದ ಸೈನಿಕರು ಯುದ್ಧದ ಸಮಯದಲ್ಲಿ ದೋಚುವ ಅವಕಾಶಗಳು ದೊರೆತಾಗ ದಿಢೀರ್ ಶ್ರೀಮಂತರಾಗುತ್ತಿದ್ದದ್ದು ಸಮಾಜದಲ್ಲಿ ಕುತೂಹಲಕ್ಕೂ ಕಾರಣವಾಗಿತ್ತು. ಅಲ್ಲದೆ ಯುದ್ಧದಲ್ಲಿ ಮಡಿದಾಗ ರಾಜ ನೀಡುತ್ತಿದ್ದ ಜಮೀನು ಅಥವಾ ಬಹುಮಾನಗಳು, ಮನ್ನಣೆಗಳು, ಆಕರ್ಷಣೀಯವಾಗಿರುತ್ತಿದ್ದವು. ಆದ್ದರಿಂದಲೇ ವೀರ ವಾಕ್ಯವಾದ "ಇದ್ದರೆ ವಿಜಯಲಕ್ಷ್ಮಿ, ಸತ್ತರೆ ವೀರ ಲಕ್ಷ್ಮಿ, ಮಡಿದ ವೀರನನ್ನು ಸುರಾಂಗನೆಯರು ಸ್ವರ್ಗಕ್ಕೆ ಕರೆದುಕೊಂಡು ಹೊಗುವರೆಂಬ" ಕಲ್ಪನೆ ಅಂದು ಹೆಚ್ಚು ಜನಪ್ರಿಯವಾಗಿತ್ತು. ಅಲ್ಲದೆ ಸಮಾಜದಲ್ಲಿ ಪುರೋಹಿತ ವರ್ಗ ತನ್ನ ಸ್ಥಾನವನ್ನು ಕಾಪಾಡಿಕೊಳ್ಳಲು ಮತ್ತು ತಮ್ಮ ಜೀವನದ ಸೌಲಭ್ಯತೆಗಾಗಿ ಅಧಿಕಾರಸ್ಥರೊಡನೆ ಸೇರಿಕೊಂಡು ಮುಗ್ದರನ್ನು ಯುದ್ಧದಲ್ಲಿ ಹೋರಾಡುವಂತೆ ಪ್ರೋತ್ಸಾಹಿಸುತ್ತಿದ್ದರು. ಅದರ ಫಲವೇ ಅವರಿಗೆ ಮನ್ನಣೆಗಳು, ಕೊಡುಗೆಗಳು, ಸಿಗುತ್ತಿದ್ದವು. ಸೈನಿಕರು ಅಷ್ಟಕ್ಕೇ ಸಂತೋಷಪಡುತ್ತಿದ್ದರು. ಹಾಗಾಗಿ ಸೈನ್ಯವೃತ್ತಿ–ಸೈನಿಕವೃತ್ತಿ ಸಮಾಜದ ಪ್ರತಿಷ್ಠಿತ ಹುದ್ದೆಯಾಗಿ ಬದಲಾಯಿತು. ಕೃಷಿ ಪ್ರಧಾನ ಅಂದಿನ ವ್ಯವಸ್ಥೆಯಲ್ಲಿ ವೇದಗಳ ಕಾಲದಿಂದಲೂ ಭಾರತೀಯ ಋಷಿ ಮುನಿಗಳು ಕೂಡ ಕೃಷಿಯ ಬಗ್ಗೆ ಹೆಚ್ಚಿನ ಆಸಕ್ತಿ ಹೊಂದಿದ್ದರು.

ಕೃಷಿ ಚಟುವಟಿಕೆಗಳಿಗೆ ಅಗತ್ಯವಾದ ಗೊಬ್ಬರ ಈ ಪಶು ಪಾಲನೆಯಿಂದ ದೊರೆಯುತ್ತಿತ್ತು. ಜೊತೆಗೆ "ವೃಷಭಗಳು" ಭೂಮಿಯನ್ನು ಉಳುಮೆ ಮಡಲು ಅಗತ್ಯವಾಗಿದ್ದು ರೈತನ

ಜೊತೆಗಾರನಾಗಿತ್ತು. ಎತ್ತುಗಳು ರೈತರ ಕೆಲಸವನ್ನು ಮಾಡಿದರೆ ಹಸುಗಳ, ದನಗಳ ಉತ್ಪನ್ನಗಳಾದ ಹಾಲು, ಮೊಸರು, ತುಪ್ಪ ಇವೆಲ್ಲವೂ ಅಂದಿನ ಸಮಾಜದ ವಿನಿಮಯದ ವಸ್ತಗಳಾಗಿ ಪರೋಕ್ಷವಾಗಿ **'ಹಣದ'** ಕಾರ್ಯವನ್ನೇ ಮಾಡುತ್ತಿದ್ದವು. ೧೦ ಸೇರು ತುಪ್ಪಕ್ಕೆ ಒಂದಷ್ಟು ಬೇರೆ ಧಾನ್ಯಗಳನ್ನೋ, ಬಟ್ಟೆಗಳನ್ನೋ, ಮಡಿಕೆಗಳನ್ನೋ ವಿನಿಮಯ ಮಾಡಿಕೊಳ್ಳುತ್ತಿದ್ದರು. ಹಸುಗಳನ್ನು ಸಹ ಅನೇಕ ವೇಳೆಯಲ್ಲಿ ವಿನಿಮಯಕ್ಕಾಗಿ ಬಳಸುತ್ತಿದ್ದರಿಂದ ಅವುಗಳನ್ನು 'ಜೀವಧನ' ಎಂದು ಕರೆಯಲಾಗಿದೆ. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ದನಗಳು ಎಂದರೆ ಹಸುಗಳು, ಎಮ್ಮೆ, ಹೋರಿ, ಎತ್ತು, ಕರುಗಳು, ಎಲ್ಲವನ್ನೂ ಒಳಗೊಂಡದ್ದನ್ನು ಇಂದಿಗೂ ಹಳ್ಳಿಗಳಲ್ಲಿ ದನಗಳು, ದನದಹಿಂಡು ಎನ್ನುತ್ತಾರೆ. ಆ ಗುಂಪಿನಲ್ಲಿ ಯಾವ ಜಾತಿಯವು ಎಷ್ಟೆಷ್ಟಿವೆ ಎಂಬುದನ್ನು ಪುನಃ ಕೇಳಿದಾಗ ವಿಭಾಗಿಸಿ ಹೇಳುವ ಸಂಪ್ರದಾಯವಿದೆ. ಚುರುಕಾಗಿರುವ ಕಾರಣಕ್ಕೆ, ಹಸುಗಳ ಹಾಲು ಎಮ್ಮೆಯಷ್ಟು ಮಂದವಲ್ಲದ ಕಾರಣಕ್ಕೆ, ನೋಡಲು ಸುಂದರವೂ ಬಣ್ಣಗಳ ವೈವಿದ್ಯತೆ ತಮ್ಮ ಹಸುಗಳನ್ನು ಗುರುತಿಸಲು ಹೆಚ್ಚು ಅನುಕೂಲತೆ ಕಲ್ಪಿಸಿದ್ದರಿಂದ ಹಸುಗಳು ಹೆಚ್ಚು ಹೆಚ್ಚು ಚಲಾವಣೆಗೆ ಬಂದು ಜೀವಧನ ಎನಿಸಿಕೊಂಡವು. ಎಮ್ಮೆಗಳ ಸ್ವಭಾವವೇ ಮಂದವಾಗಿರುವುದರಿಂದ, ಮನುಷ್ಯ ಒಂದು ಕಡೆಯಿಂದ ಮತ್ತೊಂದು ಕಡೆಗೆ ಬೇಗನೆ ಕರೆದುಕೊಂಡು ಹೋಗಲು ಕಷ್ಟವಾದ್ದರಿಂದ ಹಾಗೂ ಅವುಗಳ ಬಣ್ಣ ಕಪ್ಪಗಿದ್ದದ್ದರಿಂದ ಮತ್ತು ಅವುಗಳ ಚಲನೆ ಬಹಳ ನಿಧಾನವಾಗಿದ್ದರಿಂದ ಅವು ಹಾಲು ಕೊಡಲಷ್ಟೇ ಸಿಮಿತವಾದವು. ಆದರೆ ಶಕ್ತಿಯಲ್ಲಿ ಎತ್ತುಗಳಿಗಿಂತ ಕೋಣಗಲೇ ಭಲಶಾಲಿಗಳಾಗಿವೆ. ಅಂದಿನ ಸಮಾಜದಲ್ಲಿ ದನಗಳ ಹಿಂಡುಗಳ ಸಂಖ್ಯೆಯನ್ನು ಅವಲಂಬಿಸಿ ಅಥವಾ ಗೋವುಗಳ ಸಂಖ್ಯೆಯ ಆಧಾರದಿಂದಲೇ ಅವರ ಸಂಪತ್ತನ್ನು ಅಳೆಯುತ್ತಿದ್ದರು.

ಯಾರ ಬಳಿಯಲ್ಲಿ ೫ ಲಕ್ಷ ಗೋವುಗಳಿದ್ದವರನ್ನು **'ಉಪನಂದ'** ಎಂದೂ, ೯ ಲಕ್ಷ ಆಕಳುಗಳಿವೆಯೋ ಅವರನ್ನು **'ನಂದ'** ಎಂದೂ, ೧೦ ಲಕ್ಷ ಗೋವುಗಳಿದ್ದವರನ್ನು **'ವೃಕ್ಷಭಾನು'** ಎಂದೂ, ೨೫ ಲಕ್ಷ ಗೋವುಗಳಿದ್ದವರನ್ನು **'ವೃಕ್ಷಭಾನುವರ'** ಎಂದೂ ಕರೆಯುತ್ತಿದ್ದರು. ಎಂಬ ಸಾಂಖಿಕ ಆಧಾರಗಳು ಅಂದಿನ ಕಾಲದ ಅಪಾರ ಗೋಸಂಪತ್ತನ್ನು ಸೂಚಿಸುತ್ತದೆ.[೩]

ಬೇಸಾಯದ ಜೊತೆಗೆ ಹೈನುಗಾರಿಕೆಯೂ ಅಭಿವೃದ್ಧಿಯಾಗಬೇಕು. ಇವು ಎರಡೂ ಕೂಡಿ ನಡೆಯುವ ಉದ್ಯೋಗ ಪದ್ಧತಿಯನ್ನು ಮಿಶ್ರ ಬೇಸಾಯ ಪದ್ಧತಿ ಎನ್ನುತ್ತಾರೆ. ಕಾಲಾನಂತರದಲ್ಲಿ ಒಂದು ಜಾತಿಯ ಬೆಳೆಯ ನಡುವೆ ಇನ್ನೊಂದು ಜಾತಿಯ ಬೆಳೆ ಸೇರಿಸಿ ಬೆಳೆಯುವುದನ್ನು ಮಿಶ್ರ ಬೇಸಾಯ ಪದ್ಧತಿ ಎನ್ನುವರು. ನಮ್ಮ ಹಳ್ಳಿಗಳಲ್ಲಿ ಒಕ್ಕಲುತನವೇ ಜೀವನೋಪಾಯದ ಮುಖ್ಯ ಉದ್ಯೋಗ. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಹಸಿರು ಮತ್ತು ಬಿಳಿ ಕ್ರಾಂತಿಗಳು ಜೊತೆಗೂಡಿ ನಡೆದಾಗಲೇ ಹಳ್ಳಿಗಳ ಆರ್ಥಿಕ ಜೀವನಮಟ್ಟ

ಉತ್ತಮವಾಗಿ ಸುಗಮವಾಗಿ ಸಾಗುವುದು. ಗೋವು ತನ್ನ ಹಾಲಿನ ಜೊತೆಗೆ ತನ್ನ ಸಂತಾನವನ್ನು ರೈತನಿಗೆ ವರದಾನವಾಗಿ ಕೊಡುತ್ತದೆ. ಎತ್ತುಗಳೇ ರೈತನ ಜೀವನ ಸಂಗಾತಿಗಳು. ಅವನ ಸುಖಃ ದುಃಖಗಳಲ್ಲಿ ಸಮಭಾಗಿಗಳು. ನಮ್ಮ ದೇಶದಲ್ಲಿ ಗೋಪುತ್ರನಿಲ್ಲದೆ ಹೊಲ ಉಳುವಂತಿಲ್ಲ. ಹೊಲ ಉಳದೆ ಭೂಮಿ ಹದವಾಗುವುದಿಲ್ಲ. ಭೂಮಿ ಹದವಿಲ್ಲದೆ ಬೀಜ ಬಿತ್ತುವಂತಿಲ್ಲ. ಹೆಚ್ಚು ಬೆಳೆ ಬರಬೇಕಾದರೆ ಭೂಮಿಗೆ ಗೊಬ್ಬರ, ಗೋಮೂತ್ರ ಅಗತ್ಯವಾಗಿ ಬೇಕೇ ಬೇಕು. ಎಲ್ಲವನ್ನು ಕೊಡುವ ಈ ಗೋವುಗಳು ಅಂದಿನ ಸಮಾಜದ ಜನರ ಐಶ್ವರ್ಯವನ್ನು ಅಳೆಯುವಲ್ಲಿ ಪ್ರಧಾನ ಮಾನದಂಡವಾಗಿದ್ದವು.

ರಾಜರ ಹಾಗೂ ಗ್ರಾಮಸ್ಥರ ಗೋವುಗಳನ್ನು ಮೇಯಿಸಿಕೊಂಡು ಬರುವ ಕಾಯಕದವನಿಗೆ 'ಗೋಗಾಯಿ' (ಗೋಪಾಲ), ಗೊಲ್ಲ, ಎಂದು ಕರೆಯುತ್ತಿದ್ದರು. ಅವರ ದನಗಳನ್ನು ಸುಲಭವಾಗಿ ಗುರುತಿಸಲು ಲೋಹದ ಬಳೆಗಳನ್ನು ಕಾಸಿ, ವಿಶೇಷ ಗುರುತುಗಳನ್ನು ಮಾಡಿ ಹಿಂಡಿನಲ್ಲಿ ಬಿಡುತ್ತಿದ್ದರು. ಆ ಹಿಂಡಿನ ರಕ್ಷಣೆಯ ಸಂಪೂರ್ಣ ಜವಾಬ್ದಾರಿ ಆ ಗೋಪಾಲಕನದಾಗಿತ್ತು. ಪಾಲಕನ ದೋಷದಿಂದ ವಿನಷ್ಟವಾದರೆ(ವಿನಷ್ಟ ಎಂದರೆ ಎಂದೂ ಮರಳಿ ದೊರೆಯಲಾರದ ದನಗಳು) ಪಾಲಕನು ನಷ್ಟವನ್ನು ತುಂಬಿಸಿಕೊಡಬೇಕು. ಆಕಳುಗಳನ್ನು ಯಾರಾದರೂ ಗಾಯಗೊಳಿಸಿದ್ದಲ್ಲಿ ಅಥವಾ ಬೇರೆ ಯಾರಾದರೂ ಗಾಯ ಮಾಡಿ ನೋಯಿಸುವುದರಲ್ಲಿ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಸಹಾಯ ಸಲ್ಲಿಸಿದಲ್ಲಿ, ದನಗಳನ್ನು ಕಳ್ಳತನ ಮಾಡಿದಲ್ಲಿ ಅಥವಾ ಬೇರೆಯವರಿಗೆ ಕಳ್ಳತನ ಮಾಡಲು ಸಹಾಯ ಸಲ್ಲಿಸಿದಲ್ಲಿ ಅಂಥವರನ್ನು ಕೊಂದು ಹಾಕಲಾಗುತ್ತಿತ್ತು. ಅಪಹರಿಸಿದ ದನಗಳನ್ನು ಕಳ್ಳರಿಂದ ಪುನಃ ವಶಪಡಿಸಿಕೊಂಡಲ್ಲಿ ಅವರಿಗೆ ಬಹುಮಾನ ನೀಡಿ ಗೌರವಿಸಲಾಗುತ್ತಿತ್ತು. ಶತ್ರುಗಳ ಕೈಗೆ ದನಗಳು ಸಿಗದಂತೆ ಅವುಗಳನ್ನು ಪಾರು ಮಾಡಿ ರಕ್ಷಿಸಿದಲ್ಲಿ, ಅವರಿಗೆ ದನದ ಅರ್ಧ ಬೆಲೆ ಕೊಡುತ್ತಿದ್ದರು. ಗೋವುಗಳ ಸಂಪತ್ತು ಹೆಚ್ಚಿದಂತೆ ಅವುಗಳನ್ನು ಜೀವನೋಪಾಯಕ್ಕಾಗಿ, ಶಿಕ್ಷಣ ಸಂಸ್ಥೆಗಳ ಅಥವಾ ಅಗ್ರಹಾರಗಳ ನಿರ್ವಹಣೆಗಾಗಿ, ಧಾರ್ಮಿಕ ಉದ್ದೇಶಕ್ಕಾಗಿ ದಾನ ಕೊಡುವ ಪದ್ಧತಿ ಆರಂಭವಾಯಿತು. ಇದನ್ನು ಇಂದಿಗೂ ಸಿಗುವ 'ಗೋಸಾಸ' ಅಥವಾ ಗೋಸಹಸ್ರ ದಾನದ ಶಿಲ್ಪಗಳು ತಿಳಿಸುತ್ತವೆ. ಇದು ಅಂದಿನ ಕಾಲದಲ್ಲಿ ಗೋವುಗಳನ್ನು ಗೌರವಾರ್ಥವಾಗಿ ದಾನ ನೀಡುವುದು ಅವರ ಶ್ರೀಮಂತಿಕೆಗೆ ಸಾಕ್ಷಿಯಾಗಿದೆ. ಅಂದಿಗೆ ಜೀವಧನ ಎನಿಸಿಕೊಂಡ ಗೋವುಗಳನ್ನು ಅಪಹರಿಸಿ ತಮ್ಮ ಗೋವುಗಳ ಗುಂಪುಗಳನ್ನು ಹೆಚ್ಚಿಸಿಕೊಳ್ಳಲು ಬೇರೆ ಬೇರೆ ಗುಂಪುಗಳ ನಡುವೆ ಭೀಕರ ಹೋರಾಟಗಳು ಆರಂಭವಾದವು. ನಂತರ ಇದು ರಾಜಕೀಯದ ಉದ್ದೇಶವನ್ನು ಹೊಂದಿ ಆ ಪ್ರದೇಶದ ಗಂಡಸರ ಮರ್ಯಾದೆಯ ಪ್ರತೀಕವಾಗಿ, ಆ ಮರ್ಯಾದೆ ಪ್ರಾಣಕ್ಕಿಂತಲೂ ಮಿಗಿಲು ಎಂಬ ಭಾವನೆ ಭಲಗೊಂಡು **ತುರುಗೋಳ್** ಹೋರಾಟದ ಒಂದು ಹೊಸ ವೀರ ಪರಂಪರೆಗೆ ಸಾಕ್ಷಿಯಾಯಿತು.

ಕರ್ನಾಟಕವು ಆರಂಭದ ಕಾಲದಿಂದಲೂ ವೀರತ್ವ, ತ್ಯಾಗ ಮತ್ತು ಧರ್ಮಗಳಿಗೆ ಹೆಸರಾದ ನೆಲವಾಗಿದೆ. ಕವಿರಾಜಮಾರ್ಗದ ಪದ್ಯದ ಆಶಯದಂತೆ ಸಾಧುಗಳಿಗೆ ಸಾಧುಗಳಾಗಿಯೂ, ಪ್ರೀತಿಯಿಂದ ಮಾತನಾಡುವವರಿಗೆ ಪ್ರೀತಿ ಉಳ್ಳವರಾಗಿಯೂ, ಕೆಣಕಿ ಮಾತನಾಡುವ ಕಲಿಗೆ ಕಲಿಯುಗದಲ್ಲೇ ಅತ್ಯಂತ ವೀರನಾಗಿ ಕನ್ನಡಿಗ ಗೋಚರಿಸಿದ್ದಾನೆ. ಶಾಂತಿ ಪ್ರಿಯರಾಗಿರುವುದರ ಜೊತೆಗೆ ವೀರರೂ ಆಗಿದ್ದರೆಂದು ಶಿಷ್ಟ ಸಾಹಿತ್ಯ, ಜನಪದ ಸಾಹಿತ್ಯದ ದಾಖಲೆಗಳಿಂದ ತಿಳಿದುಬರುತ್ತದೆ. ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ಯುದ್ಧವು ಅನಿವಾರ್ಯವಾದ ಘಟನೆಯಾಗಿತ್ತು. ರಾಜರುಗಳ ನಡುವಿನ ಶಕ್ತಿ, ಸಾಮರ್ಥ್ಯದ ದ್ಯೋತಕವಾಗಿ ಈ ಯುದ್ಧಗಳು ನಡೆಯುತ್ತಿದ್ದವು. ಈ ಯುದ್ಧದಲ್ಲಿ ಹೋರಾಡುವವರನ್ನು ವೀರರೆಂದೂ, ಹೋರಾಟದಲ್ಲಿ ಸತ್ತವರು ಸ್ವರ್ಗಕ್ಕೆ ಸೇರುವರೆಂದು ಸಮಾಜ ನಂಬಿತ್ತು, ಅಥವಾ ಈ ರೀತಿ ಮುಗ್ಧ ಸಮಾಜವನ್ನು ಅಧಿಕಾರಿ ವರ್ಗವು ನಂಬಿಸಿತ್ತು. ಯಾವುದೋ ಆಸೆ, ಆಮಿಷಗಳಿಗೆ ಒಳಗಾಗಿ ಒಡೆಯನ, ಅನ್ನದಾತನ ಅಥವಾ ಆಶ್ರಯದಾತನ ಋಣವನ್ನು, ಉಪ್ಪಿನ ಋಣವನ್ನು, ಅನ್ನದ ಋಣವನ್ನು ತೀರಿಸುವ ಸಲುವಾಗಿ ಆದರ್ಶದ ಬೆನ್ನು ಹತ್ತಿ ಹೋರಾಡಿ ಮಡಿಯುತ್ತಿದ್ದರು. ಒಡೆಯನಿಗಾಗಿ ಪ್ರಾಣ ಕೊಡುವುದೇ ನಮ್ಮ ಪರಮ ಕರ್ತವ್ಯವೆಂದು ನಂಬಿದ್ದ ಜೋಳವಾಳಿ, ವೇಳವಾಳಿ, ಲೆಂಕರು, ಗರುಡರು ಎಂಬ ವ್ರತಧಾರಿ ಸೈನಿಕರ ಗುಂಪುಗಳು ಅಧಿಕಾರಿಗಳ ಬಳಿ, ರಾಜರ ಬಳಿ ಗುಂಪು ಗುಂಪಾಗಿರುತ್ತಿದ್ದರು. ಇವರು ಸ್ವಾಮಿ ಭಕ್ತಿ, ಪ್ರೀತಿಯ, ಸೇವೆಯ, ನಂಬಿಕೆಯ ಪ್ರತೀಕವೆಂದು ಕಂಡು ಬಂದರೂ, ಇವರನ್ನು ಈ ರೀತಿ ತಯಾರುಮಾಡಿ ತಮ್ಮನ್ನು ರಕ್ಷಿಸಿಕೊಳ್ಳುವ ವ್ಯವಸ್ಥಿತ ಸಂಚನ್ನು ಅಧಿಕಾರಿ ವರ್ಗ ಅಥವಾ ಅರಸೊತ್ತಿಗೆ ರೂಪಿಸಿಕೊಂಡಿತ್ತು. ಇದಕ್ಕೆ ಉತ್ತಮ ಉದಾಹರಣೆಯಾಗಿ ಪಂಪ ತನ್ನ ವಿಕ್ರಮಾರ್ಜುನ ವಿಜಯಂ ಕಾವ್ಯದಲ್ಲಿ ಹೇಳಿರುವ ಮಾತನ್ನು ಗಮನಿಸಬಹುದು.

> **'ಸುರಲೋಕಂ ದೊರಕೊಳ್ವದೊಂದು ಪರಮ ಶ್ರೀ ಲಕ್ಷ್ಮಿಯುಂ ಬರ್ಪುದಾ**
> **ದರದಿಂ ದೇವ ನಿಕಾಯದೊಳ್ ನೆರೆವುದೊಂದುತ್ಸಾಹಮುಂ ತನ್ನಯೆ**
> **ಯ್ಸಿರಿ ಭಾಗ್ಯಂ ನೆರೆಮಪ್ಪುದೊಂದೆ ರಣದೊಳ್ ಗೆಲ್ದಾಜಿಯಂ ತಳ್ತುಸಂ**
> **ಗರದೊಳ್ ಜೋಳದ ಪಾಟಿಯಂ ನೆರಪಿದಂ ಗಡಂ ಪೆಱಂಗಂಡನೆ'**[1]

ಎಂದು ರಣರಂಗದಲ್ಲಿ ಹೋರಾಡಿ ಜೋಳದ ಋಣವನ್ನು ತೀರಿಸುವನೇ ನಿಜವಾದ ಗಂಡಸು. ಹಾಗೆ ಹೋರಾಡದವರು ಗಂಡಸರಲ್ಲ ಎಂದು ಹೇಳುತ್ತಾನೆ. ಜೋಳವು ಒಂದು ರೀತಿಯ ಧಾನ್ಯ, ಕರ್ನಾಟಕದ ಅನೇಕ ಭಾಗಗಳಲ್ಲಿ ಅದೇ ಪ್ರಮುಖವಾದ ಆಹಾರ. 'ಪಾಟಿ' ಎಂದರೆ ಕರ್ತವ್ಯ, ಕ್ರಮ, ಅಥವಾ ಕ್ರಮ ಪಾಲನೆಯ ಧರ್ಮ. 'ಜೋಳವಾಟಿ' ಎಂದರೆ ಜೋಳ+ಪಾಟಿ

= ಅನ್ನದ ಕರ್ತವ್ಯ, ಅನ್ನದ ಋಣ ಎಂದರ್ಥ. ಅನ್ನವನ್ನು ಕೊಟ್ಟು ಸಾಕಿದ ಒಡೆಯನಿಗೆ ಕಷ್ಟ ಬಂದಾಗ ಅವನಿಂದ ಉಪಕೃತ ಆಗಿರುವ ವ್ಯಕ್ತಿಯು ಒಡೆಯನಿಗೆ ಸಹಾಯ ಮಾಡಬೇಕು. ಯುದ್ಧವು ಒದಗಿ ಬಂದಾಗ ಅವನ ಪರವಾಗಿ ಹೋರಾಡುವುದೇ 'ಜೋಳವಾಟಿ'. ಜೋಳವಾಟಿ ಎಂಬುದು ಕರ್ತವ್ಯ ಹಾಗೂ ಕರ್ತವ್ಯವನ್ನು ನಡೆಸುವ ವ್ಯಕ್ತಿ ವಾಚಕವಾಗಿಯೂ ಬಳಕೆಯಾಗಿದೆ.

ಪಂಪನ ಹಾಗೂ ಆ ಕಾಲದ ಕವಿಗಳೆಲ್ಲರಲ್ಲಿ ವೀರನೆಂದರೆ ಅಥವಾ ವೀರತನವೆಂದರೆ ಆದರ್ಶ ಪರಿಕಲ್ಪನೆ. ಆ ವೀರನ ಲಕ್ಷಣಗಳು ಹೀಗಿವೆ. "ಶೌರ್ಯದ ಜೊತೆಗೆ ಅಷ್ಟೇ ಪ್ರಮಾಣದ ಅಭಿಮಾನ, ಛಲ, ಹೊಂದಿರಬೇಕು. ಅವನು ಯಾವುದೇ ಕಷ್ಟವನ್ನು ಸಹಿಸಿಯಾನು, ಆದರೆ ತನ್ನ ಮಾನಕ್ಕೆ ಭಂಗ ಬರುವುದನ್ನು ಕ್ಷಣಕಾಲವೂ ಸಹಿಸಲಾರ. ಮೃತ್ಯು ಮತ್ತು ಗೌರವ ಹಾನಿ(ಮಾನಹಾನಿ, ಮಾನಭಂಗ) ಈ ಎರೆಡು ಆಯ್ಕೆಗಳಲ್ಲಿ ತೇಜಸ್ವಿ ವೀರ ಮೊದಲನೆಯದನ್ನೇ ಬಯಸುತ್ತಿದ್ದನು. ಏಕೆಂದರೆ ಮೃತ್ಯು ಕ್ಷಣಿಕ ದುಃಖ ತಂದರೆ ಮಾನ ಹಾನಿಯು ದಿನ ದಿನವೂ ದುಃಖ ತರುತ್ತಿತ್ತು. ವೀರನು ಕೊಟ್ಟ ಮಾತಿಗೆ ಎಂದೂ ಹಿಂದೆಗೆಯುವವನಲ್ಲ. ಪ್ರಾಣ ಹೋದರೂ ಕೊಟ್ಟ ಮಾತನ್ನು ಉಳಿಸಿಕೊಳ್ಳುವವನು, **ಇದೇ ನನ್ನಿ.** ಯುದ್ಧದಲ್ಲಿ ಸಾಹಸ ಪ್ರದರ್ಶಿಸುವಂತೆ ಜೀವನದಲ್ಲಿ ಉಧಾರವಾಗಿ ದಾನ ಮಾಡುತ್ತಾನೆ, **ಇದೇ ಚಾಗ.** ಈಯಲ್ ಇಜೆಯಲ್ ಅಂದರೆ ದಾನ ಕೊಡುವುದು ಮತ್ತು ಹೋರಾಡುವುದು (ಚಾಗ ಮತ್ತು ಬೀರ) ಈ ಎರೆಡೂ ಗುಣಗಳು ಅಂದಿನ ಶಾಸನ ಮತ್ತು ಕಾವ್ಯಗಳಲ್ಲಿ ಪ್ರಮುಖವಾಗಿ ಕಾಣಿಸಿಕೊಂಡಿದೆ. ವೀರನ ಇನ್ನೊಂದು ಲಕ್ಷಣವೆಂದರೆ ಕೀರ್ತಿಯ ಬಗ್ಗೆ ತೀರದ ಹಸಿವು. ತನ್ನನ್ನು ಸಾಕಿದ ಒಡೆಯನಲ್ಲಿ ಅಚಲವಾದ ಶ್ರದ್ಧೆ ಮತ್ತು ಅವನಿಗಾಗಿ ಪ್ರಾಣ ತ್ಯಾಗ ಮಾಡಲೂ ಸಿದ್ಧವಿದ್ದುದು (ಜೋಳವಾಟಿ, ವೇಟವಾಟಿ, ಲೆಂಕಿಗರು, ಗರುಡರು).ಇವರು ತಾವು ನಿಷ್ಠೆ ತೋರಿದ ನಾಡಿಗೆ, ನಿಷ್ಠೆಯಿಂದ ಆಶ್ರಯ ನೀಡಿದ ಒಡೆಯನಿಗೆ ಅಪಾಯ ಬಂದರೆ ತಾವೂ ಕೋಡಾ ಮರಣ ಹೊಂದಿಯೇ ತೀರುವ ಅಥವಾ ತಮ್ಮ ರುಂಡವನ್ನು ತಾವೇ ಕಡಿದುಕೊಂಡು ಆತ್ಮಾರ್ಪಣೆ ಮಾಡಿಕೊಂಡ ಉದಾಹರಣೆಗಳು ನಮ್ಮ ನಾಡಿನ ವೀರಗಲ್ಲುಗಳಲ್ಲಿ ಅಡಗಿ ಹೋಗಿವೆ.

ಹೆತ್ತ ತಾಯಿಗೆ, ಹೆತ್ತ ಭೂಮಿಗೆ, ಹೆತ್ತ ನಾಡಿಗೆ, ಹೆತ್ತ ಭಾಷೆಗೆ ಕಲ್ಪವೃಕ್ಷ ಆಗಬಲ್ಲ ಮಕ್ಕಳು ದೊರಕುವುದು ಅಥವಾ ಮಕ್ಕಳು ಕಲ್ಪವೃಕ್ಷದಂತೆ ಬದುಕುವುದು ಒಂದು ಸಮೃದ್ಧ ಸಂಸ್ಕೃತಿಯ ಸೌಭಾಗ್ಯ. ರಸ ಋಷಿ, ಕುವೆಂಪು ಅವರು ಗುರುತಿಸುವ ಹಾಗೆ ನಮಗೆ ೫ ಜನ ತಾಯಿಗಳಿದ್ದಾರೆ. ಅವರುಗಳೆಂದರೆ, ೧. **ನೆಲದಮ್ಮ** ೨. **ಜಲದಮ್ಮ** ೩. **ಬನದಮ್ಮ** ೪. **ನುಡಿಯಮ್ಮ** ೫. **ಹಡೆದಮ್ಮ**. ಈ ಎಲ್ಲ ಅಮ್ಮಂದಿರ ಋಣ ತೀರಿಸುವುದು ಕರ್ನಾಟಕದ ವೀರ ಪರಂಪರೆ ಮೌಲ್ಯವೆಂದು ಭಾವಿಸಿ ಅಂದಿನ ಸಮಾಜ ಬದುಕಿದೆ. ಅಂದಿನ ಸಮಾಜದಲ್ಲಿ ಜನರು ತಮ್ಮ

ಉಸಿರಾಗಿಸಿಕೊಂಡ ಮೌಲ್ಯಗಳನ್ನು ಪಟ್ಟಿ ಮಾಡುವುದಾದರೆ ಅಭಿಮಾನ, ಉದಾರತೆ, ಕೀರ್ತಿ, ಕುಲದ ಅಭಿಮಾನ, ತೋಳ್ಬಲ, ತ್ಯಾಗ, ದಯೆ, ದಾನ, ದುಷ್ಟರಿಗೆ ಶಿಕ್ಷೆ, ದಕ್ಷತೆ, ನನ್ನಿ, ಮಾನ, ವಚನ ಬದ್ಧತೆ, ವಿದ್ವಾಂಸರಿಗೆ ಆಶ್ರಯ, ಶಿಷ್ಯ ಜನ ರಕ್ಷಣೆ, ಶುಚಿ, ಶೌಚ, ಸತ್ಯ ಅಂದಿನ ಜೀವನ ಮೌಲ್ಯಗಳಾಗಿದ್ದವು. ಈ ಮೌಲ್ಯಗಳನ್ನು ನಂಬಿ ಬದುಕಿದ ವೀರರಿಗೆ ಅನೇಕ ಬಿರುದುಗಳು ದೊರೆಯುತ್ತಿದ್ದವು. ಅಂತಹ ಶಾಸನೋಕ್ತ ಬಿರುದುಗಳನ್ನು ಗಮನಿಸುವುದಾದರೆ ಸಮ್ಯಕ್ತ್ವಚೂಡಾಮಣಿ, ಮಲೆರಾಜರಾಜ, ಮಲೆಪರೋಳು ಗಂಡ, ಗಂಡಬೇರುಂಡ, ಕದನ ಪ್ರಚಂಡ, ಏಕಾಂಗವೀರ, ಶನಿವಾರ ಸಿದ್ಧಿ, ಗಿರಿದುರ್ಗ್ಗಮಲ್ಲ, ಚಲದಂಕಮಲ್ಲ, ಸಹಾಯಶೂರ, ಭಾಷೆಗೆ ತಪ್ಪುವರಾಯರ ಗಂಡ, ಕಲಿಗಳಗಂಡ, ಅಡವಿಗೊಡೆಯ, ಪರನಾರೀ ಸಹೋದರಂ, ಮುಂತಾದ ಬಿರುದುಗಳ ಜೊತೆಗೆ ಅವರ ವಂಶದ ಬಿರುದುಗಳನ್ನು ಧರಿಸುವುದನ್ನು ಗಮನಿಸಿದಾಗ, ಅಂದಿನ ಬದುಕಿನ ವೀರತ್ವದ ದ್ಯೋತಕವಾಗಿರುವ ಬದುಕೆಂದರೆ ಮಾತಿಗೆ ತಪ್ಪದೆ ನಡೆಯುವುದು, ಹೋರಾಟಗಳಲ್ಲಿ ಪ್ರಚಂಡ ವೀರನಾಗುವುದು, ತ್ಯಾಗ, ನೀತಿ, ಅಭಿಮಾನ, ಆತ್ಮದ ಹಿರಿಮೆ, ದಾನ, ಶೌರ್ಯ, ಭಕ್ತಿ, ಶತ್ರುನಾಶ, ಶರಣಾಗತರ ರಕ್ಷಣೆ, ವಚನ ಬದ್ಧತೆ, ಪ್ರಧಾನ ಮೌಲ್ಯವಾಗುವುದರ ಜೊತೆಗೆ ದೇಹಕ್ಕಿಂತ, ಜೀವಕ್ಕಿಂತ, ಮಾನವೇ ದೊಡ್ಡದೆಂದು ನಂಬಿ ಬದುಕಿದ ನಾಡಿನ ವೀರ ಪರಂಪರೆ ಕರ್ನಾಟಕದ್ದು. ಗೋವು, ಹೆಣ್ಣು, ಗ್ರಾಮಗಳ ರಕ್ಷಣೆಗಾಗಿ ಹೋರಾಡಿ ಮಡಿದ ಸಹಸ್ರಾರು ವೀರರ ಸ್ಮಾರಕಗಳು ನಮ್ಮ ಮುಂದಿದೆ.

**'ಜಿತೇನ ಲಭ್ಯತೇ ಲಕ್ಷ್ಮಿರ್ಮೃತೆನಾಪಿ ಸುರಾಂಗನಾ**
**ಕ್ಷಣವಿಧ್ವಂಸಿನಿ ಕಾಯೇ ಕಾಚಿಂತಾ ಮರಣೇ ರಣೇ'**

ಯುದ್ಧದಲ್ಲಿ ಗೆದ್ದರೆ ವಿಜಯಲಕ್ಷ್ಮಿ, ಸತ್ತರೆ ಸ್ವರ್ಗದಲ್ಲಿ ಸುರಾಂಗನೆಯರು ದೊರಕುವರು. ದೇಹವು ಕ್ಷಣದಲ್ಲಿ ನಾಶಹೊಂದುವುದೇ ಆಗಿರುವುದರಿಂದ ರಣರಂಗದಲ್ಲಿ ಮಡಿಯುವ ವಿಷಯದಲ್ಲಿ ಚಿಂತೆ ಏಕೆ? ಎಂಬ ಮಾತು ಅಂದಿನ ಜನಜೀವನದ ಮೌಲ್ಯವಾಗಿತ್ತು. ಈ ಮೌಲ್ಯವನ್ನು ಕಳೆದುಕೊಳ್ಳುವ ಮನುಷ್ಯ ಸಮಾಜದ ಅನಾದರಕ್ಕೆ ತುತ್ತಾಗುತ್ತಿದ್ದ. ಇವನು ಊರಿನ ದನಗಳ, ಹೆಣ್ಣು ಮಕ್ಕಳ, ಗ್ರಾಮದ ನಾಶದ, ಒಡೆಯರ ಜೀವ ಆಪತ್ತಿನಲ್ಲಿ ಇರುವಾಗ ಹೆದರಿ ಓಡಿ ಬಂದ ಗಂಡು ಎಂದು ಸಮಾಜ ಅವನನ್ನು ಗಂಡಸುತನವಿಲ್ಲದವನು ಎಂದು ಜರಿಯುತ್ತಿತ್ತು. ಈ ಮೂದಲಿಕೆಗಿಂತ ಸಾವೇ ಶ್ರೇಷ್ಠವೆಂದು ಅಂದಿನ ಸಮಾಜ ಭಾವಿಸಿ ನಡೆದುಕೊಂಡಿದೆ.

ಅಂದಿನ ಸಮಾಜದಲ್ಲಿ ಯುದ್ಧ ರಂಗದಲ್ಲಿ ತಾವು ಹೇಡಿಗಳೆಂದು ನೀರನ್ನು ಹೊಕ್ಕೋ, ಶಿವಲಿಂಗವನ್ನು ಅಪ್ಪಿಯೋ, ಹುಲ್ಲನ್ನು ಬಾಯಲ್ಲಿ ಕಚ್ಚಿಕೊಂಡೋ, ಹುತ್ತವನ್ನೇರಿಯೋ, ಘೋಷಿಸಿ ಕೊಂಡವರನ್ನು ವೀರರಾದವರು ರಕ್ಷಿಸಬೇಕೆಂದು ನಿಯಮವಿತ್ತು. ಹಾಗೆಯೇ ಜಟಾಧಾರಿಗಳಾಗಿರುವ

ಸನ್ಯಾಸಿಗಳನ್ನು, ತಪಸ್ವಿಗಳನ್ನು, ಗಾಯಕರನ್ನು, ನರ್ತಕರನ್ನೂ, ಧರ್ಮ ಪ್ರಚಾರಕರನ್ನೂ ಅವರು ಯುದ್ಧರಂಗದಲ್ಲಿಯೇ ಇದ್ದರೂ ಕೊಲ್ಲಬಾರದೆಂಬ ನಿಯಮವಿತ್ತು ಎಂಬುದಾಗಿ ಸಂಗಮ ಸಾಹಿತ್ಯದಿಂದ ತಿಳಿದು ಬರುತ್ತದೆ.[೫]

**'ದ್ವಾವಿಮಾ ಪುರಷಾ ಲೋಕೇ ಸೂರ್ಯಮಂಡಲ ಭೇಧಿನೌ**

**ಪರಿವ್ರಾಡ್ಯೋಗ ಯುಕ್ತಾಶ್ಚರಣೇ ಚಾಭಿಮುಖೇ ಹತಃ॥**

ಅಂದರೆ ಸೂರ್ಯಮಂಡಲವನ್ನು ಇಬ್ಬರು ಮಾತ್ರ ಬೇಧಿಸಬಲ್ಲರು. ಒಬ್ಬ ಯೋಗ ಸಾಧನೆ ಮಾಡಿದ ಪರಿವ್ರಾಜಕ, ಮತ್ತೊಬ್ಬ ರಣರಂಗದ ಮೂಲಕ ಸಾಧನೆ ಮಾಡಿದ ಯೋಧ. ಈ ಸಾಲುಗಳು ಕರ್ನಾಟಕದ ಹಲವು ವೀರಗಲ್ಲುಗಳಲ್ಲಿ ಕಂಡುಬರುತ್ತದೆ. ಜನ ಯಾವುದನ್ನು ಪಾರಮಾರ್ಥಿಕ ದೃಷ್ಟಿಯಿಂದ ಶ್ರೇಷ್ಠವಾದುದೆಂದು ಭಾವಿಸಿದ್ದರೋ ಅದಕ್ಕೆ ಸಮನಾದುದು ಯುದ್ಧದಲ್ಲಿ ಮಡಿಯುವುದು, ಎಂಬುದಾಗಿ ಅಂದಿನ ಸಮಾಜ ನಂಬಿದ ಮೌಲ್ಯವಾಗಿತ್ತು. ವೀರ ಮರಣ ಹೊಂದುವುದು ಪ್ರತಿಯೊಬ್ಬ ಪುರುಷನ ಹೆಮ್ಮೆಯ ಸಂಗತಿಯಾಗಿತ್ತು. ಜೀವನದ ಸಾರ್ಥಕ ಅಂತ್ಯವೆಂದರೆ ಹೋರಾಡುತ್ತಲೇ ಮಡಿಯುವುದು ಎಂದು ನಂಬಿದ್ದರು. ವೀರನು ಹೋರಾಟದಲ್ಲಿ ಸತ್ತ ನಂತರ ೨೦ ತಲೆಮಾರುಗಳವರೆಗೂ ಆತನ ಪರಾಕ್ರಮದ ಕೀರ್ತಿ ಶಾಶ್ವತವಾಗಿ ನಿಲ್ಲವುದೆಂಬ ಒಂದು ನಂಬಿಕೆಯಿತ್ತು.[೬]

ವೀರನಾಗಿ ಮಡಿಯುವುದು ವೀರನಿಗೆ ಮಾತ್ರವಲ್ಲ ಜನ್ಮ ನೀಡಿದ ತಾಯಿಗೂ ಹೆಮ್ಮೆಯ ಸಂಗತಿಯಾಗಿತ್ತು. ಈಗಲೂ ಹಳ್ಳಿ ಕಡೆ ಜಗಳಗಳು ನಡೆಯುವ ಸಂದರ್ಭದಲ್ಲಿ ಜಗಳಕ್ಕಾಗಿ ಪಂಥಾಹ್ವಾನ ನೀಡುವಾಗ ನೀನು ನಿಮ್ಮಮ್ಮನಿಗೇ ಹುಟ್ಟಿದ್ರೆ, ನಿಮ್ಮವ್ವನ ಎದೆಹಾಲು ಕುಡಿದೇ ಬೆಳೆದಿದ್ರೆ, ನನ್ನನ್ನು ಗೆಲ್ಲು ಅನ್ನುವಂತಹ ಮಾತುಗಳನ್ನು ಗಮನಿಸಿದಾಗ, ಪ್ರತಿಯೊಬ್ಬ ತಾಯಿಯೂ ವೀರ ಮಗನಿಗೆ ಜನ್ಮ ನೀಡಲು ಬಯಸುತ್ತಿದ್ದಳು. ರನ್ನನ ಸಾಹಸ ಭೀಮವಿಜಯದಲ್ಲಿ ಅಭಿಮನ್ಯು ವೀರಾವೇಶದ ಹೋರಾಟ ನಡೆಸಿ ದ್ರೋಣಾಚಾರ್ಯರ ಚಕ್ರವ್ಯೂಹವನ್ನು ಬೇಧಿಸಿ ಹಲವರನ್ನು ಕೊಂದು ಮಡಿದಾಗ ದುರ್ಯೋಧನನು ಅಡುವ ಮಾತು ಹೀಗಿದೆ.

**"ಪಲರಿರ್ದು ಕಾದಿದರ್ ಮೆ**

**ಯ್ಗಲಿಗಳ್ ನಿನ್ನೊಂದೆ ಮೆಯ್ಯೊಳಂ ತವೆ ಕೊಂದಯ್॥**

**ಪಲರಂ ನಿನ್ನ ಪೆತ್ತಳ್**

**ಮೊಲೆವೆತ್ತಳೆ, ವೀರಜನನಿವೆಸರಂ ಪೆತ್ತಳ್"**

ಹಲವಾರು ಶೂರರು ಒಟ್ಟಾಗಿ ಬಂದು ಹೋರಾಡುವಾಗ ಒಬ್ಬಂಟಿಯಾಗಿಯೇ ನೀನು ಅವರನ್ನೆಲ್ಲ ಕೊಂದೆ. ನಿನ್ನ ಹೆತ್ತವಳು ಮೇಲೆ ಹೊಂದಿದ ಕೇವಲ ಹೆಣ್ಣಲ್ಲ. ವೀರನಿಗೆ ಜನ್ಮ

ನೀಡಿದ ವೀರನ ತಾಯಿ ಎಂಬ ಹೆಸರನ್ನು ಪಡೆದವಳು ಎಂಬ ಮಾತುಗಳು, ವೀರನ ಹೋರಾಟ, ಜನ್ಮ ನೀಡಿದ ತಾಯಿಗೂ ಗೌರವ ತಂದುಕೊಡುತ್ತಿತ್ತು. ಅಂಥಹ ಗೌರವವನ್ನು ತಾಯಿಯಾಗಿ ಪ್ರತಿಯೊಬ್ಬ ಸ್ತ್ರೀಯು ಬಯಸುವುದು ಅಂದಿನ ಸಮಾಜದ ಮೌಲ್ಯವಾಗಿತ್ತು.[೭]

ಸಂಗಂ ಸಾಹಿತ್ಯದಲ್ಲಿ ಅಲ್ಲಿನ ವೀರ ಜನನಿಯ ಚಿತ್ರವೊಂದು ಈ ರೀತಿ ಇದೆ. ತಾಯಿಗೆ ನಿನ್ನ ಮಗ ಯುದ್ಧ ಭೂಮಿಯಿಂದ ಓಡಿ ಹೋದನೆಂದು ಜನರು ತಿಳಿಸುತ್ತಾರೆ. ಆ ಮಾತು ನಿಜವೇ ಆಗಿದ್ದ ಪಕ್ಷದಲ್ಲಿ ಅಂಥಹ ಹೇಡಿಯಾದ ಮಗನಿಗೆ ಹಾಲು ಕುಡಿಸಿದ ತನ್ನ ಮೊಲೆಗಳನ್ನೇ ಕತ್ತರಿಸಿಕೊಳ್ಳುವುದಾಗಿ ಆಕೆ ಪ್ರತಿಜ್ಞೆ ಮಾಡುತ್ತಾಳೆ. ಯುದ್ಧ ರಂಗದಲ್ಲಿ ತನ್ನ ಮಗನ ಶವವನ್ನು ಹುಡುಕಿ, ಮಡಿದು ಬಿದ್ದ ಮಗನನ್ನು ಕಂಡು ತಾನು ಹೆತ್ತಾಗ ಪಟ್ಟ ಸಂತೋಷಕ್ಕಿಂತ ಮಿಗಿಲಾದ ಸಂತೋಷವನ್ನು ಪಡೆದಳೆಂದು ಹೇಳುತ್ತಾಳೆ.[೮] ಯುದ್ಧ ರಂಗದಲ್ಲಿ ವೀರನ ನಡತೆ ವೀರೋಚಿತ ವಾಗಿದ್ದು, ಸಾವಿಗೆ ಹೆದರದೆ ಜೀವದ ಕೊನೆಯ ಉಸಿರಿರುವವರೆಗೂ ಹೋರಾಡುತ್ತಲೇ ಮಡಿಯಬೇಕು. ಎಂಬುದು ಅಂದಿನ ಸಮಾಜದ ವೀರನ ಮೌಲ್ಯ. ರನ್ನನು ತನ್ನ ಸಾಹಸ ಭೀಮ ವಿಜಯಂ ಕೃತಿಯಲ್ಲಿ ವೀರನು ಹೇಗೆ ನಡೆದುಕೊಳ್ಳಬೇಕೆಂದು ಹೇಳುತ್ತಾ,

> **"ಗೆಲಲಾರ್ಪೊಡಿಜಿದು ಗೆಲ್ವುದು।**
> **ಗೆಲಲಾಜಿದೊಡಣ್ಮೆ ಸಾವುದಾಳ್ಗಿನಿತೆ ಗುಣಂ॥**
> **ಗೆಲಲುಂ ಸಾಯಲುಮಾಜಿದೆ।**
> **ತೊಲಗಿದೊಡೆ ನೆಗಟ್ತೆ ತೊಲಗದಿ (ರ್ಕುಮೆ) ಮೆಯ್ಯಂ॥**

ಒಬ್ಬ ವೀರನು ಗೆಲ್ಲಲು ಶಕ್ತನಾದರೆ ಯುದ್ಧ ಮಾಡಿ ಗೆಲ್ಲಬೇಕು. ಸಾಧ್ಯವಾಗದಿದ್ದರೆ ಪರಾಕ್ರಮದಿಂದ ಹೋರಾಡಿ ಪ್ರಾಣ ನೀಗಬೇಕು. ಯೋಧನಾದವನಿಗೆ ಇರುವುದು ಒಂದೇ ಮಾರ್ಗ, ಗೆಲ್ಲಲಾರದೆ, ಸಾಯಲೂ ಒಲ್ಲದೆ ಯುದ್ಧ ರಂಗದಿಂದ ಜಾರಿಕೊಂಡರೆ ವೀರನ ಚಾರಿತ್ರ್ಯಕ್ಕೆ ಕಳಂಕ ತಟ್ಟುವುದಲ್ಲವೇ?[೯]

ಗೋಗ್ರಹಣ ಕಾಳಗದಲ್ಲಿ ಲಕ್ಷ ಅಕ್ಷೋಹಿಣಿ ಸೈನ್ಯವನ್ನು ಒಂದೇ ರಥದಲ್ಲಿ ಸೋಲಿಸಿದ ಅರ್ಜುನನನ್ನು ಧುರ್ಯೋಧನನು ಹೊಗಳುತ್ತಾನೆ. ಒಂದು ಅಕ್ಷೋಹಿಣಿ ಎಂದರೆ ಅದರ ಸಂಯೋಜನೆಯನ್ನು ಗಮನಿಸಿದಾದ ಆಶ್ಚರ್ಯವಾಗುತ್ತದೆ. ಅದರ ವಿವರಣೆ ಈ ರೀತಿ ಇದೆ.

| | | |
|---|---|---|
| ೧ ರಥ + ೧ ಆನೆ + ೩ ಕುದುರೆ + ೫ ಕಾಲಾಳು | = | ೧ ಪತ್ತಿ |
| ೩ ಪತ್ತಿ | = | ೧ ಸೇನಾಮುಖ |
| ೩ ಸೇನಾಮುಖ | = | ೧ ಗುಲ್ಮ |

೩ ಗುಲ್ಮ = ೧ ಗಣ

೩ ಗಣ = ೧ ವಾಹಿನಿ

೩ ವಾಹಿನಿ = ೧ ಪೃತನಾ

೩ ಪೃತನಾ = ೧ ಚಮೂ

೩ ಚಮೂ = ೧ ಅನಿಕಿನಿ

೧೦ ಅನಿಕಿನಿ = ೧ ಅಕ್ಷೋಹಿಣಿ

ಅಂದರೆ ೨೧,೮೭೦ ರಥಗಳು, ೨೧,೮೭೦ ಆನೆಗಳು, ೬೫,೬೧೦ ಕುದುರೆಗಳು, ೧,೦೯,೩೫೦ ಕಾಲಾಳುಗಳು ಎಂಬ ವಿವರಣೆ ಗಮನಿಸಿದಾಗ ೧೧ ಲಕ್ಷ ಅಕ್ಷೋಹಿಣಿ ಬಲ ತುರುಗೊಳ್ ಕದನದಲ್ಲಿ ಭಾಗವಹಿಸಿದ್ದನ್ನು ಗಮನಿಸಿದರೆ ಮಹಾಭಾರತದ ಗೋಗ್ರಹಣ ಯುದ್ಧದ ಭೀಕರತೆ ಅರ್ಥವಾಗುತ್ತದೆ. ಹೀಗೆ ತುರುಗೊಳ್ ಕದನಗಳಲ್ಲಿ ಸೈನ್ಯಗಳು ಯಥಾಶಕ್ತಿ ಹೋರಾಟ ನಡೆಸುತ್ತಿದ್ದವು. ಪ್ರತಿಯೊಂದು ಯುದ್ಧವೂ ವೀರನ ಕೀರ್ತಿ, ಗೌರವ, ಪೌರುಷದ, ಜೀವದ ಅಳಿವು–ಉಳಿವಿನ ಯುದ್ಧವೇ ಆಗಿರುತ್ತಿತ್ತು.[೧೦]

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ರಾಜರ ಬಳಿ ಸೈನ್ಯಕ್ಕೆ ಸೇರುವುದು ಅಂದು ಕೃಷಿಯ ನಂತರದ ಆಕರ್ಷಣೀಯ ಅಥವಾ ಸುಲಭವಾಗಿ ದೊರೆಯುವ ಹುದ್ದೆಯಾಗಿತ್ತು. ಅನೇಕ ರಾಜರು ಯುದ್ಧದ ಸಮಯದಲ್ಲಿ ನಾಡಿನ ಯುವಕರನ್ನು ಆಹ್ವಾನಿಸುತ್ತಿದ್ದರು. ಅಥವಾ ಭಲವಂತದಿಂದ ಸೈನ್ಯಕ್ಕೆ ಸೇರುವಂತೆ ಮಾಡುತ್ತಿದ್ದರು. ಯುದ್ಧದ ಸಮಯದಲ್ಲಿ ಮನೆಗೊಬ್ಬ ಆಳನ್ನು ಕಳಿಸುತ್ತಿದ್ದ ರೂಢಿ ಅಥವಾ ಒತ್ತಾಯ ಕರ್ನಾಟಕದಲ್ಲಿತ್ತು. ಆರಂಭದಲ್ಲಿ ಅಸ್ತಿತ್ವದ ಹೋರಾಟಗಳು ಸೈನ್ಯದ ರಚನೆಗೆ ಕಾರಣವಾಗಿ ಸೈನ್ಯಗಳ ನಾಯಕರಾಗಿ, ರಾಜರು, ರಾಜ್ಯ, ಗ್ರಾಮ, ಪಾಳೆ, ರಚನೆ ಆದಂತೆ ಅವುಗಳ ರಕ್ಷಣೆಗೆ ಸೈನ್ಯದ ಅನಿವಾರ್ಯತೆ, ವೀರವತ್ತಾದ ಬದುಕಿಗೆ ಕಾರಣವಾಗಿ ಶತಮಾನಗಳ ಕಾಲ ರಾಜ್ಯಗಳನ್ನು ಕಟ್ಟಿ ಆಳ್ವಿಕೆ ನಡೆಸಿವೆ. ಹೀಗಾಗಿ ಪ್ರತಿಯೊಬ್ಬ ವೀರನೂ ತನ್ನ ಶೌರ್ಯ ಸಾಹಸಗಳಿಂದ ಸತ್ತ ನಂತರವೂ ಬದುಕುವ ವೀರೋಚಿತ ಜೀವನ ನಡೆಸಲು ಬಯಸುತ್ತಿದ್ದ. ಕಷ್ಟದಲ್ಲಿ ಸಿಕ್ಕ ಹೆಂಗಸರನ್ನು, ಗ್ರಾಮಗಳನ್ನು, ಗೋವುಗಳನ್ನು, ಅಬಲರನ್ನು ಕಾಪಾಡುವುದು ವೀರನ ಹಾಗೂ ಗಂಡಿನ ಪರಮ ಕರ್ತವ್ಯವಾಗಿತ್ತು. ಇಂಥ ಹೋರಾಟದಲ್ಲಿ ರಣರಂಗದಿಂದ ಓಡಿ ಹೋಗುವವರನ್ನು ಗಂಡಸುತನವಿಲ್ಲದ, ತಾಯಿಯ ಎದೆ ಹಾಲು ಕುಡಿಯದವನು, ಎನ್ನುವಂತೆ ಸಮಾಜ ಹೀಯಾಳಿಸುತ್ತಿತ್ತು. ಇಂಥ ಹೀಯಾಳಿಕೆಗಿಂತ ರಣರಂಗದ ಸಾವು ಹೆಚ್ಚು ಗೌರವಯುತವಾಗಿತ್ತು. ಇದರಿಂದ ಒಬ್ಬ ಮಡಿದ ನಂತರವೂ

ಮನೆಯ ಕೀರ್ತಿಯಾಗುತ್ತಿದ್ದರಿಂದ, ಅವನ ಸಾವಿಗೆ ನೆತ್ತರ ಕೊಡುಗೆಯಾಗಿ ಭೂಮಿಯನ್ನು ನೀಡಿ, ರಾಜರು, ನಾಡ ಗೌಡರು, ಗೌರವಿಸುತ್ತಿದ್ದರಿಂದ ಇಂಥಹ ಗೌರವವನ್ನು ಪ್ರತಿಯೊಬ್ಬ ವೀರನೂ ಪಡೆಯಲು ಬಯಸುತ್ತಿದ್ದರು. ಸಾವು ಎಂಬುದು ಎಂದಿದ್ದರೂ ಬರುವಂತಹದ್ದೇ, ಇಂಥ ಸಾವಿಗೆ ಹೆದರಿ ಹೋರಾಟದಿಂದ ಯುದ್ಧ ಭೂಮಿಯಿಂದ ಹೆದರಿ ಓಡಿ ಹೋಗುವುದರಿಂದ **"ಹೇಡಿ"** ಎಂಬ ಅಪಮಾನ ಪಡೆಯುವುದರ ಜೊತೆಗೆ **"ಬ್ರಹ್ಮಪೂತಪಾತಕ"** ಪಾಪ ಬರುವುದೆಂಬ ನಂಬಿಕೆ ಜನರಲ್ಲಿತ್ತು. ಯುದ್ಧದಲ್ಲಿ ಸ್ವಾಮಿಗೆ ತಪ್ಪಿದ ಭೃತ್ಯನು ರೌರವ ನರಕಕ್ಕೆ ಹೋಗುತ್ತಾನೆಂದು, ಯುದ್ಧದಲ್ಲಿ ಹೆದರಿ ಹಿಂದೆ ಸರಿದರೆ ಅವನಿಗೆ ಸ್ವರ್ಗ ಲಭಿಸುವುದಿಲ್ಲವೆಂದೂ ಆ ಕಾಲದ ನಂಬಿಕೆಯಾಗಿತ್ತು.[೧೧]

ತುರುಗಾಳಗದಲ್ಲಿ ಭಾಗವಹಿಸದೆ ಮೌನವಾಗಿದ್ದ ವೀರರಿಗೆ ಸಮಾಜ ಯಾವ ರೀತಿ ತನ್ನ ಪ್ರತಿಕ್ರಿಯೆಯನ್ನು ತೋರಿಸುತ್ತಿತ್ತು, ಎಂಬುದು ತೆಲುಗಿನ ಜನಪದ ಗೀತೆಯೊಂದರಲ್ಲಿ ಸೊಗಸಾಗಿ ಚಿತ್ರಿತವಾಗಿದೆ. ತನ್ನ ರಾಜ್ಯದ ತುರುಗಳನ್ನು ಶತ್ರುಗಳು ಹೊಡೆದುಕೊಂಡು ಹೋದಾಗ ಅದಕ್ಕೆ ಯಾವುದೇ ಪ್ರತಿಕ್ರಿಯೆ ಕೊಡದೆ ಮಂತ್ರಿ ಮನೆಗೆ ಬಂದಾಗ ಅವನ ಹೆಂಡತಿ ಕಾಲಿಗೆ ನೀರು ಕೊಡುವ ಬದಲು ಅರಿಶಿಣ-ಕುಂಕುಮ, ಬಳೆಗಳನ್ನು ನೀಡುತ್ತಾಳೆ. ಊಟಕ್ಕೆ ಕುಳಿತಾಗ ಅವನ ತಾಯಿ ಆತನಿಗೆ ಒಡೆದ ಹಾಲನ್ನು ಬಡಿಸುತ್ತಾಳೆ. ಈ ರೀತಿಯ ವಿಚಿತ್ರ ವರ್ತನೆ ನನ್ನ ಷಂಡತನಕ್ಕೆ ಹಾಕಿದ ಪುರಸ್ಕಾರವೆಂದು ಗಂಡಸುತನವನ್ನು ಮೆರೆಯಲು ಶತ್ರುಗಳೊಂದಿಗೆ ಹೋರಾಡಲು ಹೊರಡುತ್ತಾನೆ. ಅನ್ನುವ ಅಂಶ ವೀರನಿಗೆ ಇದ್ದ ಗೌರವ ತುರುಗೊಳ್ ಸಂದರ್ಭದಲ್ಲಿ ಹೋರಾಡಲೇ ಬೇಕಾದ ಪುರಷ ಸಂಕಲ್ಪವನ್ನು, ವೀರ ಸಂಕಲ್ಪವನ್ನು ತಿಳಿಸುತ್ತದೆ.

ಹೆಣ್ಣು ಅಪಾಯದಲ್ಲಿ ಸಿಲುಕಿದಾಗ, ಗೋಗ್ರಹಣ ಸಂದರ್ಭದಲ್ಲಿ ಗಡಿ ಕಾಳಗದಲ್ಲಿ ಊರಳಿವಿನಲ್ಲಿ ಕಳ್ಳರು ಊರು ನುಗ್ಗಿದಾಗ ಅಂದಿನ ಸಮಾಜ ಒಟ್ಟಾಗಿ ಹೋರಾಡುವುದು ಕಂಡು ಬರುತ್ತದೆ. ಹಾಗೆ ಹೋರಾಡುವುದೇ ಅಂದಿನ ಸಮಾಜದ ಪುರುಷರ ಗೌರವ ದ್ಯೋತಕವಾಗಿತ್ತು. ಆ ಹೋರಾಟವೇ ಅವರ ಅಳಿವು-ಉಳಿವಿನ ಪ್ರಶ್ನೆಯಾಗಿತ್ತು. ಮರಣಹೊಂದಿದರೂ ಹೋರಾಡುತ್ತಲೇ ಮಡಿಯಬೇಕೆಂಬುದು ಪ್ರತಿಯೊಬ್ಬ ವೀರನ ಆಸೆ. ಆ ಹೋರಾಟದ **"ವೀರ ಮರಣ"** ಕ್ಕೆ ಸಮಾಜ ನೀಡುತ್ತಿದ್ದ ನೆತ್ತರ ಕೊಡುಗೆಗಳು ಆ ಮನೆತನದ ಆ ಊರಿನ ಹೆಮ್ಮೆ ಎಂದು ಅಂದಿನ ಸಮಾಜ ನಂಬಿಕೊಂಡು, ಆಚರಿಸಿ ಬಾಳಿ ಬದುಕಿದೆ.

### ೨. ಆರ್ಥಿಕ ಕಾರಣಗಳು

ತುರುಗಾಳಗಗಳನ್ನು ನಾವು ಕೇವಲ ಒಂದು ಯುದ್ಧದ ಪ್ರಬೇಧವೆಂದು ಮಾತ್ರ ಪರಿಗಣಿಸಲು ಸಾಧ್ಯವೇ ಇಲ್ಲ. ಇದು ಗ್ರಾಮ ಸಮಾಜದ ಆರ್ಥಿಕ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ಒಬ್ಬರ

ಬಳಿ ಲಕ್ಷಾಂತರ ಗೋವುಗಳಿವೆ ಎಂದರೆ ಅವುಗಳ ಪಾಲನೆ ಪೋಷಣೆ ಸುಲಭದ ಮಾತಲ್ಲ. ಅವುಗಳಿಂದ ಲಾಭವಿದ್ದರೆ ಮಾತ್ರ ಹೀಗೆ ಪೋಷಿಸಲು ಸಾಧ್ಯ. ಎತ್ತುಗಳು ವ್ಯವಸಾಯಕ್ಕೆ ಮುಖ್ಯವಾದರೆ ಇತರ ಆರ್ಥಿಕ ಮೂಲವಾಗಿ ಮತ್ತು ಹಾಲು, ಮೊಸರು, ಬೆಣ್ಣೆಗಾಗಿ ಹಸುಗಳು ಅತ್ಯಾವಶ್ಯಕವಾಗಿದ್ದವು. ಇವು ಆಯಾ ಕುಟುಂಬಗಳ ಮತ್ತು ಗ್ರಾಮ ಸಮುದಾಯಗಳ ಆರ್ಥಿಕ ಮೂಲಗಳೂ ಆಗಿದ್ದವು. ಈ ಆರ್ಥಿಕ ಮೂಲಗಳು ಕೆಲವು ವೇಳೆ ವೈಷಮ್ಯಕ್ಕೂ ಕಾರಣವಾಗಿ ಸಂಘರ್ಷಗಳಾಗಿವೆ. ಒಬ್ಬನ ಅರ್ಥ ವ್ಯವಸ್ಥೆಯನ್ನು ಕೆಡಿಸಿದರೆ ಅವನ ಬಲವನ್ನು ಕುಗ್ಗಿಸಿದಂತೆ. ಕೃಷಿಯನ್ನು ಹೊರತು ಪಡಿಸಿದರೆ ಹೈನುಗಾರಿಕೆಯೇ ನಮ್ಮ ಪ್ರಾಚೀನರ ಮುಖ್ಯ ಆದಾಯದ ಮೂಲವಾಗಿತ್ತು. ಈಗಿನಂತೆ ನಮ್ಮ ಪೂರ್ವಿಕರಿಗೆ ನೂರಾರು ಆರ್ಥಿಕ ಮೂಲಗಳಿರಲಿಲ್ಲ. ಆಗಿನವರ ಪ್ರಮುಖ ಕಸುಬೇ ಕೃಷಿಯಾಗಿತ್ತು. ಈ ಕೃಷಿಗೆ ಸಂಬಂಧಿಸಿದ ಪರಿಕರಗಳ ನಿರ್ಮಾಣ, ನಿರ್ವಹಣೆ, ಕೆಲವರ ಕಸುಬಾಗಿತ್ತು. ವ್ಯಾಪಾರ ವಹಿವಾಟು ಇನ್ನಿತರರ ಕಸುಬಾಗಿತ್ತು.

ಪ್ರಾಚೀನ ಭಾರತಲ್ಲಿ ಮುಖ್ಯ ಆಹಾರ ಧಾನ್ಯಗಳ ಮತ್ತು ಗೊಬ್ಬರದ ಉಪಯೋಗ ತಿಳಿದ ಭಾರತೀಯರು ಕಟ್ಟಿಗೆಯ ನೇಗಿಲು, ರೆಂಟೆ, ಒಕ್ಕಲು ಮಾಡಲು ಎತ್ತುಗಳನ್ನು ಇಂದಿನ ರೈತರಂತೆಯೇ ಬಳಸುತ್ತಿದ್ದರು. ಸಾಮಾನು, ಸರಕು ಸಾಗಿಸಲು ಗೋವುಗಳನ್ನು ಮುಖ್ಯವಾಗಿ ಬಳಸುತ್ತಿದ್ದರು. ಊರಿಗೊಬ್ಬ ದನಗಾಹಿ, ಕಾದ ಸಲಾಕೆಯಿಂದ ಗುರುತಾದ ದನಗಳನ್ನು ಊರಿನಿಂದಾಚೆ ಮೇಯಿಸಲು ತೆಗೆದುಕೊಂಡು ಹೋಗುತ್ತಿದ್ದನು. ಹಾಲು, ಮೊಸರು, ಬೆಣ್ಣೆ, ತುಪ್ಪ ಆಹಾರದ ಮುಖ್ಯ ಭಾಗಗಳಾಗಿದ್ದವು. ಆರ್ಯರು ಪಶು ಸಂಗೋಪನೆ ಮತ್ತು ಬೇಸಾಯಗಳ ಮಿಶ್ರ ಆರ್ಥಿಕ ಪದ್ಧತಿಯನ್ನು ಅನುಸರಿಸುತ್ತಿದ್ದರು. ರೈತನು ಗೋವುಗಳ ಸಂತಾನ ಹೆಚ್ಚಲು ಪ್ರಾರ್ಥಿಸುತ್ತಿದ್ದನು. ಕ್ಷತ್ರಿಯರು ಕೊಳ್ಳೆ ಹೊಡೆಯುವಾಗ ಪಶುಗಳನ್ನು ಅಪೇಕ್ಷಿಸುತ್ತಿದ್ದರು. ಅಂದರೆ ಯುದ್ಧದ ನಂತರ ಗೋವುಗಳನ್ನು ದೋಚಿದರೆ ಹಲವು ದಿನ ಹಾಲು, ಹೈನು ಹಾಗೂ ವಿನಿಮಯಕ್ಕೂ ಹಾಲಿನ ಉತ್ಪನ್ನಗಳು ದೊರೆಯುತ್ತಿದ್ದರಿಂದ ಹಲವು ತಿಂಗಳು ಸುಖ ಜೀವನ ನಡೆಸಲು ಸಾಧ್ಯವಾಗುತ್ತಿತ್ತು. ಆದ್ದರಿಂದಲೇ ದಾಳಿಯ ಸಂದರ್ಭದಲ್ಲಿ ಕ್ಷತ್ರಿಯರು ಪಶುಗಳನ್ನೇ ಅಪೇಕ್ಷಿಸುತ್ತಿದ್ದರು. ಯಜ್ಞ ಯಾಗದ ನೇತೃತ್ವ ವಹಿಸಿದ ಬ್ರಾಹಣನಿಗೆ ಸೇವೆಗೆ ಪ್ರತಿಯಾಗಿ ಗೋವುಗಳನ್ನು ಕೊಡುತ್ತಿದ್ದರು. ಅಂದಿನ ಕಾಲದಲ್ಲಿ ಗೋವುಗಳು ಒಂದು ಬಗೆಯ ನಾಣ್ಯ ಚಲಾವಣೆಯ ರೂಪವಾಗಿದ್ದವು. ಅವುಗಳ ಸಂಖ್ಯಾ ಪ್ರಮಾಣದ ಮೇಲೆ ಸಂಪತ್ತನ್ನು ಅಳೆಯಲಾಗುತ್ತಿತ್ತು. ಭರತಖಂಡದಲ್ಲಿ ಹಸುಗಳನ್ನು ಒಂದು ಐಶ್ವರ್ಯವೆಂದೇ ಬಹಳ ಕಾಲದಿಂದ ಭಾವಿಸಿದ್ದಾರೆ. (ಗೋಧನ) ಐಶ್ವರ್ಯ ಎಂಬರ್ಥದಲ್ಲಿ ಸಂಸ್ಕೃತದ "ಧನ" ಎಂಬ ಶಬ್ದ ಕನ್ನಡದಲ್ಲಿ, Cattle ಎಂಬರ್ಥದಲ್ಲಿ "ದನ" ಎಂದಾಗುವುದಕ್ಕೆ ಬಹುಶಃ ಇದೇ ಕಾರಣ.

ಗೋವು ಪೂಜನೀಯವಾದುದು. ಎರಡನೆಯದಾಗಿ ಅದು ಕಳೆದುಕೊಳ್ಳಲಾರದ ಆಸ್ತಿ. ಮೂರನೆಯದಾಗಿ ಅವುಗಳನ್ನು ಕಳೆದುಕೊಳ್ಳುವುದರಲ್ಲಿ ಊರಿನ, ವ್ಯಕ್ತಿಯ ಮಾನಾಪಮಾನದ ಪ್ರಶ್ನೆಯೂ ಅಡಗಿತ್ತು.

ಆಕಳುಗಳು ಜೀವಮಾನವಿಡೀ ನಮಗೆ ಕೊಟ್ಟ ಹಾಲು, ತುಪ್ಪ, ಗೊಬ್ಬರ ಲೆಕ್ಕಹಾಕಿದರೆ, ಅದರ ಬಡ್ಡಿಯಲ್ಲಿ ಅವುಗಳ ಮುಪ್ಪಿನಲ್ಲಿ ಜೋಪಾನ ಮಾಡುವುದು ಸಾಧ್ಯವಿದೆ. ಅಂದಿನ ನಮ್ಮ ಗೋವುಗಳು ೩೦-೪೦ ಸೇರು ಹಾಲು ಕೊಡುತ್ತಿದ್ದ ಹಸುಗಳು ನಮ್ಮ ದೇಶದಲ್ಲಿ ಇದ್ದವು ಎಂಬುದು **'ಐನಅಕಬರಿ'** ಗ್ರಂಥದಲ್ಲಿ ಉಲ್ಲೇಖವಾಗಿದೆ. ಆರ್ಯ ಎಂದರೆ ಗೋಪಾಲಕ ಎಂಬ ಅರ್ಥವಿದೆ. ಸಂಸ್ಕೃತದ ಧನ ಕನ್ನಡದಲ್ಲಿ ದನವಾಗಿದೆ. ಅಂದಿನ 'ಗೋಪದವಿ' ರಾಜ್ಯ ಪದವಿಗಿಂತ ಹೆಚ್ಚಿನದಾಗಿ ಪರಿಗಣಿಸಲ್ಪಡುತ್ತಿತ್ತು. ತಂದೆಮಗನಿಗೆ ಏನು ಕೊಡಲು ಸಾಧ್ಯವಾಗದಿದ್ದರೂ ಕನಿಷ್ಟ ೧೦ ದನಗಳನ್ನಾದರೂ ಬಿಟ್ಟು ಹೋಗಬೇಕು ಎಂದು ಮನು ಧರ್ಮಶಾಸ್ತ್ರ ಹೇಳಿರುವುದನ್ನು ನೋಡಿದರೆ ಸಮಾಜದಲ್ಲಿ ಗೌರವಯುತವಾಗಿ ಬದುಕಲು ದನಗಳು ಎಷ್ಟು ಅವಶ್ಯಕ ಎಂದು ಅರಿವಾಗುತ್ತದೆ. ಗೋಗ್ರಹಣಕ್ಕೆ ಕಾರಣ, ಆರಂಭದಲ್ಲಿ ತಮ್ಮ ಪಶು ಸಂಪತ್ತನ್ನು ಹೆಚ್ಚಿಸಿಕೊಳ್ಳುವುದೇ ಅಲ್ಲದೇ ಬೇರೆ ಬೇರೆ ನಾಡುಗಳ ಮೇಲೆ ದಾಳಿ ಮಾಡಿ ಸೇಡು ತೀರಿಸಿಕೊಳ್ಳುವ ಆಸೆ ಆಕ್ರಮಣಕಾರರಿಗೆ ಇರುತ್ತಿತ್ತು. ದನಗಳನ್ನು ಕದ್ದು ಶತ್ರುವಿಗೆ ಅವಮಾನಮಾಡುವ ಉದ್ದೇಶ ಈ ಸಂಚುಗಳ ಹಿಂದೆ ಕಾರ್ಯನಿರ್ವಹಿಸಿದೆ. ತುರುಗಳನ್ನು ಕದ್ದು ಶತ್ರುಗಳಿಗೆ ಅವಮಾನ ಮಾಡುವ ಸಂಪ್ರದಾಯ ಮಹಾಭಾರತದಷ್ಟು ಹಳೆಯದು.

ಭಾರತದ ಆರ್ಥಿಕ ಪ್ರಗತಿಗೆ ಒಕ್ಕಲುತನವೇ ಬುನಾದಿಯಾಗಿದೆ. ವ್ಯವಸಾಯ ಪ್ರಗತಿ ಹೊಂದಿದಂತೆ ಹಳ್ಳಿಗಳು ಪ್ರಗತಿ ಹೊಂದುವುದು. ಒಕ್ಕಲುತನವು ಉತ್ತಮ ರೀತಿಯಿಂದ ನಡೆಯಬೇಕಾದರೆ, ಜನರು ಆರೋಗ್ಯವಂತರಾಗಿ ಮತ್ತು ದೃಢಕಾಯರಾಗಿ ಇರಬೇಕಾದರೆ ದನಗಳು ದುಡಿಯಲು ಗಟ್ಟಿಮುಟ್ಟಾಗಿರಬೇಕು, ಹಾಗೂ ಹೆಚ್ಚೆಚ್ಚು ಹಾಲು ಕೊಡುವವಾಗಿರಬೇಕು. ಉಳುಮೆ, ಬಿತ್ತಿಗೆ, ಹರಗುವಿಕೆ, ಎಡೆಕುಂಟೆ ಹೊಡೆಯುವಿಕೆ, ಕೃಷಿ ಉತ್ಪತ್ತಿ ಸಾಗಣೆ, ಮೊದಲಾದ ಎಲ್ಲಾ ಕೆಲಸಗಳಿಗೂ ದನಗಳು ಬೇಕು. ಭಾರತದ ವ್ಯವಸಾಯಕ್ಕೆ ಆಕಳು ಮತ್ತು ಎತ್ತುಗಳು ಆಧಾರಭೂತವಾಗಿವೆ. ಅಧಿಕ ಆಹಾರ ಉತ್ಪಾದನೆಯ ಕಾರ್ಯದಲ್ಲಿ ವ್ಯವಸಾಯಕ್ಕೆ ಪ್ರಮುಖ ಅಂಗವಾದ ದನಗಳ ಪಾತ್ರ ಅತೀ ಮಹತ್ವದ್ದು, ಮತ್ತು ಮುಖ್ಯವಾದದ್ದು.

ಹಸುಗಳು ನೀಡುವ ಅಮೃತ ಅದರಿಂದ ಉತ್ಪಾದನೆಯಾಗುವ ಮೊಸರು, ಮಜ್ಜಿಗೆ, ತುಪ್ಪ, ಹಾಲಿನ ಪದಾರ್ಥಗಳು ಎಲ್ಲವೂ ವಿನಿಮಯಕ್ಕೆ ಹಾಗೂ ಆರೋಗ್ಯಕ್ಕೆ ಉತ್ತಮ

ಪದಾರ್ಥಗಳೇ ಆಗಿದ್ದವು. ಹಾಲು ಮಾರಿಯೇ ಜೀವಿಸುವ "ಗೌಳಿ", "ಗೊಲ್ಲ" ಜನಾಂಗವನು ಇಂದೂ ಕಾಣಬಹುದು. ಗೋವು ತನ್ನ ಹಾಲಿನ ಜೊತೆಗೆ ತನ್ನ ಸಂತಾನವನ್ನೂ ರೈತನಿಗೆ ವರದಾನವಾಗಿ ಕೊಡುತ್ತದೆ. ಎತ್ತುಗಳೇ ರೈತನ ಜೀವನದ ಸಂಗಾತಿಗಳು. ಅವನ ಸುಖ ದುಃಖಗಳ ಸಮಭಾಗಿ ಎಂದು ರೈತ ಭಾವಿಸುತ್ತಾನೆ. ಅಲ್ಲದೆ ಗೋವಿನ ಸೆಗಣಿ ಉತ್ತಮ ಗೊಬ್ಬರವಾಗಿ, ಗಂಜಳ ಅನೇಕ ಉಪಯುಕ್ತ ಔಷಧಿ ಗುಣಗಳನ್ನು ಹೊಂದಿರುವುದರಿಂದ ಪುರಾಣಗಳ ಕಾಲದಿಂದಲೂ ಪೂಜ್ಯನೀಯವಾಗಿ ಗೌರವಿಸುತ್ತಾರೆ. ಹಾಲು ಮತ್ತು ಹಾಲಿನಿಂದ ತಯಾರಿಸಿದ ಪದಾರ್ಥಗಳು ದಿನ ನಿತ್ಯ ಉಪಯೋಗಕ್ಕೆ ಬೇಕಾದ ವಸ್ತುಗಳಾಗಿರುವುದರಿಂದ ಗ್ರಾಹಕರು ಸದಾ ಇದ್ದೇ ಇರುತ್ತಾರೆ. ಅಲ್ಲದೆ ಈ "ಆಕಳನ್ನೇ' ತುರ್ತು ಸಂದರ್ಭಗಳಲ್ಲಿ ಬೇರೆಯವರಿಗೆ ಮಾರುವ ಮೂಲಕವೂ ಕೊಟ್ಟಿಗೆಯಲ್ಲಿ ಹೆಚ್ಚಾದ ಹಸುಗಳನ್ನು ಮಾರಿ ರೈತರು ಹಣಗಳಿಸುತ್ತಿದ್ದರು. ಇದಕ್ಕೆ ಇತಿಹಾಸದ ಅಂದಿನ ದಿನದಿಂದ ಇಂದಿನ ದಿನದವರೆಗೆ ನಡೆಯುತ್ತಿರುವ ಎತ್ತಿನ ಸಂತೆಗಳೇ ಸಾಕ್ಷಿಯಾಗಿವೆ. ಹಸುರು ಕ್ರಾಂತಿ ಹಾಗೂ ಕ್ಷೀರ ಕ್ರಾಂತಿ ಜೊತೆಯಾಗಿ ಸಾಗಿದಾಗ ಹಳ್ಳಿಗಳ ಆರ್ಥಿಕ ಜೀವನಮಟ್ಟ ಉತ್ತಮವಾಗಿ ಸುಗಮವಾಗಿ ಸಾಗುವುದು. ಜನರ ಜೀವನ ಸಮರಸವಾಗುವುದು. ಇಂದಿನ ಆಧುನಿಕ ಕಾಲದಲ್ಲೂ ಗ್ರಾಮೀಣ ಪ್ರದೇಶದ ಹಾಲಿನ ಸಹಕಾರ ಸಂಘಗಳು ಗ್ರಾಮೀಣ ಜನರ ಆರ್ಥಿಕ ಶಕ್ತಿಯ ಭಾಗವಾಗಿದೆ.

ಪಶುಗಳಿಂದ ದೊರೆಯುವ ಉಪ ಉತ್ಪನ್ನಗಳು ರೈತನಿಗೆ ಆರ್ಥಿಕವಾಗಿ ನೆರವಾಗುತ್ತವೆ. ಹೀಗೆ ಒಂದು ಜನಾಂಗದ, ಒಂದು ರಾಜ್ಯದ, ಪ್ರದೇಶದ ಆರ್ಥಿಕತೆಯ ಬೆಳವಣಿಗೆ ಗೋವುಗಳ ಮೇಲೆಯೇ ನಿಂತಿದ್ದರಿಂದ ಆ ಗೋವುಗಳನ್ನೇ ಅಪಹರಿಸುವ ಮೂಲಕ ಅವರ ಆರ್ಥಿಕ ಚಟುವಟಿಕೆಗಳನ್ನು ನಿಯಂತ್ರಿಸುವ ಪ್ರಯತ್ನ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಹೀಗೆ ದನಗಳನ್ನು ಕಳೆದು ಕೊಂಡು ಪರಿತಪಿಸುವುದಕ್ಕಿಂತ ಹೋರಾಡುತ್ತಲೇ ಮಡಿಯುವುದೇ ಮೌಲ್ಯವಾದಾಗ **'ಗೋಗ್ರಹಣ'** ಮಾನಾಪಮಾನದ, ಜೀವನದ ಮೌಲ್ಯವಾಗಿ ವೀರನ ವೀರೋಚಿತ ಹೋರಾಟಕ್ಕೆ ಸಾಕ್ಷಿಯಾಗಿ, ನಾಡಿನಲ್ಲಿ ಗೋವುಗಳಿಗಿರುವ ಆಧರಣೆಯ-ಆಚರಣೆಯ ಪರಂಪರೆಗೆ ಸಾಕ್ಷಿಯಾಗಿವೆ. ರೈತನ ಬಾಳಿಗೆ ಬೆಳಕಾಗಿ,ಒಂದು ಕುಟುಂಬದ ಅಗತ್ಯತೆಯನ್ನು ಈಡೇರಿಸಲು ಒಂದು ಹಸು ಅಥವಾ ಎಮ್ಮೆ ಸಾಕು ಎನ್ನುತ್ತಾರೆ.ಇಂದಿಗೂ ದನ-ಕರು ಇಲ್ಲದೆ ರೈತರ ಮನೆ ಇರಬಾರದು ಎಂದು ಒಂದು ಹಸುವನ್ನಾದರೂ ಸಾಕುವ ಸಂಪ್ರದಾಯವನ್ನು ಇಂದೂ ರೈತರು ಮುಂದುವರೆಸಿಕೊಂಡು ಬಂದಿರುವುದು ಅವುಗಳ ಆರ್ಥಿಕ ಉಪಯುಕ್ತತೆಯ ಕಾರಣಕ್ಕೆ ಎಂಬುದು ಸ್ಪಷ್ಟವಾಗುತ್ತದೆ.

### ೩. ರಾಜಕೀಯ ಕಾರಣಗಳು

ಭಾರತೀಯ ಪರಂಪರೆಯಲ್ಲಿ ಶೌರ್ಯ, ಕೀರ್ತಿ, ಅಭಿಮಾನ, ಪೌರುಷಗಳನ್ನು ಕೆಣಕಿದರೆ ಸುಮ್ಮನೆ ಬಿಡದ ಸ್ವಭಾವ ಕನ್ನಡಿಗರದ್ದು. ಅಭಿಮಾನದ ಸಂಸ್ಕೃತಿಯಲ್ಲಿ ನೆಲದಮ್ಮ, ಜಲದಮ್ಮ, ನುಡಿಯಮ್ಮ, ಬನದಮ್ಮ, ಹಡೆದಮ್ಮರ ಋಣ ತೀರಿಸಬೇಕಾದದ್ದು ಪ್ರತಿಯೊಬ್ಬರ ಧರ್ಮ ಎಂದು ನಂಬಿ ನಡೆದ ಸಂಸ್ಕೃತಿ ಕರ್ನಾಟಕದ್ದು. ಒಬ್ಬ ವೀರನ ಸಂಕಲ್ಪವೇ ಅದ್ಭುತ.

೧. ಅನ್ನ ನೀಡಿ ಆಶ್ರಯ ನೀಡಿದ ರಾಜನಿಗೆ ಉಸಿರಿರುವರೆಗೆ ದುಡಿಯುವುದು.

೨. ಹೆಣ್ಣಿನ ಮಾನ ರಕ್ಷಣೆಗೆ ಜೀವದ ಹಂಗು ತೊರೆದು ಹೋರಾಡುವುದು.

೩. ಯುದ್ಧ ಭೂಮಿಯಲ್ಲಿ ವೀರಮರಣ (ಹೋರಾಡುತ್ತಲೇ ಮಡಿಯುವುದು) ಬಯಸುವುದು.

೪. ಊರಳಿವಿನಲ್ಲಿ ಪ್ರಾಣಕ್ಕಿಂತ ಭೂತಾಯಿಯ ರಕ್ಷಣೆಗಾಗಿಯೇ ಮಡಿಯುವುದು.

೫. ಊರಿನ ಗೋವುಗಳ ರಕ್ಷಣೆ ಊರಿನ ಪ್ರತಿಯೊಬ್ಬರ ಜವಾಬ್ದಾರಿ.

ಎಂಬ ಸಂಕಲ್ಪ ಅಲೆಮಾರಿಯಾದ ಮಾನವನಿಂದ-ನೆಲೆನಿಂತ ಮಾನವನವರೆಗಿನ ಸುದೀರ್ಘ ಇತಿಹಾಸದಲ್ಲಿ ಕಂಡುಬರುತ್ತದೆ. ಅಂದು ಮಾನವನ ಸಾಮರ್ಥ್ಯಕ್ಕೆ ತಕ್ಕಂತೆ ರಚನೆಯಾದ ಸಣ್ಣ ಸಣ್ಣ ಗುಂಪುಗಳು ಅಸ್ತಿತ್ವಕ್ಕಾಗಿ ಹೋರಾಡುತ್ತಲೇ ಇದ್ದವು. ಒಂದು ಗುಂಪು ಮತ್ತೊಂದು ಗುಂಪಿನ ಮೇಲೆ ಪ್ರಭುತ್ವ ಸಾಧಿಸಲು ಸದಾ ಅವಕಾಶಕ್ಕಾಗಿ ಕಾಯುತ್ತಿದ್ದವು. ಇಂತಹ ಹೋರಾಟಗಳು ನಿರಂತರವಾಗಿ ನಡೆದಾಗಲೇ ಬೃಹತ್ ಗ್ರಾಮ ಅಥವಾ ಗುಂಪುಗಳಾದವು. ಈ ಗುಂಪುಗಳ ನಡುವೆ ನಡೆಯುತ್ತಿದ್ದ ಶೀತಲ ಸಮರಗಳನ್ನು ಅಥವಾ ವೈರತ್ವವನ್ನು ಕೊನೆಗಾಣಿಸಲು ಗುಂಪು-ಗುಂಪುಗಳ ನಡುವೆ ವೈವಾಹಿಕ ಸಂಬಂಧಗಳು, ಒಪ್ಪಂದಗಳು ಏರ್ಪಟ್ಟು, ಬೃಹತ್ ಸಾಮ್ರಾಜ್ಯಗಳು ನಿರ್ಮಾಣವಾದವು. ಈ ನಾಡುಗಳಲ್ಲಿ ಗೋವು, ಹೆಣ್ಣು, ಭೂಮಿಯ ರಕ್ಷಣೆಯು ಆ ಗುಂಪುಗಳ ಸಾಮ್ರಾಜ್ಯದ ಅಳಿವು-ಉಳಿವಿನ, ಅಸ್ತಿತ್ವದ ಪ್ರಶ್ನೆಯೇ ಆಗಿತ್ತು. ಅಂತಹ ಮೌಲ್ಯವುಳ್ಳ ಒಂದು ಸಮಾಜವನ್ನು, ಸಾಮ್ರಾಜ್ಯವನ್ನು, ಗ್ರಾಮಗಳನ್ನು ಅಸ್ಥಿರಗೊಳಿಸಲು ಅವರು ನಂಬಿದ ಮೌಲ್ಯಗಳ ಮೇಲೆಯೇ ದಾಳಿ ಮಾಡಿ ಅವರನ್ನು ದುರ್ಬಲಗೊಳಿಸುವ ಪ್ರಯತ್ನಗಳು ರಾಜಕೀಯವಾಗಿ ನಡೆಯತೊಡಗಿದವು. ಅಂಥ ಪ್ರಯತ್ನದ ಭಾಗವಾಗಿ ರಾಜ್ಯದ ಹೊರಗೆ ಮೆಯ್ಯಲು ಹೋದ ದನಗಳ ಗುಂಪಿನ ಜೊತೆ ಅತೀ ಕಡಿಮೆ ಸಂಖ್ಯೆಯ ಗೋವಳರು ಇರುತ್ತಿದ್ದ ಅವಕಾಶಕ್ಕಿಂತ ಉತ್ತಮ ಅವಕಾಶ ದೊರೆಯಲು ಸಾಧ್ಯವೇ? ಆದ್ದರಿಂದಲೇ ಗೋವುಗಳ ಅಪಹರಣ ಯುದ್ಧ ತಂತ್ರದ ಪ್ರಮುಖ ಭಾಗವಾಗಿ ಯುದ್ಧದ ಆರಂಭದ ಪಾತ್ರವನ್ನು ನಿರ್ವಹಿಸುತ್ತಿತ್ತು. ಒಬ್ಬ ರಾಜನನ್ನು ಅಥವಾ ಗ್ರಾಮದ ಮುಖಂಡನನ್ನು ದುರ್ಬಲನೆಂದು ತೋರಿಸಿ ಅಧಿಕಾರ

ಬದಲಾಯಿಸುವಂತೆ ಮಾಡುವ ರಾಜಕೀಯ ಆಟಕ್ಕೆ ಗೋಗ್ರಹಣಕ್ಕಿಂತ ಭಿನ್ನ ಪ್ರಸಂಗ ಇರಲಾರದು. ಹೀಗೆ ರಾಜರುಗಳೇ ಊರಿನ ದನಗಳನ್ನು ಹೊಡೆದುಕೊಂಡು ಬರಲು ಆಜ್ಞಾಪಿಸುತ್ತಿದ್ದರು. ಇದಕ್ಕೆ ಉದಾಹರಣೆ ಕೊರಕೋಡಿನ ಶಾಸನ. ಹಾಗೆಯೇ ಒಮ್ಮೊಮ್ಮೆ ರಾಜ್ಯವನ್ನಾಳುವ ವ್ಯಕ್ತಿಯು ದುಷ್ಪರ ಮಾತನ್ನು ಕೇಳಿ ಒಂದು ಊರಿನ ದನಗಳನ್ನು ಹಿಡಿಸುತ್ತಿದ್ದದೂ ಉಂಟು "ಚೋಳ ಮಹಾದೇವಿ ದುಷ್ಟ ಕಷ್ಟ ಮಾತನ್ನು ಕೇಳಿ ಬೇವೂರನ್ನು ಮುತ್ತಿ ದಾಳಿ ಮಾಡಲು ಹೇಳಿದಾಗ ಅವಳ ಸೇನೆಯು ಬೇವೂರನ್ನು ಮುತ್ತಿ ಜನರನ್ನು ಸೆರೆ ಹಿಡಿದು ತುರುಗಳನ್ನು ಕೊಂಡೊಯ್ಯುತ್ತಿರಲು ಕೇತಮಲ್ಲ, ಎನ್ನುವವನು ಅದನ್ನು ಪ್ರತಿಭಟಿಸಿ ತುರುಗಳನ್ನು ಹಿಂದಿರುಗಿಸಿ ಮಡಿಯುತ್ತಾನೆ. ಆಗ ಚೋಳದೇವಿಗೆ ಬುದ್ಧಿ ಬಂದು "ಎಮ್ಮ ಮಕ್ಕಳನ್ನು ನಾವು ನೋಯಿಸಿದೆವು" ಎಂದು ಪಶ್ಚಾತ್ತಾಪ ಪಟ್ಟು, ಜನರಿಗೆ ಅಭಯವನ್ನು ಕೊಟ್ಟು, ಸತ್ತ ವೀರನ ಮಗನಿಗೆ ದತ್ತಿಯನ್ನು ಬಿಡುತ್ತಾಳೆ.[೧೨]

ತುರುಗಳನ್ನು ಅಪಹರಿಸುವವರ ದೃಷ್ಟಿಯಿಂದ ಬರೆದ ಶಾಸನವೂ ಒಂದಿದೆ. ಒಡೆಯನ ಅಪ್ಪಣೆಯಂತೆ ತುರುಗಳನ್ನು ಅಪಹರಿಸಿ ಬಿಡಿಸಲು ಬಂದ ಭಟನನ್ನು ಕೊಂದು ತುರುಗಳನ್ನು ಒಡೆಯನ ಬಳಿಗೆ ಕಳುಹಿಸಿದ ವೀರನ ವಿಷಯವು ಶಾಸನೋಕ್ತ ಆಗಿದೆ.[೧೩]

ಕೇವಲ ತುರುಗಳನ್ನು ಕದಿಯುವುದು ಆ ಊರಿನ ರಾಜರನ್ನು ಜನರನ್ನು ಕೆರಳಿಸುವುದೇ ಅಲ್ಲದೆ ಊರಿಗೆ ನುಗ್ಗಿದ ತುರುಗಳ್ಳರು ಕೈಗೆ ಸಿಕ್ಕ ಹೆಣ್ಣು ಮಕ್ಕಳ ಉಡೆಯನ್ನು ಉರ್ಚಿ ಅವರನ್ನು ಅಪಮಾನ ಪಡಿಸಿ ಗ್ರಾಮಸ್ಥರ ಮರ್ಯಾದೆಗೆ, ಗಂಡಸುತನಕ್ಕೆ, ಸೈನ್ಯ ಶಕ್ತಿಗೆ ಸವಾಲು ಹಾಕುವುದೂ ನಡೆದೇ ಇತ್ತು. ಇಂತಹ ಪೆಣ್ಬುಯಲ್, ಶಾಸನಗಳು ಅನೇಕ. ಅವುಗಳಲ್ಲಿ ಮಳವಳ್ಳಿ ಶಾಸನ ಒಂದನ್ನು ಇಲ್ಲಿ ಉಲ್ಲೇಖಿಸಬಹುದು. ಹೀಗೆ ಕೆಣಕುವ ಉದ್ದೇಶವೇ ಪ್ರಧಾನವಾದಾಗ ಈ ಗೋಗ್ರಹಣ ಯುದ್ಧಗಳು ಭೀಕರ ಯುದ್ಧದ ಆರಂಭದ ಪಾತ್ರವನ್ನು ನಿರ್ವಹಿಸುವುದು ಕಂಡು ಬರುತ್ತದೆ. ಕರ್ನಾಟಕದ ಬಹುತೇಕ ಗೋಗ್ರಹಣ ಶಾಸನಗಳು ರಾಜಕೀಯ ಉದ್ದೇಶದ ಶಾಸನಗಳೇ ಹೆಚ್ಚು. ಈ ಗೋಗ್ರಹಣಗಳು, ಗ್ರಾಮ-ಗ್ರಾಮಗಳ ನಡುವೆ, ಪಾಳೆಗಳ ನಡುವೆ, ನಾಡುಗಳ ನಡುವೆ, ರಾಜ್ಯಗಳ ನಡುವೆ, ಗುಂಪುಗಳ ನಡುವೆಯೂ ನಡೆದಿದೆ. ಆದರೆ ರಾಜಕೀಯದ ಉದ್ದೇಶದಲ್ಲಿ ಅಪಹರಿಸುವವರು ಪೂರ್ಣ ಸುಸಜ್ಜಿತರಾಗಿ ಅಪಹರಣ ನಡೆಸಿದರೆ, ಅಪಹರಣಕ್ಕೆ ಒಳಗಾಗುವವರ ಕಡೆ ಹೆಚ್ಚಿನ ಸಾವು ನೋವು ಅಥವಾ ರಾಜಕೀಯದ ಲೆಕ್ಕಾಚಾರದಲ್ಲಿ ಹೆಚ್ಚು ನಷ್ಟಕ್ಕೆ ಒಳಗಾಗುತ್ತಿದ್ದರು. ಈ ರಾಜಕೀಯ ಲೆಕ್ಕಾಚಾರದಲ್ಲಿ ದನಗಳನ್ನು ಕಳೆದುಕೊಂಡ ರಾಜ, ಗ್ರಾಮ ಮುಖಂಡ, ಪಾಳೆಗಾರ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಲು ವಿಫಲವಾಗುತ್ತಿದ್ದರಲ್ಲದೆ ಅವನ ಮೇಲೆ ಈ ಕೆಳಗಿನ ಪರಿಣಾಮಗಳಾಗುತ್ತಿದ್ದವು.

೧. ಇತರೆ ರಾಜರ ದೃಷ್ಟಿಯಲ್ಲಿ ಹೀನನಾಗುತ್ತಿದ್ದನು.

೨. ಆತನ ನಾಡು ಮತ್ತೆ ಮತ್ತೆ ಅಪಾಯದ ಭೀತಿಗೆ ತಳ್ಳಲ್ಪಡುತ್ತಿತ್ತು.

೩. ನಾಗರಿಕರು ಹಾಗೂ ಹೊರ ರಾಜ್ಯದವರು ಮುಖಂಡನ ಸಾಮರ್ಥ್ಯವನ್ನು ಸಂಶಯದಿಂದ ನೋಡುತ್ತಿದ್ದರು.

೪. ರಾಜಕೀಯವಾಗಿ ಮತ್ತೊಬ್ಬ ಮುಖಂಡ ಹುಟ್ಟಲು ಕಾರಣವಾಗುತ್ತಿತ್ತು.

೫. ಹೆಣ್ಣು, ಊರು, ಗೋವನ್ನು ರಕ್ಷಸಿಕೊಳ್ಳಲಾಗದ ಗಂಡಸರು ಪ್ರಜೆಗಳನ್ನು ಹೇಗೆ ಕಾಪಾಡಿಯಾನು? ಅಂಥ ಕೈಲಾಗದ ರಾಜ,ಹಾಗೂ ಅವನ ಪ್ರಜೆಗಳು ಆ ಊರಿನವರು ಎಂಬ ಅಪಖ್ಯಾತಿ.

೬. ಈ ಒಂದು ಘಟನೆಯಲ್ಲಿ ಅವನು ಅಥವಾ ಆ ಗ್ರಾಮದವರು ವೀರತ್ವವನ್ನೇ ಕಳೆದುಕೊಳ್ಳುವಂತಾಗುತ್ತಿತ್ತು.

೭. ಗ್ರಾಮಸ್ಥರೂ ಕೂಡ ಬೇರೆ ನಾಡಿನ ಜನರ ದೃಷ್ಟಿಯಲ್ಲಿ ಹೀನ ಸ್ಥಾನವನ್ನು ಪಡೆಯುತ್ತಿದ್ದರು.

೮. ರಾಜಕೀಯ ಒಪ್ಪಂದಗಳು ಇಂತಹ ಸಂದರ್ಭದಲ್ಲಿ ಏರ್ಪಟ್ಟರೆ ಈ ರಾಜನಿಗೆ ಹೆಚ್ಚು ನಷ್ಟವಾಗುತ್ತಿತ್ತು.

೯. ಆರ್ಥಿಕವಾಗಿಯೂ ಇಡೀ ನಾಡಿನ ವ್ಯವಹಾರದ ಮೇಲೂ ಇದು ಪರಿಣಾಮ ಬೀರುತ್ತಿತ್ತು.

೧೦. ಸಣ್ಣ ಪುಟ್ಟ ಮುಖಂಡರ ಬಂಡಾಯಗಳಿಗೂ ಈ ಘಟನೆಗಳು ಕಾರಣವಾಗಬಹುದಿತ್ತು.ಇಡೀ ನಾಡಿನ ಶಾಂತಿ, ಸುವ್ಯವಸ್ಥೆ ಹಾಳಾಗುತ್ತಿತ್ತು.

**ರಾಜಕೀಯವಾಗಿ ಗೋಗ್ರಹಣ ಮಾಡಿದವರಿಗೆ ಆಗುತ್ತಿದ್ದ ರಾಜಕೀಯ ಲಾಭಗಳು**

೧. ಗ್ರಹಣ ನಡೆಸಿದ ರಾಜನ ಬಗ್ಗೆ ಸುತ್ತಲ ನಾಡಿನಲ್ಲಿ ಗೌರವ ಹೆಚ್ಚುತ್ತಿತ್ತು.

೨. ಅವನ ಶೌರ್ಯಕ್ಕೆ ಪುರಸ್ಕಾರ ದೊರೆಯುತ್ತಿತ್ತು.

೩. ಬಂಡಾಯ ಏಳಲು ಬಯಸಿದ ರಾಜರು, ಮುಖಂಡರುಇವನ ಪ್ರಭಾವವನ್ನು ಕಂಡು ತಮ್ಮ ಶಕ್ತಿಯನ್ನು ಕಳೆದುಕೊಂಡು ಸುಮ್ಮನಾಗುತ್ತಿದ್ದರು.

೪. ಆರ್ಥಿಕ ಬಲ ದೊರೆಯುತ್ತಿತ್ತು.

೫. ರಾಜಕೀಯ ಒಪ್ಪಂದಗಳು ಏರ್ಪಟ್ಟಲ್ಲಿ, ಯುದ್ಧ ನಡೆದಲ್ಲಿ ಹೆಚ್ಚು ಲಾಭವಾಗುತ್ತಿತ್ತು.

೬. ರಾಜನ ಪೌರುಷದ ಬಗ್ಗೆ ಆ ನಾಡಿನ ಜನ ಅಭಿಮಾನ ಪಡುತ್ತಿದ್ದರು.

೭. ಬೇರೆ ನಾಡಿನ ರಾಜರುಗಳ ದೃಷ್ಟಿಯಲ್ಲಿ ಸ್ಥಾನಮಾನ, ಗೌರವಗಳು ಹೆಚ್ಚುತ್ತಿದ್ದವು.

೮. ಒಂದು ಇಡೀ ಪ್ರದೇಶವನ್ನು ಮಂಡಿ ಊರುವಂತೆ ಮಾಡಿದ ಕೀರ್ತಿ ಈ ಗ್ರಹಣ ವೀರರಿಗೆ ದೊರೆಯುತ್ತಿತ್ತು.

ಈ ಎಲ್ಲಾ ಸಂಗತಿಗಳನ್ನು ಗಮನಿಸಿದಾಗ ಗೊಗ್ರಹಣ ನಡೆದಾಗ ಆ ಊರಿನ 'ವೀರರು' ಪ್ರಾಣದ ಹಂಗು ತೊರೆದು ತಮ್ಮ ದೊರೆಯ, ಊರಿನ ಮರ್ಯಾದೆಗಾಗಿ, ತಮ್ಮ ಶೌರ್ಯದ ಪ್ರತೀಕವಾಗಿಯೂ, ಪ್ರಾಣದ ಹಂಗು ತೊರೆದು ಭೀಕರವಾಗಿ ಹೋರಾಡುತ್ತಲೇ ವೀರ ಮರಣವನ್ನು ಹೊಂದಲು ಬಯಸುತ್ತಿದ್ದರು. ಆ ಮೂಲಕ ಅವನ ಹೋರಾಟವನ್ನು ಶತ್ರು ಪಾಳೆಯವೂ ಮೆಚ್ಚುತ್ತಿದ್ದರು. ರಾಜರೂ ನೆತ್ತರ ಕೊಡುಗೆಯಾಗಿ ಭೂಮಿಯನ್ನು ಕೊಡುತ್ತಿದ್ದರು. ಆ ಮೂಲಕ ಗೋವುಗಳನ್ನು ರಕ್ಷಣೆ ಮಾಡಿದ ವೀರ ಸಮಾಜದ ನಾಯಕನಾಗಿ ಗುರುತಿಸಿಕೊಳ್ಳುತ್ತಿದ್ದರು. ರಾಜಕೀಯದ ಉದ್ದೇಶದ ತುರುಗಾಳಗಗಳಲ್ಲಿ ಮಹಾಭಾರತದ ಉತ್ತರ ಗೋಗ್ರಹಣ-ದಕ್ಷಿಣ ಗೋಗ್ರಹಣ ಪ್ರಸಂಗಗಳನ್ನು ಇಲ್ಲಿ ಉಲ್ಲೇಖಿಸಬಹುದು. ಜೀಮೂತ, ಕೀಚಕರ ವಧೆಯನ್ನು ವಿರಾಟನ ಆಸ್ಥಾನದಲ್ಲಿ ಭೀಮನಲ್ಲದೆ ಬೇರೆಯವರು ಅವರನ್ನು ವಧಿಸಲು ಸಾಧ್ಯವೇ ಇಲ್ಲವೆಂದು ತಿಳಿದ ದುರ್ಯೋಧನ ನಿಸಂಶಯವಾಗಿ ಪಾಂಡವರು ವಿರಾಟನ ರಾಜ್ಯದಲ್ಲಿಯೇ ಇದ್ದಾರೆ ಎಂದು ಅರಿತನು. ಪಾಂಡವರು ಅಲ್ಲಿದ್ದರೆ ಹೀಗೆ ಮಾಡೋಣ ಎನ್ನುತ್ತಾ ಗೋಗ್ರಹಣದ ಯೋಜನೆಯನ್ನು ರಾಜಕೀಯದ ತಂತ್ರದ ಭಾಗವಾಗಿ ಪ್ರಯೋಗಿಸಿದರು.

> **"ಅರಿ ವಿರಾಟನ ಪುರಕೆ ಹಾಯಿದು**
> **ತುರುಸೆರೆಯ ತೆಗೆಸುವುವೆವು ಪಾಂಡವ**
> **ರಿರಲು ಧರ್ಮದ ಮೇರೆ ಮರ್ಯಾದೆಗಳ ಬಲ್ಲವರು**
> **ಅರವರಿಸದಂಗೈಸುವರು ನಾ**
> **ವರಿದುಕೊಂಬೆವು ಬಳಿಕ ವನದಲಿ**
> **ವರುಷ ಹದಿಮೂರಕ್ಕೆ ಕೊಡುವೆವು ಮತ್ತೆ ವೀಳೆಯವ".**

"ವಿರಾಟ ನಗರಕ್ಕೆ ಹೋಗಿ ಗ್ರೋಗ್ರಹಣ ಮಾಡೋಣ. ಧರ್ಮದ ರೀತಿಯನ್ನು ಅರಿತ ಪಾಂಡವರು ಅಲ್ಲಿದ್ದರೆ ಗೋವುಗಳನ್ನು ಬಿಡಸಲು ಬಂದೇ ಬರುತ್ತಾರೆ. ಅವರನ್ನು ಗುರುತಿಸಿ ವೀಳೆಯವನ್ನು ಕೊಟ್ಟು ಮತ್ತೆ ಹದಿಮೂರು ವರ್ಷಕಾಲ ಅವರು ವನವಾಸದಲ್ಲಿ ತೊಳಲುವಂತೆ ಮಾಡೋಣ' ಎಂದು ದುರ್ಯೋಧನನು ಹೇಳಿದನು.[೧೪] ಎಂಬ ಉಲ್ಲೇಖಗಳು ರಾಜಕೀಯದ ಉದ್ಧೇಶದ ತುರುಗಾಳಗಕ್ಕೆ ಅದ್ಭುತವಾದ ಉದಾಹರಣೆಯಾಗಿದೆ. ತಮ್ಮನ್ನು ಗುರುತು ಹಿಡಿದರೆ ಮತ್ತೆ ೧೩ ವರ್ಷಗಳ ಅಜ್ಞಾತವಾಸ ಮಾಡಬೇಕಾಗುತ್ತದೆ ಎಂದು ಗೊತ್ತಿದ್ದರೂ, ಗೋವುಗಳ

ರಕ್ಷಣೆಗೆ ಪಾಂಡವರು ಬಂದೇ ಬರುತ್ತಾರೆ ಎಂಬ ನಂಬಿಕೆ ವೀರತ್ವಕ್ಕೆ ಸಾಕ್ಷಿಯಾಗಿದೆ. ಒಂದು ವೇಳೆ ಅಜ್ಞಾತವಾಸಕ್ಕೆ ಹೆದರಿ ಪಾಂಡವರು ಗೋವುಗಳ ರಕ್ಷಣೆ ಮಾಡದೆ ಇದ್ದರೆ ಅವರ ಶೌರ್ಯ ಪರಾಕ್ರಮಗಳೆಲ್ಲ ಮಣ್ಣುಗೂಡುತ್ತವೆ. ಎಂದು ಗೋಗ್ರಗಣವನ್ನು ಕೌರವರು ನಡೆಸುತ್ತಾರೆ. ಆ ಗೋಗ್ರಹಣದ ಭೀಕರತೆ ಹೇಗಿತ್ತೆಂಬುದನ್ನು ಮುಂದಿನ ಪದ್ಯ ವರ್ಣಿಸುತ್ತದೆ.

> **"ಬಸಿವ ನೆತ್ತರ ಗೋವರರಸಂ**
> **ಗುಸಿರಲಾರದೆ ಧೊಪ್ಪನಡೆಗೆಡೆ**
> **ದಸುವ ಕಳೆದರು ಕೆಲರು ಕೆಲಬರು ತಮ್ಮ ಸಂತೈಸಿ**
> **ಅಸಮ ಬಲವದು ಜೀಯಗೋವರ**
> **ಕುಸುರಿದರಿದರುವತ್ತು ಸಾವಿರ**
> **ಪಶು ಸಮೂಹವ ಹಿಡಿದರೆಂದರು ಮತ್ಸಭೂಪತಿಗೆ"** ॥೪೪॥

ಮೈಯೆಲ್ಲಾ ರಕ್ತವಾಗಿ ಇನ್ನೂ ರಕ್ತ ಒಸರುತ್ತಿರುವ ಕೆಲವು ಗೋವಳರು ದೊರೆಯ ಮುಂದೆ ನಿಂತು ಮಾತನಾಡಲಾರದೆ ಕೆಳಗೆ ಬಿದ್ದು ಪ್ರಾಣ ನೀಗಿದರು. ಕೆಲವರು ಹಾಗೋ ಹೀಗೋ ಸುಧಾರಿಸಿಕೊಂಡು "ಪ್ರಭೂ ಅದು ಭಾರೀ ಸೈನ್ಯ, ಗೊಲ್ಲರನ್ನು ಕೊಚ್ಚಿ ಕೊಚ್ಚಿ ಹಾಕಿದರು. ಅರವತ್ತು ಸಾವಿರ ಗೋವುಗಳನ್ನು ಹಿಡಿದುಕೊಂಡು ಹೋದರು" ಎಂಬ ಸಂಗತಿಯು ಗೋವುಗಳ ಸಂಖ್ಯೆಯನ್ನು ತಿಳಿಯಲು ಹಾಗೂ ಗೋಗ್ರಹಣದ ಪ್ರಸಂಗದ ತೀವ್ರತೆಗೆ ಸಾಕ್ಷಿಯಾಗಿದೆ.[೧೫]

ಬನವಾಸಿ ಪನ್ನೀರ್ಛ್ಚಾಸಿರ, ನಾಗರಖಂಡ ೭೦, ಸಾಂತಳಿಗೆ ನಾಡು, ಜಿಡ್ಡುಳಿಗೆ ೭೦, ಎಡವಟ್ಟ ೭೦, ಬಳ್ಳಾವೆ ೭೦, ಈ ನಾಡುಗಳ ನಡುವೆ ಶಾಸನೋಕ್ತ ಗೋಗ್ರಹಣ ಯುದ್ಧಗಳು ರಾಜಕೀಯ ಉದ್ದೇಶದವೇ ಆಗಿವೆ. ಉದಾಹರಣೆಯಾಗಿ ಗಮನಿಸುವುದಾದರೆ ಸೊರಬ ತಾಲ್ಲೂಕಿನ ಒಂದು ಶಾಸನವನ್ನು ಸಾಹಿತ್ಯದ ದೃಷ್ಟಿಯಿಂದ ಗಮನಿಸಬಹುದು. ಸೊರಬ ತಾಲ್ಲೂಕಿನ ಜಿಡ್ಡುಳಿಗೆ ೭೦ರ ಬಳಿಯ ಹಳ್ಳಿ ಮಾಯಿಲೆಯ ತುರುಗಳನ್ನು ಕಾಳರಸ ಸೆರೆ ಹಿಡಿಯಲು ಉತ್ತಗಾವುಂಡ ಹೋರಾಡಿ ಮಡಿದ ಸುದ್ದಿ ಇದೆ. ಆದರೆ ಯುದ್ಧದ ಭೀಕರತೆಯನ್ನು ಭಯಾನಕವಾಗಿ ವರ್ಣಿಸುವ ಮಾತುಗಳು ನಾವು ಮುಂದಿನ ದಿನಗಳಲ್ಲಿ ಯುದ್ಧಕ್ಕಿಂತ ಶಾಂತಿಯನ್ನು ಬಯಸಬೇಕು ಎಂಬ ಸಂದೇಶವನ್ನು ನಮ್ಮ ಮನಸ್ಸಿಗೆ ಇಳಿಸುವಲ್ಲಿ ಸಫಲವಾಗುತ್ತವೆ. **"ಅಣಕಂಮೀ... ಕಾಳಗ ದೋಳಾರ್ದ್ದೊರೆಯಕ್ಕಲಮ್ಮುಕ್ಕಿ ಮಿಕ್ಕ ಬಲ್ಲಣಿಗಳ ನೊಕ್ಕಲಿಕ್ಕಿ ಜವನುಂಡುಯ್ಯನೆ ಕಾರಿದಂತೆ ಪೆರ್ಬಣದ ಬಳಂಬೆ ಪೆರ್ಗ್ಗರುಗಳ ತಿಂತಿಣಿ ನೆತ್ತರ ಪೆರ್ಬೊನಲು"**ಅಂತಹ ಮಾನವ ದೇಹಗಳನ್ನು ಛಿದ್ರವಾಗಿಸಿ ಬಿದ್ದಿದ್ದ ಸಹಸ್ರಾರು ಹೆಣಗಳ ನಡುವೆ ಹೋರಾಡುತ್ತಲೇ ಮಡಿದು ಉತ್ತಗಾವುಂಡನು ಕಲಿತನದಿಂದ ಹೋರಾಡಿ ಅಚ್ಚಗಣಿಕೆಯನ್ನು ಒಲಿಸಿದ ಸುದ್ಧಿಯಲ್ಲಿ ಯುದ್ಧದ ವರ್ಣನೆ ಭಯಾನಕವಾಗಿದೆ.[೧೬]

ಮಹಿಳೆಯನ್ನು ಅಪಮಾನಿಸುವ, ಸೇಡು ತೀರಿಸಿಕೊಳ್ಳಲು ಶತ್ರುಗಳನ್ನು ಅವಮಾನಿಸುವ ಮೂಲಕ ಯುದ್ಧಕ್ಕೆ ಎಳೆಯುವ ತಂತ್ರವೇ ಗೋಗ್ರಹಣ ಆಗಿದೆ. ಮಧ್ಯಕಾಲೀನ ಆಳರಸರಿಗೆ ತಮ್ಮ ಗ್ರಾಮದ ಗೋವುಗಳ ಹಿಂಡಿನ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಲು ತುರುಗಳವು ಒಂದು ವಿಧಾನವೂ ಆಗಿ ಬಳಕೆ ಆಗಿರುವುದು ಲಭ್ಯವಿರುವ ಶಾಸನಗಳ ಆಧಾರದಿಂದ ತಿಳಿದು ಬರುತ್ತದೆ. ಗೋಗ್ರಹಣದ ಉದ್ದೇಶವನ್ನು ಮಹಾಭಾರತ ಕಥೆಯಲ್ಲಿ ಬರುವ ಸುಶರ್ಮನ ಮಾತನ್ನು ಗಮನಿಸಿದಾಗ ರಾಜಕೀಯದ ಒಳಸುಳಿಗಳನ್ನು ಅದ್ಭುತವಾಗಿ ಕಟ್ಟಿಕೊಡುತ್ತದೆ. ಸುಶರ್ಮನು "ಮತ್ಸ್ಯ ರಾಜನು ನನ್ನ ರಾಜ್ಯವನ್ನು ಅನೇಕ ಸಾರಿ ಮುತ್ತಿ ಗೋಳಾಡಿಸಿದ್ದಾನೆ. ಅವನ ಸೇನಾಪತಿಯಾಗಿದ್ದ ಕೀಚಕನು ಪಾಪ ಕಾರ್ಯ ಮಾಡಿ ಗಂಧರ್ವರಿಂದ ಹತನಾಗಿದ್ದಾನೆ. ಅವನ ಸಾವಿನಿಂದ ಆ ರಾಜನು ದರ್ಪವಡಗಿ ನಿಸ್ಸಹಾಯಕನಾಗಿದ್ದಾನೆ. ಆದ್ದರಿಂದ ನೀನು ಒಪ್ಪುವುದಾದರೆ ಆತನ ದೇಶದ ಮೇಲೆ ದಂಡೆತ್ತಿ ಹೋಗೋಣ. ಆ ಪ್ರಾಂತ್ಯವು ಧನಧಾನ್ಯ ಸಮೃದ್ಧವಾಗಿದೆ. ಅದಕ್ಕೆ ಮುತ್ತಿಗೆ ಹಾಕಿದರೆ ರತ್ನಾಭರಣಗಳನ್ನು, ನಾನಾ ವಿಧವಾದ ಸಂಪತ್ತನ್ನು ಕೊಳ್ಳೆ ಹೊಡೆದುಕೊಂಡು ಬರಬಹುದು. ಅವನ ರಾಜ್ಯವನ್ನು ಒಂದೊಂದು ಊರಾಗಿಯೋ, ಒಂದೊಂದು ಭಾಗವಾಗಿಯೋ ತೆಗೆದುಕೊಳ್ಳೋಣ. ಇಲ್ಲದಿದ್ದರೆ ಅವನ ನಗರವನ್ನು ಮುತ್ತಿಗೆ ಹಾಕಿ ಅವನ ಸಾವಿರಾರು ಗೋವುಗಳನ್ನು ಹಿಡಿದುಕೊಂಡು ಬರೋಣ. ಅವನೊಡನೆ ಸಂಧಿ ಮಾಡಿಕೊಂಡು ಅವರ ಪೌರುಷವನ್ನು ಅಡಗಿಸಿ ಬಿಡೋಣ. ಇಲ್ಲದಿದ್ದರೆ ಸೈನ್ಯವನ್ನೆಲ್ಲಾ ಕೊಂದು ಅವನನ್ನು ವಶಪಡಿಸಿಕೊಳ್ಳೋಣ. ಹೀಗೆ ಅವನನ್ನು ನಿಯಂತ್ರಣಕ್ಕೆ ತಂದರೆ ನಿನ್ನ ಬಲವು ಹೆಚ್ಚುವುದಲ್ಲದೆ ನಾವೂ ಸುಖವಾಗಿರಬಹುದು." ಎಂಬ ಮಾತನ್ನು ಕರ್ಣನೂ ಅನುಮೋದಿಸಿದಾಗ ಮಹಾ ಭಾರತದ ಉತ್ತರ ಗೋಗ್ರಹಣ-ದಕ್ಷಿಣ ಗೋಗ್ರಹಣಕ್ಕೆ ವೇದಿಕೆ ಸಿದ್ಧವಾಗುತ್ತದೆ. ಗೋಗ್ರಹಣದಲ್ಲಿ ರಾಜಕೀಯ ಉದ್ದೇಶಗಳು ಹೇಗೆ ಅಡಕವಾಗಿರುತ್ತಿದ್ದವು ಎಂಬುದಕ್ಕೆ ಈ ಪ್ರಸಂಗ ಸಾಕ್ಷಿಯಾಗಿದೆ.[೧೭]

ರಣರಂಗದಿಂದ ಬೆನ್ನು ತೋರಿಸಿ ಓಡಿ ಹೋದವನು ಇದ್ದೂ ಸತ್ತಂತೆ. ಅಂಥ ಹೇಡಿಯ ಬಳಿ ಎಷ್ಟೇ ಹಣವಿದ್ದರೂ ಅದು ನಿಷ್ಪ್ರಯೋಜಕವಾದದದ್ದು. ದನಗಳನ್ನು ಕಾಪಾಡಿ ಕೊಳ್ಳಲಾಗದ ರಾಜ ಜನರನನ್ನು ಹೇಗೆ ಕಾಪಾಡಿಯಾನು? ನಮ್ಮ ಆರ್ಥಿಕ ಸಂಪತ್ತಿನ ಭಾಗವಾದ ದನ, ಧನ, ವ್ಯಾಪಾರವನ್ನು ಹೇಗೆ ರಕ್ಷಿಸುತ್ತಾನೆ? ಎಂಬ ಸಂದೇಶ ಪ್ರಜೆಗಳಲ್ಲಿ ರವಾನೆಯಾಗುತ್ತಿತ್ತು. ಅಲ್ಲಿಯ ಗ್ರಾಮದ ಜನ ಕೈಲಾಗದವರು, ಎಂಬ ಭಾವನೆ ಬೆಳೆಯುತ್ತಿತ್ತು.ಗೋಗ್ರಹಣ ಕದನಗಳು ಪ್ರತಿಷ್ಠೆಯ ಜೊತೆಗೆ, ನಾಡಿನ ಪ್ರತಿಷ್ಠೆಯೂ ಸೇರಿ ಯುದ್ಧದ ಅನಿವಾರ್ಯತೆಯನ್ನು, ಭೀಕರತೆಯನ್ನು ಇನ್ನಷ್ಟು ಹೆಚ್ಚಿಸುತ್ತಿದ್ದವು. ಆದ್ದರಿಂದಲೇ ಕರ್ನಾಟಕದ ಜನ ಜೀವನದ ಭಾಗವಾದ ಗೋವುಗಳ

ಕಳ್ಳತನ ಮಾಡುವುದು, ಇಡೀ ನಾಡನ್ನೇ ಇಕ್ಕಟ್ಟಿಗೆ ಸಿಲುಕಿಸಿ, ಯುದ್ಧಕ್ಕೆ ಆಹ್ವಾನ ನೀಡುವ ತಂತ್ರವಾಗಿ ಬಳಕೆಯಾಯಿತು. ಇಡೀ ಗ್ರಾಮದ, ನಾಡಿನ, ಗಡಿ, ಸ್ತ್ರೀಯರ ಮಾನಾಪಮಾನದ, ರಾಜರ ತಮ್ಮ ನಾಡು, ಗ್ರಾಮ, ರಾಜ್ಯದ ಹಾಗೂ ಗಂಡಸರ ಗಂಡಸುತನದ ಅಳಿವು, ಉಳಿವಿನ ಪ್ರಶ್ನೆಯಾಗಿ ಹೋರಾಟದ ತೀವ್ರತೆಯನ್ನು ಹೆಚ್ಚಿಸಿದ್ದವು. ಈ ಅತ್ಮಾಭಿಮಾನ, ಸ್ವಾಭಿಮಾನ, ಕನ್ನಡ ನಾಡಿನ ಹೋರಾಟದ ಕಿಚ್ಚನ್ನು, ವೀರಪರಂಪರೆಯನ್ನು ಕಟ್ಟುವಲ್ಲಿ ಸಾರ್ಥಕವಾಗಿದೆ. ಆ ವೀರ ಪರಂಪರೆಯ ಇತಿಹಾಸದ ಪುಟಗಳಲ್ಲಿ ರಾಜಕೀಯ ದಾಳ ಉರುಳಿಸುವ ಮೊದಲ ಭಾಗವಾಗಿ ಗೋಗ್ರಹಣ ಕದನಗಳು ಒಂದು ಅರಸೊತ್ತಿಗೆಯ, ಅಥವಾ ಗ್ರಾಮದ ನಾಶಕ್ಕೂ ಹಾಗು ಇನ್ನೊಂದು ರಾಜ್ಯದ, ಅಥವಾ ಗ್ರಾಮದ ಉದಯಕ್ಕೂ ಗೋಗ್ರಹಣ ಘಟನೆಗಳು ಅಡಿಗಲ್ಲಾಗಿವೆ.

### ೪. ಧಾರ್ಮಿಕ ಕಾರಣಗಳು

ಗೋ ಅಥವಾ ಗೋವು ಸಂಸ್ಕೃತ ಪದ (ಗೌ) ಹಳೆಯ ಪರ್ಷಿಯನ್ ಭಾಷೆಯ ಗೌ ಅವೆಸ್ತಾ ಭಾಷೆಯ ಗಾಉಶ್, ಆರ್ಮಿಯನ್ ಭಾಷೆಯ 'ಕೋವ್', ಗ್ರೀಕ್ ಭಾಷೆಯ ಬೊಉಸ್, ತೋಕೇರಿಯನ್ ಭಾಷೆಯ 'ಕೋ'ಇವೇ ಮೊದಲಾದ ಸಂಸ್ಕೃತದ ಜ್ಞಾತಿ ಪದಗಳು. ಸಂಸ್ಕೃತವೂ ಸೇರಿದಂತೆ ಮೇಲೆ ಹೇಳಿದ ಭಾಷೆಗಳು ಇಂಡೋ ಯೂರೋಪಿಯನ್ ವರ್ಗಕ್ಕೆ ಸೇರಿವೆ. ಇಂಗ್ಲೀಷಿನ cow (ಕೌ) ಪದದಲ್ಲಿ ಸಂಸ್ಕೃತದ "ಗೌ" ರೀತಿ ಆರಂಭದಲ್ಲಿ 'ಕ' ವರ್ಗದ ವ್ಯಂಜನ, ಒಂದೇ ರೀತಿಯ ಸ್ವರ ಇರುವುದು ಗಮನಾರ್ಹ. ಕನ್ನಡದ 'ಹಸು' ಎಂಬುದು ಸಂಸ್ಕೃತದ 'ಪಶು' ಪದದ ತದ್ಭವ. (ಅದು ಪ್ರಾಕೃತದ 'ಪಸು' ವಿನಿಂದ ಬಂದಿದೆ) ಪಶು > ಪಸು > ಹಸು ಎಂದಾಗಿದೆ. ಸಂಸ್ಕೃತದಲ್ಲಿ 'ಗೋ' 'ಪಶು' ಪದಗಳಿಗೆ ಪ್ರದಾನವಾಗಿ ಕೊಂಬು, ಬಾಲ, ನಾಲ್ಕು ಕಾಲು, ಇರುವ ಜಂತು, ಎಂಬ ಅರ್ಥವಿದ್ದರೂ ಸಾಂದರ್ಭಿಕವಾಗಿ ಸಾಕು ಪ್ರಾಣಿಗಳಾದ ಎತ್ತು, ಹಸು, ಕೆಲವೊಮ್ಮೆ ವಿರಳವಾಗಿ ಕುದುರೆ, ಮೇಕೆ, ಎಂಬ ಅರ್ಥಗಳೂ ಉಂಟು. ಪಶು ಸಂಪತ್ತು ಎಂದಾಗ ಅದರಲ್ಲಿ ಎಮ್ಮೆ, ಕೋಣಗಳೂ ಬರುತ್ತವೆ. ಗೋವಿನ ಪ್ರಮುಖವಾದ ಅರ್ಥ ಕನ್ನಡದಲ್ಲಿ ಆಕಳು ಎಂದೇ ಆಗಿದೆ. ಹಿಂದಿನ ಕನ್ನಡ ನಿಘಂಟುವಿನಲ್ಲಿ ಗೋ, ಪಶು, ಎಂದರೆ 'ಆಕಳು' ಎಂದು ಅರ್ಥ ಹೇಳಲಾಗಿದೆ. ಹಳೆಗನ್ನಡದ 'ತುಱು' ಎಂದರೆ ಆಕಳು ಎಂಬ ಅರ್ಥವನ್ನು ಕೊಡುತ್ತದೆ. ತುರುಕಾರ ಎಂದರೆ ಗೋವಳ ಅಥವಾ ಗೊಲ್ಲ ಎಂಬ ಅರ್ಥ ಹೊಂದಿದೆ. ಪ್ರಾಕೃತದಲ್ಲಿ ಎಲ್ಲಾ ಚತುಷ್ಪಾದ ಪ್ರಾಣಿಗಳನ್ನೂ "ಪಸು" ಎಂದೇ ಕರೆದಿದೆ.[೧೮]

ಭಾರತೀಯ ಸಂಸ್ಕೃತಿಯಲ್ಲಿ ಗೋವು ಪುರಾಣಗಳ ಪ್ರಕಾರ 'ಸಮುದ್ರ ಮಂಥನ' ಸಂದರ್ಭದಲ್ಲಿ ಮಾನವನ ಕಲ್ಯಾಣಕ್ಕೆಂದು ಹುಟ್ಟಿದ 'ಸುರಭಿ' ಹೆಸರಿನ ಸ್ವರ್ಣ ಬಣ್ಣದ 'ಕಪಿಲಾ' ಗೋವಾಗಿತ್ತು ಎಂದು ಪುರಾಣಗಳು ತಿಳಿಸುತ್ತವೆ. ಕ್ರಿ.ಪೂ. ೩೦೦೦ ವರ್ಷಗಳ ಹಿಂದೆಯೇ ಗೋವನ್ನು ದೈವತ್ವಕ್ಕೆ ಏರಿಸಲಾಗಿತ್ತು. ಗೋವು ರುದ್ರನ ತಾಯಿ, ವಸುವಿನ ಮಗಳು, ಆದಿತ್ಯರ ಸಹೋದರಿ, ಅಮೃತದ ಕೇಂದ್ರವೆಂದು ನಂಬಲಾಗಿದೆ. ಹಿಂದೂ ಧರ್ಮದ ಪ್ರಕಾರ ಗೋವಿನಲ್ಲಿ ೩೩ ಕೋಟಿ ದೇವತೆಗಳು ವಾಸವಾಗಿದ್ದಾರೆ. ಆ ಅಂಶವನ್ನು ಗಮನಿಸಿದಾಗ ಗೋವಿನ ಕೋಡಿನಲ್ಲಿ ಬ್ರಹ್ಮ ಮತ್ತು ವಿಷ್ಣು, ಕೋಡಿನ ತುದಿಯಲ್ಲಿ ಎಲ್ಲಾ ನದಿಯ ತೀರ್ಥಗಳು, ಹಣೆಯಲ್ಲಿ ಶಿವ, ಹಣೆಯ ತುದಿಯಲ್ಲಿ ಪಾರ್ವತಿ ದೇವಿ, ಮೂಗಿನಲ್ಲಿ ಷಣ್ಮುಖ, ಕಿವಿಯಲ್ಲಿ ಅಶ್ವಿನಿ ದೇವತೆಗಳು, ಕಣ್ಣುಗಳಲ್ಲಿ ಸೂರ್ಯ ಮತ್ತು ಚಂದ್ರರು ಸ್ಥಾಪಿತರಾಗಿದ್ದಾರೆ. ಹಲ್ಲಿನಲ್ಲಿ ವಾಯು, ನಾಲಿಗೆಯಲ್ಲಿ ವರುಣ, ಗೋವಿನ ಹೂಂಕಾರದಲ್ಲಿ ಸರಸ್ವತಿ ದೇವಿ, ಕಪೋಲದಲ್ಲಿ ಯಮ, ತುಟಿಯಲ್ಲಿ ಸಂಧ್ಯಾ ಕಾಲಗಳು, ಕುತ್ತಿಗೆಯಲ್ಲಿ ಇಂದ್ರ, ಎದೆಯಲ್ಲಿ ಸಾಧ್ಯ ದೇವತೆಗಳು, ನಾಲ್ಕು ಕಾಲುಗಳಲ್ಲಿ ಧರ್ಮ ದೇವತೆಗಳು, ಗೊರಸಿನ ಮಧ್ಯೆ ಗಂಧರ್ವ ದೇವತೆಗಳು, ಗೊರಸಿನ ತುದಿಯಲ್ಲಿ ಸರ್ಪ ದೇವತೆ, ಗೊರಸಿನ ಅಕ್ಕ ಪಕ್ಕ ಅಪ್ಸರ ದೇವತೆಗಳು ಸ್ಥಾನ ಪಡೆದಿದ್ದಾರೆ. ಬೆನ್ನಿನಲ್ಲಿ ಏಕಾದಶ ರುದ್ರರು, ಎಲ್ಲಾ ಸಂಧಿಗಳಲ್ಲೂ ವಸು ದೇವತೆಗಳು, ಮಂಡಿಯ ಗಂಟಿನಲ್ಲಿ ಪಿತೃ ದೇವತೆಗಳು, ಬಾಲದಲ್ಲಿ ಸೋಮ, ಸೂರ್ಯ ರಶ್ಮಿ, ರೋಮಗಳಲ್ಲಿ ಮೂವತ್ತಮೂರು ಕೋಟಿ ದೇವತೆಗಳು, ಉದರದಲ್ಲಿ ಪೃಥ್ವಿ, ಮೊಲೆಗಳಲ್ಲಿ ನಾಲ್ಕು ಸಾಗರಗಳು, ಗೋಮೂತ್ರದಲ್ಲಿ ಗಂಗಾದೇವಿ, ಕ್ಷೀರದಲ್ಲಿ ಸರಸ್ವತಿ, ಮೊಸರಿನಲ್ಲಿ ನರ್ಮದೆ, ತುಪ್ಪದಲ್ಲಿ ಅಗ್ನಿ, ಕೊನೆಯಲ್ಲಿ ಬಂದ ಲಕ್ಷ್ಮಿಗೆ ಎಲ್ಲಿಯೂ ಸ್ಥಳವಿಲ್ಲದೆ ಗೋಮಯದಲ್ಲಿ ಸ್ಥಾನವನ್ನು ಪಡೆಯುತ್ತಾಳೆ. ಭಾರತೀಯರ ಬದುಕಿನಲ್ಲಿ ಗೋವು ಜೀವನದ ಅಗತ್ಯದ ಸಂಪತ್ತು ಎಂದು ಭಾವಿಸಲಾಗಿ ಗೋಪಾಲನೆ, ಗೋಸಂವರ್ಧನೆ, ಗೋಸಂರಕ್ಷಣೆ, ಗೋಪೂಜೆ ಇವುಗಳೊಡನೆ ಸೇರಿಕೊಂಡು ಪರಂಪರಾಗತವಾಗಿ ಸಾಗಿ ಬಂದಿದೆ. ಭಗವಂತನು ತಾನು ಸೃಷ್ಟಿಸಿದ ಸಕಲ ಜೀವ ಕೋಟಿಗಳಿಗೆ ತಾಯಿಯ ರೂಪದಲ್ಲಿ ಗೋವನ್ನು ಈ ಭೂಮಿಗೆ ಕಳಿಸಿದ್ದಾನೆ ಎಂದು ಧರ್ಮಗಳು ತಿಳಿಸುತ್ತವೆ.

ಗೋವುಗಳನ್ನು ದೈವತ್ವಕ್ಕೆ ಏರಿಸಿದ್ದರಲ್ಲಿ ಅವುಗಳನ್ನು ಆರಾಧಿಸುವಂತೆ ಮಾಡಿದ ಕೀರ್ತಿ ಆರ್ಯರ ಗುಂಪಿಗೆ ಸಲ್ಲಬೇಕು. ಆರ್ಯರು ಭಾರತವನ್ನು ಒಂದೇ ಬಾರಿಗೆ ಆಕ್ರಮಿಸಿಕೊಳ್ಳಲಿಲ್ಲ. ಈ ಕ್ರಿಯೆಗೆ ಶತಮಾನಗಳೇ ಬೇಕಾಯಿತು. ಮೊದಲಿಗೆ ಅವರು ಸಪ್ತ ಸಿಂಧೂ, ಅಂದರೆ ಏಳು ನದಿಗಳ (ಸಿಂಧೂ, ರಾವಿ, ಬಿಯಾಸ್, ಚೇನಾವ್, ಝೆಲಂ, ಸಟ್ಲೇಜ್, ಮತ್ತು ಸರಸ್ವತಿ) ಬಯಲಿನಲ್ಲಿ ನೆಲೆಗೊಂಡರು. ಈ ಭಾಗಕ್ಕೆ ಅವರು ಬ್ರಹ್ಮಾವರ್ತ ಎಂದು ಕರೆದರು. ಈ ಸಪ್ತ

ಸಿಂಧೂ ಭಾಗದಲ್ಲೇ ಆರ್ಯರ ಮೊದಲ ಸಾಹಿತ್ಯದ ದಾಖಲೆಯಾದ **'ಋಗ್ವೇದವನ್ನು'** ಸ್ತೋತ್ರಗಳ ರೂಪದಲ್ಲಿ ರಚಿಸಲಾಯಿತು.[೧೯]

ಹೊರಗಿನಿಂದ ಬಂದ ಆರ್ಯರ ಮುಖ್ಯ ಕಸುಬೇ ಪಶುಸಂಗೋಪನೆ ಆಗಿದ್ದರಿಂದ ಅವುಗಳ ಮೇಯಿಸುವ ಭೂಮಿ, ನೀರು, ಆಹಾರಕ್ಕಾಗಿ ಹವಾಮಾನಕ್ಕೆ ತಕ್ಕಂತೆ ಅಲೆಯುವುದೂ ಅನಿವಾರ್ಯವಾಗಿತ್ತು. ಈ ಅಲೆಯುವ ಪ್ರಕ್ರಿಯೆಯಲ್ಲಿ ತಮ್ಮ ಅಸ್ತಿತ್ವದ ಸ್ಥಾಪನೆಗಾಗಿ ಇಲ್ಲಿನ ಸ್ಥಳೀಯರೊಂದಿಗೆ ಹೋರಾಡುವುದೂ ಅನಿವಾರ್ಯವಾಯಿತು. ಋಗ್ವೇದದಲ್ಲಿ ಇಂದ್ರ ಮತ್ತು ಅಗ್ನಿಯನ್ನು ಆರಾಧಿಸದ ವರ್ಗದವರ ಮೇಲೆ ಆರ್ಯರು ದಾಳಿ ನಡೆಸಿ ಗೋವುಗಳನ್ನು ಅಪಹರಿಸಿ ಸಂಪತ್ತನ್ನು ಕೊಳ್ಳೆ ಹೊಡೆದಿದ್ದಾರೆ. ವೈದಿಕರ ದೇವತೆಗಳನ್ನು ಪೂಜಿಸಿದವರ ಮೇಲೆ ತಾವು ದಾಳಿ ನಡೆಸಿದ್ದಾಗಿ ಆರ್ಯರು ತಮ್ಮ ಕ್ರೂರ ನಡವಳಿಕೆಗೆ ಸಮರ್ಥನೆ ನೀಡಿದ್ದಾರೆ. ಆದರೆ ಅದಕ್ಕಿಂತ ಮುಖ್ಯ ಸಂಗತಿ ಎಂದರೆ ತಾವು ಪಳಗಿಸಿದ ಗೋವುಗಳು, ಆ ಗುಂಪಿನ ಅಗತ್ಯತೆಯನ್ನು ಪೂರೈಸುವ ಜೀವನಾಧಾರಕ ಸಂಗಾತಿಯಾಗಿ, ಜೀವಧನವೆನಿಸಿ, ಅಂದಿನ ಅರ್ಥವ್ಯವಸ್ಥೆಯಲ್ಲಿ ಮುಖ್ಯವಾದ ವಿನಿಮಯ ಮಾಧ್ಯಮವಾಗಿದ್ದು. ಜೊತೆಗೆ ಪವಿತ್ರ ಹಾಗೂ ಪೂಜಾರ್ಹ ಪ್ರಾಣಿ ಎಂದು ಪರಿಗಣಿಸಲ್ಪಟ್ಟಿತ್ತು. ಅನೇಕ ಬಣ ಅಥವಾ ಕುಲಗಳ ಉಲ್ಲೇಖ ಋಗ್ವೇದದಲ್ಲಿದೆ. ಪುರು, ಯದು, ತುರ್ವಸು ಮೊದಲಾದ ಕುಲಗಳಿದ್ದು ಸುಧಾಸ, ಭರತ ಕುಲದ ಅರಸನಾಗಿದ್ದನು. ರಾವಿ ನದಿಯ ತೀರದಲ್ಲಿ ಈತನ ಪ್ರಭುತ್ವ, ಹತ್ತು ಅರಸರ ಒಕ್ಕೂಟ ಸೈನ್ಯ ಸುಧಾಸನ ರಾಜ್ಯದ ಮೇಲೆ ದಾಳಿ ಮಾಡಲು ಪರಾಕ್ರಮದಿಂದ ಹೋರಾಡಿದ ಸುಧಾಸ ಗೆಲುವು ಪಡೆಯುವನು. ಈ ಯುದ್ಧಕ್ಕೆ **'ದಶರಾಜರ ಕದನ'** ಎಂದು ಹೆಸರು. ಇದು ವೇದದಲ್ಲಿ ಬಂದ ಸಾಮೂಹಿಕ ಆಕ್ರಮಣದ ಮೊದಲ ಉಲ್ಲೇಖವೂ ಹೌದು.[೨೦]

ಈ ಎಲ್ಲಾ ಸಂಗತಿಗಳ ನಡುವೆಯೂ ಧಾರ್ಮಿಕ ವಿಧಿ ವಿಧಾನಗಳಲ್ಲಿ ಗೋದಾನ ವಿಶೇಷ ಮಹತ್ವ ಪಡೆದಿತ್ತು ಸಹಸ್ರಾರು ಗೋವುಗಳನ್ನು ದಾನಮಾಡಿದ ವಿವರಗಳು ನಮ್ಮ ಗೋಸಾಸ ಶಾಸನಗಳು ತಿಳಿಸುತ್ತವೆ.ರಚನೆಯ ವಿನ್ಯಾಸದಲ್ಲೂ ವೈವಿಧ್ಯತೆ ಹೊಂದಿ ಅಪಾರ ಪಶು ಸಂಪತ್ತು ಇದ್ದಿದ್ದಕ್ಕೆ ಸಾಕ್ಷಿ ಈ ಗೋಸಾಸಗಳು. ಈ ಗೋದಾನದ ಮಹತ್ವವನ್ನು ನೋಡುವುದಾದರೆ

**ಗೋದಾನ** : ಮಾನವ ಗೋವುಗಳನ್ನು ಸಾಮಾಜಿಕ ವ್ಯವಹಾರಗಳಲ್ಲಿ ಎಂದು ನಾಣ್ಯಗಳಂತೆ ಚಲಾವಣೆಗೆ ಬಳಸತೊಡಗಿದನೊ ಅಂದೇ ಗೋವುಗಳನ್ನು ಹೊಂದುವುದು ಲಾಭದಾಯಕವೆನಿಸಿತು. ಗೋವುಗಳನ್ನು ಹೊಂದಿದಲ್ಲಿ ಜೀವನಕ್ಕೆ ಅಗತ್ಯವಾದ ಎಲ್ಲವನ್ನೂ ಪಡೆಯಬಹುದು ಎಂಬ ಭಾವನೆ ಬಲವಾಯಿತು. ವೃತ್ತಿಗಳ ಆಧಾರದಲ್ಲಿ ಬದಲಾಗುತ್ತಾ ಸಾಗಿದ ಸಮಾಜ ಶಿಕ್ಷಣ

ನೀಡುವ, ಧಾರ್ಮಿಕ ಪೂಜಾ ಕಾರ್ಯಗಳನ್ನು ನೆರವೇರಿಸುವ ಗುರುಸ್ಥಾನ ಹೊಂದಿದ ಬ್ರಾಹ್ಮಣರು ಮಾತ್ರ ಗೋದಾನವನ್ನು ಸ್ವೀಕರಿಸಲು ಅರ್ಹ ಎಂಬುದನ್ನು ಸಮಾಜದಲ್ಲಿ ಬಿಂಬಿಸಲಾಯಿತು. ಗೋದಾನದ ಬಗ್ಗೆ ಸಮಾಜದಲ್ಲಿ ಭಕ್ತಿ, ಗೌರವ, ಪೂಜ್ಯನೀಯ ಭಾವನೆ ಇದಕ್ಕೆ ಮೂಲ ಕಾರಣ. ಕಾಳಿದಾಸನ ರಘುವಂಶ ಮಹಾಕಾವ್ಯದಲ್ಲಿ ರಘುವಿಗೆ ದಿಲೀಪ ಗೋದಾನ ವಿಧಿಯ ಆನಂತರ ವಿವಾಹ ವಿಧಿಯನ್ನು ನೆರವೇರಿಸಿದನು ಎಂದಿದೆ. ಯಜ್ಞಾಂತ್ಯದಲಿ ಋತ್ವಿಜರಿಗೆ ದಕ್ಷಿಣೆಯನ್ನು ಗೋದಾನದ ರೂಪದಲ್ಲಿಯೇ ಕೊಡುವ ಪದ್ಧತಿ ಇತ್ತು. ಇಂತಿಂಥ ಋತ್ವಿಜರಿಗೆ ಇಂತಿಷ್ಟು ಗೋವುಗಳನ್ನು ಕೊಡಬೇಕೆಂದು ಯಜ್ಞಶಾಸ್ತ್ರ ಹೇಳುತ್ತದೆ. ಬೃಹದ್ದಾರಣ್ಯಕೋಪ ನಿಷತ್ತಿನಲ್ಲಿರುವಂತೆ ಜನಕ ಬ್ರಹ್ಮಿಷ್ಟನಾದ ಯಜ್ಞಾವಲ್ಕ್ಯನಿಗೆ ವೇದಾಂತವಾದದಲ್ಲಿ ಜನಿಸಿ ಪಡೆದ ಸಾವಿರಾರು ಗೋವುಗಳನ್ನು ಕೊಟ್ಟ ಉದಾಹರಣೆ ಇದೆ. ಗ್ರಹಣ ಮತ್ತು ಮರಣ ಸಂದರ್ಭದಲ್ಲಿಯೂ ಗೋದಾನ ಕೊಡುವ ಪದ್ಧತಿ ಇದೆ. ಮರಣಾ ನಂತರ ಮೃತನ ಸದ್ಗತಿಗಾಗಿ ಗೋದಾನವನ್ನು ಮಾಡುತ್ತಾರೆ. ದಾನದ ಬಗೆಗೆ ಕೆಲವು ನಂಬಿಕೆಗಳು ಈ ರೀತಿ ಇದೆ.

ಒಂದು ಎತ್ತನ್ನು ದಾನ ಕೊಡುವುದರಿಂದ ೧೦ ಗೊದಾನದ ಫಲ ಲಬಿಸುತ್ತದೆ. ಇದು ಇಡಿಯ ಭೂಮಂಡಲವನ್ನೇ ದಾನ ನೀಡುವುದಕ್ಕೆ ಸಮನಾಗಿರುತ್ತದೆ.[೨೧] ಆದ ಕಾರಣ ಬೇರಾವ ಪ್ರಾಣಿಯೂ ಪೂಜ್ಯತೆಗೆ ಅರ್ಹವಲ್ಲ. ಗೋದಾನವು ಅತಿಶಯ ಪುಣ್ಯ ಪ್ರದವಾದ ದಾನವೆಂದು ಶಾಸ್ತ್ರಗಳು ಸಾರಿವೆ. ಇದಕ್ಕಿಂತ ಸಮಾನವಾದ ಸಂಪತ್ತು ಇನ್ನೊಂದಿಲ್ಲ. ಅನ್ನದಾನ, ಕನ್ಯಾದಾನಕ್ಕಿಂತ ಗೋದಾನವೇ ಶೇಷ್ಟವೆಂಬ ಕಲ್ಪನೆ ನಮ್ಮಲ್ಲಿತ್ತು. ಗೋವುಗಳನ್ನು ದಾನಕೊಡುವುದು, ಸ್ವೀಕರಿಸುವುದು, ಪ್ರತಿಷ್ಠೆಯ ವಿಷಯವಾಗಿತ್ತು. ನಮ್ಮ ಅನೇಕ ಶಾಸನಗಳಲ್ಲಿ ಈ ದಾನವನ್ನು ರಕ್ಷಿಸಿದವನಿಗೆ ಗೋದಾನ ಮಾಡಿದ ಪುಣ್ಯ, ಅದರಲ್ಲೂ ಗಂಗಾ ನದಿಯ ದಡದಲ್ಲಿ ದಾನ ಮಾಡಿದ ಪುಣ್ಯ ಬರುತ್ತದೆ. ಎಂಬ ಮಾತುಗಳು ಗೋದಾನದ ಮಹತ್ವವನ್ನು ತಿಳಿಸುವಂಥವು. ಒಂದು ವೃಷಭ ದಾನ ನೂರು ಗೋದಾನಕ್ಕೆ ಸಮ ಎನ್ನುವಲ್ಲಿ ಬೀಜದ ಹೋರಿಗೆ ಜನ ಎಷ್ಟು ಮಹತ್ವ ಕೊಟ್ಟಿದ್ದರು ಎಂಬುದು ಅರಿವಾಗುತ್ತದೆ.ಇದರಿಂದ ಸ್ವರ್ಗ ಪ್ರಾಪ್ತಿ ಆಗುವುದೆಂದು ಸ್ಕಂದ ಪುರಾಣದಲ್ಲಿ ಹೇಳಿದೆ. ೧೦ ಗೋದಾನ ಮಾಡಿದರೆ ಗೋಲೋಕ ಪ್ರಾಪ್ತಿ ಎಂದೂ, ೧೦೦ ಗೋದಾನ ಮಾಡಿದರೆ ಬ್ರಹ್ಮಲೋಕ ಪ್ರಾಪ್ತಿ ಎಂದೂ, ಸ್ಮೃತಿಕಾರ ವಿಷ್ಣುವಿನ ಅಭಿಪ್ರಾಯ. ಹೋಮಕ್ಕಾಗಿ ಅಗ್ನಿಹೋತ್ರಿಗೆ ಗೋವನ್ನು ಅವನು ಬೇಡದೆ ಕೊಟ್ಟಿದ್ದಾದರೆ ಸಕಲ ಭೂಮಂಡಲವನ್ನೇ ದಾನ ಮಾಡಿದ ಪುಣ್ಯ ಲಭಿಸುತ್ತದೆ, ಎಂದು ಜಾಬಾಲಕನ ಅಭಿಪ್ರಾಯ.

ಇಂತಿಂಥ ಬಣ್ಣದ ಗೋವುಗಳನ್ನು ಇಂತಿಂಥ ರೀತಿಯಲ್ಲಿ ದಾನಮಾಡಬೇಕು ಎಂದು ನಿಯಮಗಳಿವೆ. ಬಹಳ ಹಾಲನ್ನು ಹಿಂಡುವ, ಒಳ್ಳೆಯ ನಡತೆಯ, ಲಕ್ಷಣದ ಗೋವನ್ನು

ಕರುವಿನೊಂದಿಗೆ ದಾನಮಾಡಬೇಕೆಂದು ಸ್ಮೃತಿಕಾರ ದೇವಲ ಹೇಳುತ್ತಾನೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮಾನವನ ವಿಕಾಸದ ಹಾದಿಯಲ್ಲಿ ವೃತ್ತಿಗನುಗುಣವಾಗಿ ಆದ ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣ ಮಾತ್ರ ಬುದ್ಧಿಯ ಭಲದಿಂದ ಬದುಕಿದವನು. ಆದ್ದರಿಂದ ಅವನು ಶರೀರ ಶಕ್ತಿಯಿಂದ ಬದುಕಲಾರ. ಶ್ರಮದಾಯಕ ಕೆಲಸಗಳನ್ನು ಮಾಡಲಾರ. ಆದ್ದರಿಂದಲೇಸಾಧುವಾದ ಹಸುಗಳನ್ನು ಇವರಿಗೆ ನೀಡುವುದು ಶುಭ ಎಂದು ಅಂದಿನ ಜನತೆಯನ್ನು ನಂಬಿಸಲಾಯಿತು. ಅಲ್ಲದೆ ನಿರುಪಯುಕ್ತ ಗೋವುಗಳನ್ನು ದಾನ ಕೊಡಬಾರದೆಂಬುದನ್ನು ಪುರಾಣಗಳಲ್ಲಿ ಸೇರಿಸಲಾಯಿತು. ಬ್ರಹ್ಮ ಪುರಾಣದಲ್ಲಿ ತನ್ನ ಮೊಲೆಯ ಹಾಲನ್ನು ತಾನೇಕುಡಿಯುವ, ಹೆಚ್ಚು ಆಹಾರ ಸೇವಿಸುವ, ಬಾಲ್ಯಾವಸ್ಥೆಯಲ್ಲಿಯೇ ಗರ್ಭ ದರಿಸಿದ, ಉಗ್ರವಾದ, ಒದೆಯುವ, ಗುದ್ದುವ ಗೋವನ್ನು ದಾನಮಾಡಬಾರದು,ಎಂದಿದೆ. ಅಲ್ಲದೆ ಹೀನಾಂಗದ, ದುಷ್ಟ ಸ್ವಭಾವದ ದುರ್ಭಲವಾದ, ಮುಪ್ಪಾದ, ವ್ಯಾಧಿ ಪೀಡಿತವಾದ, ಹಣ ಸಲ್ಲಿಸದೆ ಕೊಂಡುಕೊಂಡ, ಕೃಷವಾದ, ದುಷ್ಟ ಕರುವುಳ್ಳ, ಬಂಜೆಯಾದ, ಅಧಿಕಾಂದ ಗೋವುಗಳನ್ನು ದಾನ ಮಾಡಬಾರದೆಂದು ಶಾಸ್ತ್ರೋಕ್ತಿ ಹೇಳಿದೆ.[೨೨]

ಋಗ್ವೇದದಲ್ಲಿ ಗೋ ಪ್ರೇಮವಿಲ್ಲದವರನ್ನು ರಾಕ್ಷಸರಿಗೆ ಹೋಲಿಸಲಾಗಿದೆ. ವೇದಗಳಲ್ಲಿ ಒಂದು ಕಥೆ ಹೀಗಿದೆ. 'ಗೋವುಗಳನ್ನು ಫಣಿಗಳು ಹೊಡೆದುಕೊಂಡು ಹೋಗಿ, ಅನೇಕ ಕಾಲ ಗುಹೆಯಲ್ಲಿ ಬಚ್ಚಿಟ್ಟರೆಂದೂ, ಆಗ ಇಂದ್ರನ ದೂತಿಯಾದ, ದೇವ ಶುನಿಯಾದ 'ಸರಮೆ'ಯು ಇವುಗಳನ್ನು ಪತ್ತೆ ಹಚ್ಚಿದಳೆಂದೂ, ಇಂದ್ರನು ಇವುಗಳನ್ನು ಬಿಡಿಸಿಕೊಂಡು ತಂದನೆಂದೂ ಈ ಪ್ರಸಂಗದಲ್ಲಿ ತಿಳಿಸಲಾಗಿದೆ. ಫಣಿಗಳು ಹೇಳುವ ಮಾತು ವೇದಗಳಲ್ಲಿ ನಮೂದಿಸಿರುವ ಈ ಪ್ರಸಂಗ ಪ್ರಪಂಚದ ಅತ್ಯಂತ ಪ್ರಾಚೀನ ಗೋಗ್ರಹಣ ಎನ್ನಬಹುದು. ಸರಮೆಯು ಇಂದ್ರನು ನಿಮ್ಮಿಂದ ಹತನಾಗತಕ್ಕವನಲ್ಲ, ನಿಮ್ಮ ಮರಣ ಕಾಲ ಸನ್ನಿಹಿತವಾಯಿತು. ಎಂದಾಗ ಫಣಿಗಳು "ಯುದ್ಧವೇ ಇಲ್ಲದೆ ಈ ಗೋವುಗಳನ್ನು ಬಿಟ್ಟುಕೊಡುವಷ್ಟು ಮೂರ್ಖರಲ್ಲ ನಾವು, ನಮ್ಮ ಬಳಿಯಲ್ಲೂ ಹರಿತವಾದ ಆಯುಧಗಳಿವೆ" ಎಂಬ ಮಾತುಗಳು ತುರುಗೋಳ್ ಪ್ರಸಂಗಕ್ಕೆ ಋಗ್ವೇದದಲ್ಲಿ ದೊರೆಯುವ ಉಲ್ಲೇಖವಾಗಿದೆ.[೨೩]

ರಾಜನು ಹೊಸದಾಗಿ ರಾಜ್ಯಭಾರವನ್ನು ವಹಿಸಿಕೊಂಡು ಪಟ್ಟಾಭಿಷಿಕ್ತನಾಗುವ ಸಮಯದಲ್ಲಿ ಹದಿನಾರು ಗೋವುಗಳಿಂದ ಎಳೆಯಲ್ಪಟ್ಟ ರಥದಲ್ಲಿ ಆಸೀನನಾಗಿ, ಪುರ ಪ್ರದಕ್ಷಿಣೆಯನ್ನು ಮಾಡಿ, ನಂತರ ಸಿಂಹಾಸನವನ್ನು ಏರಬೇಕೆಂಬ ಪದ್ಧತಿಯು ಧರ್ಮರಾಜನಿಂದ ಅನುಷ್ಠಾಪಿಸಲ್ಪಟ್ಟಿರು ವುದೆಂಬುದನ್ನು ಮಹಾಭಾರತದಲ್ಲಿ ಕಾಣುತ್ತೇವೆ. ಬಾಯಾರಿಕೆಯಿಂದ ಸಂಕಟಪಡುತ್ತಿರುವ ಗೋವುಗಳಿಗೆ ನೀರನ್ನು ಒದಗಿಸುವಲ್ಲಿ ಯಾರು ವಿಘ್ನಗಳನ್ನು ಉಂಟುಮಾಡುತ್ತಾನೋ ಅಂತಹವನನ್ನು ಬ್ರಹ್ಮ ಹತ್ಯೆಗೆ ಸಮನಾದ ಪಾಪ ಮಾಡಿದವನೆಂದು ವೇದಗಳು ತಿಳಿಸುತ್ತವೆ. ಗೋವುಗಳಿಗೆ

ಮಾಡಿದ ಸೇವೆ ಎಂದಿಗೂ ವ್ಯರ್ಥವಾಗುವುದಿಲ್ಲ. ಎಲ್ಲ ಯಜ್ಞಗಳೂ ಗೋವನ್ನೇ ಆಶ್ರಯಿಸಿವೆ. ಯಜ್ಞ ನಡೆಸಲು ಗೋವಿನ ಹಾಲಿನಿಂದ ಮಾಡಿದ ತುಪ್ಪ ಅನಿವಾರ್ಯವಾಗಿತ್ತು. ಆ ಯಜ್ಞಗಳು ಪುಣ್ಯದ ಫಲವನ್ನು ಕೊಡುತ್ತವೆ. ಗೋವಿಗೆ ಗ್ರಾಸ (ಆಹಾರ) ಕೊಟ್ಟು ಅದನ್ನು ಕಾಪಾಡಿದಲ್ಲಿ ಸ್ವರ್ಗ ಪ್ರಾಪ್ತಿಯಾಗುತ್ತದೆ. ಯಾರ ಮನೆಯಲ್ಲಿ ಆಕಳು ದುಃಖಿಯಾಗಿರುತ್ತದೆಯೋ ಅಂಥಹ ಮನುಷ್ಯರಿಗೆ ನರಕ ಪ್ರಾಪ್ತಿಯಾಗುತ್ತದೆ ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಮೇಯುತ್ತಿದ್ದ ಆಕಳನ್ನು ತಡೆದು ನಿಲ್ಲಿಸಿದಲ್ಲಿ ನರಕ ದರ್ಶನ ಆಗುವುದು ಎಂಬುದನ್ನು ಜನಕ ಮಹಾರಾಜನ ಉದಾಹರಣೆಯಲ್ಲಿ ಗಮನಿಸಬಹುದು. ಭಾರತೀಯ ಸಂಸ್ಕೃತಿಯಲ್ಲಿ ಗೋವು, ಗೋವಿನ ರಕ್ಷಣೆ ವೀರರ ಕರ್ತವ್ಯವಾಗಿತ್ತು. ವಾಚಸ್ಪತ್ಯ ಕೋಶದಲ್ಲಿ ತಿಳಿಸಿರುವಂತೆ ಬೃಹತ್ ಪರಾಶರ ಸಂಹಿತೆಯಲ್ಲಿ

೧. ಗೋಸ್ಪರ್ಶದಲ್ಲಿ ಪಾಪ ವಿಮುಕ್ತಿಯಾಗುತ್ತದೆ.

೨. ಗೋ ಸ್ಪರ್ಶವನ್ನು ಮಾಡಿ, ಗೋವನ್ನು ಬಲಬದಿಗಿರಿಸಿಕೊಂಡು ಪ್ರದಕ್ಷಿಣೆ ಬರುವಾತನು ಸಪ್ತಖಂಡಗಳೊಡಗೂಡಿದ ಇಡೀ ಭೂ ಮಂಡಲವನ್ನೇ ಪ್ರದಕ್ಷಿಣೆ ಬರುವಂತ ಯಶಸ್ಸನ್ನು ಗಳಿಸುತ್ತಾನೆ.

೩. ದಿನ ದಿನವೂ ಗೋವಿಗೆ ಹುಲ್ಲು ನೀರುಗಳ ಮೇವಿತ್ತು ಪೋಷಿಸುವಾತನು ಅಶ್ವ ಮೇಧ ಯಾಗದಿಂದ ಪಡೆಯುವ ಫಲವನ್ನೇ ಗಳಿಸುತ್ತಾನೆ.

೪. ಗೋವುಗಳ ಕೊಂಬು ತೊಳೆದ ನೀರಿನಿಂದ ಸ್ನಾನ ಮಾಡುವುದು ಎಲ್ಲಾ ಪವಿತ್ರ ಕ್ಷೇತ್ರಗಳ ತೀರ್ಥದಲ್ಲಿ ಸ್ನಾನ ಮಾಡುವುದಕ್ಕೆ ಸಮವಾಗಿದೆ.

೫. ಒಂದು ಹೋರಿಯ ದಾನವು ೧೦ ಹಸುಗಳ ದಾನಕ್ಕೆ ಸಮ.

೬. ಮುಂತಾದ ನಂಬಿಕೆ,ಶಾಸ್ತ್ರ ಸಂಪ್ರದಾಯಗಳು ಗೋ ಸಂತತಿಯ ಬಗ್ಗೆ ರೂಪಿಸಲ್ಪಟ್ಟಿವೆ.[೨೪]

ಭಾರತದ ಸಂಸ್ಕೃತಿಯ ಪ್ರತೀಕವಾದ ಹಾಗೂ ಪೂಜನೀಯವಾದ ಮೂರು ತಾಯಂದಿರಾದ ೧. ಭೂಮಾತೆ, ೨. ಗೋಮಾತೆ, ೩. ಮಾತೆ ಇವರ ರಕ್ಷಣೆಗೆ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡುವ ಸಂಸ್ಕೃತಿಯೇ ಧರ್ಮದ ಮೇಲೆ ನಿಂತಿದೆ. ಆ ಧರ್ಮವೇ ಮಾತೃಧರ್ಮ, ವೀರಧರ್ಮ, ಕ್ಷತ್ರಿಯಧರ್ಮ, ಪುರುಷಧರ್ಮ, ಆಪತ್ಕಾಲದಲ್ಲಿ ಸಿಕ್ಕವರನ್ನು ಬದುಕಿಸುವ ಧರ್ಮ, ಆಶ್ರಯ ನೀಡಿದ ರಾಜ ಹಾಗೂ ಗ್ರಾಮದ ಮಾನ ಕಾಪಾಡುವ ಸಂಕಲ್ಪದ ಧರ್ಮವನ್ನು ನಿಭಾಯಿಸುವುದು ಪ್ರತಿಯೊಬ್ಬ ವೀರನ ಧರ್ಮವಾಗಿತ್ತು. ಸಂಸ್ಕೃತಿ ಪದವನ್ನು ಇಂದಿನ ಆಧುನಿಕ ವಿದ್ವಾಂಸರ ದೃಷ್ಟಿಯಲ್ಲಿ ಹಲವು ದೃಷ್ಟಿಕೋನಗಳ ಪರಿಭಾಷೆಯಲ್ಲಿ ನೋಡುತ್ತಿರುವಂತೆ ಆಂದಿನ ಕಾಲದಲ್ಲೂ ಹಲವು ರೀತಿಯಲ್ಲಿ ಧರ್ಮವನ್ನು ವಿಶ್ಲೇಷಿಸಿಸಬಹುದು. ವೀರಧರ್ಮ, ರಾಜಧರ್ಮ, ಮಾತೃಧರ್ಮ,

ನೆಲಧರ್ಮ, ಗೆಳೆತನದ ಧರ್ಮ, ಕಲಿತನದ ಧರ್ಮ, ತ್ಯಾಗ ಧರ್ಮ, ರಕ್ಷಣಾಧರ್ಮ, ಅಂದರೆ ಧರ್ಮವನ್ನು ಜಾತಿ ಅಥವಾ ಪಂಥವಾಗಿ ನೋಡದೆ ಅಂದಿನ ಜನರು ಬದುಕಲು ಹಾಕಿಕೊಂಡ ನಿಯಮಗಳೇ ಈ ಧರ್ಮ.

ಕನ್ನಡ ನಾಡಿನ ಜನರು ಎಂದೂ ಹೇಡಿಗಳಾಗಿ ಬಾಳಿದವರಲ್ಲ. ಕ್ಷಣಮಾತ್ರದಲ್ಲಿ ಬಿದ್ದು ಹೋಗುವ ದೇಹವನ್ನು ಪೋಷಿಸುವುದಕ್ಕಾಗಿ ಧರ್ಮ ಮಾರ್ಗದಿಂದ ಹಿಂದೆ ಸರಿದವರಲ್ಲ. ಬದುಕಿದ್ದಾಗ ನೇರ ಮಾರ್ಗದಲ್ಲಿ ನಡೆದು ಸಿರಿ ಸಂಪತ್ತನ್ನು ಪಡೆದರು. ಸತ್ತರೆ ವೀರ ಮರಣದ ಸೌಭಾಗ್ಯದಿಂದ ಸ್ವರ್ಗವನ್ನು ಸೇರಿದರು. ಈ ಲೌಕಿಕ ದೇಹವನ್ನು ತೃಣವೆಂದೂ, ಭಾವಿಸಿ ಇದನ್ನು ಬಿಟ್ಟು ಶಾಶ್ವತವಾದ ಪದವಿಯನ್ನು ಪಡೆದ ಧಾರ್ಮಿಕರು, ಮರಣದಲ್ಲೂ ಪತಿಯನ್ನು ಹಿಂಬಾಲಿಸಿ ನಡೆದ ಸತಿಯರು, ಧರ್ಮಕ್ಕಾಗಿ ಹೋರಾಡಿ ದೇಹವನ್ನಿತ್ತ ಕಡುಗಲಿಗಳು, ಶಾಸನಗಳಾಗಿ ಇಂದಿನ ಜನತೆಗೂ ಜೀವನ ಮೌಲ್ಯಗಳನ್ನು ಸಾರುವ ನಿಧಿಗಳಾಗಿ ನಿಂತಿವೆ. 'ಕಲಿತನ' ವನ್ನು ಮೆರೆಯದೆ ಇದ್ದರೆ ಅವನ ವೀರತ್ವವೇ ಸಂಶಯದ ಭಾಗವಾಗುತ್ತಿತ್ತು. ತಾಯಿ ಆ ವೀರನ ಪ್ರಸವವೇದನೆ ಅನುಭವಿಸಿ ಜನ್ಮನೀಡಿದ್ದು ಹೇಡಿಗೋ, ಅಥವಾ ವೀರನಿಗೋ ಎಂಬ ಟೀಕೆಗೆ ಗುರಿಯಾಗಬೇಕಿತ್ತು. ಅಲ್ಲದೆ ಊರಿನ, ಗೋವುಗಳ, ಸ್ತ್ರೀಯರ ರಕ್ಷಣೆ ಮಾಡುವ ಹೋರಾಟದಲ್ಲಿ ಮಡಿದ ವೀರನನ್ನು ಅಪ್ಸರೆಯರು, ದೇವತೆಗಳು ಕೈಹಿಡಿದು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಾರೆ. ಅಲ್ಲದೆ ಮಡಿದ ವೀರನು ಆ ಊರಿನ ಜನರಿಂದಲೂ ಪೂಜಿತನಾಗುತ್ತಿದ್ದ. ಇಂದಿಗೂ ಗ್ರಾಮಗಳಲ್ಲಿರುವ ವೀರಗಲ್ಲುಗಳ ಬಗ್ಗೆ ಜನರಲ್ಲಿ ಕೇಳಿದರೆ, **"ಅವು ನಮ್ಮ ಗ್ರಾಮವನ್ನು ಕಾಯುವ ದೇವರ ಕಲ್ಲುಗಳು"** ಎಂಬ ಮಾತುಗಳು ಅಂದಿನ ವೀರರಿಗೆ ಗ್ರಾಮೀಣ ಜನರು ನೀಡುತ್ತಿದ್ದ ಗೌರವದ ಸಾಕ್ಷಿಯಾಗಿದೆ.

೩೩ ಕೋಟಿ ದೇವತೆಗಳ ವಾಸಸ್ಥಾನವಾಗಿರುವ ಗೋವುಗಳನ್ನು ಕಳ್ಳರು ಅಪಹರಿಸಿದರೆ ಅದು ನಮ್ಮ ರಾಜ್ಯದ, ಗ್ರಾಮದ, ಮನೆಗೆ ಒದಗಬಹುದಾದ ಕೆಡುಕಿನ ಸೂಚನೆ ಎಂದು ಜನರು ಭಾವಿಸಿದ್ದರು. ಏಕೆಂದರೆ ಜೀವಧನವೆಂದು ಹೆಸರು ಪಡೆದ ಹಸುಗಳನ್ನು ಅಪಹರಿಸುವುದರಿಂದ ಆ ಗ್ರಾಮದ, ರಾಜ್ಯದ ಜನರ ಲಕ್ಷ್ಮಿ(ಧನ) ಕ್ಷಯವಾಗುತ್ತಿತ್ತು. ಅವುಗಳನ್ನು ಕಳೆದುಕೊಳ್ಳುವುದರೊಂದಿಗೆ ಕೀರ್ತಿಲಕ್ಷ್ಮಿ(ಗೌರವ) ಅವರಿಂದ ದೂರವಾಗುತ್ತಿದ್ದಳು. ಹೋರಾಡಲು ಸಾಧ್ಯವಾಗದ್ದರಿಂದ ಧೈರ್ಯ ಲಕ್ಷ್ಮಿ (ಶೌರ್ಯ)ವೂ ಆ ಗ್ರಾಮ, ರಾಜ್ಯ, ವ್ಯಕ್ತಿಯ ಮನೆಯನ್ನು ಬಿಟ್ಟು ತೊಲಗುತ್ತಿದ್ದಳು. ಯುದ್ಧದಲ್ಲಿ ಗಂಡಸರು ಮಡಿಯುತ್ತಿದ್ದರಿಂದ ಸಂತಾನಲಕ್ಷ್ಮಿ (ಮಕ್ಕಳ ಫಲ ಸಾಧ್ಯವಾಗುತ್ತಿರಲಿಲ್ಲ) ಯೂ ಅಲ್ಲಿಂದ ತೊಲಗುವ ಮೂಲಕ ಅ ಗ್ರಾಮ, ನಾಡು, ರಾಜ್ಯ, ಮನೆ ಅಷ್ಟಲಕ್ಷ್ಮೀಯರಿಂದ ದೂರವಾಗಿ, ಎಲ್ಲವನ್ನೂ ಕಳೆದುಕೊಂಡು (ಕೀರ್ತಿ, ಗೌರವ, ಆದರ) ಜನರ ನಿಂದನೆಗೆ

ಗುರಿಯಾಗಿ ಬಡವಾಗುತ್ತಿತ್ತು. ಅಂಥಹ ಎಲ್ಲ ಸಂಸ್ಕೃತಿಯ ಮೌಲ್ಯಗಳ ನೆಲೆಯಾದ ಗೋವು, ಸ್ತ್ರಿ, ನಾಡಿನ ರಕ್ಷಣೆ ಅಂದಿನ ಪ್ರತಿಯೊಬ್ಬ ವೀರನ ಕರ್ತವ್ಯವಾಗಿತ್ತು. ಈ ಧಾರ್ಮಿಕ ಭಾವನೆಯೂ ವೀರವತ್ತಾದ ಬದುಕಿಗೆ ಬುನಾದಿ ಈ ಕನ್ನಡನಾಡು, ನಮ್ಮ ಭಾರತ ದೇಶ. ಅಂದಿನಿಂದಲೂ ನಡೆದ ಪರಕೀಯರ ದಾಳಿಗಳನ್ನು ಸಹಿಸಿಕೊಂಡು ಧರ್ಮ, ಸಂಸ್ಕೃತಿಯ ನೆಲೆಯಾಗಿ ನಿಂತಿದೆ.

**ಅಡಿಟಿಪ್ಪಣಿಗಳು**

೧. ಋಷಿ ಮುನಿಗಳ ಕೃಷಿ, ಪು.೨

೨. ಶಬ್ದಮಣಿ ದರ್ಪಣ, ಪು.೧೦೫

೩. ಪ್ರಾಚೀನ ಅರ್ವಾಚೀನ ದನಗಳ ಇತಿಹಾಸ, ಪು.೨೬

೪. ದಶಮಾಶ್ವಾಸ ಪದ್ಯ ೪೩

೫. ಎನ್.ಸುಬ್ರಮಣಿ. ಸಂಗಂ ಪೋಯಟ್ರಿ, ಪು.೧೩೬

೬. ಎಫಿಗ್ರಫಿಯಾ ಕರ್ನಾಟಕ ಸಂ.೮, ೨೨೦.

೭. ಸಾಹಸ ಭೀಮ ವಿಜಯ, ಪು.೫೬

೮. ಎಹಿಸ್ಟರಿ ಆಫ್ ತಮಿಳ್ ಲಿಟ್ರೇಚರ್, ಪು.೧೯೦

೯. ಸಾಹಸ ಭೀಮ ವಿಜಯಂ, ಪು.೧೦

೧೦. ವಚನಭಾರತ, ಪು.೩೦

೧೧. ಕರ್ನಾಟಕದ ವೀರಗಲ್ಲುಗಳು, ಪು.೪೨

೧೨. ಎಫಿಗ್ರಫಿಯಾ ಕರ್ನಾಟಕ ಸಂ.೫, ಚನ್ನಗಿರಿ ೨೦೫

೧೩. ಎಫಿಗ್ರಫಿಯಾ ಕರ್ನಾಟಕ ಸಂ.೮ ೫೨೫.

೧೪. ಕುಮಾರವ್ಯಾಸ ಭಾರತ, ಪದ್ಯ ಸಂಖ್ಯೆ ೨೪

೧೫. ಅದೇ, ೪೪

೧೬. ಎಫಿಗ್ರಫಿಯಾ ಕರ್ನಾಟಕ ಸಂ.೮, ಸೊರಬ ೧೨

೧೭. ವಚನ ಭಾರತ, ಪು.೨೩೦

೧೮. ಗೋವು ಗೋಮಾತೆ, ಗೋಹತ್ಯಾ ನಿಷೇಧ ಕಾನೂನು, ಪು.೧

೧೯. ಚಿತ್ರಗಳಲ್ಲಿ ಚರಿತ್ರೆ, ಪು.೧೧೮

೨೦. ಕಾವ್ಯಾವಲೋಕನ, ೪೯ನೇ ಪದ್ಯ, ಪು.೨೮೫

೨೧. ಪ್ರಾಚೀನ ಭಾರತದಲ್ಲಿ ಬೇಸಾಯ, ಪು.೨೧೧

೨೨. ಕನ್ನಡ ವಿಷಯ ವಿಶ್ವ ಕೋಶ ಮೈಸೂರು ವಿ.ವಿ., ಪು.೪೯೭

೨೩. ವೇದ ಸಂಸ್ಕೃತಿ ಪರಿಚಯ, ಪು.೩೨೭

೨೪. ಪ್ರಾಚೀನ ಭಾರತದಲ್ಲಿ ಬೇಸಾಯ, ಪು.೨೦೪

## ಅಧ್ಯಾಯ: ಏಳು

# ಗೋವು ಮತ್ತು ಮಾನವ ಸಂಬಂಧಗಳು

ಮಾನವನಿಗೆ ವಿಕಾಸದ ಹಾದಿಯಲ್ಲಿ ಜೊತೆಯಾಗಿ ಸಾಗಿರುವ ಅನೇಕ ಪ್ರಾಣಿಗಳಲ್ಲಿ ದನಗಳಿಗೆ ಮಹತ್ವದ ಸ್ಥಾನವಿದೆ ಹಾಗೂ ಅವು ಮಾನವನಿಗೆ ಹೆಚ್ಚು ಆಪ್ತವಾಗಿವೆ. ಅವನ ಪ್ರತೀ ವಿಕಾಸದ ಹೆಜ್ಜೆಗೂ ತನ್ನ ಹೆಗಲ ಬಲವನ್ನು ನೀಡಿ ಮಾನವನ ಜೀವನದ ಉಸಿರಾಗಿವೆ. ಆರಂಭದಲ್ಲಿ ಆಹಾರದ ಅಗತ್ಯತೆಯನ್ನು ಪೂರ್ಣಗೊಳಿಸಲು ಬಳಕೆಯಾದರೆ ಆನಂತರ ಮಾನವ ನೆಲೆ ನಿಂತು ಕೃಷಿ ಆರಂಭಿಸಿದಾಗ ಆ ಕೃಷಿಯ ಕಾರ್ಯದ ನೊಗಕ್ಕೆ ಹೆಗಲು ನೀಡಿ ದುಡಿದ ದನಗಳು **"ಜೀವಧನ"**ದ ಸ್ಥಾನ ಪಡೆದಿವೆ. ಆಹಾರದ ಅಗತ್ಯತೆಯನ್ನು ಪೂರೈಸುತ್ತಾ, ಕೃಷಿಯ ಚಟುವಟಿಕೆಯಲ್ಲಿ ಸಕ್ರೀಯವಾಗಿ ಭಾಗವಹಿಸಿ, ತನ್ನ ಉತ್ಪನ್ನಗಳು ವಿನಿಮಯದ ವಸ್ತುಗಳಾದಾಗ ಆರ್ಥಿಕ ಚಟುವಟಿಕೆಯ ಆಧಾರ ಸ್ಥಂಭವೂ ದನಗಳಾಗಿವೆ. **ಎ.ಎಲ್.ಯ್ಯಾಂಡರ್‌ಸನ್** ತನ್ನ ಕೃತಿ **"ಇಂಟ್ರೋಡೊಕ್ಟರಿ ಅನಿಮಲ್ ಹಸ್ಬೆಂಡರಿ"**ಯಲ್ಲಿ ಪ್ರಾಣಿ ಸಾಕಣೆ ನಾಗರೀಕತೆಯಷ್ಟೇ ಹಳೆಯದು ಎಂದಿದ್ದಾರೆ. ಏಕೆಂದರೆ ನಾವು ಇಂದು ನೋಡುವ ಅತೀ ಸಾಮಾನ್ಯ ಸಾಕು ಪ್ರಾಣಿಗಳನ್ನು ಲಿಖಿತ ಚರಿತ್ರೆ ಪ್ರಾರಂಭಕ್ಕೆ ಮುನ್ನವೇ ಪಳಗಿಸಲಾಗಿತ್ತು. ಪುರಾತನ ಶಿಲಾಯುಗದ ಮಾನವ ತನ್ನ ಆಹಾರ ಮತ್ತು ಉಡಿಗೆ ತೊಡಿಗೆಗಳಿಗಾಗಿ ಪ್ರಾಣಿಗಳ ಬೇಟೆಯಾಡುತ್ತಿದ್ದ. ನೂತನ ಶಿಲಾಯುಗದ ಮಾನವನು ಅವುಗಳನ್ನು ಪಳಗಿಸಿ ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡ. ಈ ಕಾಲದಲ್ಲೇ ಕೃಷಿ ಚಟುವಟಿಕೆಗಳೂ ಆರಂಭ ಪಡೆದವು. ಅವುಗಳಲ್ಲಿ ಸಾಕು ಪ್ರಾಣಿಗಳ ಉತ್ಪಾದನೆಯೂ ಒಂದಾಗಿತ್ತು.[೧] ಅಂದಿನ ಸಮಾಜದಲ್ಲಿ ಕೃಷಿ(ಬೇಸಾಯ), ಪಶುಪಾಲನೆ, ವ್ಯಾಪಾರ, ವಾಣಿಜ್ಯ, ಇವು ಐಶ್ವರ್ಯಗಳಿಕೆಯ ನಾಲ್ಕು ಮಾರ್ಗಗಳಾಗಿದ್ದವು. ಪಶುಪಾಲನೆಯನ್ನು ಒಂದು ಕಸುಬೆಂದೇ ಸಮಾಜವು ಪರಿಗಣಿಸಿತ್ತು. ಉತ್ಪಾದನೆಯ ಒಂದು ಮಾರ್ಗವಾಗಿ ಪರಿಗಣಿತವಾಗಿದ್ದ ಪಶುಪಾಲನೆಯ ಉಪಯೋಗದ ಆಯಾಮಗಳು ಅನೇಕ. ಆಹಾರ, ವ್ಯವಸಾಯ, ವಾಣಿಜ್ಯ, ಸಂಬಂಧಗಳಲ್ಲಿ ಗೋವುಗಳು ಪ್ರದಾನ ಸ್ಥಾನ ಪಡೆಯುವಲ್ಲಿ ಗೋವುಗಳ ಹಾಗೂ

ಮಾನವನ ಅವಿನಾಭಾವ ಸಂಬಂಧ ಕಾರಣವಾಗಿವೆ. ಗೋವುಗಳು ಮತ್ತು ಮಾನವನ ಸಂಬಂಧಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು. ಅವುಗಳೆಂದರೆ

೧. ವ್ಯವಸಾಯ ಸಂಬಂಧ

೨. ಆಹಾರ ಸಂಬಂಧ

೩. ವಾಣಿಜ್ಯ ಸಂಬಂಧ

ಅವುಗಳಲ್ಲಿ ಮೊದಲು ವ್ಯವಸಾಯ ಸಂಬಂಧವನ್ನು ಗಮನಿಸುವುದಾದರೆ

**೧. ವ್ಯವಸಾಯ ಸಂಬಂಧ**

ಭಾರತೀಯ ಸನಾತನ ಪರಂಪರೆಯಲ್ಲಿ ಕೃಷಿಗೆ ತನ್ನದೇ ಆದ ಸ್ಥಾನವಿದೆ. ದೇಶದ ಸಂಪತ್ತು ಹಾಗೂ ದೇಶದ ಬೆಳವಣಿಗೆ ನಿರ್ಧಾರವಾಗುತ್ತಿದ್ದುದು ಕೃಷಿಯಿಂದಲೆ. ಅಂದು ಗೋವುಗಳ ಸಂಖ್ಯೆಯನ್ನಾಧರಿಸಿಯೇ ಯಾವುದೇ ವ್ಯಕ್ತಿಯ ಶ್ರೀಮಂತಿಕೆಯನ್ನು ಅಳೆಯಲಾಗುತ್ತಿತ್ತು. ಹಾಗಾಗಿಯೇ ಋಗ್ವೇದದಲ್ಲಿ ಗೋವನ್ನು 'ಅಘನ್ಯಾ" (ಪಾಪ ರಹಿತಳು) ಎಂದು ವರ್ಣಿಸಲಾಗಿದೆ. ವೇದಗಳ ಕಾಲ ಕಳೆದು ಅನೇಕ ಶತಮಾನಗಳಾಗಿದ್ದರೂ ಇಂದಿಗೂ ಭಾರತದ ಆರ್ಥಿಕತೆಯ ಬೆನ್ನೆಲುಬು, ಗೋವು ಮತ್ತು ಕೃಷಿಯೇ ಆಗಿದೆ. ಈಗಲೂ ರೈತರ ಮನೆಯಲ್ಲಿ ಸಗಣಿಯ ಬೆನಕನನ್ನು ಪೂಜಿಸುತ್ತಾರೆ. ಅಂಗಳವನ್ನು ಸಾರಿಸಿ ಅಲ್ಲಿ ರಂಗೋಲಿಯನಿಟ್ಟು ಅದರಲ್ಲಿ ಒಂದು ಸಣ್ಣ ಸಗಣಿಯಿಂದ ಮಾಡಿದ ಬೆನಕನನ್ನು ಇಟ್ಟು ಪೂಜಿಸಿಯೇ ತಮ್ಮ ದೈನಂದಿನ ಚಟುವಟಿಕೆಗಳನ್ನು ಆರಂಭಿಸುತ್ತಾರೆ. ಮನೆಗೆ ಹಾಗೂ ಆ ದಿನದ ಎಲ್ಲಾ ಕೃಷಿ ಚಟುವಟಿಕೆಗಳಿಗೆ ಯಾವುದೇ ವಿಘ್ನಗಳು ಬಾರದಿರಲಿ ಎಂದು ಗೋಮಯದ ಬೆನಕನನ್ನು ಪೂಜಿಸುವ ಸಂಪ್ರದಾಯವಿದೆ. ಇಲ್ಲಿ ರೈತನ ಬದುಕಿಗೆ ಆಧಾರವಾದದ್ದೇ ಗೊಬ್ಬರ ಅಥವಾ ಗೋಮಯ. ಇದರ ನಿಜವಾದ ಅರ್ಥ **'ಗೋ'** ಎಂದರೆ ಪುಣ್ಯ ಎಂದೂ, **'ಮಯ'** ಎಂದರೆ ಆವೃತ್ತವಾದದ್ದು, ಎಂಬ ಅರ್ಥವಿದ್ದು ಜಗತ್ತನ್ನು ಪುಣ್ಯಮಯವಾಗಿಸುವ ಶಕ್ತಿ ಇದಕ್ಕಿದ್ದ ಕಾರಣ, ಇದನ್ನು ಗೋಮಯ ಎಂದೇ ಕರೆದಿದ್ದಾರೆ. ವೇದಗಳ ಕಾಲದಲ್ಲಿ ಭಾರತೀಯ ಋಷಿ ಮುನಿಗಳು ಕೂಡಾ ಕೃಷಿಯ ಬಗ್ಗೆ ಹೆಚ್ಚಿನ ಆಸ್ಥೆ ವಹಿಸುತ್ತಿದ್ದರು. ವೇದವ್ಯಾಸರ ತಂದೆ **'ಪರಾಶರ'** ಮುನಿಗಳು ಕೃಷಿಯಲ್ಲಿ ಬೆಳೆಗಳಿಗೆ ತಗುಲಿದ ರೋಗ ನಿವಾರಣೆಗೆ ಮತ್ತು ಬರಬಹುದಾದ ರೋಗಗಳನ್ನು ತಡೆಗಟ್ಟಲು **'ಪಂಚಗವ್ಯ'** ಎಂಬ ವ್ಯಂಜಕವನ್ನು ಬಳಕೆ ಮಾಡಲು ಸೂಚಿಸಿರುತ್ತಾರೆ. **ಪಂಚಗವ್ಯ** ಎಂದರೆ **ಹಾಲು, ಮೊಸರು, ತುಪ್ಪ, ಸಗಣಿ ಮತ್ತು ಗಂಜಲದ** ಮಿಶ್ರಣವೇ ಆಗಿದೆ. ಇದರಿಂದಾಗಿ

ಗೋವುಗಳಿಗೂ, ಕೃಷಿಗೂ ಯುಗ-ಯುಗಾಂತರಗಳಿಂದಲೂ ಇರುವ ಸಂಬಂಧ ಎಂಥಹದ್ದೆಂದು ಅರ್ಥವಾಗುತ್ತದೆ.

ಗೋಸಂಪತ್ತು, ವ್ಯವಸಾಯ ನಂಬಿ ಬದುಕುವವರ ಜೀವನದ ಜೀವನಾಡಿ, ಎನ್ನುವ ಬಗ್ಗೆ ಎರಡು ಮಾತಿಲ್ಲ. ನಮ್ಮನ್ನು ನವಮಾಸ ಹೊತ್ತು ಹೆತ್ತು ತನ್ನ ಎದೆಯುಣಿಸಿ ಸಾಕಿ ಸಲಹಿದ ಮಾತೆಯೊಬ್ಬಳಾದರೆ, ನಂತರದಲ್ಲಿ ನಮ್ಮ ಜೀವನದ ಉದ್ದಕ್ಕೂ ತನ್ನ ನೊರೆ ಹಾಲನ್ನಿತ್ತು ಸಲಹುವ ಮತ್ತೊಬ್ಬ ಮಾತೆಯೆಂದರೆ ಅವಳೇ ಗೋಮಾತೆ. ಇವಳೇ ನಮ್ಮ ಸುಖ ಸಾಧನೆಯ ಸಂಪತ್ತು. ಹಿಂದೂ ಧರ್ಮದ ನಂಬಿಕೆಯಂತೆ ಕೋಟ್ಯಾನು ಕೋಟಿ ದೇವತೆಗಳ ಆವಾಸ ಸ್ಥಾನವೇ ಈ 'ಕಪಿಲೆ'. ಇವಳ ಗಂಡು ಮಕ್ಕಳಾದ ಎತ್ತುಗಳೇ ರೈತನ ಬಾಳಿನ ಮುತ್ತುಗಳು. ರೈತ ಇವುಗಳನ್ನು ತನ್ನ ಹೊಟ್ಟೆಯ ಮಕ್ಕಳಿಗಿಂತ ಹೆಚ್ಚಾಗಿ ಪ್ರೀತಿ ತೋರಿಸಿ ವಾತ್ಸಲ್ಯದಿಂದ ಅವುಗಳಿಗೆ ವ್ಯವಸಾಯದ ತರಬೇತಿ ನೀಡಿ ತನ್ನ ದುಡಿಮೆಗೆ ಬಳಸಿಕೊಳ್ಳುತ್ತಿರುವುದು ಅನಾದಿ ಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿದೆ.

ಭಾರತದ ಇತಿಹಾಸದಲ್ಲಿ ಮಧ್ಯ-ಶಿಲಾಯುಗ(Mesolithic age) ಸುಮಾರು ಕ್ರಿ.ಪೂ. ೯೦೦೦-ಕ್ರಿ.ಪೂ. ೭೦೦೦ರಲ್ಲಿ ಮಾನವನ ಜೀವನದಲ್ಲಿ ಅನೇಕ ಬದಲಾವಣೆಗಳು ಜರುಗಿದವು. ಈ ಯುಗದ ಕೊನೆಯ ವೇಳೆಗೆ ಪ್ರಾಣಿಗಳನ್ನು ಪಳಗಿಸಿ ಪಶುಸಂಗೋಪನೆಯ ಕಲೆಯನ್ನು ರೂಡಿಸಿಕೊಂಡನು. ಅಲ್ಲಿಂದಲೇ ಪ್ರಾಣಿಗಳು, ಹಸುಗಳು ಮನುಷ್ಯನ ಸಂಗಾತಿಯಾಗಿ ಅಲೆಮಾರಿಯಾದ ಮಾನವನ ಜೊತೆಗೆ ಗುಂಪುಗೂಡಿ ಬದುಕುತ್ತಾ, ಋತುಮಾನಕ್ಕೆ ತಕ್ಕಂತೆ ಚಲಿಸುವ ಮಾನವನ ಜೊತೆಗಾರರಾದವು. ನೂತನ ಶಿಲಾಯುಗ(Neolithic age) ಕ್ರಿ.ಪೂ.೭೦೦೦ ರಿಂದ ಕ್ರಿ.ಪೂ.೨೧೦೦ ರ ಕಾಲವು ಮಾನವನ ಸ್ಥಿರ ಜೀವನದ ಸಂಕೇತವಾಗಿದೆ. ಆಹಾರಕ್ಕಾಗಿ ಅಲೆಯುವುದರ ಬದಲಾಗಿ ಮಾನವನು ಆಹಾರ ಉತ್ಪಾದಿಸಲು ಭೂಮಿಯನ್ನು ಉಳುವುದನ್ನು ಕಲಿತ. ಆಕಳು, ಹೋರಿ, ಮೇಕೆ, ನಾಯಿ, ಕುರಿ ಮುಂತಾದ ಪ್ರಾಣಿಗಳನ್ನು ಸಾಕಲಾರಂಭಿಸಿದ. ಈ ಹಂತದಲ್ಲಿ ಪಶುಸಂಗೋಪನೆಯ ಮೂಲಕವೂ ಮಾನವನ ಆಹಾರದ ಕೊರತೆಯನ್ನು ನೀಗಿಸಿಕೊಂಡನು. ಲೋಹಯುಗ ಮಾನವನ ಬದುಕಿನಲ್ಲಿ ಶೀಘ್ರವಾದ ಬದಲಾವಣೆ ಉಂಟು ಮಾಡಿದ ಕಾಲವಾಗಿದೆ. ಕಬ್ಬಿಣ ಯುಗ(ಸುಮಾರು ಕ್ರಿ.ಪೂ.೧೦೦೦ದಿಂದ)ದಲ್ಲಿ ಲೋಹ ಸಂಸ್ಕಾರದಿಂದ ಗಟ್ಟಿ ಮುಟ್ಟಾದ ಕಬ್ಬಿಣ ದೊರೆತದ್ದು ಉತ್ತಮ ಮತ್ತು ಹರಿತವಾದ ಆಯುಧಗಳನ್ನು ನಿರ್ಮಿಸಿದರು. ಆ ಮೂಲಕ ಕಾಡು ಕಡಿದು ಕೃಷಿ ಸಾಗುವಳಿ ಭೂಮಿ ಮಾಡಲು ಸಾಧ್ಯವಾಯಿತು. ಕಬ್ಬಿಣದ ಮೊನೆಯುಳ್ಳ ನೇಗಿಲಿನಿಂದ ಬೃಹತ್ ಪ್ರಮಾಣದ ಕೃಷಿ ಯೋಗ್ಯ ಭೂಮಿಯನ್ನಾಗಿಸಲು ಸಾಧ್ಯವಾಯಿತು. ಈ ಹಂತದಲ್ಲಿಯಂತೂ ಕೃಷಿಕನ ಜೊತೆಯಾಗಿ ಕೃಷಿ ಉತ್ಪಾದನೆಯಲ್ಲಿ

ಜೊತೆಗಾರರಾದ ಪ್ರಾಣಿಗಳಲ್ಲಿ ದನಗಳು ಪ್ರಧಾನ ಪಾತ್ರವಹಿಸಿವೆ. ಇದಕ್ಕೆ ಸಾಕ್ಷಿಯಾಗಿ ಸಿಂಧೂ ಬಯಲಿನ ಜನರು ಪವಿತ್ರವೆಂದು ಭಾವಿಸಿದ ಪ್ರಾಣಿಗಳಲ್ಲಿ **"ಗೂಳಿಗೆ"** ವಿಶೇಷ ಸ್ಥಾನವನ್ನು ನೀಡಿದ್ದರು. ಗೂಳಿಯ ಚಿತ್ರದ ಆಟಿಕೆಗಳು, ಮುದ್ರಿಕೆಗಳು ದೊರೆತಿರುವುದು ಇದಕ್ಕೆ ಸಾಕ್ಷಿಯಾಗಿದೆ.[೨] ಅಂದಿನ ಕಾಲದ ಜನರು ಪಶುಪಾಲನೆಯಲ್ಲೂ ಹೆಚ್ಚಿನ ಪರಿಣಿತಿ ಪಡೆದವರಾಗಿದ್ದರು. ಇದು ಇತಿಹಾಸ ಪುಟದಲ್ಲಿ ಆರ್ಯರಿಗಿಂತ ಮೊದಲೇ ಮಾನವನ ಜೊತೆಯಾದ ಗೋವುಗಳ ಸಂಬಂಧವನ್ನು ತಿಳಿಸುತ್ತದೆ. ಆರ್ಯರ ಆಗಮನ(ಅವರು ಎಲ್ಲಿಂದ ಬಂದರು, ಅಥವಾ ಈ ದೇಶದವರೇ ಎಂಬ ಬಗ್ಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಗಳಿವೆ.(ಹೆಚ್ಚಿನ ಮಾಹಿತಿಗಾಗಿ ಪ್ರಾಚೀನ ಭಾರತದ ಇತಿಹಾಸವನ್ನು ಗಮನಿಸುವುದು.).ಅವರು ಭಾರತದ ಮೂಲನಿವಾಸಿಗಳಲ್ಲ. ಅವರು ಭಾರತಕ್ಕೆ ವಲಸೆ ಬಂದವರು ಎಂಬುದಕ್ಕೆ ಸಾಕಷ್ಟು ಪುರಾವೆಗಳಿರುವುದರಿಂದ ಕ್ರಿ.ಪೂ. ೨೦೦೦ ವರ್ಷಗಳಿಂದ ಆರ್ಯ–ದ್ರಾವಿಡರ (ಭಾರತದ ಮೂಲನಿವಾಸಿಗಳು) ಜನಜೀವನ, ಯುದ್ಧತಂತ್ರ, ಪಶುಪಾಲನೆ, ಸಾಂಸ್ಕೃತಿಕ ಸಂಘರ್ಷಗಳು ನಡೆದು, ಕೊಡು ಕೊಳ್ಳುವಿಕೆ ನಡೆದು ಅನೇಕ ಬದಲಾವಣೆಗಳಾದವು. ಶಾಸ್ತ್ರ ಬದ್ಧವಾದ ಪಶುಪಾಲನೆ ಭಾರತದಲ್ಲಿ ಆರಂಭವಾಯಿತು. ವ್ಯವಸಾಯದಂತೆಯೇ ಪಶುಸಂಗೋಪನೆಗೂ ವಿಶೇಷ ಸ್ಥಾನವನ್ನು ಆರ್ಯರು ನೀಡಿದ್ದರು. ಗೋವಿನಿಂದ ಉತ್ಪನ್ನಗೊಳ್ಳುವ ಹಾಲು ಮತ್ತಿತರ ಉಪ ಉತ್ಪನ್ನಗಳು ಆರ್ಯರ ದಿನ ನಿತ್ಯದ ಮುಖ್ಯ ಆಹಾರವಾಗಿದ್ದವು. ಈ ಆರ್ಯರಿಂದ ಸೃಷ್ಟಿಯಾದ ವೇದಗಳಲ್ಲೂ ಗೋವುಗಳ ಮೇಲೆ ವಿಶೇಷ ಕಾಳಜಿಯನ್ನು ಕಾಣಬಹುದು.

> **"ಗೋಃ ಮತ್ತಾ ನ ವಿದ್ಯತೇ ಧೇನುಃ ಸದನಂ ರಮಣೀಯಂ ಅಷ್ಟೈಶ್ವರ್ಯ**
> **ಮಹೀ ಲಕ್ಷ್ಮೀ ವಸತೇ ಗೋಮಯೇ ಸದಾ॥**

ಅರ್ಥಾತ್ ಯಾರ ಮನೆಯಲ್ಲಿ ಗೋವುಗಳು ನಿರಂತರವಾಗಿ ಇರುತ್ತವೆಯೋ ಆ ಮನೆಯು ರಮಣೀಯ. ಅಷ್ಟೈಶ್ವರ್ಯದಿಂದ ಲಕ್ಷ್ಮಿಯು ಅಲ್ಲಿನ ಸಗಣಿಯಲ್ಲಿ ಸದಾ ನೆಲೆಸಿರುತ್ತಾಳೆ.[೩] ಒಂದು ಅಲೆಮಾರಿ ಗುಂಪಿನ ಜೀವನೋಪಾಯ, ಅಸ್ತಿತ್ವದ ಸಾಕ್ಷಿಯಾಗಿ ಈ ಗೋವುಗಳು ಸ್ಥಾನ ಪಡೆದಿರುವುದು ಸತ್ಯವಾಗಿದೆ. ಭಾರ ಎಳೆಯುವ ಎತ್ತುಗಳ ಸ್ಥಾನವನ್ನು ಯಂತ್ರಗಳು ತುಂಬುವವರೆಗೂ ದನಗಳು ಜೀವಧನದ ಸ್ಥಾನವನ್ನು ಉಳಿಸಿಕೊಂಡೇ ಬಂದಿವೆ. ಪ್ರಾಚೀನ ಭಾರತಕ್ಕೆ ಗೊಬ್ಬರದ ಉಪಯೋಗ ತಿಳಿದಿತ್ತು. ರೈತರಿಗೆ ದನಗಳ ಅವಶ್ಯಕತೆಗಳು ನೇಗಿಲು ಹೊಡೆಯುವುದಕ್ಕೆ, ಸಾಮಾನು ಸರಕುಗಳನ್ನು ಸಾಗಿಸುವುದಕ್ಕೆ ಮತ್ತು ಆಹಾರಕ್ಕೆ ಬೇಕಾಗುತ್ತಿದ್ದವು. ಇಡೀ ಅಲೆಮಾರಿ ಜೀವನ ನಿಂತು ಗುಂಪುಗಳು ಗ್ರಾಮಗಳಾಗಿ, ನಾಡುಗಳಾಗಿ, ರಾಜ್ಯಗಳಾದಾಗ, ರಾಜನ ಮೂಲಕವೂ ಕೃಷಿ ಮತ್ತು ಪಶುಪಾಲನೆಗೆ ವಿಶೇಷವಾದ ಸಹಕಾರಗಳಿದ್ದವು. ವೇದಗಳ

ಯುಗದಲ್ಲಿ ಉಡುಪು, ವ್ಯವಹಾರ, ಆಚಾರ–ವಿಚಾರ, ಜಿವನ ಶೈಲಿ, ಕೃಷಿ ಪದ್ಧತಿ, ವಾಣಿಜ್ಯ, ವ್ಯವಸಾಯ, ಜೀವನ ಶೈಲಿಗಳಲ್ಲಿ, ವೃತ್ತಿಗಳಲ್ಲಿ, ಅನೇಕ ಬದಲಾವಣೆಗಳಾದವು. ಹಳ್ಳಿಗಳು ಇಡೀ ಸಮುದಾಯಕ್ಕೆ ಒಬ್ಬ ದನಗಾಹಿಯನ್ನು ನೇಮಿಸುತ್ತಿದ್ದವು. ಆತ ಆಯಾ ದನಗಳ ಒಡೆಯರು ಕಾಯ್ದ ಸಲಾಖೆಯಿಂದ ಮಾಡಿದ ಗುರುತುಗಳಿದ್ದ ದನಗಳನ್ನು ಬೆಳಗಿನಿಂದ ಸಂಜೆಯವರೆಗೆ ಕೃಷಿ ಭೂಮಿಯನ್ನು ದಾಟಿ ಅಡವಿಯಲ್ಲಿ ಮೇಯಿಸಿಕೊಂಡು ಸಂಜೆಗೆ ಮರಳಿ ಕರೆತರುತ್ತಿದ್ದನು. ಎತ್ತುಗಳು ರೈತನ ಬಾಳಿನ ಮುತ್ತುಗಳಾಗಿದ್ದವು. ಆ ವೇಳೆಗೆ ಸಾಗುವಳಿ ಮಾಡುವ ರೈತರಿಗೆ ಸೇರಿದ ದನಗಳಲ್ಲದೆ, ದೇಶದ ಅರಣ್ಯ ಪ್ರದೇಶದಲ್ಲಿ ಅರೆ–ಅಲೆಮಾರಿ ಜೀವನ ನಡೆಸುವ ಮತ್ತು ದನಕಾಯುವುದನ್ನೇ ವ್ಯವಸಾಯವಾಗಿ ಮಾಡಿಕೊಂಡ ದನಗಳ ದೊಡ್ಡ ಹಿಂಡುಗಳಿರುತ್ತಿದ್ದವು. ಅಭೀರರು ಇಂತಹ ಒಂದು ಪಂಥವಾಗಿದ್ದರು. ಸಿಂಧೂ ಸಂಸ್ಕೃತಿಯ ಅವಧಿಯಲ್ಲಿ ಕೃಷಿ ಪ್ರಧಾನ ಆರ್ಥಿಕ ವ್ಯವಸ್ಥೆ ಹೊಂದಿರದ ಸಮಾಜ ನಂತರದ ಆರ್ಯರ ಆಗಮನ ಅಥವಾ ವೈದಿಕ ಸಂಸ್ಕೃತಿಯ ಅವಧಿಯಲ್ಲಿ ಕೃಷಿ ಮತ್ತು ಪಶುಪಾಲನೆ ಪ್ರಧಾನ ಅರ್ಥ ವ್ಯವಸ್ಥೆಯ ಭಾಗವಾದವು. ಆರ್ಯರು ಮೂಲತಃ ಪಶುಪಾಲಕರಾಗಿದ್ದು ಅರೆ ಅಲೆಮಾರಿ ಜನಾಂಗವಾಗಿದ್ದರು. ಋಗ್ವೇದ ಕಾಲದ ಸಮಾಜ ಮೂಲತಃ ತುರುಗಾಹಿಗಳಾಗಿಯೇ ಇತಿಹಾಸದಲ್ಲಿ ಗುರುತಿಸಿಕೊಂಡಿದೆ. **ದನದ ಹಿಂಡು** ಹಾಗೂ **ಕುದುರೆಗಳು** ಅವರ ಪ್ರಮುಖ ಆಸ್ತಿ. ಜೀವನೋಪಾಯದ ಪಶುಪಾಲನೆಯು ಕುಟುಂಬದ ಸಂಪತ್ತನ್ನು ನಿರ್ಧರಿಸುವ ಸಾಧನವಾಗಿತ್ತು. ಹೆಚ್ಚು ದನಗಳನ್ನು ಹೊಂದಿದವರನ್ನು ಶ್ರೀಮಂತರೆಂದು ಕರೆಯುತ್ತಿದ್ದರು. ಅವನಿಗೆ **"ಗೋಮತ್"** ಅಥವಾ **"ಧನವಂತ"** ಎಂದು ಕರೆಯುತ್ತಿದ್ದರು. ಗೋವುಗಳು ಮೇಯಲು ಅಂದಿನ ಕಾಲದಲ್ಲಿ ಗೋಮಾಳ ಅಥವಾ ಗೋಚರ ಭೂಮಿಯೆಂದು ಹುಲ್ಲುಗಾವಲನ್ನು ಬಿಡುತ್ತಿದ್ದರು. ಅನ್ಯ ಬುಡಕಟ್ಟಿನ ಜನರು ಈ ಗೋವುಗಳನ್ನು ಅಪಹರಿಸುವ ಮೂಲಕ ತಾವು ಧನವಂತರೆಂದೆನಿಸಿಕೊಳ್ಳುವ ಪ್ರಯತ್ನಗಳು ನಿರಂತರವಾಗಿ ನಡೆದಿವೆ. ಇಂತಹ ಪ್ರಯತ್ನದ ಗೋ ಅಪಹರಣಗಳನ್ನು ಗೋಗ್ರಹಣ ಯುದ್ಧಗಳೆಂದು ಗುರುತಿಸಿದ್ದೇವೆ. ಇಂಥ ತುರುಗೊಳ್ ಕದನಗಳು ಸಹಸ್ರಾರು ಸಂಖ್ಯೆಯಲ್ಲಿ ನಡೆದಿವೆ. ಗೋವುಗಳನ್ನು ರಕ್ಷಿಸುವುದು ರಾಜನ ಆದ್ಯ ಕರ್ತವ್ಯವಾಗಿತ್ತು. ಅಂದಿನ ಕಾಲದಲ್ಲಿ ಹಸುವನ್ನು ವಿನಿಮಯದ ಮಾಧ್ಯಮವಾಗಿ ಬಳಸಲಾಗುತ್ತಿತ್ತು. ಭೂ ಒಡೆಯರು ಬಂಡವಾಳ ಹೊಂದಿದವರಾಗಿದ್ದು, ಅವರಿಂದ ವರ್ತಕ ವರ್ಗ ಹುಟ್ಟಿಕೊಂಡಿತು. ಕೃಷಿ ಹಾಗೂ ಸಾರಿಗೆಗೆ ಮಾನವ ಎತ್ತುಗಳನ್ನು ಬಳಸಿದ್ದ. ಎತ್ತುಗಳನ್ನು ಕಟ್ಟಿದ ಬಂಡಿಗಳೇ, ಅಂದಿನ ಕಾಲದಲ್ಲಿ ಬಸ್ಸು/ಲಾರಿಗಳ ಸ್ಥಾನವನ್ನು ತುಂಬಿದ್ದವು. ಇಲ್ಲಿ ವೃಷಭಗಳ ಪಾತ್ರ ಗಮನಾರ್ಹವಾದದ್ದು. ಗೋಸಗಣಿಯನ್ನು ಗೊಬ್ಬರವಾಗಿ, ಉರುವಲಾಗಿ ಬಳಸುತ್ತಿದ್ದರು. ಈ ಪಶುಪಾಲನೆಯೇ ಒಂದು ಹೊಸ ಸ್ಥಿರ ಗ್ರಾಮೀಣ ಬದುಕನ್ನು ಕಟ್ಟಿಕೊಳ್ಳಲು ಆಧಾರವಾಯಿತು.

ಗೊವುಗಳನ್ನು ದಾನ ಪಡೆಯಲು ಭೂಸುರರು ಮಾತ್ರ ಯೋಗ್ಯರೆಂದು ಸಾರುತ್ತಾ ತಮ್ಮ ಗೋಸಂಪತ್ತನ್ನು ಹೆಚ್ಚಿಸಿಕೊಳ್ಳುವ ತಂತ್ರಗಳೂ ನಡೆದಿವೆ, ಎಂದು ಚರ್ಚಿಸಲು ಅನೇಕ ಆಧಾರಗಳು ಲಭ್ಯವಾಗುತ್ತವೆ. ಒಂದು ವೃಷಭ ದಾನ ನೂರು ಗೋದಾನಕ್ಕೆ ಸಮ ಎಂಬ ಮಾತು ಹೋರಿಗಳಿಗೆ ಇದ್ದ ಬೆಲೆಯನ್ನು ತಿಳಿಸುತ್ತದೆ.

ದನಗಳು ಮತ್ತು ಕೃಷಿಕರ ಸಂಬಂಧಗಳು ಅವಿನಾಭಾವವಾಗಿ ಇರುತ್ತಿದ್ದವು. ಕೃಷಿಯ ಬಗ್ಗೆ ರಾಜ, ಮಹಾರಾಜ, ಚಕ್ರವರ್ತಿ ಯಾರೇ ಆಗಿರಲಿ ಎಲ್ಲ ಸಾಮ್ರಾಜ್ಯಗಳೂ ತಮ್ಮ ಶಕ್ತ್ಯಾನುಸಾರ ಗೋವುಗಳನ್ನು ಸಾಕಿ ಸಲಹುತ್ತಿದ್ದರು, ಎಂಬುದಕ್ಕೆ ತ್ರೇತಾಯುಗದಲ್ಲಿ ಬರುವ ಜನಕ ಮಹಾರಾಜ ತನ್ನ ಹೊಲದಲ್ಲಿ ಉಳುಮೆ ಮಾಡುತ್ತಿರುವಾಗ ನೇಗಿಲ ಕುಳಕ್ಕೆ ಸೀತೆ ಸಿಕ್ಕಳೆಂಬ ಕಥೆಯಾಗಲೀ, ಅದೇ ಜನಕ ಮಹಾರಾಜ ತನ್ನ ಹೊಲದಲ್ಲಿ ಮೇಯುತ್ತಿದ್ದ ಯಾವುದೋ ತುಡುಗು ಧನವನ್ನು ಓಡಿಸಿ ಅದರ ಆಹಾರ ಸೇವನೆಗೆ ಅಡ್ಡಿಪಡಿಸಿ ಪಾಪವೆಸಗಿದ್ದರಿಂದ ಅವನು ಎಷ್ಟೇ ಪುಣ್ಯ ಮಾಡಿದ್ದರೂ ಗೋವನ್ನು ಹುಲ್ಲು ತಿನ್ನದೆ ತಡೆದ ತಪ್ಪಿಗೆ ನರಕದರ್ಶನ ಪಡೆದ ಕಥೆ ಪುರಾಣಗಳಲ್ಲಿ ಉಲ್ಲೇಖಿತವಾಗಿವೆ. ದ್ವಾಪರ ಯುಗದಲ್ಲಿ ವಿರಾಟನ ಗೋವುಗಳನ್ನು ಕಾಯಲು ಅಜ್ಞಾತ ವಾಸದಲ್ಲಿದ್ದ ಪಾಂಡವರು ಆತನ ಆಸ್ಥಾನವನ್ನು ಸೇರಿದ್ದರು. ಗೋವುಗಳ ರಕ್ಷಣೆಗೆ ವೀರ ಪ್ರತಿಜ್ಞೆಯಂತೆ ತಮ್ಮ ಅಜ್ಞಾತ ವಾಸವನ್ನು ಲೆಕ್ಕಿಸದೆ ಹೋರಾಡಿ ಗೋಗ್ರಹಣದ ಹೋರಾಟದಲ್ಲಿ ವಿಜಯ ಸಾಧಿಸಿ ವಿರಾಟನ ಗೋವುಗಳನ್ನು ಮರಳಿ ಪಡೆದ ಕಥೆ, ಅಷ್ಟೇ ಏಕೆ? ಸಾಕ್ಷಾತ್ ಶ್ರೀಕೃಷ್ಣನೇ ಗೋಪಾಲಕನಾಗಿದ್ದ ಎಂಬುದು ಪುರಾಣಗಳಲ್ಲಿ ವೇದ್ಯವಾಗಿದೆ. ಯುಗಾಂತರಗಳಲ್ಲಿ ರಾಜ ಮಹಾರಾಜರ ಆದಿಯಾಗಿ ರೈತನ ಬಾಳಿಗೆ ಬೇಕಾದ ಗೋವುಗಳ ಪಾಲನೆಗೆ ನೀಡಿದ ಮಹತ್ವ ಎಷ್ಟು ಎಂಬುದನ್ನು ತಿಳಿಸುತ್ತದೆ.

ಮಾನವ ಅಲೆಮಾರಿಯಾಗಿ ಬೇಟೆಯಾಡುತ್ತಾ ಬದುಕಿದ್ದಾಗ ದನಗಳನ್ನು ಪಳಗಿಸಿ ಮಾಂಸದ ಆಸೆಗಾಗಿ, ನಂತರ ಅದರ ಹಾಲು ಹಾಗೂ ಹಾಲಿನ ಉತ್ಪನ್ನಗಳ ಬಳಕೆಯನ್ನು ಕಲಿತ. ಅಂದಿನ ಕಾಲದಲ್ಲಿ ಹಾಲಿನ ಉತ್ಪನ್ನಗಳು, ದನಗಳು ವಿನಿಮಯಕ್ಕೆ ಚಲಾವಣೆಗೆ ನಾಣ್ಯಗಳಂತೆ ಬಳಕೆಯಾದವು. ಅಂದಿನ ಸಮಾಜ ಗೋವುಗಳನ್ನೇ ಸಂಪತ್ತೆಂದು ಪರಿಗಣಿಸಿದರು. ಗೋವಿನ ತ್ಯಾಜ್ಯ ಗೊಬ್ಬರವಾಗಿ ಕೃಷಿ ಚಟುವಟಿಕೆಗಳಿಗೆ ಪೂರಕ ಪೋಷಕಾಂಶ ಒದಗಿಸುವುದರಿಂದ ಹುಲುಸಾದ ಬೆಳೆ ತೆಗೆಯಲು ಸಾಧ್ಯವಾಗುತ್ತಿತ್ತು. "ಇಂದಿನ ಆಧುನಿಕ ಯುಗದ ರಾಸಾಯನಿಕಗಳನ್ನು ಬಳಸದೆ ಗೋವಿನ ತ್ಯಾಜ್ಯವನ್ನೇ ಹೆಚ್ಚು ಬಳಸಿ ಸಾವಯವ ಕೃಷಿ ಪದ್ಧತಿಗೆ ತಿರುಗಿ ಎಂಬ ವಿಜ್ಞಾನಿಗಳು ಇಂದು ಕಂಡುಕೊಂಡಿರುವ ಸತ್ಯವನ್ನು ಭಾರತ ಅಂದೇ ಕಂಡುಕೊಂಡಿತ್ತು. ಆದ್ದರಿಂದಲೇ ಗೋವುಗಳನ್ನು ರೈತ ತನ್ನ ಹೊಟ್ಟೆಯ ಮಕ್ಕಳಿಗಿಂತ ಹೆಚ್ಚಾಗಿ ಪ್ರೀತಿಯ ತೋರಿ

ವಾತ್ಸಲ್ಯದಿಂದ ಅವುಗಳಿಗೆ ಬೇಸಾಯದ ತರಬೇತಿಯನ್ನು ನೀಡಿ ತನ್ನ ದುಡಿಮೆಗೆ ಬಳಸಿಕೊಳ್ಳುತ್ತಿರುವುದು ಅನಾದಿ ಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಹಸುವನ್ನು **"ಕಾಮಧೇನು"**ಎಂದು ಕರೆದಿರುವುದು ಬೇಡಿದ್ದನ್ನು ಕೊಡುವುದು ಎಂಬ ದೈವೀ ಭಾವನೆಯಿಂದ. ಹಸುಗಳ ಕೊಂಬಿನಿಂದ ಹಿಡಿದು ಪ್ರತಿಯೊಂದು ಅಂಗಾಂಗಗಳೂ ದೇವತೆಗಳ ವಾಸಸ್ಥಾನವಾಗಿರುವಂತೆ ಗೋವುಗಳ ಪ್ರತಿ ಕಣ ಕಣವೂ ವೈಜ್ಞಾನಿಕವಾಗಿಯೂ ಉಪಯುಕ್ತವಾಗಿವೆ. ಅದನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು. ರೈತ ಬೆಳೆದ ಧಾನ್ಯಗಳನ್ನು ಬೇರ್ಪಡಿಸಲು ಸೂಕ್ತ ಸ್ಥಳಕ್ಕೆ ವರ್ಗಾಯಿಸಲು, ಅಂದಿನ ಕಾಲದಲ್ಲಿ ಎತ್ತಿನ ಗಾಡಿ, ಎತ್ತುಗಳು ಮುಖ್ಯ ಸ್ಥಾನವನ್ನು ಪಡೆದಿದ್ದವು. ಇಂತಹ ಬಹುಉಪಯೋಗಿ ಗೋವುಗಳ ಪಾಲನೆಯನ್ನು ವೃತ್ತಿಯಾಗಿಸಿಕೊಂಡ ಗೌಳಿ ಜನಾಂಗವನ್ನು ಇಂದಿಗೂ ಕಾಣಬಹುದು. ಗೌಳಿಗರು ಅಲೆಮಾರಿಗಳಾಗಿ ವಲಸೆ ಬಂದು ಪಶ್ಚಿಮ ಘಟ್ಟಗಳ ಪ್ರದೇಶಗಳಲ್ಲಿ ನೆಲೆನಿಂತಿರುವುದು, ಇಲ್ಲಿ ನೀರು ಹಾಗೂ ಮೇವು ಯತೇಚ್ಛವಾಗಿರುವುದಕ್ಕೆ ಸಾಕ್ಷಿ. ಪಶುಪಾಲನೆಗೆ ಸೂಕ್ತ ವಾತಾವರಣದಲ್ಲಿ ಶಿವಮೊಗ್ಗವನ್ನು ಗುರುತಿಸಲಾಗಿದೆ. ಇದು ಅಂದಿನ ಜನರು ಕಂಡು ಕೊಂಡ ಪಶುಸಂಗೋಪನೆಗೆ ಸೂಕ್ತ ಸ್ಥಳ ಆಗಿದ್ದರಿಂದ ಪಶು ಸಂಪತ್ತು ಹೆಚ್ಚಿ, ಈ ಪ್ರದೇಶಗಳಲ್ಲಿ ಗೋಸಾಸ (ಸಾವಿರ ದನಗಳನ್ನು ದಾನ ಮಾಡಿದ ಸಾಕ್ಷಿಯಾದ ಶಿಲ್ಪಗಳು) ಹಾಗೂ ಗೋಗ್ರಹಣ ಶಾಸನಗಳು ಈ ಪ್ರದೇಶಗಳಲ್ಲಿ ದೊರೆತಿರುವುದು ಈ ಪ್ರದೇಶದ ಪಶು ಸಂಪತ್ತನ್ನೇ ಸೂಚಿಸುತ್ತಿವೆ. ಅಲ್ಲದೆ ದೊರೆತಿರುವ ಶಾಸನಗಳಿರುವ ಊರುಗಳೂ ದೊಡ್ಡದಾದ ಕೆರೆಗಳಿರುವ ಅಥವಾ ಎಂದೂ ಬತ್ತದ ನೀರಿನ ಮೂಲಗಳಿರುವ ಊರುಗಳೇ ಆಗಿವೆ. ಇದು ಪಶುಸಂಗೋಪನೆಗೆ ಸೂಕ್ತ ವಾತಾವರಣ ಆಗಿರುವುದು, ಅಪಾಯವಿಲ್ಲದ ಗಟ್ಟಿಭೂಮಿ, ಹುಲ್ಲುಗಾವಲು, ಮೇಯಿಸಲು ಸಣ್ಣ ಸಣ್ಣ ಹಾಗೂ ಅಪಾಯವಲ್ಲದ ಕಾಡುಗಳು, ಶಿವಮೊಗ್ಗ ಜಿಲ್ಲೆಯ ಭೌಗೋಳಿಕ ಪರಿಸರವೇ ಒಂದು ವೀರಪರಂಪರೆಯ ಹುಟ್ಟಿಗೆ ಕಾರಣವಾಗಿದೆ. ಇಂಥಹ ಪಶುಪಾಲನೆಗೆ ಯೊಗ್ಯ ಭೂಮಿ, ಆಹಾರ ಹಾಗೂ ನೀರು ಯಥೇಚ್ಛವಾಗಿ ದೊರೆಯುವ ಪ್ರದೇಶಗಳಿಗಾಗಿಯೇ ಯುದ್ಧಗಳು ನಡೆದಿವೆ ಎಂಬುದನ್ನು ನನ್ನ ಕ್ಷೇತ್ರ ಕಾರ್ಯದಲ್ಲಿ ಗುರುತಿಸಲಾಗಿದೆ. ಅಂದಿನ ನೀರಿನ ಮೂಲಗಳಾದ ಕೆರೆ, ಹೊಂಡ, ಮುಂತಾದ ನೀರಿನ ಮೂಲವಿರುವ ವಿಶಾಲವಾದ ಹುಲ್ಲುಗಾವಲು ಅಥವಾ ವನಸಂಪತ್ತಿರುವ ಭಾಗಗಳಲ್ಲಿಯೇ ಹೆಚ್ಚು ಗೋಗ್ರಹಣ ಶಾಸನಗಳು ದೊರೆತಿರುವುದು ವಿಶೇಷ. ಈ ವಾದವನ್ನು ನನ್ನ ಸಂಶೋಧನೆಯ ನಕ್ಷೆಗಳು ಪುಷ್ಟೀಕರಿಸುತ್ತವೆ.

ಭಾರತದ ಶೇ.೭೦% ಜನ ಜೀವನೋಪಾಯಕ್ಕಾಗಿ ಕೃಷಿಯನ್ನೇ ಅವಲಂಬಿಸಿದೆ. ಭೂಮಿಯನ್ನು ಉಳುವ ವೇಳೆಯಲ್ಲಿ "ಪವಿತ್ರವಾದ ಗೋಮಾತೆಯ ವಂಶಜನಾದ, ಪಾಪರಹಿತ ಬಲಿಷ್ಟ ವೃಷಬೇಂದ್ರನೇ, ಭೂಮಿಯ ಉಳುಮೆಯ ಕಾರ್ಯದಲ್ಲಿ ನೆರವಾಗಬೇಕೆಂದು ಬೇಡುತ್ತಾರೆ.

ಎತ್ತುಗಳಿಗೆ ನಮಸ್ಕರಿಸಿ ಪೂಜಿಸಿಯೇ ಕೃಷಿ ಚಟುವಟಿಕೆಗಳನ್ನು ಸಂಭ್ರಮದಿಂದ ಆರಂಭಿಸುತ್ತಾರೆ. ಅಲ್ಲದೆ ಹೈನದ (ಹಾಲು ಕೊಡುವ) ಹಸುಗಳನ್ನು ಪಾಲಿಸುವುದರಿಂದ ರೋಗರುಜನಿಗಳು ದೂರವಾಗುತ್ತವೆ. ಮಕ್ಕಳು, ಮುದುಕರ ರಕ್ಷಣೆ ಹಾಗೂ ಪಾಲನೆಯಾಗುತ್ತದೆ. ಮಾನವನ ಬದುಕಿನ ಪುರಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷ, ಇವುಗಳು ದನಗಳ ಸೇವೆಯಿಂದ ಸಾಧ್ಯವಾಗುತ್ತವೆ. ಅತಿ ಶೇಷ್ಟ ಗುಣಮಟ್ಟದ ಹಾಗೂ ಒಳ್ಳೆಯ ತಳಿಯ ಹೋರಿಗಳು ಮತ್ತು ಹಸುಗಳು ಕೃಷಿ ಕಾರ್ಯಗಳಲ್ಲಿ ಹೆಚ್ಚು ಉಪಯುಕ್ತವಾಗಿವೆ.[೪]

ದನಗಳ ತ್ಯಾಜ್ಯಗಳಾದ ದನಗಳ ಸಗಣಿ, ಗಂಜಳ, ಕೃಷಿ ಚಟುವಟಿಕೆಗಳಲ್ಲಿ ವಿಶೇಷ ಮಹತ್ವ ಪಡೆದಿವೆ. ಗೋಮೂತ್ರವು ಗೋಮಾತೆಯಿಂದ ಪಡೆದ ಜೀವದ್ರವ್ಯ. ಗೋಮೂತ್ರದಲ್ಲಿ ಸಸ್ಯಗಳ ಬೆಳವಣಿಗೆಗೆ ಪೂರಕವಾದ ಸಾರಜನಕ, ಲವಣಾಂಶ, ಖನಿಜಾಂಶ, ಚೋಧಕಗಳನ್ನು ಒಳಗೊಂಡಿದೆ. ಕೃಷಿಯ ಅಭಿವೃದ್ಧಿಯಲ್ಲಿ "ಜೀವಾಮೃತವು" ಮಹತ್ವದ ಸ್ಥಾನ ಪಡೆದಿದೆ. ಇದರ ತಯಾರಿಕೆಯಲ್ಲಿ ಬಳಸುವ ಗೋಮಯ, ದ್ವಿದಳ ದಾನ್ಯಗಳ ಪುಡಿ, ಬೆಲ್ಲ, ಕಬ್ಬಿನಹಾಲು, ಹುತ್ತದಮಣ್ಣು, ಇವುಗಳ ಮಿಶ್ರಣದಲ್ಲಿ ಕೊಳೆಯುವಿಕೆ ಪ್ರಮುಖ ಪಾತ್ರವಹಿಸಿ, ಮಣ್ಣಿನಲ್ಲಿರುವ ರಸ ಸತ್ವವನ್ನು ಬೆಳೆಸುವಲ್ಲಿ ಗೋಮೂತ್ರದ ಪಾತ್ರ ದೊಡ್ಡದು.[೫] ಅಲ್ಲದೆ ದನಗಳು ಸತ್ತ ನಂತರವೂ ಅವುಗಳ ಚರ್ಮ ಬಿಲ್ಲಿನ ಹೆದೆ ಕಟ್ಟಲು, ರಾಜರ ರಥಗಳ ವಿವಿಧ ಭಾಗಗಳನ್ನು ಚರ್ಮದ ಪಟ್ಟಿಯಿಂದ ಕಟ್ಟಲು, ಬಾಣಗಳನ್ನು ಭರ್ಚಿಗೆ ಕಟ್ಟಲು, **"ಚಾರುಕುಣಿಕೆ"**ಯಾಗಿ ಬಳಸುತ್ತಿದ್ದರು. **"ಗೋಧಾ"** ಎಂಬ ಚರ್ಮ ವಾಧ್ಯವನ್ನು ತಯಾರಿಸಲು ಉಪಯೋಗಿಸುತ್ತಿದ್ದರು. ಈ ಚರ್ಮವಾದ್ಯಗಳು ತಮ್ಮ ಬೆಳೆಗಳ ಮೇಲೆ ದಾಳಿ ಮಾಡುವ ಪ್ರಾಣಿಗಳನ್ನು ಓಡಿಸಲು, ಶತ್ರುಗಳ ಧಾಳಿ ಅಥವಾ ನಿಸರ್ಗದ, ಕ್ರೂರ ಮೃಗಗಳಿಂದ ಅಪಾಯಗಳು ಒದಗಿ ಬಂದಾಗ ಅವುಗಳನ್ನು ಸೂಚಿಸಲು ಈ ಚರ್ಮವಾದ್ಯಗಳು ಬಳಕೆಯಾಗಿವೆ. ಅತ್ಯಂತ ಪ್ರಾಚೀನ ಸಂವಾಹನ ಉಪಕರಣ ಎಂದು ಇವುಗಳನ್ನು ಇಂದಿನ ಆಧುನಿಕ ಕಾಲದಲ್ಲಿ ಕರೆಯಬಹುದು. ನಂತರ ಗೋವುಗಳ ಚರ್ಮ ಹಲಿಗೆಗಳಾಗಿ, ಜಗ್ಗಲಿಗೆಗಳಾಗಿ, ವೀರಭದ್ರನ ಗುಗ್ಗಳದ ಸಮ್ಮಾಳಗಳಾಗಿ, ಸಂಭ್ರಮದ ಆಚರಣೆಗಳಲ್ಲಿ ಮಂಗಳ ವಾದ್ಯಗಳಾಗಿ, ಯುದ್ಧದ ಸಂದರ್ಭಗಳಲ್ಲಿ ಸೈನಿಕರನ್ನು ಹುರಿದುಂಬಿಸುವ ರಣಭೇರಿಗಳಾಗಿ ತಮ್ಮ ನಾದವನ್ನು ಮೊಳಗಿಸಿವೆ. ಕೃಷಿ ಪರಿಕರಗಳನ್ನು ಕಟ್ಟಲು, ಕುದುರೆ ಲಗಾಮುಗಳಾಗಿ, ಹಿಂದಿನಿಂದಲೂ ದನಗಳ ಚರ್ಮ ಬಳಕೆಯಾಗುತ್ತಿವೆ. ಪ್ರಾಣಿಗಳನ್ನು ಬಳಸುವಾಗ ಬಳಸುವ ಚಾಟಿ "ಚರ್ಮ ಪಟ್ಟಿ" ಎಂಬ ಶಬ್ದದಿಂದಲೇ ಬಂದಿದೆ. ಕೃಷಿ ಚಟುವಟಿಕೆಯಲ್ಲಿ ಎತ್ತುಗಳು ರೈತನ ಸೂಚನೆಗಳನ್ನು ಪಾಲಿಸದೆ ಇದ್ದಲ್ಲಿ ಅವುಗಳನ್ನು ಹೊಡೆಯಲು ಬಳಸುವ **"ಚಾರುಕೋಲು"** ಕೂಡ ಅವುಗಳ ಚರ್ಮದಿಂದಲೇ ಮಾಡಿದ್ದು. ಈ

ದನಗಳು ಮರಣದ ನಂತರವೂ ಕೃಷಿ ಚಟುವಟಿಕೆಗಳಲ್ಲಿ ಸಹಕಾರಿಯಾಗಿರುವುದಕ್ಕೆ ಚರ್ಮದಿಂದ ಮಾಡುವ ಅನೇಕ ಉತ್ಪನ್ನಗಳು ಸಾಕ್ಷಿಯಾಗಿದೆ.[೬]

ಭಾರತದ ಆರ್ಥಿಕತೆಯ ನೆಲಗಟ್ಟು ಕೃಷಿ ಮತ್ತು ಪಶುಸಂಗೋಪನೆಯೇ ಆಗಿದೆ. ಕನ್ನಡದ ಕವಿ ನಾರಾಯಣಪ್ಪ ತನ್ನ ಕುಮಾರ ವ್ಯಾಸ ಭಾರತದಲ್ಲಿ,

**"ಕೃಷಿ ಮೊದಲು ಸರ್ವಕ್ಕೆ ಕೃಷಿಯಿಂ।**
**ಪಸರಿಸುವುದಾ ಕೃಷಿಯನುದ್ಯೋ।**
**ಗಿಸುವ ಜನವನು ಪಾಲಿಸುವುದು ಜನಪದದ ಜನದಿ॥**
**ವಸುವು ತೆರಳುವುದು ವಸುವಿನಿಂಸಾ।**
**ಧಿಸುವದಾವುದ ಸಾಧ್ಯವದರಿಂ।**
**ಕೃಷಿವಿಹೀನ ದೇಶವದು ದುರ್ದೇಶ ಕೇಳೆಂದ॥**

ಒಕ್ಕಲುತನ ಚೆನ್ನಾಗಿ ನಡೆಯಬೇಕೆಂದರೆ, ಜನರು ದುಡಿಯಲು ಆರೋಗ್ಯವಂತರಾಗಿರಬೇಕು. ಜನಗಳು ಆರೋಗ್ಯವಂತರಾಗಿ, ದೃಢಕಾಯರಾಗಿ ಇರಬೇಕಾದರೆ ದನಗಳು ದುಡಿಯಲು ಗಟ್ಟಿಮುಟ್ಟಾಗಿರಬೇಕು. ಹಾಗೂ ಹೆಚ್ಚೆಚ್ಚು ಹಾಲು ಕೊಡುತ್ತಿರಬೇಕು. ಉಳುಮೆ, ಬಿತ್ತಿಗೆ, ಹರಗುವಿಕೆ, ಎಡೆಕುಂಟೆ ಹೊಡೆಯುವಿಕೆ, ಕೃಷಿ ಉತ್ಪತ್ತಿ ಸಾಗಣೆ, ಮೊದಲಾದ ಎಲ್ಲ ಕೆಲಸಗಳಿಗೂ ದನಗಳು ಬೇಕು. ಭಾರತದ ವ್ಯವಸಾಯಕ್ಕೆ ಆಕಳು ಮತ್ತು ಎತ್ತುಗಳು ಆಧಾರಭೂತವಾಗಿವೆ. ಅಧಿಕ ಆಹಾರ ಉತ್ಪಾದಿಸುವ ಕಾರ್ಯದಲ್ಲಿ ವ್ಯವಸಾಯಕ್ಕೆ ಪ್ರಮುಖ ಅಂಗವಾದ ದನಗಳ ಪಾತ್ರ ಅತೀ ಮಹತ್ವದ್ದು. ಹೈನು ಉದ್ಯೋಗ ರೈತನ ಮುಖ್ಯ ಉದ್ಯೋಗವಾದ ಒಕ್ಕಲುತನಕ್ಕೆ ಪೂರಕವೇ ಹೊರತು ಮಾರಕವಲ್ಲ. ಆಕಳು ತಿಂದ ಮೇವಿನಲ್ಲಿ ೪೫% ಆಹಾರವನ್ನು ತನಗಾಗಿ ಬಳಸಿಕೊಂಡು ಉಳಿದ ೫೫% ರಷ್ಟನ್ನು ಹಾಲಾಗಿ ಪರಿವರ್ತಿಸಿ ಮಾನವನಿಗೆ ನೀಡುತ್ತದೆ. **"ಗಾವೋ ರಕ್ಷತಿ ರಕ್ಷತಃ"** ಅಂದರೆ ಆಕಳನ್ನು ನಾವು ಸಾಕಿ ರಕ್ಷಿಸಿದರೆ ಅದು ನಮ್ಮನ್ನು ಸಾಕಿ ರಕ್ಷಿಸುತ್ತದೆ ಎಂಬ ಭಾವನೆ ಭಾರತೀಯರೆಲ್ಲರದ್ದು. ಮಾನವನ ಸಾಮ್ರಾಜ್ಯದ ವಿಸ್ತರಣೆಗೆ ದನಗಳು ಸಹಾಯ ಮಾಡಿವೆ. ಅನೇಕ ರಾಜರುಗಳು ಯುದ್ಧ ಸಾಮಗ್ರಿಗಳನ್ನು, ಮದ್ದು ಗುಂಡುಗಳನ್ನು ಸಾಗಿಸಲು ಎತ್ತಿನ ಗಾಡಿಗಳನ್ನು ಬಳಸಿರುವುದು ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ. ಜನರ ವ್ಯಾಪಾರದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವ ಪುರಾತನ ವ್ಯವಸ್ಥೆ 'ಸಾರ್ಥ'ಕ್ಕೂ ಎತ್ತುಗಳನ್ನು ಬಂಡಿಯ ಚಾಲನಾ ಶಕ್ತಿಗಳಾಗಿ ಬಳಸಲಾಗಿದೆ. ರೈತನ ಮನೆಯ ಶ್ರೀಮಂತಿಕೆಯನ್ನು ಗುರುತಿಸಲು ಆ ರೈತನು ಎಷ್ಟು ಎತ್ತುಗಳನ್ನು ಸಾಕಿದ್ದಾನೆ ಎಂಬುದು ಮಾನದಂಡವಾಗಿತ್ತು. ಅಂದಿನ ರೈತರು ನಮ್ಮದು ೪೦ ಎತ್ತಿನ ಕಮತ, ೬೦ ಎತ್ತಿನ

ಕಮತ, ೧೬ ಎತ್ತಿನ ಕಮತ, ಅಂದರೆ ಅವುಗಳ ಸರಿ ಸಂಖ್ಯೆಯಾಗಿ ಜೋಡಿಸಿದರೆ ಅಷ್ಟು ಜೋಡಿಗಳ **ಗಳೇವು** (ಭೂಮಿಯನ್ನು ಉಳುವ ಮತ್ತು ಹರಗುವ, ಹಸನು ಮಾಡುವ ಸಾಧನಗಳು) ಅವರು ಹೊಂದಿದ ಭೂಮಿಯನ್ನು ಉಳಲು ಬೇಕೆಂಬುದರ ಸಂಕೇತವಾಗಿದೆ. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಕುಟುಂಬ ಸಮೇತ ಸಾಗಲು ಕಮಾನು ಕಟ್ಟಿ ಸಿಂಗರಿಸಿದ ಎತ್ತಿನ ಗಾಡಿಗಳನ್ನೇ ಬಳಸುತ್ತಿದ್ದರಿಂದ ಎತ್ತಿನ ಗಾಡಿಯು ಜನರ ಭಾವನೆಗಳಿಗೆ ಪ್ರೀತಿ ಆದರಗಳಲ್ಲಿ ಸೇರಿ ಹೋಗಿತ್ತು. ಇಂದಿನ ಮೋಟಾರು ಗಾಡಿಗಳನ್ನು ನೋಡಿಕೊಳ್ಳುವಂತೆ ಎತ್ತಿನ ಗಾಡಿಗಳನ್ನು ನೋಡಿಕೊಳ್ಳುತ್ತಿದ್ದರು. ಹಿಂದಿನ ಜನರು ಅದಕ್ಕೆ ಬೇಕಾದ ಬಣ್ಣವನ್ನು ಹಚ್ಚಿ ಬಡಗಿಯಿಂದ ಚೆಂದದ ಕೆತ್ತನೆಯ ಶೃಂಗಾರ ಮಾಡಿಸುತ್ತಿದ್ದರು. ಇದೂ ಅವರ ಮನೆಯ ಶ್ರೀಮಂತಿಕೆಯನ್ನೇ ತೋರಿಸುತ್ತಿತ್ತು. ಅಲ್ಲದೆ ಗೋವಿನ ಸಗಣಿಯನ್ನು ಅದರಲ್ಲೂ ದೇಸಿ ಹಸುಗಳ ಸಗಣಿಯನ್ನು ಸುಟ್ಟು ವಿಭೂತಿ ಮಾಡಿ ಅದನ್ನು ನೊಸಲಿಗೆ ಶೃಂಗಾರವಾಗಿ ಧರಿಸುವ ಪದ್ಧತಿ ಧಾರ್ಮಿಕವಾಗಿ ಇಂದಿನವರೆಗೂ ನಡೆದುಕೊಂಡು ಬಂದಿದೆ. ಇದು ಅವರಿಗೆ ದುಷ್ಟ ಶಕ್ತಿಗಳಿಂದ ರಕ್ಷಣೆ ಮತ್ತು ಕೆಟ್ಟ ದೃಷ್ಟಿಗಳನ್ನು ತಡೆಯುವ ಶಕ್ತಿಯನ್ನು ಈ ವಿಭೂತಿ ಧರಿಸುವುದು ನೀಡುತ್ತದೆ.

ಅಲೆಮಾರಿಯಾದ ಮಾನವ ತನ್ನ ಬೇಟೆಯ ಕ್ಷೇತ್ರದಿಂದ ಕೃಷಿ ಕ್ಷೇತ್ರದ ಕಡೆಗೆ ಬದಲಾಗಿ ಸ್ಥಿರವಾಗಿ ನಿಂತು ಮಾನವನಾಗುವ ಅಥವಾ ಸಂಪೂರ್ಣ ಕೃಷಿಕನಾಗುವಲ್ಲಿ ಗೋವುಗಳ ಪಾತ್ರ ಬಹಳ ಮುಖ್ಯವಾಗಿದೆ. ಆರಂಭದಲ್ಲಿ ಬೇಟೆಯ ಸಂದರ್ಭದಲ್ಲಿ ದೊರೆತ ದನಗಳನ್ನೇ ಪಳಗಿಸಿ ಆಹಾರಕ್ಕಾಗಿ ಬೇಕಾದಾಗ ಮಾತ್ರ ಬಳಸುತ್ತಾ, ಅವುಗಳ ಉಪಯೋಗ ತಿಳಿದಂತೆ ದನಗಳು ಪೂಜನೀಯ ಸ್ಥಾನ ಪಡೆದು ಮಾನವನ ಆಧುನಿಕ ಜೀವನದವರೆಗೂ ಜೊತೆಯಾಗಿವೆ. ಆಧುನಿಕ ಕಾಲದ ಓಟಕ್ಕೆ ಅರಸೊತ್ತಿಗೆಗಳು ತೆರೆದುಕೊಳ್ಳುವ ವೇಳೆಗೆ **'ಜೀವಧನ'**ವೆನಿಸಿದ್ದ ಗೋವುಗಳನ್ನು ಅಪಹರಿಸಿ, ಅವರಿಗೆ ಯುದ್ಧಾಹ್ವಾನ ನೀಡುವ, ತಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನಗಳು ಸಹಸ್ರಾರು ಸಂಖ್ಯೆಯಲ್ಲಿ ನಡೆದಿವೆ. ಅಂಥಹ ಸಂದರ್ಭದಲ್ಲಿ ತಮ್ಮ ಮನೆಯ ಲಕ್ಷ್ಮಿಯಾಗಿ, ರಾಜ್ಯದ ಕೀರ್ತಿ ಲಕ್ಷ್ಮಿಯಾಗಿ, ಶೌರ್ಯ ಲಕ್ಷ್ಮಿಯಾಗಿರುವ ಗೋವನ್ನು ತಮ್ಮ ಪ್ರಾಣದ ಹಂಗು ತೊರೆದು ಹೋರಾಡಿರುವುದನ್ನು ಕಾಣುತ್ತೇವೆ. ಆ ಹೋರಾಟಕ್ಕೆ ಮಾನವನೊಂದಿಗೆ ಬೆರೆತ ದನಗಳ ಪ್ರೀತಿ, ಹಾಗೂ ತಮ್ಮ ದನಗಳ ಜಾತಿಯ(ತಳಿ) ವಿಶೇಷತೆಗಳು ಪ್ರಾಣಕ್ಕಿಂತಲೂ ದೊಡ್ಡದಾಗಿ ಕಂಡಿರಲೇಬೇಕು. ಏಕೆಂದರೆ ತಳಿ ವಿಜ್ಞಾನದಲ್ಲಿ ಭಾರತೀಯರು ಹೆಚ್ಚು ಪರಿಣಿತರಾಗಿದ್ದದ್ದು ಅಧ್ಯಾಯನಗಳಲ್ಲಿ ತಿಳಿದುಬರುತ್ತದೆ. ಇತ್ತೀಚೆಗೆ ಭಾರತದಲ್ಲಿ ನಡೆದ ಒಂದು ಘಟನೆಯನ್ನು ಉಲ್ಲೇಖಿಸಲು ಬಯಸುತ್ತೇನೆ. ಒರಿಸ್ಸಾದ ನೌಪಾದ ಪ್ರಾಂತ್ಯದಲ್ಲಿ ೧೯೭೮-೮೦ ರಲ್ಲಿ ಸಮನ್ವಿತಾ ಎಂಬ ಯೋಜನೆಯೊಂದನ್ನು ಸರ್ಕಾರವು ಎಸ್.ಬಿ.ಐ ಬ್ಯಾಂಕ್ ಹಾಗೂ ಕೆಲವು ಸಂಸ್ಥೆಗಳ

ಜೊತೆ ಸೇರಿ ಹಾಲು ಕೊಡುವ ಜೆರ್ಸಿ ಹಸು ಹಾಗೂ ಜೆರ್ಸಿ ವೀರ್ಯವನ್ನು ಸ್ಥಳೀಯ ಹಸುಗಳಿಗೆ ಸಂಕರ ಮಾಡುವ ಯೋಜನೆಯೊಂದನ್ನು ರೂಪಿಸಿದರು. ಇದರಿಂದ ಹೆಚ್ಚು ಹಾಲು ಕೊಡುವ ಕರು ಪಡೆಯುವ ಪ್ರಯತ್ನಕ್ಕಾಗಿ ಸ್ಥಳೀಯ **ಖರಿಯಾರ್** ತಳಿಗಳ ಹೋರಿಗಳನ್ನೆಲ್ಲ ಕಸಿ ಮಾಡಿ ನಿರ್ವೀರ್ಯ ಮಾಡಲಾಯಿತು. ಈ ಖರಿಯಾರ್ ತಳಿಗಳು ಒಂದು ದಿನಕ್ಕೆ ನಾಲ್ಕರಿಂದ ಐದು ಲೀಟರ್ ಹಾಲು ಕೊಡುವ ಸಾಮರ್ಥ್ಯ ಹೊಂದಿದ್ದವು. ಈ ಅವೈಜ್ಞಾನಿಕ ಯೋಜನೆಯಿಂದ ಸಹಜವಾಗಿ ಆ ಪ್ರದೇಶದ ಹವಾಮಾನಕ್ಕೆ ಹೊಂದಿಕೊಂಡಿದ್ದ ಖರಿಯಾರ್ ತಳಿ ಬಂಜೆಯಾದವು. ಎಂಬ ಮಾತು ತಳಿಗಳ ಬಗ್ಗೆ ವಿಶೇಷವಾದ ಒಲವನ್ನು, ಹೊಂದಿದ ಭಾರತೀಯರಿಗೆ ವಿದೇಶಿ ಹಸುಗಳ ವ್ಯಾಮೋಹ ಹತ್ತಿಸಿದ ಘಟನೆಗೆ ಸಾಕ್ಷಿಯಾಗಿದೆ.[೭] ಪ್ರಾಚೀನ ಕಾಲದಲ್ಲೇ ತಳಿಗಳನ್ನು ದುಡಿಯುವ ಹಾಗೂ ಹಾಲು ಕೊಡುವ ತಳಿಗಳಾಗಿ ವಿಭಾಗಿಸಿಕೊಂಡು ಪಶುಪಾಲನೆ ನಡೆಸುತ್ತಿದ್ದ ನಮ್ಮ ಪ್ರಾಚೀನರ ಉತ್ತಮ ಗೋತಳಿಗಳ ನಾಶ ಅಥವಾ ಅಪಹರಣಕ್ಕೂ ಈ ಗೋಗ್ರಹಣ ಕದನಗಳು ನಡೆದಿರಬಹುದಾದ ಸಾಧ್ಯತೆಗಳಿವೆ. ಆದ್ದರಿಂದಲೇ ಗೋವುಗಳ, ಸ್ತ್ರೀಯರ, ಊರಿನ, ಜನರ ರಕ್ಷಣೆ ಗಂಡಸರ ಆದ್ಯ ಕರ್ತವ್ಯವಾಗಿ ಗಂಡುತನಕ್ಕೆ ಸಾಕ್ಷಿಯಾಗಿವೆ. ಜನ್ಮ ನೀಡಿದ ತಾಯಿಯ, ತಂದೆಯ ಗೌರವ ಉಳಿಸುವ, ತಮ್ಮ ಗ್ರಾಮ, ನಗರ, ನಾಡಿನ ಹೆಮ್ಮೆಯ ಪುತ್ರರಾಗಿ ಬಾಳಲು, ಸಮಾಜದ ಮೌಲ್ಯಗಳಿಗಾಗಿ ಹೋರಾಟಗಳನ್ನು ಅಂದಿನ ವೀರರು ನಡೆಸಿದ್ದಾರೆ. ನಂಬಿದ ಒಡೆಯ ಕಾಡೊಳಗಿದ್ದರೂ ಅವನನ್ನು ಬಿಡದೆ ಹಿಂಬಾಲಿಸುವ ಗೋವುಗಳು ಅವನ ಉಸಿರಲ್ಲಿ ಒಂದಾಗಿ ಬೆರೆತು ಹೋಗಿದೆ. ಇಂದಿನ ಆಧುನಿಕ ಕೈಗಾರಿಕೆ, ತಂತ್ರಜ್ಞಾನದಲ್ಲಿ ಗೋವಿನ ಹಾಲು ಅನೇಕ ಉತ್ಪನ್ನಗಳಾಗಿ ತಯಾರಾಗುತ್ತಿರುವುದು ಗೋವಿನ ಬಹು ಉಪಯೋಗಿ ಗುಣಕ್ಕೆ ಸಾಕ್ಷಿಯಾಗಿದೆ. ಮಕ್ಕಳುಗಳಿರುವ ಮನೆಯಲ್ಲಿ ತಾಯಿಯ ಹಾಲಿಗೆ ಸಮಾನವಾದ ಗೌರವವನ್ನು ಹಸುವಿನ ಹಾಲಿಗೂ ನೀಡಿ, ಗೋವುಗಳನ್ನು ಸಾಕುವುದನ್ನು ಕಾಣುತ್ತೇವೆ. ಅವುಗಳನ್ನು ಅಮವಾಸ್ಯೆ, ಹುಣ್ಣಿಮೆ, ಹಬ್ಬಗಳ ವಿಶೇಷ ಸಂದರ್ಭದಲ್ಲಿ, ವ್ಯವಸಾಯದ ಆರಂಭದಲ್ಲಿ ಎತ್ತುಗಳಿಗೆ, ಗೋವುಗಳಿಗೆ ಪೂಜಿಸುವ ಅನೇಕ ಆಚರಣೆಗಳನ್ನು ನಮ್ಮ ಗ್ರಾಮೀಣರು ಇಂದಿಗೂ ನಡೆಸಿಕೊಂಡು ಬಂದಿದ್ದಾರೆ. ಆ ಆಚರಣೆಗಳನ್ನು ಜನಪದ ಆಚರಣೆ ಭಾಗದಲ್ಲಿ ಚರ್ಚಿಸಲಾಗಿದೆ. ಶಿವಮೊಗ್ಗ, ಹಿರೇಕೇರೂರು, ಹಾವೇರಿ, ಸೊರಬ ಭಾಗದಲ್ಲಿ ನಡೆಯುವ ಹಟ್ಟಿಹಬ್ಬ ರೋಮಾಂಚನ ಉಂಟುಮಾಡುತ್ತದೆ. ಈ ಹಟ್ಟಿ ಹಬ್ಬ ಗ್ರಾಮೀಣ ರೈತರು ತಮ್ಮ ದನಗಳ ಶೌರ್ಯವನ್ನು ಪ್ರದರ್ಶಿಸುವ, ಸಾವು-ಬದುಕಿನ ಪ್ರತಿಷ್ಠೆಯ ಹೋರಾಟವಾಗಿದೆ. ತಮ್ಮ ಮನೆಯ ಪ್ರತಿಷ್ಠೆಯ ಸಂಕೇತವಾದ, ತಾವು ಸಾಕಿದ ತಮ್ಮ ಮನೆಯ ಬಲಶಾಲಿ ಹೋರಿಯನ್ನು ಕೊಬ್ಬರಿ ಸರಗಳೊಂದಿಗೆ ಸಿಂಗರಿಸಿ, ಹೋರಿ ಹಿಡೀರಿ ಎಂದು ಪಂಥಾಹ್ವಾನವನ್ನು ನೀಡುತ್ತಾರೆ.

ಆ ಪಂಥವನ್ನು ಸ್ವೀಕರಿಸಿ ಹಿಡಿಯುವ ಪೈಲ್ವಾನರಿಗೆ ಸವಾಲೆಸೆಯುವ ಆಚರಣೆಯನ್ನು ಗಮನಿಸಿದಾಗ, ತಾವು ಮೇಯಿಸಿದ ಹೋರಿಗಳಿಗೆ ಇನ್ನಾವ ರೈತರ ಹೋರಿಗಳೂ ಸಾಟಿಯಲ್ಲ ಎಂದು ಗೆದ್ದ ಹೋರಿಯ ಮಾಲೀಕರು ಸಂತೋಷಪಡುತ್ತಾರೆ. ಈ ಹೋರಿ ಬೆದರಿಸುವ ಹಬ್ಬ, ಹೋರಿಗಳಿಗೆ ಹಿಂದಿನಿಂದಲೂ ಇದ್ದ ಪ್ರಾಮುಖ್ಯತೆಗೆ ಸಾಕ್ಷಿಯಾಗಿದೆ. ರೈತನ ಕೃಷಿ ಚಟುವಟಿಕೆಗಳ ಖರ್ಚನ್ನು ಕಡಿಮೆ ಮಾಡಿ ಹೆಚ್ಚಿನ ಇಳುವರೆ ಪಡೆಯಬೇಕೆಂದರೆ ದನಗಳನ್ನು ಅವಲಂಬಿಸಲೇ ಬೇಕಾಗಿದೆ ಎಂಬುದನ್ನು ಇಂದಿನ ವೈಜ್ಞಾನಿಕ ವರದಿಗಳೂ ಹೇಳುತ್ತಿವೆ. ಯಂತ್ರಗಳ ಮೇಲಿನ ವ್ಯಾಮೋಹ-ಗೋವಿನ ಮೇಲಿನ ಪ್ರೀತಿಯನ್ನು ಬದಲಾಯಿಸಿ ತಿರಸ್ಕಾರ ಭಾವನೆ ಮೂಡಿಸಿದರೂ ಗೋವುಗಳು ತಮ್ಮ ಹಾಲು, ಮೊಸರು, ಬೆಣ್ಣೆ, ತುಪ್ಪಗಳ ಜೊತೆಗೆ ಗೋಮಯ, ಗೋಮೂತ್ರಗಳ ಔಷಧೀಯ ಗುಣಗಳಿಂದ ಕೂಡಿದೆ. ಮಾನವನ ಆರೋಗ್ಯ ರಕ್ಷಣೆಯಲ್ಲೂ, ಆಯುರ್ವೇದದಲ್ಲೂ ಮಾನವನ ಆರೋಗ್ಯ ಕಾಪಾಡುವ ಕಾಮಧೇನುವಾಗಿ ಬದುಕಿಬಾಳುತ್ತಿದೆ.

### ೨. ಆಹಾರ ಸಂಬಂಧ

ಪ್ರಾಚೀನ ಕಾಲದಿಂದಲೂ ಮಾನವನ ಸಂಗಾತಿಯಾಗಿರುವ ಗೋವು ಮೊದಲು ಮಾನವರಿಗೆ ಆಹಾರವಾಗಿ, ತನ್ನ ಉಪಯುಕ್ತತೆಯ ಕಾರಣಕ್ಕಾಗಿ ದೈವತ್ವವನ್ನೇ ಪಡೆಯಿತು. ಸಸ್ಯಹಾರಿ ಹಾಗೂ ಮಾಂಸಾಹಾರಿ ಎಂಬ ಎರಡೂ ಆಹಾರ ಪದ್ಧತಿಯವರಿಗೂ ದನಗಳು ಉಪಯುಕ್ತ ಆಹಾರವನ್ನು ಒದಗಿಸುತ್ತಿವೆ. ಎ.ಬೋಸ್ ಅವರು ತಮ್ಮ **"ಸೋಷಿಯಲ್ ಅಂಡ್ ರೂರಲ್ ಎಕಾನಮಿ ಆಫ್ ನಾರ್ದನ್ ಇಂಡಿಯಾ"**ಎಂಬ ಕೃತಿಯಲ್ಲಿ ನೈತಿಕ ಹಾಗೂ ಆರ್ಥಿಕ ದೃಷ್ಟಿಯಿಂದ ದನಗಳ ಸಂರಕ್ಷಣೆಯನ್ನು ಕುರಿತು ವಿವರವಾಗಿ ತಿಳಿಸಿದ್ದಾರೆ. ಅಹಿಂಸಾ ತತ್ವ ಅಥವಾ ದೈವಿಕ ಭಾವನೆಯು ಪ್ರಾಣಿ ವಧೆಯನ್ನು ನಿಲ್ಲಿಸಲಾಗಲಿಲ್ಲ. ಬ್ರಾಹ್ಮಣರಲ್ಲಿ ಯಜ್ಞ ಯಾಗಾದಿಗಳಲ್ಲೂ, ಕ್ಷತ್ರಿಯರಲ್ಲಿ ಬೇಟೆಯ ಮೋಜಿನಲ್ಲೂ, ಉಳಿದ ಎಲ್ಲಾ ವರ್ಗಗಳ ಜನಸಾಮಾನ್ಯರಲ್ಲಿ ಆಹಾರ ಹಾಗೂ ತೊಗಲು, ಕೊಂಬು, ಗೊರಸುಗಳಿಂದ ಇತರ ಶ್ರೀಮಂತರ ದಿನನಿತ್ಯದ ವಸ್ತುಗಳ ತಯಾರಿಕೆಗೆಂದು ಪ್ರಾಣಿವಧೆ ನಡೆಯುತ್ತಿತ್ತು.[೮] ಆರಂಭ ಕಾಲದಲ್ಲಿ ದನಗಳು, ಜಾನುವಾರುಗಳನ್ನು, ಬಲಿಕೊಟ್ಟು ಸೇವಿಸುವ ಪದ್ಧತಿ ಇತ್ತು. ಪಾರಸಿಗಳ ಪವಿತ್ರ ಗ್ರಂಥ **"ಅವ್ಯಸ್ತ"**ದಲ್ಲಿ ಪ್ರಾಣಿ ಬಲಿಯ ಉಲ್ಲೇಖವಿದೆ. ಯಜ್ಞ, ಬಲಿ, ಎಂಬ ಪದಗಳು ಅವ್ಯಸ್ತದಲ್ಲಿ **"ಯಸ್ನ"** ಎಂದು ಬಳಸಲ್ಪಟ್ಟಿದೆ. ಇಲ್ಲಿ ೧೦೦ ಎತ್ತು, ಸಾವಿರ ಸಣ್ಣ ಜಾನುವಾರು, ೧೦೦ ಕುದುರೆ, ೧೦,೦೦೦ ಕುರಿ, ಮೇಕೆ, ೧೦೦ ಒಂಟೆಗಳ ಬಲಿಕೊಟ್ಟ ಉಲ್ಲೇಖವಿದೆ.[೯] ಬ್ರಾಹ್ಮಣರು ಮಾಂಸ ಸೇವನೆ ಮಾಡುತ್ತಾರೆ. ಆದರೆ ದುಡಿಮೆಗೆ ಬಳಸುವ ಪ್ರಾಣಿಗಳದಲ್ಲ, ಎಂದು **ಮೆಗಾಸ್ತಾನೀಸ್** ಹೇಳಿದ್ದಾನೆ.[೧೦] ಆದರೆ ಕಾಲಾನಂತರದಲ್ಲಿ ಮಾಂಸಾಹಾರವನ್ನು ತ್ಯಜಿಸುವ ಪ್ರಯತ್ನವನ್ನು ಕಾಣಬಹುದು.

ಯಜ್ಞಯಾಗಳಲ್ಲಿ ಅರ್ಪಿಸುತ್ತಿದ್ದ ಪ್ರಾಣಿ ಬಲಿಯನ್ನು ತಪ್ಪಿಸುವುದರಲ್ಲಿ ಬುದ್ಧನ ಉಪದೇಶವು ಕೆಲವು ಕಾಲದವರೆಗೆ ಪರಿಣಾಮ ಬೀರಿದೆ. ವೇದಗಳ ಆರಂಭ ಕಾಲದಲ್ಲಿ ಮೊದಲು ರಚನೆಯಾದ ಋಗ್ವೇದದಲ್ಲಿಯೇ ಯಜ್ಞಗಳ ಆಚರಣೆಯಲ್ಲಿ ಜಾನುವಾರುಗಳ ಬದಲಿಗೆ ಮತ್ತಿತರ ವಸ್ತುಗಳನ್ನೂ, ಗೋವುಗಳ ಬದಲಿಗೆ ಬೇರೆ ಪ್ರಾಣಿಗಳನ್ನು ಬಲಿ ಕೊಡುವ ಚಿಂತನೆಗಳು ಕಂಡುಬರುತ್ತವೆ. ಶ್ರದ್ಧೆಯಿಂದ ಅರ್ಪಿಸಲಾದ ಶ್ಲಾಘನೆ, ಒಂದು ಕಟ್ಟಿಗೆ, ಅಥವಾ ಬೇಯಿಸಿದ ಆಹಾರವೂ ಸಹ ವಿಧಿವಿಹಿತ ಯಜ್ಞಕ್ಕೆ ಸಮವಾಗುತ್ತವೆ. ಹೃದಯ ಪೂರ್ವಕವಾದ ಆವಾಹನೆಯೊಂದಿಗೆ ಅರ್ಪಿಸಲಾಗುವ ಆಹಾರದ ಆಹುತಿಯೂ ಸಹ ಗೂಳಿ, ಹಸು, ಎತ್ತುಗಳನ್ನು ಅರ್ಪಿಸಿದಂತೆಯೇ ಆಗುತ್ತದೆ.[೧೧] ಇವುಗಳನ್ನು ಗಮನಿಸಿದರೆ ಯಜ್ಞ ವಿಧಿ ದೈವಿಕ ಆಚರಣೆಯ ಸ್ವರೂಪ ಪಡೆಯುವ ಮೊದಲಿನಲ್ಲಿ ಸಾಮೂಹಿಕ ಬೇಟೆ ಹಾಗೂ ಸಮೂಹಿಕ ಆಹಾರ ಬೇಯಿಸುವಿಕೆಯ ಒಂದು ಹಂತವನ್ನು ಊಹಿಸಬಹುದು. ಈ ಹಂತದಲ್ಲಿ ಅಗ್ನಿಯನ್ನು ಹೊತ್ತಿಸುವ ಕಲೆ ಕಲಿತು ಬೆಂಕಿ ಯನ್ನು ಹಾಕಿ ಬೇಯಿಸುವವನಿಗೆ ಒಂದು ಪಾಲು ಕೊಡುವ ಆಚರಣೆಯು ನಡೆದಿರಲೇಬೇಕು. ಅನೇಕ ಜಾಗಗಳಲ್ಲಿ ಉತ್ಖನನ ಮಾಡುವ ಸಂದರ್ಭದಲ್ಲಿ ದೊರೆತಿರುವ ಪ್ರಾಣಿಗಳ ರಾಶಿ ರಾಶಿ ಮೂಳೆಗಳು, ಬೂದಿ ಗುಡ್ಡೆಗಳು ಈ ಮಾತನ್ನು ಊಹಿಸಲು ಅವಕಾಶವನ್ನು ನೀಡುತ್ತವೆ. ಸಾಮೂಹಿಕ ಬೇಟೆಯಲ್ಲಿ ಪಡೆದ ಪ್ರಾಣಿಯನ್ನು ಬೇಯಿಸಿ ಎಲ್ಲರಿಗೂ ಪಾಲು ಹಾಕಿದ ಮಾನವ ಆಹಾರ ಬೇಯುವಂತೆ ಮಾಡಿದ ಅಗ್ನಿಗೂ ಅಥವಾ ಬೇಯಿಸುವವನಿಗೂ ಒಂದು ಪಾಲನ್ನು ಹಾಕತೊಡಗಿದ್ದು, ಯಜ್ಞ ಕ್ರಿಯೆಗಳು ಶಾಸ್ತ್ರಬದ್ಧವಾಗಿದ್ದರ ಆರಂಬದ ಹೆಜ್ಜೆ ಎನ್ನಬಹುದು. ಭಾರತದ ಇತಿಹಾಸದಲ್ಲೇ ದನಗಳನ್ನು ಆಹಾರವಾಗಿ ಬಳಸುವ ಸಂಸ್ಕೃತಿಯು ಇಡೀ ಮಾನವ ಕುಲವನ್ನೇ ಎರೆಡು ಗುಂಪುಗಳಾಗಿ ವಿಭಾಗಿಸಿದೆ. ದನಗಳನ್ನು ಪೂಜ್ಯನೀಯ ದೃಷ್ಟಿಯಿಂದ ನೋಡುವುದು ಒಂದು ಗುಂಪಾದರೆ ಅದನ್ನು ಪ್ರಾಚೀನ ಕಾಲದಿಂದಲೂ ಮಾಂಸಾಹಾರವಾಗಿ ಸೇವಿಸುತ್ತಾ ಸಸ್ಯಾಹಾರಕ್ಕೆ ಬದಲಾಗಲು ಸಾಧ್ಯವಿಲ್ಲದೆ ದನಗಳನ್ನು ಕೇವಲ ಆಹಾರ ಪದ್ಧತಿಯ ಭಾಗವಾಗಿ ಮಾತ್ರ ಪರಿಗಣಿಸುವ ಮನುಷ್ಯರ ಇನ್ನೊಂದು ಗುಂಪು. ಈ ಆಹಾರದ ವಿಚಾರವೇ ಇಂದು ರಾಜಕೀಯ, ಧಾರ್ಮಿಕ, ಸಂಘರ್ಷದ ಸೂಕ್ಷ್ಮತೆಗಳನ್ನು ತನ್ನ ಒಡಲಿನಲ್ಲಿ ಉಳಿಸಿಕೊಂಡಿದೆ.

ಮಾನವನು ತನ್ನ ಅಲೆಮಾರಿ ಜೀವನವನ್ನು ಆಹಾರಕ್ಕಾಗಿಯೇ ನಡೆಸುತ್ತಿದ್ದ. ಆ ಅಲೆಮಾರಿತನದಲ್ಲಿ ತನ್ನ ಆಹಾರವನ್ನು ಗಳಿಸುವ ಸಲುವಾಗಿ ಅವನು ಒಂದೆಡೆಯಿಂದ ಇನ್ನೊಂದು ಕಡೆಗೆ ಋತುಮಾನಕ್ಕೆ ತಕ್ಕಂತೆ ಹೆಜ್ಜೆ ಹಾಕತೊಡಗುವುದು ಅನಿವಾರ್ಯವಾಗಿತ್ತು. ದಾರಿಯಲ್ಲಿ ಸಿಕ್ಕ ಪ್ರಾಣಿಗಳನ್ನು ಕೊಲ್ಲುತ್ತಾ, ಜೀವಂತವಾಗಿ ಸೆರೆ ಸಿಕ್ಕ ಪ್ರಾಣಿಗಳನ್ನು ಬಂಧಿಸಿ ತಮ್ಮ ಪ್ರಯಾಣಕ್ಕೆ ಬಳಸಿಕೊಂಡನು. ಆಹಾರ ಅನಿವಾರ್ಯವಾದಲ್ಲಿ ಜೊತೆಗಿದ್ದ ಪ್ರಾಣಿಗಳು ಆಹಾರ

ವಾಗುತ್ತಿದ್ದವು. ಹೀಗೆ ಮಾಂಸಾಹಾರದ ಅಪೇಕ್ಷೆಯಲ್ಲಿ ಅನಿರೀಕ್ಷಿತವಾಗಿ ಕಂಡುಕೊಂಡ ಲೋಹ, ಬೆಂಕಿಯ ಉಪಯೋಗಗಳು ಮಾನವನ ಬದುಕಿನಲ್ಲಿ ಕ್ರಾಂತಿಕಾರಕ ಬದಲಾವಣೆಗೆ ಕಾರಣವಾದವು. ಈ ಸುಧೀರ್ಘವಾದ ಜೀವನ ಪಯಣದಲ್ಲಿ ಮಾನವ ಬೀಜ ಹಾಕಿದರೆ ಬೆಳೆ ಬೆಳೆಯಬಹುದು ಎಂಬುದನ್ನು ಕಂಡುಕೊಂಡ. ಆತ ಹಾಕಿದ ಬೆಳೆಯನ್ನು ರಕ್ಷಿಸಿಕೊಳ್ಳಲು ಅಲ್ಲಿಯೇ ನಿಂತ, ಸ್ಥಿರ ಜೀವನವನ್ನು ಆರಂಭಿಸಿದ. ಮಾಂಸಾಹಾರವಾದ ಗೋವುಗಳು ಅವುಗಳ ಉತ್ಪನ್ನಗಳಾದ ಹಾಲು, ಮೊಸರು, ತುಪ್ಪ ದನಗಳಿಂದ ದೊರೆಯುತ್ತಿದ್ದರಿಂದ ಉಪಯುಕ್ತ ಪ್ರಾಣಿಗಳಾಗಿದ್ದವು. ಆದರೆ ಪಶುಪಾಲನೆಯನ್ನೇ ವೃತ್ತಿಯಾಗಿಸಿಕೊಂಡ ಆರ್ಯರ ಆಗಮನ ದನಗಳನ್ನು ನೋಡುವ ದೃಷ್ಟಿಯನ್ನೇ ಬದಲಾಯಿಸಿತು.

ಆರಂಭದಲ್ಲಿ ಇಲ್ಲಿನ ಮೂಲ ನಿವಾಸಿಗಳಾದ ದ್ರಾವಿಡರೊಂದಿಗೆ ನಿರಂತರ ಸಂಘರ್ಷ ಸಾಧಿಸುತ್ತಿದ್ದ ಆರ್ಯರು ವಲಸೆ ಬಂದಾಗ ಅವರೊಡನೆ ಇಂಡೋ ಯೂರೋಪಿಯನ್ನರ ಜೀವನ ಶೈಲಿಯ ಅನೇಕ ಅಂಶಗಳನ್ನು ತಂದಿದ್ದರು. ಗ್ರಾಮೀಣ ಆರ್ಥಿಕತೆಯಂತೆಯೇ ಆರ್ಯರು ತಮ್ಮೊಡನೆ ಪ್ರಾಣಿ ಅಥವಾ ಜಾನುವಾರು ಬಲಿಯ ಪದ್ಧತಿಯನ್ನು ವ್ಯವಸ್ಥಿತವಾಗಿ ಹೊರಗಿನಿಂದಲೇ ತಂದಿದ್ದರು. ಯಜ್ಞಗಳಿಗೆ ಪ್ರಾಣಿ ಬಲಿ ಕೊಡುವುದು ಅಂದಿನ ಒಂದು ಸಂಪ್ರದಾಯವಾಗಿತ್ತು. ಎಲ್ಲ ಸಾರ್ವಜನಿಕ ಯಜ್ಞಗಳಿಗೂ ಪೂರ್ವಭಾವಿಯಾಗಿ ನಡೆಸುತ್ತಿದ್ದ **"ಅಘ್ನ್ಯದೇಯ"** ಎಂಬ ಆಚರಣೆ ಹಸುಗಳನ್ನು ಕೊಲ್ಲುವುದರ ಅಗತ್ಯ ಪ್ರಕ್ರಿಯೆಯಾಗಿತ್ತು. ಮೊದಲು ಋಗ್ವೇದದಲ್ಲಿ, ನಂತರ ಬ್ರಾಹ್ಮಣಕದಲ್ಲಿ ಉಲ್ಲೇಖವಾಗಿರುವ, ವೇದಕಾಲದ ಅತ್ಯಂತ ಪ್ರಮುಖ ಯಜ್ಞವಾದ ಅಶ್ವಮೇಧ ಯಾಗದಲ್ಲಿ **೬೦೦** ಕ್ಕೂ ಹೆಚ್ಚು ಪ್ರಾಣಿಗಳನ್ನು(ಕರಡಿಯೂ ಸೇರಿದಂತೆ) ಹಾಗೂ ಪಕ್ಷಿಗಳನ್ನು ಕೊಂದು, **೨೧** ಗೊಡ್ಡು ಹಸುಗಳನ್ನು ಬಲಿ ನೀಡುವುದರೊಂದಿಗೆ ಸಮಾಪ್ತಿಗೊಳಿಸಲಾಯಿತು[೨] ಎಂದು ಉಲ್ಲೇಖಗಳಿವೆ. ತೈತ್ತರೀಯ ಬ್ರಾಹ್ಮಣದಲ್ಲಿ ಗೋವು ಸತ್ಯವಾಗಿಯೂ ಆಹಾರವೇ ಎಂದು ಬಣ್ಣಿಸುವ ಮೂಲಕ ಪಶು ಯಜ್ಞದ ಬಗ್ಗೆ ಸ್ಪಷ್ಟವಾದ ಉಲ್ಲೇಖವನ್ನು ಒದಗಿಸುತ್ತದೆ. ಐತ್ತರೇಯ ಬ್ರಾಹ್ಮಣದಲ್ಲಿ ಕುದುರೆ, ಹಸು, ಮೇಕೆ, ಹೆಣ್ಣುಕುರಿ, ಇವೆಲ್ಲವನ್ನೂ ಪಶುಯಜ್ಞಕ್ಕೆ ಸೂಕ್ತ ಸೃಷ್ಟಿಗಳೆಂದು ಬಣ್ಣಿಸಲಾಗಿದ್ದು ಅತಿಥಿಗಳ ಸತ್ಕಾರದಲ್ಲೂ ಗೋವುಗಳನ್ನು ಬಲಿಕೊಡುವ ಪದ್ಧತಿ ಇತ್ತು. ಋಗ್ವೇದದಲ್ಲಿ ಕಂಡು ಬರುವ ಆಚರಣೆಗೆ **'ಅತಿಥಿನಿರ್'**ಎಂದಿದ್ದಾರೆ. ಎಂದರೆ ಅತಿಥಿಗಾಗಿ ಸೂಕ್ತ ಗೋವು ಕೊಲ್ಲುವುದು ಎಂದರ್ಥ. ಐತ್ತರೇಯ ಬ್ರಾಹ್ಮಣದಲ್ಲಿ ಪ್ರಜೆಗಳು, ಆಳುವವನು, ಅತಿಥಿಯಾಗಿ ಆಗಮಿಸಿದರೆ ಅಥವಾ ಗೌರವಸ್ಥರು ಆಗಮಿಸಿದರೆ ಅವರನ್ನು ಸತ್ಕರಿಸಲು ಜನರು **ಗೂಳಿ** ಅಥವಾ **ಹಸುವನ್ನು** ಬಲಿ ನೀಡುತ್ತಾರೆ ಎಂದು ಉಲ್ಲೇಖಿಸಲಾಗಿದೆ. ಆನಂತರ ಉಪನಿಷತ್– ಬ್ರಾಹ್ಮಣಗಳಲ್ಲಿ ಬಳಕೆಯಾಗಿರುವ

**'ಮಧುಪರ್ಕ'** ಎಂದರೆ ಮೊಸರು, ಜೇನುತುಪ್ಪದೊಂದಿಗೆ ನೀಡಲಾಗುತ್ತಿದ್ದ ಸುಟ್ಟ ಹಸುವಿನ ಮಾಂಸ. ವಿವಾಹ ಸಂದರ್ಭದಲ್ಲಿ ಅತಿಥಿಗಳ ಸತ್ಕಾರ್ಯಕ್ಕಾಗಿ ಹಲವು ಬಾರಿ ಗೋವಧೆ ಮಾಡುವ ಸಂದರ್ಭಗಳಲ್ಲಿ ಮಧುಪರ್ಕವನ್ನು ನೆರವೇರಿಸಲಾಗುತ್ತದೆ. ಆದ್ದರಿಂದ ಪಾಣಿನಿ ಅತಿಥಿಯನ್ನು **ಗೋಘ್ನ** ಎಂದೇ ಕರೆಯುತ್ತಾನೆ.[೧೩]

ಅಥರ್ವಣ ವೇದದಲ್ಲಿ ಉಲ್ಲೇಖಿಸಲಾಗಿರುವ ಶ್ಲೋಕಗಳಲ್ಲಿ ಗೋಹತ್ಯಾ ವಿರೋಧಿ ಧ್ವನಿಯನ್ನು ಗುರುತಿಸಬಹುದು. ಬ್ರಾಹ್ಮಣರಿಗೆ ನೀಡುತ್ತಿದ್ದ ಯಜ್ಞ ಶುಲ್ಕ ಅರ್ಥಾತ್ ದಕ್ಷಿಣೆಯ ಒಂದು ಆದರ್ಶ ಮಾದರಿಯಾಗಿ ಗೋವುಗಳು ಇಲ್ಲಿ ರೂಪುಗೊಂಡವು. ವೇದಕಾಲದ ಬ್ರಾಹ್ಮಣರಿಗೆ ಈ ರೀತಿಯ ದಕ್ಷಿಣೆಯಲ್ಲಿ (ಹಾಲು ನೀಡುವ ಗೋವುಗಳಲ್ಲಿ) ಅಪಾರ ಆಸಕ್ತಿ ಇದ್ದುದ್ದನ್ನು ವೇದಗಳು ಉಲ್ಲೇಖಿಸಿವೆ.**(ದಾನದ ಹಸುವಿನ ಲಕ್ಷಣ ಸೇರಿಸಬೇಕು)** ಮತ್ತೊಂದೆಡೆ ಬ್ರಾಹ್ಮಣರಿಗೆ ಗೋವಿನ ರೂಪದಲ್ಲಿ ನೀಡಲಾಗುವ ದಕ್ಷಿಣೆಯನ್ನು ಯಾರಾದರೂ ತಡೆಹಿಡಿದರೆ, ಗಾಯಗೊಳಿಸಿದರೆ, ಅಥವಾ ಗೋವಿನ ಪ್ರಯೋಜನವನ್ನು ಯಾರಾದರೂ ದುರುಪಯೋಗಪಡಿಸಿಕೊಂಡರೆ ಅಂಥವರು ಗಂಭೀರ ಪರಿಣಾಮ ಎದುರಿಸಬೇಕಾಗುತ್ತದೆ ಎಂದು ಹೇಳಲಾಗಿದೆ. ಹಸುಗಳು ಹಾಲು ನೀಡುವ ಮೂಲಕ ಹಾಲಿನ ಉತ್ಪನ್ನಗಳಿಗೂ ಎಡೆಮಾಡಿಕೊಡುತ್ತವೆ. ಈ ಉತ್ಪನ್ನಗಳು ವೇದ ಕಾಲದ ಜನರಿಗೆ ಆಹಾರವಾಗುವಂತೆ ಯಜ್ಞಗಳಿಗೆ ಅರ್ಪಿಸುವ ಹವಿಸ್ಸಾಗಿಯೂ ಉಪಯುಕ್ತವಾಗಿವೆ. ತೈತ್ತರೀಯ ಬ್ರಾಹ್ಮಣದಲ್ಲಿ ಗೋವು ಸತ್ಯವಾಗಿಯೂ ಆಹಾರವೇ **"ಅಥೋ ಅನ್ನಂ ವೈಗೋಃ"** ಜಾನುವಾರುಗಳನ್ನು ಕೊಲ್ಲುವುದು, ಮಾಂಸಾಹಾರ ಸೇವಿಸುವುದು, ವೇದಕಾಲದ ಭಾರತೀಯರಲ್ಲಿ ಸಾಮಾನ್ಯ ಪದ್ಧತಿಯಾಗಿತ್ತು. ಯಜ್ಞಕ್ಕೂ ಪ್ರಾಣಿ ಬಲಿಕೊಡುವ ಬದಲು ಆಹಾರ ಧಾನ್ಯಗಳನ್ನು ಅರ್ಪಿಸುವ ಕ್ರಿಯೆಗಳೂ ಅಂದಿನಿಂದಲೇ ಬದಲಾದ ನಿಯಮಗಳ ಅಥವಾ ಬದಲಾದ ಬದುಕಿಗೆ ಸಾಕ್ಷಿಯನ್ನೊದಗಿಸುತ್ತವೆ. ಆನಂತರ ಉಗಮಗೊಂಡ ಅನೇಕ ಧರ್ಮಗಳು ಅಹಿಂಸಾಧರ್ಮವನ್ನು ಪ್ರಚಾರಗೊಳಿಸಿದ್ದರಿಂದ ಅಂದಿನ ಪ್ರಬಲ ಧರ್ಮಗಳೂ ಪ್ರಾಣಿ ಬಲಿಯಿಂದ ಹಾಗೂ ಮಾಂಸಾಹಾರದಿಂದ ದೂರವಾಗತೊಡಗಿದವು. ಅತಿ ಪ್ರಾಚೀನ ಕಾಲದಲ್ಲಿ ಮನುಷ್ಯನು ತನಗಿಂತ ದುರ್ಬಲ ಮನುಷ್ಯರನ್ನೇ ತಿನ್ನುತ್ತಿದ್ದನು. ದೇವರಿಗೆ ನರಬಲಿ ಕೊಡುವ ಪದ್ಧತಿಯೂ ರೂಢಿಯಲ್ಲಿತ್ತು ಎಂಬುದನ್ನು ರಾಜೇಂದ್ರ ಲಾಲ್ ಉಲ್ಲೇಖಿಸಿದ್ದಾರೆ. ಕಾಲಾ ನಂತರ ನರಮಾಂಸ ಭಕ್ಷಣೆಯಿಂದ ವಿಮುಖನಾದ ಮಾನವ ಪಶು ಪಕ್ಷಿಗಳನ್ನು, ಆಕಳುಗಳನ್ನು ಆಹಾರಕ್ಕಾಗಿ ಕೊಲ್ಲುತ್ತಿದ್ದರು. ಗೋಮಾಂಸ ತಿನ್ನುವುದು ಸಹಜವಾಗಿತ್ತು. ಆರ್ಯರ ಆಗಮನ, ಅವರ ಋಗ್ವೇದ ರಚನೆಯ ವೇಳೆಗೆ ಗೋವುಗಳನ್ನು ಆಹಾರಕ್ಕಾಗಿ ಬಳಸಬಾರದು ಎಂಬ ಸಾಲುಗಳು ಸೇರಿಕೊಂಡವು. ಗೋವಿನ ಮಹಿಮೆಯನ್ನು ಬಣ್ಣಿಸುವ ಋಚೆಗಳನ್ನು ನೀವು ಋಗ್ವೇದದಲ್ಲಿ ಕಾಣಬಹುದು.

**"ಮಾತಾ ರುದ್ರಾಣಾಂ ದುಹಿತಾವಸೂನಾಂ**

**ಸ್ವಸಾಹಿತ್ಯಾನಾಂ ಅಮೃತಶ್ಯನಾಬಿಃ"**

ಗೋವು ರುದ್ರನ ತಾಯಿ, ವಸುದೇವತೆಯ ಮಗಳು, ಆದಿತ್ಯನ ತಂಗಿ, ಅಮೃತದ ಝರಿ ಎಂದು ಋಗ್ವೇದದಲ್ಲಿ ಬಣ್ಣಿಸಲಾಗಿದೆ. ಒಕ್ಕಲುತನಕ್ಕೆ ಜೀವಾಳವಾಗಿದ್ದ ಈ ದೇಶದಲ್ಲಿ ಗೋವನ್ನು ಕೊಂದರೆ ಹೇಗೆ? ಎಂಬ ಭಾವನೆ ಶ್ರೀ ಕೃಷ್ಣನ ಕಾಲಕ್ಕೆ ಹೆಚ್ಚು ಜನಪ್ರಿಯಗೊಂಡಿರಲೇಬೇಕು. ನಂದ **'ನಂದಗ್ರಾಮ'** ಅಥವಾ ಗೋಕುಲದ ಮಕ್ಕಳ ಕ್ರಿಯಾಶೀಲತೆಗೆ, ಬಾಲಲೀಲೆಗಳಿಗೆ, ಅಲ್ಲಿನ ವೈಭವಕ್ಕೆ ಗೋವುಗಳೇ ಕಾರಣವಾಗಿದ್ದನ್ನು ಗಮನಿಸಬಹುದು. ಉಪನಿಷತ್ತಿನಲ್ಲೂ ಗೋಮಾಂಸದ ರುಚಿಯನ್ನು ಬಣ್ಣಿಸುತ್ತಾನೆ. ಕೃಷಿಗೆ ತೊಂದರೆ ಕೊಡುವ ಜಿಂಕೆ ಹಾಗೂ ಇತರೆ ಪ್ರಾಣಿಗಳನ್ನು ಕೊಂದು ತಿನ್ನುವುದು ಒಂದು ರಾಜಾಜ್ಞೆಯಂತೆ ಬೆಳೆಯಿತು. ಮಾಂಸವನ್ನು ದಿನ ದಿನವೂ ತಿನ್ನಬೇಡಿರಿ, ಆದರೆ ಯಜ್ಞ ಕಾಲಕ್ಕೆ ಅಡ್ಡಿಯಿಲ್ಲ. ಎಂಬ ಮಾತು ಚಲಾವಣೆಗೆ ತರುತ್ತಿದ್ದಂತೆ, ಯಜ್ಞದಲ್ಲಿ ಪಶು ಹತ್ಯ ಮಾಡಿ ಮಾಂಸವನ್ನು ಗ್ರಹಿಸಬಹುದು ಎಂಬ ಅನುಕೂಲತೆ ಸಿಗುತ್ತಿದ್ದಂತೆ, ಮಾಂಸದ ಆಸೆಯಿಂದ ದಿನ ದಿನವೂ ಯಜ್ಞ ನಡೆಯಲಾರಂಭಿಸಿದವು. ಒಂದೇ ಸಮನೆ ೧೨ ವರ್ಷಗಳು ನಡೆಯುವ ಯಜ್ಞವನ್ನು ಮಾಡಲಾರಂಭಿಸಿದರು. ದೇವರ ಹೆಸರಿನಲ್ಲಿ ಹಿಂಸೆಗಳು ನಿರಂತರವಾದವು. ವೇದ ಕಾಲದ ಋಷಿಗಳು ಶ್ರೀಕೃಷ್ಣ, ಭಗವಾನ್ ಬುದ್ಧ, ಮಹಾವೀರ, ಇವರೆಲ್ಲರ ಭೋಧನೆಗಳು ಅಹಿಂಸೆಯ ಹಿರಿಮೆಯನ್ನು ಸಾರಿದವು. ಜೈನ, ಬೌದ್ಧ, ಧರ್ಮದ ಪ್ರಭಾವಗಳು ಪ್ರಾಣಿ ಬಲಿ ಪದ್ಧತಿಯನ್ನು ವಿರೋಧಿಸಿದವು. ಹಿಂಸೆಯನ್ನು ಪ್ರಭಲವಾಗಿ ವಿರೋಧಿಸಿದ್ದರಲ್ಲಿ ಜೈನರು ಹೆಚ್ಚು ಕಟ್ಟು ನಿಟ್ಟಿನ ನಿಯಮಗಳನ್ನು ಆಚರಣೆಗೆ ತಂದರು.

ಮಧ್ಯಕಾಲೀನ ಯುಗದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯ ವಿಸ್ತರಣೆ ಆದದ್ದು, ವ್ಯಾಪಾರ ಕ್ಷೇತ್ರ ಕ್ಷೀಣಿಸಿದ್ದು, ಕೃಷಿ ಹಾಗೂ ಪಶು ಸಂಗೋಪನೆ ಪ್ರಾಮುಖ್ಯತೆ ಗಳಿಸಲು ಕಾರಣವಾಯಿತು. ವೈದಿಕ ಧರ್ಮದ ಸ್ಥಾನವನ್ನು ಪುರಾಣ ಧರ್ಮಗಳು ಆವರಿಸತೊಡಗಿದ್ದರಿಂದ ಬಳುವಳಿ ನೀಡುವ, ಕಾಣಿಕೆ ನೀಡುವ ಪದ್ಧತಿಗಳು ವೃದ್ಧಿಸಿ, ಜಾನುವಾರುಗಳ ಹತ್ಯೆಯನ್ನು ನಿರ್ಬಂಧಿಸುವುದು ಕಾನೂನು ಪಾಲಕರಿಗೆ ಅನಿವಾರ್ಯವಾಯಿತು. ಈ ಹಂತವನ್ನೇ ಪ್ರಾರಂಭಿಕ ಪುರಾಣಗಳಲ್ಲಿ ಕಲಿಯುಗ ಎಂಬ ಕಲ್ಪನೆಯಲ್ಲಿ ವಿಶ್ಲೇಷಿಸಲಾಗಿದೆ. ಕಾನೂನು ಗ್ರಂಥಗಳು ಮತ್ತು ನೀತಿ ಸಂಹಿತೆಗಳು ಹಿಂದಿನ ಕಾಲದ ಸಾಮಾಜಿಕ ರೂಡಿ, ಆಚರಣೆ, ಸಂಪ್ರದಾಯ, ಪದ್ಧತಿಗಳನ್ನು ಮಾರ್ಪಡಿಸಿದ್ದೇ ಅಲ್ಲದೆ ಆಹಾರ ಪದ್ಧತಿಯನ್ನು ಪರಾಮರ್ಶಿಸಿದವು. ಈ ಹಂತದಲ್ಲೇ ಜಾನುವಾರುಗಳ ಹತ್ಯೆಯನ್ನು ವ್ಯರ್ಜ್ಯವೆಂದು ಪರಿಗಣಿಸಲಾಯಿತು. ಧರ್ಮಗ್ರಂಥಗಳಲ್ಲಿ **"ಕಲಿವ್ಯರ್ಜ್ಯ"** ಎಂದೇ ಗುರುತಿಸಲಾಗುವ ಈ ನಿಲುವು ಗೋವುಗಳಿಗೆ ವಿಶಿಷ್ಟ ಸ್ಥಾನವನ್ನು ತಂದುಕೊಟ್ಟಿತು.

ಬ್ರಾಹ್ಮಣರ ಭೋಜನದಲ್ಲಿ ಗೋಮಾಂಸವನ್ನು ನಿಷೇಧಿಸಲಾಯಿತು. ವ್ಯಾಸಸ್ಮೃತಿಯಲ್ಲಿ ಗೋ ಹಂತಕರನ್ನು ಅಸ್ಪೃಷ್ಯನೆಂದೂ, ಆತನೊಡನೆ ಮಾತನಾಡುವುದು ಪಾಪ ಕೃತ್ಯವೆಂದೂ ಸ್ಪಷ್ಟವಾಗಿ ಹೇಳಲಾಗಿದೆ. ಹಾಗಾಗಿ ಮಧ್ಯಕಾಲೀನ ಯುಗದಿಂದ ಗೋಮಾಂಸ ಸೇವನೆಯನ್ನು ಅಸ್ಪೃಷ್ಯತೆಯ ಕುರುಹಾಗಿ ಪರಿಗಣಿಸುವ ಒಂದು ಪರಂಪರೆಗೂ ನಾಂದಿಹಾಡಲಾಯಿತು.[೧೪]

ಗೋವನ್ನು ಆಹಾರವಾಗಿ ಆರಂಭದಲ್ಲಿ ಬಳಸುತ್ತಿದ್ದವರು, ವ್ಯವಸಾಯ ಪ್ರಾಮುಖ್ಯತೆ ಪಡೆದಂತೆ **'ವೃಷಭಕ್ಕೂ'** ಹೆಚ್ಚಿನ ಗೌರವ ಸಿಗಲಾರಂಭಿಸಿತು. ಕೃಷಿ ಚಟುವಟಿಕೆಯ ಮೂಲಕ ಆಹಾರ(ಧಾನ್ಯಗಳನ್ನು)ಬೆಳೆಯಲು ಎತ್ತು (ವೃಷಭ) ಉಪಯುಕ್ತವಾಗಿದೆ. ಹಸುಗಳು ನೀಡುವ ಹಾಲಿನಿಂದ ಮಾಡಿದ ಉತ್ಪನ್ನಗಳು ಶ್ರೇಷ್ಠವೆಂದು ಸಮಾಜ ಭಾವಿಸತೊಡಗಿತು. ಆಹಾರ ತಯಾರಿಕೆಯಲ್ಲಿ ಹಾಗೂ ಆಹಾರದ ರುಚಿಯನ್ನು ವೃದ್ಧಿಸಲು, ಜೀರ್ಣ ಶಕ್ತಿಯನ್ನು ವೃದ್ಧಿಸಲು, ಆರೋಗ್ಯ ವೃದ್ಧಿಸಲು ಗೋವುಗಳ ಉತ್ಪನ್ನಗಳು ಉಪಯುಕ್ತವಾದವು. ಈ ಭಾವನೆಯು ಅಂತಿಮವಾಗಿ ಗೋವುಗಳ ಬಲಿಕೊಡುವಿಕೆಯ ನಿಷೇಧದ ಆಚರಣೆಗೂ ಎಡೆಮಾಡಿ ಕೊಟ್ಟಿತು.ಹಾಗೂ ಗೋವುಗಳ ಸರಿಯಾದ ಬಳಕೆ ಎಂದರೆ ದಾನನೀಡುವುದಾಗಿದೆ ಎಂಬ ಭಾವನೆಯನ್ನು ಬೆಳಸ ಲಾಯಿತು. ಇದು ಗೋವುಗಳ ಬಲಿಕೊಡುವಿಕೆಯು ಕ್ಷಿಣಿಸತೊಡಗಿದ ಕಾಲವನ್ನು ಸೂಚಿಸುತ್ತದೆ.[೧೫] **ಅಮೃತಂ ಕ್ಷೀರ ಭೋಜನಂ'** ಎಂಬ ಮಾತನ್ನು ಗಮನಿಸಿದಾಗ ಹಾಲು ಅಮೃತದಮಹತ್ವವನ್ನು ಸಾರುತ್ತದೆ. ಹಾಲು ಅತ್ಯುತ್ತಮ ಸಂತುಲಿತ ಸಾತ್ವಿಕ ಆಹಾರ. ತಾಯಿಯ ಎದೆ ಹಾಲಿನ ನಂತರದ ಸ್ಥಾನವನ್ನು ಈ ಹಸುಗಳ ಹಾಲು ಪಡೆದುಕೊಂಡಿದೆ. ಜೀರ್ಣಕ್ರಿಯೆ, ಮೂಳೆಗಳು ಗಟ್ಟಿಗೊಳ್ಳಲು, ಶರೀರ ಬೆಳವಣಿಗೆಗೆ ಹಾಲು ಅಗತ್ಯವಾಗಿ ಬಳಕೆಯಾಗುತ್ತಿದೆ. ಹಾಲನ್ನು ಕಾಸಿ ತೆಗೆದ ಕೆನೆ ಹಾಲಿನ ಅನೇಕ ಉತ್ಪನ್ನಗಳನ್ನು ತಯಾರಿಸಲು ಕಾರಣವಾಗುತ್ತದೆ. ಕೆನೆಯನ್ನು ಸಂಗ್ರಹಿಸಿ ಅದನ್ನು ಕಡೆದರೆ ಮಜ್ಜಿಗೆ ಹಾಗೂ ಬೆಣ್ಣೆ ಲಭ್ಯವಾಗುತ್ತದೆ. ಮಜ್ಜಿಗೆ ಜೀರ್ಣಕ್ರಿಯೆಗೆ ಅತ್ಯಂತ ಉಪಯುಕ್ತ ಪೇಯ, ಹಾಗೆ ಬೆಣ್ಣೆಯನ್ನು ನೇರವಾಗಿ ಆಹಾರಗಳ ಮೇಲೆ ಕ್ರೀಮ್ ಆಗಿ ಬಳಸುತ್ತಾರೆ. ಆದರೆ ಇದನ್ನೇ ಹದವರಿತು ಕಾಸುವುದರಿಂದ ಬಹು ಕಾಲ ಇಡಬಹುದಾದ ತುಪ್ಪವಾಗುತ್ತದೆ. ಪ್ರಾಚೀನ ಭಾರತೀಯರು ಎಣ್ಣೆಗಿಂತಲೂ ಹೆಚ್ಚು ತುಪ್ಪವನ್ನು ಬಳಸುತ್ತಿದ್ದರು. ಜಂಬೂರಿನ ಲಲಿತಮ್ಮ ಹೇಳುವಂತೆ 'ಇತ್ತೀಚಿನವರೆಗೂ ಸ್ವಾತಂತ್ರಾ ನಂತರವೂ ಕೂಡ ಎಣ್ಣಿಗಾಗಿ ಹಳ್ಳಿಹಳ್ಳಿಗಳಲ್ಲಿ ಒಂದಕ್ಕೆ ಎರಡರಷ್ಟು ತುಪ್ಪವನ್ನು ಪಡೆಯುತ್ತಿದ್ದರು. ಅಂದರೆ ಒಂದು ಲೋಟ ಎಣ್ಣೆ ಪಡೆಯಲು ಎರಡು ಲೋಟ ತುಪ್ಪವನ್ನು ಕೊಡಬೇಕಾಗಿತ್ತು.' ಸೇಂಗಾ ಎಣ್ಣೆಗಿಂತಲೂ ತುಪ್ಪ ಅಗ್ಗವಾಗಿತ್ತು. ಹಾಗೂ ಮುಸರಿ ಬಾನಿಯಲ್ಲಿ ತುಪ್ಪ ತೇಲುತ್ತಿತ್ತು, ಎಂಬುದು ಗ್ರಾಮೀಣ ಭಾಗದಲ್ಲಿ ಪಶು ಸಂಪತ್ತನ್ನು ಸೂಚಿಸುತ್ತದೆ. ಎಂಬ ಅಂಶ ಇತ್ತೀಚಿನವರೆಗೂ ಸತ್ಯವಾಗಿದೆ.

ಮನೆ ಮನೆಯಲ್ಲೂ ಕರಾವು ಇದ್ದುದರಿಂದ ತುಪ್ಪ ಎಲ್ಲ ಜನರಿಗೂ ದೊರೆಯುತ್ತಿತ್ತು. ಹಾಲನ್ನು ಕಾಸುತ್ತಾ ಅದರೊಳಗಿನ ನೀರಿನ ಅಂಶವನ್ನು ತೆಗೆದು ಮಾಡುವ **'ಕೋವಾ'** ಇಂದು ಅನೇಕ ಸಿಹಿ ಪದಾರ್ಥಗಳ ತಯಾರಿಕೆಗೆ ಅಗತ್ಯ ಸಾಮಗ್ರಿಗಳಲ್ಲೊಂದಾಗಿದೆ.ಅದರಲ್ಲೂ ತುಪ್ಪವನ್ನು ಅಯುರ್ವೇದ ಔಷಧಿಯ ಜೊತೆಗೆ ಅಗತ್ಯವಾಗಿ ಬಳಸುತ್ತಾರೆ. ಒಂದು ವರ್ಷಕ್ಕಿಂತ ಮೇಲ್ಪಟ್ಟ ತುಪ್ಪವನ್ನು ಸೇವಿಸಬಾರದು. ಅದನ್ನು ಔಷಧಿಯ ಬಳಕೆಯಲ್ಲಿ ಮಾತ್ರ ಉಪಯೋಗಿಸಬೇಕು. ಏಕೆಂದರೆ ಒಂದು ವರ್ಷ ಮೇಲ್ಪಟ್ಟ ತುಪ್ಪವು ಔಷಧಿಯ ಗುಣಗಳಿಂದ ಕೂಡಿರುತ್ತದೆ. ತುಪ್ಪವು ಹಳೆಯದಾದಷ್ಟು ಅದರ ಔಷಧೀಯ ಗುಣ ಹೆಚ್ಚಿರುತ್ತದೆ. ಇದನ್ನು ಹಳ್ಳಿಗಳಲ್ಲಿ ಮುಗ್ಲುತುಪ್ಪ ಎನ್ನುವರು. ೧೦ ವರ್ಷ ಹಳೆಯ ತುಪ್ಪವನ್ನು **'ಜೀರ್ಣಾ'** ಅಥವಾ ಪುರಾನ ಘೃತ, ಉಗ್ರ ಗ್ರಂದ, ಲಾಕ್ಷಾರ ಎನ್ನವರು.೧೦೦-೧೦೦೦ ವರ್ಷದ ಹಳೆಯ ತುಪ್ಪವನ್ನು **'ಕೌಂಭ'** ಅಥವಾ **ಕೌಂಭ ಸರ್ಪ** ಎಂದೂ, ಅದಕ್ಕಿಂತ ಹಳೆಯ ತುಪ್ಪವನ್ನು **'ಮಹಾಘೃತ'** ಅಥವಾ **ಮಹಾಸರ್ಪಿ** ಎಂದು ಕರೆಯುತ್ತಾರೆ. ಅದರಲ್ಲೂ ದೇಶಿ ಗೋವಿನ ತುಪ್ಪವನ್ನು ಆಯುರ್ವೇದದಲ್ಲಿ **'ಬಲಆಯು'** ಎಂದು ಹೇಳಲಾಗಿದೆ.[೧೬] ಮೊಸರನ್ನು ನೇರವಾಗಿ ಬಳಸುವ ಮೂಲಕ ಮಾನವ ದೇಹದ ಉಷ್ಣವನ್ನು ನಿಯಂತ್ರಣದಲ್ಲಿ ಇಡಲು ಸಾಧ್ಯವಾಗುತ್ತದೆ. ಹಾಗೂ ಜೀರ್ಣ ಶಕ್ತಿಯನ್ನು ವೃದ್ಧಿಸಲು ಇದು ಸಹಕಾರಿಯಾಗಿದೆ. ಕಾಯಿಸಿದ ಹಾಲಿನಿಂದ ಮಾಡಿದ ಮೊಸರೇ ಶ್ರೇಷ್ಠವಾಗಿರುತ್ತದೆ. ಮೊಸರು ರುಚಿ ಮತ್ತು ಹಸಿವನ್ನು ಹೆಚ್ಚಿಸುವುದಲ್ಲದೆ, ಹೃದಯಕ್ಕೆ ಶಕ್ತಿ ತುಂಬುವ ಮತ್ತು ವಾಯುನಾಶಕವಾಗಿ ಕೆಲಸ ಮಾಡುತ್ತದೆ, ಎಂದು ಆಯುರ್ವೇಧ ಗ್ರಂಥವಾದ ಭಾವಪ್ರಕಾಶ ಕೃತಿ ವಿವರಿಸುತ್ತದೆ.[೧೭] ಅತ್ಯಂತ ಬೇಗ ಶಕ್ತಿ ಒದಗಿಸುವಲ್ಲಿ ಹಾಲು ಮತ್ತು ಹಾಲಿನ ಉತ್ಪನ್ನಗಳು ಹೆಸರುಗಳಿಸಿವೆ. ಈ ಕಾರಣದಿಂದ ಮಕ್ಕಳಿಗೆ ಹಾಲು ಪ್ರಧಾನ ಆಹಾರವಾಗಿ ರೂಪಗೊಂಡಿದೆ.

ಗೋವಿನ ಪಾಲನೆಯೇ ಒಂದು ಸಂಸ್ಕೃತಿಯಾಗಿ ಪಶುಪಾಲನೆಯನ್ನೇ ವೃತ್ತಿ ಮಾಡಿಕೊಂಡ ಅನೇಕ ಗೌಳಿ ಅಥವಾ ಗೊಲ್ಲ ಜನಾಂಗಗಳನ್ನು ನಾವು ಇಂದಿಗೂ ಕಾಣುತ್ತೇವೆ. ಅವರು ಹಾಲು ಮತ್ತು ಹಾಲಿನ ಉತ್ಪನ್ನಗಳ ಮಾರಾಟ ಅಥವಾ ವಿನಿಮಯ ಪದ್ಧತಿಯಲ್ಲಿಯೇ ಜೀವನ ನಡೆಸುತ್ತಿದ್ದಾರೆ. ಇಂದಿಗೂ ಆಹಾರದಲ್ಲಿ ಖಾರ, ಹುಳಿ ಅಥವಾ ಆಹಾರದ ರುಚಿಯಲ್ಲಿ ವ್ಯತ್ಯಾಸವಾದರೆ ಹಾಲು, ಮೊಸರು, ತುಪ್ಪ ಆ ಆಹಾರದ ನ್ಯೂನತೆಯನ್ನು ತುಂಬಿ ಕೊಡಲು ಬೇಕೇ ಬೇಕು. ಊಟಕ್ಕೆ ಹಾಲು, ಮೊಸರು ಇರಲೇಬೇಕು ಎಂಬುದು ಸಂಸ್ಕೃತಿಯಾಗಿ ರೂಪುಗೊಂಡಿದೆ. "ಮಕ್ಕಳಿರೋ ಮನೆಯಲ್ಲಿ ಹಾಲು, ಹೈನು ಇಲ್ಲಂದ್ರೆ ಏನೂ ಚಂದ" ಎಂದು ಗ್ರಾಮೀಣ ಕೃಷಿಕರು ನಂಬಿದ್ದಾರೆ. ಮನೆಯ ಮಕ್ಕಳ ಶಾರೀರಿಕ ಹಾಗೂ ಬೌದ್ಧಿಕ ಬೆಳವಣಿಗೆಗೆ ಕ್ಯಾಲ್ಸಿಯಂ ಕೊರತೆ ನೀಗಿಸಲು, ದನಕರುಗಳನ್ನು ಸಾಕುವ ಪದ್ಧತಿಯನ್ನು ರೂಪಿಸಿಕೊಂಡು ಶತ

ಶತಮಾನಗಳೇ ಕಳೆದಿವೆ. ಮಜ್ಜಿಗೆ ಊಟದಲ್ಲಿ ಅಗತ್ಯ ಪದಾರ್ಥ ಎಂಬುದನ್ನು ತ್ರಿಪದಿ ಬ್ರಹ್ಮ ಸರ್ವಜ್ಞ ಕವಿ ಈ ರೀತಿ ಹೇಳಿದ್ದಾನೆ.

**ಅಜ್ಜಿ ಇಲ್ಲದ ಮನೆಯು, ಮಜ್ಜೀಗಿಲ್ಲದ ಊಟ**
**ಕೊಜ್ಜಿಯರಿಲ್ಲದರಮನೆಯು, ಇವು ಮೂರೂ**
**ಲಜ್ಜೆಗೇಡೆಂದ ಸರ್ವಜ್ಞ।**
**'ಮಜ್ಜೀಗೆ ಊಟಕೆ ಲೇಸು**
**ಮಜ್ಜನಕೆ ಮಡಿಲೇಸು/ಕಜ್ಜಾಯ ತುಪ್ಪ ಉಣಲೇಸು**
**ಮನೆಗೊಬ್ಬ ಅಜ್ಜಿ ಲೇಸೆಂದ ಸರ್ವಜ್ಞ'**

ಮಾಂಸಾಹಾರದ ಆಶಯದ ಬಗ್ಗೆ ಸರ್ವಜ್ಞ ಅಂದಿನ ಕಾಲದ ಜನರ ಮನೋಭಾವವನ್ನು ವ್ಯಂಗ್ಯಮಾಡುತ್ತಾನೆ.

**"ಬಾಡ ತಿಂಬಾತಂಗೆ । ಆಡೇನು ಆವೇನು?**
**ಕೋಡಗವೇನು? ನರಿಯೇನು? ಮನೆಯಲಿ**
**ದ್ದಡೆ ನಾಯಿಯೇನು? ಸರ್ವಜ್ಞ"**

ಅಂದರೆ ಮಾಂಸದ ಆಶಯ ಹೊತ್ತ ಮಾನವನಿಗೆ ಅಡು-ಹಸು ಯಾವುದಾದರೂ ಸರಿಯೆ ಎನ್ನುವ ಮೂಲಕ ಮಾಂಸಾಹಾರಿಗಳ ಮನೋಭಾವನೆಯನ್ನು ವ್ಯಂಗ್ಯವಾಗಿ ಟೀಕಿಸಿದ್ದಾನೆ. ಅಲ್ಲದೆ ಜಗತ್ತಿಗೆ ತುರುಕರುವೇ ದೈವ ಎಂಬ ಸಾಲುಗಳನ್ನು ಸರ್ವಜ್ಞ ಅರ್ಥಪೂರ್ಣವಾಗಿ ತ್ರಿಪದಿಯಲ್ಲಿ ಜೋಡಿಸಿದ್ದಾನೆ. ಹಾಲಿಲ್ಲದ ಮನೆ ಅನೇಕ ತೊಂದರೆಗೆ ಒಳಗಾಗುತ್ತದೆ. ಆ ಮನೆಯ ಆರೋಗ್ಯ ಕದಡಿ ನೆಮ್ಮದಿ ಕೆಡುತ್ತದೆ ಎಂದು ತಿಳಿಸಿದ್ದಾರೆ.

**ತುರುಕರುವು ಇರದೂರು । ನರಕ ಭಾಜನಮಕ್ಕು ।**
**ತುರುಕರುಂಟಾದರುಣಲುಂಟು, ಜಗಕೆಲ್ಲ**
**ತುರುಕರುವೆ ದೈವ ಸರ್ವಜ್ಞ**

ಇಂಥಹ ಅಭಿಪ್ರಾಯಗಳನ್ನು ಗಮನಿಸಿದಾಗ ಗೋವು ಆಹಾರವಾಗಿ ಬಳಕೆಯಾದರೂ ಹಲವು ಧರ್ಮಗಳ ಉಗಮಕ್ಕೆ ಕಾರಣವಾದ ಭಾರತದ ಸಂಸ್ಕೃತಿಯಲ್ಲಿ **'ಅಹಿಂಸಾ ಪರಮೋ ಧರ್ಮಾ'**ಎಂಬ ನುಡಿ ಅತ್ಯಂತ ಮಹತ್ವ ಪಡೆದಿದ್ದು ಧಾರ್ಮಿಕ ಸಂಘರ್ಷ, ಹಾಗೂ ಅಂದಿನ ಸಂದಿಗ್ಧ ಪರಿಸ್ಥಿತಿಯಲ್ಲಿ ಜೀವದಯಾಪರವಾದ ರೀತಿ ನೀತಿಗಳನ್ನು ರೂಢಿಸಿಕೊಳ್ಳಲೇಬೇಕಾದ್ದು ಅಂದಿನ ಧರ್ಮಗಳ ಅಳಿವು-ಉಳಿವಿನ ಪ್ರಶ್ನೆಯಾಗಿತ್ತು. ಈ ಪ್ರಶ್ನೆಗೆ ಉತ್ತರ ಎಂಬಂತೆ ಅನೇಕ ಧರ್ಮಗಳು ಪ್ರಾಣಿ ಬಲಿ, ಹಿಂಸೆ ಹಾಗೂ ಅವುಗಳನ್ನು ಆಹಾರವಾಗಿ ಬಳಸಲು ಹಲವು

ನಿಯಮಗಳನ್ನು ಹಾಕಿಕೊಂಡವು. ಕೆಲವು ಧರ್ಮ ಅನುಯಾಯಿಗಳು ಮಾಂಸಾಹಾರವನ್ನು ವ್ಯರ್ಜಿಸಿದ್ದರಿಂದ ಇನ್ನು ಕೆಲವು ಧರ್ಮಗಳೂ ಮಾಂಸಾಹಾರವನ್ನು ವ್ಯರ್ಜಿಸಲೇಬೇಕಾಯಿತು. ಪ್ರಾಚೀನ ಕಾಲದಲ್ಲಿ ಮುಖ್ಯವಾಗಿ ಎರಡು ಕಾರಣಗಳಿಗಾಗಿ ಹಿಂಸೆಯನ್ನು ಮಾನವನು ಭಕ್ಷಣೆಗಾಗಿ ಮತ್ತು ರಕ್ಷಣೆಗಾಗಿ ಅವಲಂಬಿಸಿದ್ದನು. ಯಜ್ಞದ ಹಿಂಸೆಯು ಭಕ್ಷಣೆಯಲ್ಲಿಯೇ ಸೇರಿದೆ. ಯಾಕೆಂದರೆ ಮನುಷ್ಯ ತಾನು ತಿನ್ನವುದನ್ನೇ ದೇವರಿಗೆ ಅರ್ಪಿಸುತ್ತಾನೆ. ಯಜ್ಞ ಎಂದರೆ ದೇವರಿಗೆ ಆಹುತಿ ಕೊಡುವುದು. ದೇವತೆಗಳು ನಮಗೆ ಗಾಳಿ, ಮಳೆ, ಬಿಸಿಲು ಕೊಡುತ್ತವೆ. ನಾವು ಅವುಗಳಿಗೆ ಏನನ್ನಾದರೂ ಅರ್ಪಣೆ ಮಾಡಬೇಕು. ಇಲ್ಲಿಂದ ಯಜ್ಞದ ಕಲ್ಪನೆ ಆರಂಭವಾಯಿತು. ಹಾಗಾದರೆ ದೇವರಿಗೆ ಏನನ್ನು ಅರ್ಪಿಸಬೇಕು? ಎಂಬ ಪ್ರಶ್ನೆ ಹುಟ್ಟಿದಾಗ ನಮಗೆ ಸೇರಿದ್ದು ದೇವತೆಗಳಿಗೂ ಸೇರುತ್ತದೆ. ಆದ್ದರಿಂದ ನಾವು ತಿನ್ನುವುದನ್ನೆ ದೇವರಿಗೆ ಅರ್ಪಿಸಬೇಕು. ನಮಗೆ ಮಾಂಸ ಸೇರುತ್ತದೆ. ದೇವರಿಗೂ ಅದನ್ನೇ ಅರ್ಪಿಸಬೇಕು. ಇದೇ ಯಜ್ಞ ಧರ್ಮವಾಗಿ ಪರಿಣಮಿಸಿತು. ಆದ್ದರಿಂದ ಯಜ್ಞದ ಹಿಂಸೆ ಭಕ್ಷಣೆಯಿಂದಲೇ ಆರಂಭವಾಯಿತು. ಹೊಸ ಅರಿವು, ಹೊಸ ಧರ್ಮಗಳ ಉಗಮ, ಅದೀಮ ಸಂಸ್ಕೃತಿಯಿಂದ ಬಂದ ಮಾನವರನ್ನು ಸಸ್ಯಾಹಾರಿ, ಮಾಂಸಾಹಾರಿ ಎಂಬ ಎರೆಡು ಕವಲಾಗಿಸಿ ಇಡೀ ಆಹಾರ ಸಂಸ್ಕೃತಿಯ ಮಾದರಿಯೊಂದು ತಯಾರಾಯಿತು. ಈ ಮಾದರಿಯೊಂದು ತಯಾರಾಗಲು ಶತಶತಮಾನಗಳೇ ಬೇಕಾಯಿತು.

ವೇದ ಕಾಲದಲ್ಲೂ, ನಂತರವೂ ಗೊಮಾಂಸ ಭಕ್ಷಣೆ ನಮ್ಮಲ್ಲಿ ಕಂಡುಬಂದಿದೆ. ಬ್ರಾಹ್ಮಣರೂ/ ಆರ್ಯರೂ, ಮಾಂಸ ಭಕ್ಷಕರೇ ಆಗಿದ್ದರು. ಯಾವಾಗ ಜೈನ, ಬೌದ್ಧ ಧರ್ಮಗಳು ಅಹಿಂಸಾ ಪದ್ಧತಿಯಿಂದ ಜನರನ್ನು ಆಕರ್ಷಿಸತೊಡಗಿದರೋ ಆಗ ಗಾಬರಿ ಬಿದ್ದ ದೈವಿಕ ಧರ್ಮೀಯರು ನಾಲಿಗೆ ಚಪಲಕ್ಕೆ ಕಡಿವಾಣ ಹಾಕಿ ಗೋವುಗಳಲ್ಲಿ ೩೩ ಕೋಟಿ ದೇವತೆಗಳನ್ನು ತುಂಬಿದರು. ಗೋವಿಗೆ ಅಷ್ಟೊಂದು ದೈವ ಬಲವಿದ್ದರೆ ತನ್ನ ಹಾಲನ್ನು ತನ್ನ ಕರುವಿಗೆ ಉಣಿಸಲಾಗದ ಸ್ಥಿತಿಯಾದರೂ ಏಕೆ ಬರುತ್ತಿತ್ತು? ಗೋಮಾಂಸ ಭಕ್ಷಣೆ ಬೇರಾರದೇ ಸಂಸ್ಕೃತಿಯಲ್ಲ, ಹಿಂದೂ ಸಂಸ್ಕೃತಿಯ ಘನ ಕೊಡುಗೆ ಎಂದು ಬಿ.ಎಲ್ ವೇಣು ಗೋಹತ್ಯೆ ನಿಷೇಧ ಮತ್ತು ಇತರ ಲೇಖನಗಳು ಕೃತಿಯಲ್ಲಿ ಪ್ರತಿಪಾದಿಸಿರುವ ಮಾತುಗಳು ಆಹಾರ ಸಂಸ್ಕೃತಿಯ ವಿಮರ್ಶೆಗೆ ಹಚ್ಚುವ ಮಾತುಗಳಾಗಿವೆ. ಆಹಾರ ಸಂಸ್ಕೃತಿಯ ವಿಮರ್ಶೆ ಇತ್ತೀಚೆಗೆ ತೀವ್ರ ಸ್ವರೂಪವನ್ನು ಪಡೆಯಿತು. ೧೮೭೦ರಲ್ಲಿ ಪಂಜಾಬ್ ನಲ್ಲಿ ಉಗಮವಾದ ಸಿಕ್-ಕುಕ ಅಥವಾ ನಾಮಧಾರಿ ಪಂಥವು ಗೋ ರಕ್ಷಣಾ ಚಳುವಳಿಯನ್ನು ವ್ಯವಸ್ಥಿತವಾಗಿ ಸಂಘಟಿಸುವವರೆಗೆ ಗೋಮಾಂಸ ಒಂದು ಚರ್ಚೆಯ ವಿಷಯವಾಗಿರಲೇ ಇಲ್ಲ. ಅದು ಮಾನವನ ಅಗತ್ಯವನ್ನು ಪೋರೈಸುವ ಪ್ರಾಣಿಯಾಗಿಯೇ ಇತಿಹಾಸದಲ್ಲಿ ಹೆಚ್ಚು ಗುರುತಿಸಿಕೊಂಡಿದೆ.[೧೮] ಆದರೆ ಅದಕ್ಕಿಂತ ಪೂರ್ವದಲ್ಲಿ

ಗೋವು ಜೀವಧನವಾಗಿ ತನ್ನ ಬಹು ಉಪಯುಕ್ತತೆಯ ಕಾರಣಕ್ಕಾಗಿ ಹೆಚ್ಚು ಗುರುತಿಸಿಕೊಂಡು ಪೂಜ್ಯ ಸ್ಥಾನವನ್ನು ಪಡೆದಿದೆ.

ಒಟ್ಟಾರೆ ಮಾನವನ ಜೊತೆಯಲ್ಲಿ ಅಲೆಯುತ್ತಾ ಬಂದು, ನೆಲೆಯಾಗಿ ನಿಂತು, ಸಾಧುವಾಗಿ ತನ್ನ ಉಪಯುಕ್ತತೆಯ ಕಾರಣದಿಂದಲೇ ದೈವತ್ವವನ್ನು ಪಡೆದು, ಹಾಲು, ಬೆಣ್ಣೆ, ತುಪ್ಪ, ಮೊಸರಿನ ಉತ್ಪನ್ನಗಳಿಂದ ಔಷಧೀಯ ಗುಣದ ಪಂಚಗವ್ಯವಾಗಿ ಯಜ್ಞ-ಯಾಗಕ್ಕೆ ಪವಿತ್ರ ಹವಿಸ್ಸಾಗಿ, ಮಾನವನ ಕಲ್ಯಾಣಕ್ಕೆ ಅಗತ್ಯವಾದ ಮಳೆ, ಬೆಳೆ, ಬರಲು ಯಾಗ ಶಕ್ತಿಯಾಗಿ, ಕಾಲಾ ನಂತರ ಕೃಷಿ ಚಟುವಟಿಕೆಯಲ್ಲಿ ತೊಡಗಿದ ರೈತರ ಜೊತೆಗಾರ(ವೃಷಭ)ನಾಗಿ, ಅನೇಕ ಕೃಷಿ (ಏತ, ಗಾಣ, ಗಾಡಿ) ಹಾಗೂ ಜೀವನಕ್ಕೆ ಉಪಯುಕ್ತ ಯಾಂತ್ರಿಕ ಶಕ್ತಿಯಾಗಿ, ಸಾರಿಗೆಗೆ ವಾಹನದ ಗಾಡಿಯಾಗಿ, ಕೃಷಿ ಉತ್ಪನ್ನ ಹಾಗೂ ದಿನ ಬಳಕೆಯ ವಸ್ತುಗಳಿಗೆ ವಿನಿಮಯದ ಧನವಾಗಿ, **"ಜೀವಧನ"** ಎಂಬ ಹೆಸರು ಪಡೆದು, ಶ್ರೀಮಂತಿಕೆಯನ್ನು ಸೂಚಿಸಲು ಗೋವುಗಳ ಸಂಖ್ಯೆಯನ್ನು ಆಧಾರವಾಗಿಸಿತು. ಆ ಶ್ರೀಮಂತಿಕೆಯನ್ನು ಕೊಳ್ಳೆಹೊಡೆಯಲು ಪಶು ಸಂಪತ್ತು ಇಲ್ಲದವರು ಮುಂದಾದಾಗ ಅಥವಾ ಕಳ್ಳರು ಮುಂದಾದಾಗ ಅವುಗಳ ರಕ್ಷಣೆ ಪರಮ ಕರ್ತವ್ಯ ಎಂಬ ವೀರ ಪರಂಪರೆಯೊಂದರ ಉಗಮಕ್ಕೆ ಸಾಕ್ಷಿಯಾಯಿತು. ಈ ಗೋವುಗಳ ಪೂಜ್ಯತೆಯ ಕಾರಣಕ್ಕೆ ಮನೆತನದ ಗೌರವದ ಕಾರಣಕ್ಕೆ, ರಾಜ್ಯದ ಗೌರವದ ಕಾರಣಕ್ಕೆ ಹೆಸರಾದ ಗೋವುಗಳನ್ನೇ ಅಪಹರಿಸಿ, ಮನೆ, ಊರು, ರಾಜ್ಯ, ಮಂಡಳ, ನಾಡುಗಳ ಹೆಸರನ್ನು ಹಾಳು ಮಾಡುವ ರಾಜಕೀಯದ ಉದ್ದೇಶದಿಂದ 'ಗೋಗ್ರಹಣ' ಮಾಡುವ ಪದ್ಧತಿ ಆರಂಭವಾಯಿತು. ಅಲ್ಲಿಯೂ 'ಗೋಧನ' ಯೋಧನ ಗುಣ, ಬೆಲೆ, ಕಡಿಮೆ ಆಗದಂತೆ ಕಾಪಾಡಿದ ಸಹಸ್ರಾರು ಗೋಗ್ರಹಣ ಯುದ್ಧಗಳ ವೀರಗಲ್ಲುಗಳು ನಮಗೆ ಸಿಗುತ್ತವೆ. ಬ್ರಿಟಿಷರ ಆಗಮನ, ಕೈಗಾರಿಕಾ ಕ್ರಾಂತಿ, ಹಸಿರು ಕ್ರಾಂತಿಗಳು, ಯಂತ್ರಗಳ ಜನಪ್ರಿಯತೆಯಿಂದ ಗೋವುಗಳು ಅಮುಖ್ಯವಾದವು. ಮಾನವ ಮಾಂಸದ ಅಗತ್ಯತೆಯ ಮೂಲ ಗೋವು, ಎಂಬುದನ್ನು ಮಾತ್ರ ಬಿಂಬಿಸುತ್ತಾ, ಶತ ಶತಮಾನ ಗೋಸಂಸ್ಕೃತಿಯ ಪವಿತ್ರತೆಯ ಕೊಂಡಿಯೊಂದು ಕಳಚಿತು.

ಮಾನವನ ಮಾಂಸಾಹಾರವಾಗಿ, ನಂತರ ಸಸ್ಯಾಹಾರದಲ್ಲೂ ಅಮೃತ ಎನಿಸಿಕೊಂಡ ಹಾಲು, ತುಪ್ಪ, ಮೊಸರು, ಮಜ್ಜಿಗೆ, ಬೆಣ್ಣೆಗಳಲ್ಲಿ ದೊರೆಯುತ್ತಿದ್ದ ಅನೇಕ ವಿಟಮಿನ್‌ಗಳೂ, ಬೇರೆ ಮೂಲಗಳಿಂದ ದೊರೆಯತೊಡಗಿದ್ದು, ಆಹಾರ ಸಂಸ್ಕೃತಿಯಲ್ಲೂ ಗೋವಿನ ಮಹತ್ವವನ್ನು ಕಡೆಗಣಿಸುವ ಪ್ರಯತ್ನವನ್ನು ಬಹುರಾಷ್ಟ್ರೀಯ ಕಂಪನಿಗಳು ಮಾಡುತ್ತಲೇ ಇದ್ದರೂ ಅವರ ಪ್ರಯತ್ನ ಇಲ್ಲಿನವರೆಗೂ ಪೂರ್ಣ ಪ್ರಮಾಣದಲ್ಲಿ ಫಲಿಸಲಿಲ್ಲ. ನಿಸರ್ಗದತ್ತ ಪಶುವಿನ ಹಾಲು, ಮೊಸರು, ಬೆಣ್ಣೆ, ತುಪ್ಪ, ಮಜ್ಜಿಗೆ ಹಾಗೂ ಗೋವಿನ ತ್ಯಾಜ್ಯವಾದ ಸಗಣಿ/ಗೋಮಯ ಹಾಗೂ

ಗೋಮೂತ್ರಗಳಲ್ಲಿರುವ ಔಷಧೀಯ ಗುಣಗಳನ್ನು ಬೇರೆ ಯಾವುದೇ ಮೂಲದಿಂದಲೂ ಕಂಪನಿಗಳು ಭರಿಸಲು ಸಾಧ್ಯವಾಗಲಿಲ್ಲ ಎಂಬುದು ಸತ್ಯ. ಇಂದು ಕರ್ನಾಟಕದಲ್ಲಿ 'ನಂದಿನಿ' ಗುಜರಾತಿನಲ್ಲಿ 'ಅಮೂಲ್' ಹಾಲು ಮತ್ತು ಹಾಲಿನ ಉತ್ಪನ್ನಗಳಿಗಾಗಿ ಹೆಸರುವಾಸಿಯಾಗಿವೆ. ಹಾಗೂ ಜನರಿಗೆ ಆರೋಗ್ಯ ಪೂರ್ಣ ಉತ್ಪನ್ನಗಳು ದೊರೆಯಲು ಶ್ರಮಿಸುತ್ತಿವೆ. ಇಂದು ಮತ್ತೆ ಪಶುಪಾಲನೆ, ಗೋವು ಆಧಾರಿತ ಕೃಷಿ ಅಥವಾ ಸಾವಯವ ಕೃಷಿಯು ಮಹತ್ವ ಪಡೆದುಕೊಳ್ಳಲಾರಂಬಿಸಿವೆ. ರೈತರ ಸಾಲು ಸಾಲು ಆತ್ಮಹತ್ಯೆಗೆ ರಾಸಾಯನಿಕ ಹಾಗೂ ಯಂತ್ರಾಧಾರಿತ ಕೃಷಿ ಪದ್ಧತಿಗಳು ಕಾರಣ ಎಂಬುದನ್ನು ಮಾಧ್ಯಮಗಳು ಎಳೆ ಎಳೆಯಾಗಿ ವಿವರಿಸುತ್ತಿವೆ. ಇಂಥ ಸಂದರ್ಭದಲ್ಲಿ ಗೋಕೇಂದ್ರಿತ ಕೃಷಿ ಪದ್ಧತಿ ಮತ್ತೆ ಜನತೆಯನ್ನು ಆಕರ್ಷಿಸುತ್ತಿದೆ.

### ೩. ವಾಣಿಜ್ಯ ಸಂಬಂಧ

ಮಾನವ ಪ್ರಾಣಿಗಳನ್ನು ಎಂದು ಪಳಗಿಸಿದನೋ ಅಂದಿನಿಂದಲೂ ಜೊತೆಯಾದ ಪ್ರಾಣಿಗಳಲ್ಲಿ ಗೋವುಗಳು ಸೇರಿವೆ. ಆಹಾರಕ್ಕಾಗಿ ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ನಿರಂತರವಾಗಿ ಅಲೆಯುವ ಮಾನವ ತನ್ನ ಬಳಕೆಯ ವಸ್ತುಗಳನ್ನು, ಬೇಟೆಯಾಡಿದ ಪ್ರಾಣಿಗಳನ್ನು ದನಗಳ ಮೇಲೆ ಸಾಗಿಸತೊಡಗಿದ. ಸ್ಥಿರ ಕೃಷಿ ಆರಂಭ ಹಾಗೂ ಬೇಟೆಯ ಉಪಯೋಗ ಮಾನವನ ಜೀವನ ಶೈಲಿಯನ್ನು ಬದಲಾಯಿಸಿತು. ಧಾನ್ಯಗಳನ್ನು ಬಿತ್ತಿ ಬೆಳೆಯತೊಡಗಿದ್ದು ಮಾನವ ನೆಲೆ ಕಂಡುಕೊಳ್ಳಲು ಸಹಕಾರಿಯಾಯಿತು. ಮಾನವ ಇನ್ನೂ ಮುಂದುವರೆದು ಧಾನ್ಯಗಳನ್ನು ನಾಳಿಗಾಗಿ ಸಂಗ್ರಹಿಸುವುದನ್ನು ಕಲಿತ. ಒಂದು ಪ್ರದೇಶಕ್ಕೂ ಮತ್ತೊಂದು ಪ್ರದೇಶಕ್ಕೂ ಇರುವ ಧಾನ್ಯಗಳ ಬದಲಾವಣೆ ವಿನಿಮಯಕ್ಕೆ ದಾರಿ ಮಾಡಿಕೊಟ್ಟಿತು. ಚಕ್ರದ ಉಪಯೋಗ ಮಾನವನ ಜೀವನದ ಬದಲಾವಣೆಗೆ ವೇಗವನ್ನು ದೊರಕಿಸಿದವು. ಹೀಗೆ ಭಾರತದ ಮೂಲ ಜನಾಂಗದ ಜೊತೆಗೆ ಪಶುಪಾಲನೆಯನ್ನೇ ವೃತ್ತಿಯಾಗಿಸಿಕೊಂಡ ಆರ್ಯರ ಆಗಮನ ಅವರ ಜೀವನ ಕ್ರಮ ಉಡುಗೆ-ತೊಡುಗೆ, ಆಹಾರ ಸಂಸ್ಕೃತಿಯ ಮೇಲೆ ಪರಿಣಾಮ ಬೀರಿದವು.

ಇಡೀ ಮನೆ, ರಾಜ್ಯ ಆರಂಭದಲ್ಲಿ ಕೃಷಿ ಉತ್ಪಾದನೆಯನ್ನೇ ಹೆಚ್ಚಾಗಿ ಅವಲಂಬಿಸಿದ್ದರಿಂದ ಧಾನ್ಯಗಳು, ದನಗಳು ವಿನಿಮಯಕ್ಕೆ ಒಂದು ರೀತಿಯಲ್ಲಿ ಹಣದಂತೆ ಬಳಕೆಯಾಗತೊಡಗಿದವು. ತಾವು ಬೆಳೆದ ಹೆಚ್ಚಿನ ಧಾನ್ಯಗಳನ್ನು ಬೇರೊಂದು ಗ್ರಾಮಕ್ಕೆ ಕೊಂಡೊಯ್ಯಲು ಗಾಡಿಗಳು ಬಳಕೆಗೆ ಬಂದವು. ನಂತರ **'ಸಾರ್ಥ'**ದ ಕಲ್ಪನೆ ಭಾರತದಲ್ಲಿ ನೆಲೆಯೂರಿತು. ಅನೇಕ ವ್ಯಾಪಾರಿಗಳು ಸೇರಿ ವ್ಯವಹಾರದ ಉದ್ದೇಶದಿಂದ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗಲು ಒಟ್ಟಾಗಿ ಹಲವು ವಿಭಿನ್ನ ಸಾಮಗ್ರಿಗಳನ್ನು ಬೇರೆ ಬೇರೆ ಗಾಡಿಗಳಲ್ಲಿ ತುಂಬಿಕೊಂಡು ತಮ್ಮ ದೇಶದ ಕಾವಲು ಭಟರೊಂದಿಗೆ ಸಾರ್ಥ ಹೊರಡುತ್ತಿದ್ದರು. ಹೆಚ್ಚು ಬೆಲೆ ಬಂದಲ್ಲಿ ತಮ್ಮ ವಸ್ತುಗಳನ್ನು

ಮಾರುತ್ತಾ ಕಡಿಮೆ ಬೆಲೆಯ ವಸ್ತುಗಳನ್ನು ಕೊಳ್ಳುತ್ತಾ ಹಲವು ತಿಂಗಳು, ವರ್ಷ ಈ ವ್ಯಾಪಾರದ ಪ್ರಯಾಣ ನಡೆಯುತ್ತಿತ್ತು. ಇದು ಅಂದಿನ ಕಾಲದಲ್ಲಿ ದೂರದ ರಾಜ್ಯಗಳಿಗೆ ಪ್ರಯಾಣ ಹೋಗುವವರಿಗೂ ಪ್ರಯಾಣಕ್ಕೆ ಈ ಸಾರ್ಥದ ಎತ್ತಿನಗಾಡಿಗಳು ಆರಂಭದಲ್ಲಿ ಬಳಕೆಯಾದವು. ಆನಂತರ ಹಸುಗಳು ವಿನಿಮಯದ ವಸ್ತುಗಳಾಗಿ ಜೀವಧನದ ಸ್ಥಾನ ಪಡೆದು, ಅವುಗಳು ಕೊಡುವ ಉತ್ಪನ್ನಗಳಿಂದ ಆರ್ಥಿಕ ಶಕ್ತಿಯಾಗಿ ಗೋವುಗಳು ಸ್ಥಾನ ಪಡೆದವು. **'ಪೀಟರ್ ಡಿಲಾವೆಲ್'** ಎಂಬ ಇಟಲಿಯ ಯಾತ್ರಿಕನು ೧೬೨೩ರಲ್ಲಿ **'ಸೂರತ್ ನಲ್ಲಿ ಸವಾರಿಗೋಸ್ಕರ ಎತ್ತಿನ ರಥಗಳಿವೆ. ಎತ್ತುಗಳು ಬಲಿಷ್ಠವಾಗಿವೆ, ಕುದುರೆಗಳಂತೆ ಓಡುತ್ತಿದ್ದವು'** ಎಂಬ ಮಾತು ರಥಗಳನ್ನು, ಗಾಡಿಗಳನ್ನು ಎಳೆಯಲು ಚಾಲಕ ಶಕ್ತಿಯಾಗಿ ದನಗಳು ಬಳಕೆಯಾಗಿವೆ. ಪೀಟರ್ ಡಿಲ್ಯಾವೆಲ್ ಮಾತು ಸಾರಿಗೆಯಲ್ಲಿ ದನಗಳು ಹೇಗೆ ಬಳಕೆಯಾಗುತ್ತಿದ್ದವು ಎಂಬುದಕ್ಕೆ ಸಾಕ್ಷಿಯನ್ನೊದಗಿಸುತ್ತವೆ. ಇದರಿಂದ ತೈಲ ಆಮದು ಮಾಡಿಕೊಳ್ಳುವ ಅನಿವಾರ್ಯತೆ ಅಥವಾ ಬೇರೆ ದೇಶಗಳ ಮೇಲಿನ ತೈಲದ ಅವಲಂಬನೆಯನ್ನು ಬಹುಕಾಲ ದೂರಗೊಳಿಸಿತ್ತು. ಗಾಡಿ, ಎತ್ತುಗಳು, ಆಕಳುಗಳು ಮನೆಯ ಹಿಂದಿನ ತಿಪ್ಪೆ, ಇವೆಲ್ಲವೂ ಮಾನವನ ಶ್ರೀಮಂತಿಕೆಯನ್ನು ಸೂಚಿಸುತ್ತಿದ್ದರಿಂದ ಗೋವುಗಳು 'ಗೋಧನ'ವಾಗಿ ಬಳಕೆಗೆ ಬಂದವು. ಒಂದು ಕಾಲಕ್ಕೆ ದಾನಗಳಲ್ಲೇ ಶ್ರೇಷ್ಠದಾನ 'ಗೋದಾನ' ಎಂಬ ಮಾತು ಭಾರತದ ಸಂಸ್ಕೃತಿಯಲ್ಲಿ ಪ್ರಚಲಿತವಿತ್ತು. ಆದರೆ ಅದೇ ಗೋವುಗಳನ್ನು ವಾಣಿಜ್ಯ ಉದ್ದೇಶಕ್ಕಾಗಿ ಹಾಗೂ ದನಗಳ ಪ್ರತಿಯೊಂದು ಅಂಗಗಳೂ ವಿವಿಧ ಉತ್ಪನ್ನಗಳಾಗಿ ಮಾರಾಟವಾಗತೊಡಗಿದ್ದು ವಿಪರ್ಯಾಸ. ದನಗಳಲ್ಲಿನ ಔಷಧೀಯ ಗುಣಗಳೂ ಹಾಗೂ ಆಧುನಿಕರು ಬಳಸುವ ಅನೇಕ ಆಹಾರ ಪದಾರ್ಥಗಳೂ ದಿನ ನಿತ್ಯದ ಕೆಲವು ಅಗತ್ಯ ವಸ್ತುಗಳನ್ನು ಉತ್ಪಾದಿಸಲು ಗೋವುಗಳು ಅನಿವಾರ್ಯವಾದ್ದರಿಂದ ಅವುಗಳ ಮಾರಣ ಹೋಮವೂ ತ್ವರಿತ ಗತಿಯಲ್ಲಿ ಸಾಗಿತು.

ಒಂದು ಕಾಲದಲ್ಲಿ ಪವಿತ್ರ ಸ್ಥಾನ ತುಂಬಿದ ಗೋವುಗಳ ರಕ್ಷಣೆ ಮಾನವನ ಆದ್ಯ ಕರ್ತವ್ಯ ಎಂದು ಪರಿಗಣಿಸಲಾಗಿತ್ತು. ಭಾರತೀಯರು ಗೋವುಗಳಿಗೆ 'ಗೋಮಾತೆ' ಅಥವಾ ಪವಿತ್ರ ಸ್ಥಾನ ನೀಡಿದಂದಿನಿಂದ ಗೋವುಗಳನ್ನು ಮೇಯದಂತೆ ತಡೆಯುವುದು, ಅವುಗಳನ್ನು ಹೊಡೆಯುವುದು, ಪಾಪ ಕಾರ್ಯವೆಂದು ಬಿಂಬಿಸಲಾಯಿತು. ಅಂದಿನಿಂದ ದನಗಳನ್ನು ಹೊಡೆಯುವುದು ಮಹಾಪಾಪ ಎಂದು ಬದುಕಿದ ಭಾರತೀಯರು ಗೋವುಗಳ ಮೇಲೆ ಕೈ ಎತ್ತುವುದಿಲ್ಲ. ಭಾರತೀಯರಿಗೆ ಗೋವು ಪವಿತ್ರ ಎಂದು ಅರಿತ ಅನೇಕ ಮುಸ್ಲಿಂ ದೊರೆಗಳು ಗೋವುಗಳನ್ನೇ ಅಡ್ಡವಿಟ್ಟು ಯುದ್ಧಮಾಡಿ ಗೆದ್ದ ಅಂಶಗಳು ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ. ಇಸ್ಲಾಂ ಭಾರತದಲ್ಲಿ ನೆಲೆಊರಿದಂತೆ ಒಂಟೆ, ಆಡು, ಕುರಿ ಅವರ ಮಾಂಸಾಹಾರದ ಪ್ರಾಣಿಗಳಾಗಿದ್ದವು. ಒಂಟೆಯು ಹೆಚ್ಚಾಗಿ ದೊರೆಯದ ಭಾರತದಲ್ಲಿ ಒಂಟೆಯ ಬದಲು ಗೋವನ್ನು

ಬಲಿ ಕೊಡತೊಡಗಿದರು. ಇದು ಭಾರತೀಯರು ಮತ್ತು ಮುಸ್ಲಿಂ ಜನರ ನಡುವೆ ಒಂದು ಕಂದಕವನ್ನೇ ಸೃಷ್ಟಿಸಿತು. ಗೋಹತ್ಯೆಯನ್ನು ಸ್ಥಳೀಯರ ಭಾವನೆಗಳನ್ನು ನೋಯಿಸುವುದಕ್ಕಾಗಿ ಮತ್ತು ಪ್ರಾಬಲ್ಯ ತೋರಿಸಲಿಕ್ಕಾಗಿ, ಗೋಹತ್ಯೆಯನ್ನು ಮುಸ್ಲಿಂ ರಾಜರು ಮುಂದುವರೆಸುತ್ತಾ ಬಂದರು. ಆನಂತರ ಬಂದ ಬ್ರಿಟಿಷರೂ ಭಾರತವನ್ನು ಆಳಲು ಹಿಂದೂ-ಮುಸ್ಲಿಮರನ್ನು ಬೇರೆ ಇಡಲು ಅವರು ಒಂದಾಗದಂತೆ ತಡೆಯಲು ಭಾರತದ ಆಹಾರ ಸಂಸ್ಕೃತಿಯನ್ನು, ಗೋವಿನ ಬಗೆಗಿನ ಭಾವನೆಗಳನ್ನು ಗುರಾಣಿ ಮಾಡಿಕೊಂಡು ತಮ್ಮನ್ನು ರಕ್ಷಿಸಿಕೊಂಡು ಭಾರತವನ್ನು ಒಡೆದು ಆಳಿದರು.

ಭಾರತೀಯರ ಆರೋಗ್ಯ ಪೂರ್ಣವಾದ ಅನೇಕ ಗೋ ತಳಿಗಳಲ್ಲಿ ಖಿಲಾರಿ, **ಕೃಷ್ಣಾ, ಪೊನ್ವರ್, ಕೆಂಕಾಥಾ, ಅಂಬ್ಲಾಬೆರಿ, ಥಾರ್‌ಪಾರ್ಕರ್, ಲಾಲ್‌ಕಂದಾರಿ, ದೇವನಿ, ಹಳ್ಳಿಕಾರ್, ಢಾಂಗಿ, ಕಂಗಾಯಂ, ಕಾಸರಗೋಡು, ಗಂಗಾತಿರಿ, ಸಿಂಧಿ, ಬರಗೂರು, ರಾಟಿ, ಮಲೆನಾಡು ಗಿಡ್ಡ, ಹರಿಯಾಣ, ಓಂಗೋಲ್, ಕೇರಿಫರ್, ಮಾರಿನಿ, ಅಮೃತ್ ಮಹಲ್, ವೆಚೂರ್, ಮಾಳವಿ, ಕಾಂಕ್ರೇಜ್, ಗೌಳವ್, ಗಿರ್, ನಾಗೋರಿ, ಸಾಹಿವಾಲಾ, ಮುಂತಾದ ಗೋವಿನ ತಳಿಗಳು** ಭಾರತದಲ್ಲಿದ್ದವು. ಇವುಗಳಲ್ಲಿ ಹಾಲಿನ ತಳಿಯಾಗಿ ಗುರುತಿಸಿಕೊಂಡ ಕೆಲವು ತಳಿಗಳಿದ್ದರೂ ನಮ್ಮ ಅನಾದರತೆಯ ಕಾರಣಕ್ಕೆ ಹಾಗೂ ಪಾಶ್ಚಾತ್ಯ ಗೋವುಗಳು ಹೆಚ್ಚು ಹಾಲು ಹಿಂಡುವ ಕಾರಣಕ್ಕೆ ಅಂದಿನ ಕ್ಷೀರ ಕ್ರಾಂತಿಯ ವೇಗದಲ್ಲಿ ಭಾರತೀಯರ ಗೋವುಗಳು ತಮ್ಮ ಕಡಿಮೆ ಉತ್ಪಾದನೆಯ ಕಾರಣಕ್ಕೆ ಮಹತ್ವ ಕಳೆದುಕೊಂಡವು. ಅಲ್ಲದೆ ಪಾಶ್ಚಾತ್ಯರು ಮಾಂಸಾಹಾರಕ್ಕಾಗಿಯೇ ಸಾಕುತ್ತಿದ್ದ ಗೋವುಗಳು ಹೆಚ್ಚು ದಷ್ಟಪುಟ್ಟವಾಗಿದ್ದರಿಂದ ಭಾರತೀಯರಿಗೆ ಆಕರ್ಷಕವಾಗಿ ಕಂಡವು. ಇಲ್ಲಿಂದ ದನಗಳ ಸಾಕುವಿಕೆ ಭಾವನಾತ್ಮಕ ಸಂಬಂಧಕ್ಕಿಂತ ಹೆಚ್ಚಾಗಿ ಲಾಭ-ನಷ್ಟಗಳ ಕಡೆಗೆ ತಿರುಗಿತು.

ಬಹುರಾಷ್ಟ್ರೀಯ ಕಂಪನಿಗಳ ರಾಸಾಯನಿಕ ಉತ್ಪನ್ನಗಳನ್ನು ಮಾರಲು ಬೃಹತ್ ವೇದಿಕೆಯಾದ ಭಾರತದಲ್ಲಿ ತಮ್ಮ ಮಾರುಕಟ್ಟೆಯನ್ನು ವಿಸ್ತರಿಸಲು ಸಗಣಿಗೊಬ್ಬರಕ್ಕಿಂತ ರಾಸಾಯನಿಕ ಗೊಬ್ಬರ ಹೆಚ್ಚು ಶ್ರೇಷ್ಠ, ಹೆಚ್ಚು ಹಾಲನ್ನು ವಿದೇಶಿ ದನಗಳು ನೀಡುತ್ತವೆ. ಲಾಭ ಗಳಿಸಲು ಮಿಶ್ರ ತಳಿಯ ಹಸುಗಳನ್ನೇ ಸಾಕಿ, ಎಂದು ಪ್ರಚಾರಗೊಳಿಸಿ ಭಾರತೀಯರ ಗೋವುಗಳ ಮಹತ್ವವನ್ನು ಕಳೆಯಲಾಯಿತು. ಭಾವನಾತ್ಮಕ ಸಂಬಂಧಕ್ಕಿಂತ ಲಾಭ-ನಷ್ಟಗಳ ಲೆಕ್ಕಾಚಾರದ ಆಧಾರದ ಮೇಲೆಯೇ ದನಗಳನ್ನು ಸಾಕಬೇಕು ಎಂಬುದನ್ನು ಭಾರತೀಯ ರೈತರಿಗೆ ಮನವರಿಕೆ ಮಾಡಿ ವಯಸ್ಸಾದ ದನಗಳನ್ನು ಮಾರಿಸುವ ಸಂಸ್ಕೃತಿ ಆರಂಭವಾಯಿತು. ಮನೆ ಮನೆಗೆ ಮಾತ್ರ ಸೀಮಿತವಾಗಿದ್ದ, ಹೆಚ್ಚಾದ ಹಾಲು-ಹಾಲಿನ ಉತ್ಪನ್ನಗಳನ್ನು ಮಾತ್ರ ನೆರೆಹೊರೆಯವರಿಗೆ ಮಾರಿ

ಬದುಕುತ್ತಿದ್ದ ಭಾರತೀಯ ರೈತರನ್ನು ಹಂತ ಹಂತವಾಗಿ ಉದ್ಯಮಕ್ಕೆ ಬೇಕಾದ ಶಿಸ್ತನ್ನು ಮೂಡಿಸಿ ಹೈನುಗಾರಿಕೆ ಒಂದು ಉದ್ಯಮವಾಗಿ ಬೆಳೆಯತೊಡಗಿತು. ಹೊಸ ತಂತ್ರಜ್ಞಾನ ಹಾಲನ್ನು ಬಹುಕಾಲ ಕೆಡದಂತೆ ಇಡುವ ಹಾಗೂ ಹೆಚ್ಚಾದ ಹಾಲನ್ನು ಪುಡಿಯಾಗಿ ಬದಲಾಯಿಸಿ ಸಂಗ್ರಹಿಸಿ ಇಡುವುದು, ಉದ್ಯಮಕ್ಕೆ ಸಾಕಷ್ಟು ಅವಕಾಶವನ್ನು ನೀಡಿತು. ಹಾಲು, ಮೊಸರು, ಮಜ್ಜಿಗೆ, ಕೋವಾ, ಪೇಡ, ತುಪ್ಪ, ಬೆಣ್ಣೆ, ಸಿಹಿ ಪದಾರ್ಥಗಳು, ಬಗೆ ಬಗೆಯ ಐಸ್‌ಕ್ರೀಂಗಳು, ಇಂದಿನ ಆಕರ್ಷಕ ಪೊಟ್ಟಣಗಳಲ್ಲಿ ಲಭ್ಯವಾದವು. ಈ ಎಲ್ಲ ಬೆಳವಣಿಗೆಯಿಂದ ಆಧುನಿಕ ಭಾರತದಲ್ಲಿ ಕೃಷಿಯಲ್ಲದೆ ಸರ್ಕಾರಿ ನೌಕರಿಗಳು, ಖಾಸಗಿ ಕಂಪನಿಗಳು ಮಾನವನಿಗೆ ಕೃಷಿಯ ಹೊರತಾದ ಆಕರ್ಷಕ ವೇತನದ ಉದ್ಯೋಗಗಳು ಸೃಷ್ಟಿಯಾದ್ದರಿಂದ ಕೃಷಿ ಮಾಡುವವರ ಸಂಖ್ಯೆ ಇಳಿಮುಖವಾಗಿ ನಗರದ ಕಡೆಗೆ ವಲಸೆ ಹೆಚ್ಚಾಯಿತು. ಅಲ್ಲದೆ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಏತಗಳ ಜಾಗವನ್ನು ರಿಗ್ ಬೋರ್‌ಗಳು, ಗಾಣಗಳ ಸ್ಥಾನವನ್ನು ಯಂತ್ರಗಳು ತುಂಬಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದವು. ಎತ್ತಿನ ನೇಗಿಲು ಭೂಮಿ ಉಳುವುದು ನಿಧಾನ ಹಾಗಾಗಿ ಎತ್ತುಗಳ ಸ್ಥಾನವನ್ನು ಟ್ರ್ಯಾಕ್ಟರ್‌ಗಳು ತುಂಬಿದ್ದರಿಂದ ಎತ್ತುಗಳು ತಮ್ಮ ಮಹತ್ವವನ್ನು ಕಳೆದುಕೊಂಡವು. ಗಾಡಿಗಳಿಗಿಂತ ಟ್ರ್ಯಾಕ್ಟರ್ ವೇಗ, ಎತ್ತಿನ ನೇಗಿಲಿಗಿಂತ ಟ್ಯಾಕ್ಟರ್ ಕಲ್ಟಿವೇಟರ್ ಆಳವಾದ ಭೂಮಿಯ ಉಳುವಿಕೆ ಆಕರ್ಷಣೀಯವಾಗಿ ಕಂಡಿತು. ಎತ್ತುಗಳನ್ನು ಮೈತೊಳದು, ಹುಲ್ಲು ಸೊಪ್ಪು ಹಾಕಿ, ಸಗಣಿ ತೆಗೆದು, ಬದುಕುವುದು ತ್ರಾಸು. ಅಲ್ಲದೆ ೧೦ ದನಗಳ ಕೆಲಸವನ್ನು ಒಂದು ಟ್ರ್ಯಾಕ್ಟರ್ ಮಾಡುತ್ತಿದ್ದರಿಂದ ಹತ್ತು ದನ ಕಟ್ಟಿದ್ದಕ್ಕಿಂತ ಒಂದು ಟ್ರ್ಯಾಕ್ಟರ್ ಉತ್ತಮ ಎಂಬ ಭಾವನೆ ರೈತರಲ್ಲಿ ಬೆಳೆಯಿತು. ಅಲ್ಲದೆ ಹಸುಗಳನ್ನು ಸಂಖ್ಯೆಯ ದೃಷ್ಟಿಯಿಂದ, ಶ್ರೀಮಂತಿಕೆಯ ಸಂಕೇತವೆಂದು ಭಾವಿಸದೆ ಸಾಕುವುದೇ ಹೊರೆ ಎಂದು ರೈತರು ಭಾವಿಸತೊಡಗಿದರು. ಅವು ಕೊಡುವ 'ಹಾಲು' ಮಾತ್ರ ಮುಖ್ಯ ಸ್ಥಾನ ಪಡೆಯಿತು. ದಿನವೂ ಡೈರಿಗೆ ಎಷ್ಟು ಹಾಲು ಹಾಕುತ್ತಾರೆ ಎಂಬುದರಿಂದ ಅವರ ಆದಾಯ ಗಮನಿಸಲು ತೊಡಗಿದ್ದರಿಂದ ಹಿಂಡುವ ಪಾಶ್ಚಾತ್ಯ ಹಸುಗಳು ಪ್ರಾಮುಖ್ಯತೆಗಳಿಸಿದವು.

ಬೆರಣಿಗಳನ್ನು ಉರುವಲಿಗೆ ಬಳಸುವುದು ಕನಿಷ್ಟ ಗೋಬರ್ ಗ್ಯಾಸ್ ಬಳಸುವುದು ಶ್ರೇಷ್ಠವೆಂದು ಜನರನ್ನು ಸಗಣಿ ಬೆರಣಿ ಒಲೆಯಿಂದ 'ಗೋಬರ್ ಗ್ಯಾಸ್' ಒಲೆ ನಿರ್ಮಿಸಿಕೊಳ್ಳಲು ಪಾಶ್ಚಾತ್ಯರು ಸಬ್ಸಿಡಿ ನೀಡಿ ಪ್ರಚಾರ ಮಾಡಿ ಭಾರತೀಯ ರೈತರನ್ನು ಕುಳ್ಳು ಬೆರಣಿಯ ಒಲೆಯಿಂದ ಗ್ಯಾಸ್ ಬಳಸುವುದನ್ನು ಕಲಿಸಿದರು. ಆನಂತರ ಗೋಬರ್ ಗ್ಯಾಸ್ ನಿಧಾನ ಉರಿಯುತ್ತೆ, ಸಗಣಿ ತುಳಿದು ಹಾಕಬೇಕು, ಮೈಯಲ್ಲ ಗಲೀಜು ಎನ್ನುತ್ತಾ ಪೆಟ್ರೋಲಿಯಂ ಗ್ಯಾಸ್ ನೀಡಿದರು. ಇದು ವಾಣಿಜ್ಯ ಉತ್ಪಾದನೆಯನ್ನು ಭಾರತೀಯರು ಬಳಸಲು ಕಲಿಸಿ ಪಾಶ್ಚಾತ್ಯ ಪೆಟ್ರೋಲ್ ಉತ್ಪಾದನೆಯ ಕಂಪನಿಗಳನ್ನು ಅವಲಂಬಿಸುವಂತೆ ಮಾಡಿದರು. ಇಂದು

ಗ್ಯಾಸ್ ಸಿಲಿಂಡರ್ ಇಲ್ಲದೆ ಮನೆಯ ಅಡುಗೆ ಮನೆ ನಡೆಯುವುದೇ ಇಲ್ಲ. ಇಂದು ಲಕ್ಷಾಂತರ ಕೋಟಿ ಹಣ ನಾವು ಅವಲಂಬಿಸುವ ಎಲ್.ಪಿ.ಜಿ.(**ಲಿಕ್ವಿಡ್ ಪೆಟ್ರೋಲಿಯಂ ಗ್ಯಾಸ್**) ತರಿಸಿಕೊಳ್ಳಲು ವ್ಯಯವಾಗುತ್ತಿದೆ.

ಈ ಎಲ್ಲ ಕಾರಣಗಳನ್ನು ಗಮನಿಸಿದಾಗ ಆಧುನಿಕ ಕೈಗಾರಿಕಾ ಸಂಶೋಧನೆಗಳ ಉತ್ಪಾದನೆ ಮತ್ತು ಬಳಕೆಯ ಸಿದ್ಧಾಂತಗಳು ಭಾರತೀಯ ಕೃಷಿ ಹಾಗೂ ಜೀವನ ಪದ್ಧತಿಗಳಲ್ಲಿ ಅನೇಕ ಏಣಿ ಶ್ರೇಣಿಗಳನ್ನು ನಿರ್ಮಾಣ ಮಾಡಿದವು. ನಮ್ಮ ರೈತರು ಪಾರಂಪರಿಕ ಕೃಷಿ, ಹಾಗೂ ಪಶುಪಾಲನೆಯನ್ನು ಬಿಟ್ಟು ಆಧುನಿಕ ಪಾಶ್ಚಾತ್ಯ ಯೋಜನೆಗಳನ್ನು ತಮ್ಮದಾಗಿಸಿಕೊಂಡರು. ರೈತರ ಮನೆಗಳ ಮುಂದೆ ಸಾಲ ಮಾಡಿಕೊಂಡ ಹೆಚ್ಚು ಅಶ್ವ ಶಕ್ತಿ ಹೊಂದಿದ ಟ್ರ್ಯಾಕ್ಟರ್‌ಗಳು **'ಡೀಜಲ್–ಡೀಜಲ್'** ಎಂಬ ಬೇಡಿಕೆ ಇಟ್ಟು ರೈತರನ್ನು ತುಳಿಯತೊಡಗಿದವು. ಅನೇಕ ಸಬ್ಸಿಡಿಗಳು ರೈತರನ್ನು ಆಕರ್ಷಿಸಿ ಪಾಶ್ಚಾತ್ಯ ಯೋಜನೆಗಳು, ವ್ಯಾಪಾರೀ ಹುನ್ನಾರಗಳು ರೈತರ ಮನೆಯ ನಡು ಮನೆಯನ್ನು ಪ್ರವೇಶಿಸಿ ಆಗಿತ್ತು. ಸಾಂಪ್ರದಾಯಿಕ ಬೀಜಗಳಿಗಿಂತ ಹೈಬ್ರೀಡ್ ಬೀಜಗಳು ಹೆಚ್ಚು ಇಳುವರಿ ಕೊಡುತ್ತವೆ ಎಂದು ಪ್ರಾತ್ಯಕ್ಷಿಕೆಗಳ ಮೂಲಕ ತೋರಿಸಿ ರೈತರನ್ನು ಹೈಬ್ರೀಡ್ ಬೀಜಗಳತ್ತ ನೋಡುವಂತೆ ಮಾಡಿದರು. ಹೈಬ್ರೀಡ್ ಬೀಜಗಳು ಚೆನ್ನಾಗಿ ಇಳುವರಿ ಕೊಡಬೇಕೆಂದರೆ ಅವುಗಳಿಗೆ ರಾಸಾಯನಿಕ ಬೀಜೋಪಚಾರ ಬೇಕೇ ಬೇಕು ಎಂದು ನಂಬಿಸಿ ಸಾವಯವ ಬೀಜಾಮೃತದ ಬಳಕೆಯನ್ನು ನಿರಾಕರಿಸುವಂತೆ ಮಾಡಿ ರಾಸಾಯನಿಕ ಬಳಕೆಯನ್ನು ಕಲಿಸಿದರು. ಇದು ರಾಸಾಯನಿಕ ಕಾರ್ಖಾನೆಗಳು ತಮ್ಮ ಉತ್ಪಾದನೆ ಹೆಚ್ಚಿಸಲು ಕಾರಣವಾಯಿತು. ಆರಂಭದಲ್ಲಿ ಹೈಬ್ರಿಡ್ ಬೀಜಗಳು ಇಳುವರಿ ಕೊಡಬೇಕೆಂದರೆ ನಿಮ್ಮ ಕೊಟ್ಟಿಗೆ ಗೊಬ್ಬರದ ಜೊತೆಗೆ ಎಕರೆಗೆ ೧ ಕ್ವಿಂಟಾಲ್ ಅಥವಾ ಎರಡೇ ಚೀಲ ರಾಸಾಯನಿಕ ಗೊಬ್ಬರಗಳಾದ ೧೯:೧೯:೧೯ ಅಥವಾ ೧೭:೧೭:೧೭ ಅಥವಾ ೧೫:೧೫:೧೫ ಯಾವುದಾದರೂ ಒಂದನ್ನು ಹಾಕಲೇಬೇಕು. ಅಥವಾ ಡಿ.ಎ.ಪಿ. ಅಥವಾ ಯೂರಿಯಾ ಯಾವುದಾದರೂ ಒಂದನ್ನು ಹಾಕಿದರೆ ಇನ್ನೂ ಹೆಚ್ಚು ಇಳುವರಿ ಬರುತ್ತದೆ ಎಂದು ರೈತರನ್ನು ಒಪ್ಪಿಸಿ ಹೆಚ್ಚೆಚ್ಚು ರಾಸಾಯನಿಕ ಗೊಬ್ಬರ ಬಳಸುವುದನ್ನು ಕಲಿಸಿದರು. ಸಗಣಿ ಗೊಬ್ಬರದ ಮಹತ್ವವನ್ನು ಅರಿತು ಮಾನವನ ಸಹಕಾರದಿಂದ ನಡೆಯುತ್ತಿದ್ದ ಸಮಾಧಾನದ ಪಾರಂಪರಿಕ ಕೃಷಿ ಪದ್ಧತಿಗಳು ಮಹತ್ವ ಕಳೆದುಕೊಂಡವು. ರೈತನ ಮನೆತನದ ಖರ್ಚು ವೆಚ್ಚಗಳಿಗೆ ಆಧಾರವಾಗಿದ್ದ ಲಾಭದ ಸಹಜ ಕೃಷಿ ಆಧುನಿಕ ಪದ್ಧತಿಗಳಿಂದ ನಷ್ಟದತ್ತ ಮುಖ ಮಾಡಿತು. ಯಂತ್ರಗಳ ಚಲಾವಣೆಗೆ ಡೀಜೆಲ್‌ಗೆ ದುಡ್ಡು, ಬೆಳೆಯನ್ನು ವೇಗವಾಗಿ ಮಾರುಕಟ್ಟೆಗೆ ಸಾಗಿಸಲು ಯಂತ್ರಗಳ ಪೆಟ್ರೋಲ್‌ಗೆ ದುಡ್ಡು, ಯಂತ್ರಗಳ ದುರಸ್ತಿಗೆ, ರಾಸಾಯನಿಕ ಹಾಗೂ ರಾಸಾಯನಿಕ ಗೊಬ್ಬರಕ್ಕೆ, ಹೈಬ್ರೀಡ್ ಬೀಜಗಳಿಗೆ, ನೀರಾವರಿ ಹೊಂದಲು ಬೋರ್‌ವೆಲ್ ಹಾಗೂ ಪಂಪುಗಳ ಬಳಕೆಯವರೆಗೂ ಕೃಷಿ ಮಾಡಲು ಹಣ ಬೇಕೇ ಬೇಕು ಎಂಬಲ್ಲಿಗೆ

ಕೃಷಿಕನನ್ನು ತಂದು ನಿಲ್ಲಿಸಲಾಯಿತು. ಕೃಷಿ ಮಾಡುವವ ದಡ್ಡ, ಬೇಸಾಯ ಅಂದರೆ ನೀಸಾಯ, ನಿಮ್ಮಪ್ಪ ಸಾಯ, ನಿಮ್ಮವ್ವ ಸಾಯ, ನಿಮ್ಮ ಮನೆ ಮಂದಿಯೆಲ್ಲ ಸಾಯ ಎಂಬ ಮಾತುಗಳು ಬರತೊಡಗಿದವು. ಆಧುನಿಕತೆಯ ಓಟದಲ್ಲಿ ಸಹಜ ಕೃಷಿಯಿಂದ ದೂರವಾಗಿ, ಗೋವಿನ ತ್ಯಾಜ್ಯಗಳ ಬಳಕೆಯನ್ನು ಕೃಷಿಗೆ ಬಳಸದೇ ಇರುವುದು ಇಂದಿನ ಕೃಷಿಕನ ಹಾಗೂ ಕೃಷಿ ಪರಂಪರೆಯ ಅವನತಿಗೆ ಪ್ರಧಾನ ಕಾರಣವಾಯಿತು. ರಾಸಾಯನಿಕ, ಕೀಟನಾಶಕ, ಗೊಬ್ಬರಗಳ ಅವಲಂಬನೆಯಿಂದ ಇಂದು ಅವುಗಳನ್ನು ಭಾರತಕ್ಕೆ ತರಿಸಿಕೊಳ್ಳಲು ಹಲವಾರು ಲಕ್ಷ ಸಾವಿರ ಕೋಟಿ ರೂಪಾಯಿಗಳು ಕೇವಲ ಸಾರಿಗೆಗೆ, ವಿದೇಶಿ ವಿನಿಮಯಕ್ಕೆ  ಖರ್ಚಾಗುತ್ತಿವೆ. ಇಂದು ವಿದೇಶಿ ಕಂಪನಿಗಳು ತಮ್ಮ ಕಂಪನಿಯ ಬೀಜಗಳು ಮಾತ್ರ ಬೆಳೆದು ಇಳುವರಿ ಕೊಡುತ್ತವೆ ಎಂದು ಜಾಹೀರಾತು ನೀಡುತ್ತಿದ್ದು, ರೈತರೂ ಪ್ಯಾಕೇಟ್ ಆಗಿರುವ ಕಂಪನಿಯ ಬೀಜಗಳನ್ನೇ ಖರೀದಿಸಲು ಆಸಕ್ತಿ ತೋರುತ್ತಿದ್ದಾರೆ. ಇದು ಭಾರತೀಯ ರೈತ ಸಮುದಾಯವನ್ನೇ ಕಂಪನಿಗಳ ಮುಂದೆ ಕೈ ಒಡ್ಡುವಂತೆ ಮಾಡಿ ಅಸಹಾಯಕನನ್ನಾಗಿ ಮಾಡಿ ನಿಲ್ಲಿಸಿದೆ.ಅದು ಇಂದಿನ ಪರೀಸ್ಥಿತಿಯಲ್ಲಿ ಅನಿವಾರ್ಯವೂ ಆಗಿದೆ. ಆ ರಾಸಾಯನಿಕ, ಕೀಟನಾಶಕ ಗೊಬ್ಬರಗಳ ಬದಲು ಗೋವಿನ ಸಗಣಿ ಮತ್ತು ಗೋಮೂತ್ರಗಳ ಬಳಕೆಯಿಂದ ಮಣ್ಣಿನ ಆರೋಗ್ಯವನ್ನು ಹಾಳು ಮಾಡದೆ ವಿಭಿನ್ನ ರೋಗಗಳನ್ನು ದೂರ ಇಡುವುದರ ಮೂಲಕ ಲಕ್ಷಾಂತರ ಕೋಟಿ ಸಾರಿಗೆ ಖರ್ಚನ್ನು, ನೆಲದ ಆರೋಗ್ಯವನ್ನು, ಕೃಷಿ ಉತ್ಪಾದನೆಗೆ ತಗುಲುವ ವೆಚ್ಚವನ್ನು ಕಡಿಮೆ ಮಾಡಿ ರೈತ ಲಾಭಗಳಿಸಲು ಸಾಧ್ಯವಿದೆ. ಗೋವು ಹಾಗೂ ಗೋವಿನ ಉತ್ಪನ್ನಗಳನ್ನು ಮಾನವನ ಆರ್ಥಿಕತೆಯ ಬೆಳವಣಿಗೆಗೆ ಸಹಾಯಕವಾಗಬಲ್ಲವು. ಪರಿಶೀಲಿಸಿನೋಡುವುದಾದರೆ ಉದಾಹರಣೆಗೆ ತಿಪ್ಪೆ ಗೊಬ್ಬರದಲ್ಲಿ

| ಇರುವ ಪೋಷಕಾಂಶಗಳು. | ಸಾರಜನಕ | ೦.೮೦% |
|---|---|---|
| | ರಂಜಕ | ೦.೩೫% |
| | ಪೊಟಾಷ್ | ೦.೪೮% |
| | ಕ್ಯಾಲ್ಸಿಯಂ | ೨.೨೭% |
| | ಸೋಡಿಯಂ | ೦.೦% |
| | ಮೆಗ್ನೇಷಿಯಂ | ೫.೭% |

**ಜೊತೆಗೆ ಪೋಷಕಾಂಶಗಳಾಗಿ**

| | |
|---|---|
| ಕಬ್ಬಿಣ | ೧೧೬೯೦ |
| ಸತು | ೧೨೮ |

| | | |
|---|---|---|
| ಮ್ಯಾಂಗನೀಸ್ | ೪೧೪ | ಪಿ.ಪಿ.ಎಂ.ಗಳಲ್ಲಿ |
| ತಾಮ್ರ | ೧೭ | |
| ಬೋರಾನ್ | ೨೫ | |
| ಅಲ್ಯುಮಿನಿಯಂ | ೭೩೮೦ | |

ಇಷ್ಟೊಂದು ಪೋಷಕಾಂಶಗಳ ಜೊತೆಗೆ ಉಪ ಪೋಷಕಾಂಶಗಳು, ಲಘು ಪೋಷಕಾಂಶ ಗಳಲ್ಲದೆ, ಜಿಬರ್ಲಿನ್, ಸೈಟೋಕೈನಿನ್ ನಂತಹ ಬೆಳೆವರ್ಧಕಗಳನ್ನೂ ಸೂಕ್ಷ್ಮಾಣು ಜೀವಿಗಳನ್ನು ಮತ್ತು ರೋಗ-ಕೀಟಗಳನ್ನು ತಡೆಯುವ ಆಂಟಿ ಬಯೋಟಿಕ್‌ಗಳನ್ನು ಹೊಂದಿರುತ್ತದೆ. ಸಗಣಿ, ಗೋಮೂತ್ರ, ಹಾಗೂ ಪೂರಕ ನಿಸರ್ಗದತ್ತವಾದ ಬೆಲ್ಲ, ಇವುಗಳನ್ನು ಬಳಸಿ 'ಜೀವಾಮೃತ' ಎಂಬ ದ್ರಾವಣ ಮಾಡಿ ಸಿಂಪಡಿಸುವುದರಿಂದ ಅನೇಕ ಕೀಟ ಹಾಗೂ ಶಿಲೀಂಧ್ರ ರೋಗಗಳನ್ನು ನಿಯಂತ್ರಿಸಬಹುದಲ್ಲದೆ ಹೆಚ್ಚಿನ ಇಳುವರಿ ಪಡೆಯಬಹುದು. ಅಲ್ಲದೆ ಸಗಣಿ ಮತ್ತು ಗೋಮೂತ್ರದಿಂದ ಬೀಜೋಪಚಾರ ಮಾಡುವುದರಿಂದಲೂ ಅನೇಕ ಅನಗತ್ಯ ಖರ್ಚು ವೆಚ್ಚಗಳನ್ನು, ರೋಗಗಳನ್ನು ದೂರ ಇಡಬಹುದು. ಇಂದು ಮರಳಿಸಾವಯವದೆಡೆಗೆ ಎಂದು ರೈತರು ಮತ್ತೆ ಗೋ ಸ್ನೇಹಿ ಕೃಷಿಯ ಕಡೆಗೆ ಮನಸ್ಸು ಮಾಡುತ್ತಿದ್ದಾರೆ. ಕೃಷಿ ಆಧಾರವಾಗಿರುವ ಭಾರತದ ಅತೀ ದೊಡ್ಡ ಶಕ್ತಿ ಗೋಸಂಪತ್ತು. ವಿಶ್ವ ಮಾರುಕಟ್ಟೆಯಲ್ಲಿ ಪಾಶ್ಚಾತ್ಯ ಕಂಪನಿಗಳ ಉತ್ಪನ್ನಗಳ ಮಾರಾಟಕ್ಕೆ ದೊಡ್ಡ ವೇದಿಕೆ ಭಾರತದ ರೈತ ಸಮುದಾಯ ಹಾಗೂ ಶ್ರೀಮಂತಿಕೆಯನ್ನು, ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಗೋವನ್ನು ನಿರಾಕರಿಸಿದ ಆಧುನಿಕ ಕೃಷಿಯು ರೈತರ ಮೇಲೆ, ಪಶುಪಾಲನೆಯ ಮೇಲೆ ಬೀರಿದ ಸಾಮಾಜಿಕ, ಆರ್ಥಿಕ ಪರಿಣಾಮಗಳು ಸಾಮಾನ್ಯ ಕೃಷಿಕರ ಊಹೆಗೂ ಸಿಗದವು. ಅವುಗಳನ್ನು ಇಲ್ಲಿಯವರೆಗೆ ಚರ್ಚಿಸಲಾಗಿದೆ.

ಗೋವು ತಾನು ಹೊಂದಿರುವ ಅವಯವಗಳ ಉಪಯುಕ್ತತೆಯಿಂದ ಆಧುನಿಕ ಯುಗದಲ್ಲೂ ಪಶುಪಾಲನೆ ಲಾಭದಾಯಕವೆನಿಸಿದೆ. ಹಾಗೂ ಮಾನವನ ಆರೋಗ್ಯ ಸಂಬಂಧಿ ಔಷಧಿಗಳ ಉತ್ಪಾದನೆಗೂ ಗೋವನ್ನು ಬಳಸಲಾಗುತ್ತದೆ. ಸಹಜವಾಗಿಯೇ ಮಾನವನಿಗೆ ಅಗತ್ಯ ಪೋಷಕಾಂಶಗಳನ್ನು ಒದಗಿಸುತ್ತದೆ. ಆ ಪೋಷಕಾಂಶಗಳ ವಿವರಗಳನ್ನು ನೋಡುವುದಾದರೆ,

| | **ಹಾಲು** | **ಮೊಸರು** |
|---|---|---|
| ಸಾರಜನಕ | ೩.೨ ಗ್ರಾಂ | ೩.೧ ಗ್ರಾಂ |
| ಶರ್ಕರಪಿಷ್ಟ | ೪.೪ ಗ್ರಾಂ | ೪.೧ ಗ್ರಾಂ |

ಕೊಬ್ಬು ೪.೧ ಮಿ.ಗ್ರಾಂ ೩.೧ ಮಿ.ಗ್ರಾಂ

ಶಕ್ತಿ ೬೫ ಮಿ.ಗ್ರಾಂ ೫೧ ಮಿ.ಗ್ರಾಂ

ಸುಣ್ಣ ೧೨೦ ಗ್ರಾಂ ೧೨೦ ಗ್ರಾಂ. ಇರುತ್ತದೆ.

ಈ ವಿಟಮಿನ್‌ಗಳು ಗೋವಿನ ಉತ್ಪನ್ನಗಳಲ್ಲಿ ಸಹಜವಾಗಿ ಸಿಗುವುದರಿಂದ ಆರೋಗ್ಯ ವೃದ್ಧಿಸುವುದರೊಂದಿಗೆ ಅನಗತ್ಯ ವೈದ್ಯಕೀಯ ವೆಚ್ಚವನ್ನು ಕಡಿಮೆ ಮಾಡುತ್ತದೆ. ಯಥೇಚ್ಛವಾದ ಕ್ಯಾಲ್ಸಿಯಂ ಹಾಲಿನಲ್ಲಿ ಇರುವುದರಿಂದ ಮೂಳೆಗಳ ಬೆಳವಣಿಗೆಗೂ ಕಾರಣವಾಗುತ್ತದೆ. ಅಲ್ಲದೆ ಮಾನವನ ಜೀವನದ ಎಲ್ಲಾ ಮಜಲುಗಳಲ್ಲಿಯೂ ಗೋವು ಸರ್ವ ವಿಧದಲ್ಲಿಯೂ ಉಪಯುಕ್ತವಾಗಿದೆ. ಪಂಚಗವ್ಯ (ಹಾಲು, ಮೊಸರು, ಗೋಮೂತ್ರ, ತುಪ್ಪ ಹಾಗೂ ಗೋಮಯ, ಸಗಣಿ ಹಾಕಿ ಮಾಡಿದ ಒಂದು ದೇಹಶುದ್ಧಿಗೆ ಬಳಸುವ ಪದಾರ್ಥ) ಪಂಚಾಮೃತ, ಹಾಲು, ಮೊಸರು ತುಪ್ಪ ಗೋಮೂತ್ರ, ಗೋಮಯ, ಈ ರೀತಿ ಎಲ್ಲಾ ಗೋಜನ್ಯ ವಸ್ತುಗಳು ಒಂದಲ್ಲೊಂದು ರೀತಿಯಲ್ಲಿ ಉಪಯೋಗಕ್ಕೆ ಬರುವಂಥವೇ

ವಿಶ್ವ ಆರೋಗ್ಯ ಸಂಸ್ಥೆ (WHO) ಅಧ್ಯಯನದ ಪ್ರಕಾರ ಭಾರತದ ಅನೇಕ ರಾಜ್ಯಗಳಲ್ಲಿ ಶೇ.೧೬ರಷ್ಟು ಕುಟುಂಬಗಳು (ಇಂದು ಇದು ಇನ್ನೂ ಹೆಚ್ಚಾಗಿದೆ) ೧೦,೦೦೦ (ಹತ್ತು ಸಾವಿರ) ಕ್ಕಿಂತ ಹೆಚ್ಚಿನ ಹಣವನ್ನು ವೈದ್ಯಕೀಯ ವೆಚ್ಚಕ್ಕಾಗಿಯೇ ಬಳಸುತ್ತಿದ್ದಾರೆ.[೧೯] ಗೋಮೂತ್ರವು ಆಂಟಿ ಬಯೋಟಿಕ್ ಗುಣವನ್ನು ಹೊಂದಿದೆ. ಇದು ಶೇ. ೧೦೦ ರಷ್ಟು ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸುತ್ತದೆ. ಅಲ್ಲದೆ ೪೪ ತರಹದ ಭಯಂಕರ ಕಾಯಿಲೆಗಳು ಸಂಪೂರ್ಣವಾಗಿ ವಾಸಿಯಾಗುತ್ತವೆ. **ಕೇಂದ್ರ ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನಾ ಕೇಂದ್ರ**(CSIR)ಇದನ್ನು ದೃಢಪಡಿಸಿದೆ. ಕ್ಯಾನ್ಸರ್, ಮಧುಮೇಹ, ಟೈಫಾಯ್ಡ್, ರೋಗಗಳನ್ನು ಗುಣಪಡಿಸುವ ಶಕ್ತಿ ಗೋಮೂತ್ರಕ್ಕಿದೆ. ಇತ್ತೀಚೆಗೆ ಬಂದ ಊ೧ಓ೧ ರೋಗಕ್ಕೆ ಗೋಮೂತ್ರ ಪರಿಣಾಮಕಾರಿ ಔಷಧಿ ಎಂಬುದನ್ನು **ಡಾ. ವಿಜಯಾಭಟ್** ಸಾಬೀತು ಮಾಡಿದ್ದಾರೆ. ಗೋಮೂತ್ರ ಆಂಟಿ ವೈರಲ್, ಆಂಟಿ ಫಂಗಸ್, ಹಾಗೂ ಆಂಟಿ ಸೆಪ್ಟಿಕ್ ಆಗಿ ಕಾರ್ಯ ನಿರ್ವಹಿಸುತ್ತದೆ. ಗಾಯಗಳನ್ನು ಗುಣಪಡಿಸುವ ಗುಣವೂ ಗೋಮೂತ್ರಕ್ಕಿದೆ. ಇದೇ ಚಿಕಿತ್ಸೆಗೆ ಆಧುನಿಕ ವೈದ್ಯ ಪದ್ಧತಿಯಲ್ಲಿ ಸಾವಿರಾರು ರೂಪಾಯಿಗಳನ್ನು ವೆಚ್ಚ ಮಾಡಬೇಕಾಗುತ್ತದೆ.[೨೦]

ಅಲ್ಲದೆ ಹಾಲು ವೀರ್ಯ ವರ್ಧಕ, ಕಾಂತಿ ವರ್ಧಕ, ಮೈಥುನ ಶಕ್ತಿ ಹೆಚ್ಚಿಸುವ ಗುಣ ಹೊಂದಿರುವುದನ್ನು **'ಖವಸುಲ್ಲ ಆದ್ವಿಯಾ'** ಎಂಬ ಯುನಾನಿ ಗ್ರಂಥ ತಿಳಿಸುತ್ತದೆ. ಅಲ್ಲದೆ ಪಂಚಗವ್ಯದ ಔಷಧೀಯ ಗುಣಗಳನ್ನು ಭಾರತದ ಸರ್ಕಾರಿ ಸಂಸ್ಥೆಗಳು ಪ್ರಾಮಾಣೀಕರಿಸಿವೆ.

ಪಂಚಗವ್ಯವನ್ನು **'ಫೆನರೋಚೇಟ್ ಕ್ರೈಸೋ ಸ್ಪೋರಿಯಂ'** ನಂತಹ ಅತ್ಯಂತ ಸಮರ್ಥ ಬೂಷ್ಟಿಗೆ ಹೋಲಿಸಲಾಗಿದೆ. ಗೊಬ್ಬರವಾಗಿ ಪಂಚಗವ್ಯದ ಬಳಕೆ ಹೈಡ್ರೋಜನ್, ನೈಟ್ರೋಜನ್, ಫಾಸ್ಪರಸ್ ಮತ್ತು ಪೊಟ್ಯಾಷಿಯಂ ಅಂಶಗಳನ್ನು ಒದಗಿಸಬಲ್ಲದು. ಇದು ಬ್ಯಾಕ್ಟೀರಿಯಾ, ಫಂಗಸ್, ಈಸ್ಟ್ ಮುಂತಾದವುಗಳಿಗೆ ಒಂದು ಸಮರ್ಥ ಚಿಕಿತ್ಸೆ ಆಗಬಲ್ಲದು.[೨೧] ಒಟ್ಟಾರೆ ಗೋವಿನ ಸೆಗಣಿ, ಹಾಲು, ಮೊಸರು, ತುಪ್ಪ, ಬೆಣ್ಣೆ, ಗೋಮೂತ್ರ ಇವುಗಳಲ್ಲಿ ಇರುವ ಔಷಧೀಯ ಗುಣಗಳು ಇಂದು ಅನೇಕ ಉತ್ಪನ್ನಗಳ ವ್ಯವಹಾರಕ್ಕೆ ಕಾರಣವಾಗಿದೆ. ಗೋವಿನಿಂದ ಬರುವ ಸಹಜ ಉತ್ಪನ್ನಗಳನ್ನೇ ಸರಿಯಾಗಿ ಬಳಸಿದರೆ ಪಾಶ್ಚಾತ್ಯ ಕಂಪನಿಗಳಿಂದ ತರಿಸುವ ಸಾವಿರಾರು ಕೋಟಿ ರೂಪಾಯಿಗಳ ಆಂಟಿ ಬಯೋಟಿಕ್‌ಗಳು, ರಾಸಾಯನಿಕಗಳ ವಿನಿಮಯದ ಹಣವನ್ನು ಉಳಿಸಬಹುದು.

ಇನ್ನು ಗೋವಿನ ಮಾಂಸ, ರಕ್ತ ಹಾಗೂ ದೇಹದ ಅಂಗಾಂಗಗಳಿಂದ ಉತ್ಪಾದಿಸುತ್ತಿರುವ ಉತ್ಪನ್ನಗಳ ಬಗ್ಗೆ ನೋಡುವುದಾದರೆ, ಮೃತದನಗಳ ಶರೀರದಿಂದ ಪಡೆದ ಕೊಬ್ಬಿನ ಆಮ್ಲವನ್ನು ಕಾರಿನ ಬ್ರೇಕ್ ದಕ್ಷತೆಯಿಂದ ಕಾರ್ಯನಿರ್ವಹಿಸಲು ಬಳಸುವ **"ಬ್ರೇಕ್ ಫ್ಲೂಯಿಡ್"** ತಯಾರಿಕೆಗೆ ಬಳಸುತ್ತಾರೆ. ಅಲ್ಲದೆ ವಾಹನದ ಟಯರ್‌ಗಳ ತಯಾರಿಕೆಯಲ್ಲಿ ಟಯರ್‌ಗಳು ವಿಶೇಷ ಹಿಡಿತ ಹೊಂದಲು ದನದ ಕೊಬ್ಬಿನಿಂದ ತಯಾರಿಸಿದ **'ಸ್ಟೀಯರಿಕ್ ಆಸಿಡ್'** ನ್ನು ಬಳಸುತ್ತಾರೆ. ಹಾಗೂ ಯುವಕರು ಪ್ರೀತಿಯಿಂದ ತಮ್ಮ ಸ್ಟೈಲ್ ಎಂದು ಭಾವಿಸಿ ಅಗಿಯುತ್ತಿರುವ ಚ್ಯೂಯಿಂಗ್‌ಗಂ! ಹೌದು ಇದು ಬಹುರಾಷ್ಟ್ರೀಯ ಕಂಪನಿಯ ಹಲವು ಚಾಕಲೇಟ್ ಕಂಪನಿಗಳು ಸಾವಿರಾರು ಕೋಟಿ ರೂಪಾಯಿಗಳನ್ನು ವಹಿವಾಟು ನಡೆಸುತ್ತಿವೆ. ಅಂಥ ಚ್ಯೂಯಿಂಗ್‌ಗಂ ತಯಾರಿಕೆಯಲ್ಲಿಯೂ ದನದ ದೇಹದಿಂದ ಪಡೆದ **'ಕೊಲಾಜಿನ್'** ಎಂಬ ವಸ್ತುವನ್ನು ಬಳಸುತ್ತಾರೆ. ಇತ್ತೀಚೆಗೆ ಜಪಾನಿ ವಿಜ್ಞಾನಿಯೊಬ್ಬಳು ಸಗಣಿಯಿಂದ ಕೃತಕ ವೆನೀಲಾ ಪರಿಮಳವನ್ನು ಪಡೆಯಲು ಸಾಧ್ಯ ಎಂಬುದನ್ನು ತೋರಿಸಿ **'ಇಗ್ ನೋಬೆಲ್'** ಪ್ರಶಸ್ತಿಯನ್ನು ಪಡೆದಿದ್ದಾಳೆ.[೨೨]

ಇಂದು ನಮ್ಮಲ್ಲಿ ೩೬,೦೦೦ ಕ್ಕಿಂತ ಹೆಚ್ಚು ಅಧಿಕೃತ ಕಸಾಯಿಖಾನೆಗಳಲ್ಲಿ ಗೋವುಗಳನ್ನು ಕತ್ತರಿಸಿ ಅದರ ಮಾಂಸ ಮತ್ತು ಇನ್ನಿತರ ಪದಾರ್ಥಗಳನ್ನು ವಿದೇಶಕ್ಕೆ ರಫ್ತು ಮಾಡಿ ನಮ್ಮ ಸರ್ಕಾರ ವಿದೇಶಿ ವಿನಿಮಯವನ್ನು ಗಳಿಸುತ್ತಿದೆ. ಆದರೆ ನಾವು ನಮ್ಮಲ್ಲಿರುವ ಗೋವಂಶದ ಕೊರತೆಯಿಂದಾಗಿ ಗೊಬ್ಬರವಿಲ್ಲದೆ ರಾಸಾಯನಿಕ ಗೊಬ್ಬರ, ಹಾಲಿನ ಪುಡಿ, ಮತ್ತು ಕೀಟನಾಶಕ ಗಳನ್ನು ಆಮದು ಮಾಡಿಕೊಳ್ಳುತ್ತಿದ್ದೇವೆ. ಇದು ನಾವು ರಫ್ತಿನಿಂದ ಗಳಿಸುವ ಲಾಭಕ್ಕಿಂತ ಸಾವಿರಾರು ಪಟ್ಟು ನಷ್ಟವಾಗುತ್ತಿದೆ ಎಂಬುದನ್ನು ಗಮನಿಸಬೇಕು. ಪಾಶ್ಚಾತ್ಯ ದೇಶದ ದೊಡ್ಡ ದೊಡ್ಡ ಫಾರಂಗಳಲ್ಲಿ ದಿನವೊಂದಕ್ಕೆ ನೂರಾರು ಹಸುಗಳು ಕರುಗಳನ್ನು ಹಾಕುತ್ತವೆ. ಆಗ

ಗರ್ಭದಿಂದ ಬೀಳುವ ಸೆತ್ತೆಯನ್ನು ಸಂಗ್ರಹಿಸಿ ನಾನಾ ಬಗೆಯ ಔಷಧಿ ದ್ರವ್ಯಗಳನ್ನೂ, ಶೃಂಗಾರ ಪರಿಕರಗಳನ್ನು ತಯಾರಿಸುತ್ತಾರೆ. ದನಗಳ ಮೂಳೆಗಳನ್ನು ಪುಡಿ ಪುಡಿ ಮಾಡಿ ಗೊಬ್ಬರದಲ್ಲೂ ಬಳಸುತ್ತಿದ್ದಾರೆ. ಅಲ್ಲದೆ ಮಾಂಸಾಹಾರ ಹಾಗೂ ಹಾಲಿನ ಉತ್ಪನ್ನಗಳಷ್ಟೇ ಅಲ್ಲದೆ ಬೇರೆ ಬೇರೆ ರೂಪಗಳಲ್ಲಿ ಬೇರೆ ಬೇರೆ ಉತ್ಪನ್ನಗಳಾಗಿ ರೂಪತಾಳಿ ಅಗತ್ಯ ದಿನ ಬಳಕೆಯ ವಸ್ತುಗಳಾಗಿ ಲಕ್ಷಾಂತರ ಕೋಟಿ ಲಾಭವನ್ನು ತರುತ್ತಿವೆ. ದನಗಳ ಶ್ವಾಸಕೋಶ ಮತ್ತು ಶ್ವಾಸನಾಳದ ಒಳಪೊರೆಯಿಂದ **'ಹೆಪಾರಿನ್'** ಎಂಬ ಔಷಧವನ್ನು ತಯಾರಿಸುತ್ತಾರೆ. ಇದು ಗ್ಯಾಂಗ್ರೀನ್ ಆಗದಂತೆ ಹಾಗೂ ರಕ್ತ ಗರಣೆಗಟ್ಟದಂತೆ ತಡೆಯಲು ಪ್ರಯೋಜನಕಾರಿ. ದನದ ಅಡ್ರಿನಲ್ ಗ್ರಂಥಿಯಿಂದ ತಯಾರಿಸುವ **ಸ್ಟಿರಾಯಿಡ್** ಅಸ್ತಮಾ ಕಾಯಿಲೆಗೆ ಉಪಯುಕ್ತ. ಇದೇ ಗ್ರಂಥಿಯಿಂದ **'ಎಫಿನೆಫ್ರಿನ್'** ಎಂಬ ಔಷಧವನ್ನು ರಕ್ತದ ಒತ್ತಡವನ್ನು ಹೆಚ್ಚಿಸಲು ಬಳಸುತ್ತಾರೆ. ದನದ ಯಕೃತ್ತಿನಿಂದ ಬಿ-೧೨ ಲಿವರ್ ಎಕ್ಸಟ್ರ್ಯಾಕ್ ಔಷದಿಗಳು ತಯಾರಾಗುತ್ತವೆ. ಮಧುಮೇಹಿಗಳಿಗೆ ಅಗತ್ಯ **"ಇನ್ಸುಲಿನ್"**ಅನ್ನು ಮೇಧೋಜೀರಕ ಗ್ರಂಥಿಗಳಿಂದ ಪಡೆಯಲಾಗುತ್ತದೆ. ಗೋವಿನ ರಕ್ತದಿಂದ ಕಬ್ಬಿಣದ ಸತ್ವಯುಕ್ತ ಟಾನಿಕ್ ತಯಾರಿಸಲಾಗುತ್ತಿದೆ. ಕೀಲು ನೋವು ಸಂಧಿವಾತಕ್ಕೆ ಅಗತ್ಯವಾದ **'ಕೊಂಡ್ರಾಯಿಟನ್ ಸಲ್ಫೇಟ್'** ಎಂಬ ಔಷಧಿಯನ್ನು ದನದ ಮೂಗಿನ ಹೊರಳೆಗಳ ನಡುವಣ ಮೃದ್ವಸ್ಥಿಯಿಂದ ತಯಾರಿಸುತ್ತಾರೆ. ಮಾನವನ ತಲೆಗೆ ಏನಾದರೂ ತೊಂದರೆಯಾಗಿ ಶಸ್ತ್ರಚಿಕಿತ್ಸೆ ಆದರೆ, ಮಾನವನ ಕಾಲಿ ತಲೆ ಬುರಡೆ ಜಾಗ ತುಂಬಲು ದನದ ಮೆದುಳಿನ ನಾರಿನಂತಹ ಹೊರಗವಚ(**ಡ್ಯೂರಾಮೇಟರ್**)ವೈದ್ಯಕೀಯ ಕ್ಷೇತ್ರದಲ್ಲಿ ಬಳಕೆಯಾಗುತ್ತಿದೆ. ದನದ ಕರುಳಿನಿಂದ ಗಾಯ ಹೊಲಿಯುವ ದಾರವನ್ನು ತಯಾರಿಸುತ್ತಾರೆ. ದನಗಳ ಪಿತ್ತಕೋಶದ ಕಲ್ಲುಗಳನ್ನು ಪಾಲಿಶ್ ಮಾಡಿ ಆಭರಣ ತಯಾರಿಕೆಗೆ ಬಳಸುತ್ತಾರೆ. ಐರನ್ ಟ್ಯಾಬ್ಲಟ್‌ಗಳ ತಯಾರಿಕೆಯಲ್ಲೂ ದನದ ರಕ್ತ ಬಳಕೆಯಾಗುತ್ತಿದೆ. ಸಕ್ಕರೆ ಅಚ್ಚ ಬಿಳಿಬಣ್ಣಕ್ಕೆ ಬರಲು ದನದ ಮೂಳೆ ಬಳಕೆಯಾಗುತ್ತದೆ. ಪಿಂಗಾಣಿ ವಸ್ತುಗಳ ತಯಾರಿಕೆಯಲ್ಲಿ, ಉತ್ಕೃಷ್ಟ ಗುಣಮಟ್ಟದ ಉಕ್ಕಿನ ತಯಾರಿಕೆಗೆ ಮೂಳೆ ಪುಡಿ ಬೇಕೇ ಬೇಕು. ಆಧುನಿಕ ಫ್ಯಾಷನ್ ಲೋಕದಲ್ಲಿ ಎಲುಬಿನ ಬಟನ್‌ಗಳಿಗೆ ವಿಶೇಷ ಬೇಡಿಕೆ ಇದೆ. ಚೆಸ್ ಪಾನ್, ಡೈಸ್‌ಗಳನ್ನು ಮೂಳೆಗಳಿಂದ ತಯಾರಿಸುತ್ತಾರೆ. ದನಗಳ ಮೂಳೆ ಮತ್ತು ಕೊಬ್ಬಿನಿಂದ ತಯಾರಿಸುವ **"ಟ್ಯಾಲೋ"**ಎಣ್ಣೆ ಬ್ರೇಕ್ ಆಯಲ್ ಹಾಗೂ ಜೆಟ್ ವಿಮಾನಗಳ ಕೀಲೆಣ್ಣೆಯ ಉತ್ಪಾದನೆಗೆ ಕಚ್ಚಾ ಪದಾರ್ಥವಾಗಿ ಬಳಕೆಯಾಗುತ್ತದೆ. ದನಗಳ ಮೂಳೆಗಳಿಂದ ತಯಾರಿಸುವ ಮೂರ್ತಿಗಳು, ಆಟಿಕೆಗಳನ್ನು ನಿರ್ಮಿಸುವ **'ಬೋನ್ ಕಾರ್ವಿಂಗ್'** ಆಂಧ್ರ ಪ್ರದೇಶದಲ್ಲಿ ಒಂದು ಉಧ್ಯಮವೇ ಆಗಿದೆ. ಮೊಂಬತ್ತಿಗೆ **'ಟ್ಯಾಲೋ'** ಮೂಲವಸ್ತು. ನಟ ನಟಿಯರು ಅಳಲಿಕ್ಕೆ ಬಳಸುವ **"ಗ್ಲಿಸರೀನ್"** ಇದೇ ಟ್ಯಾಲೋದಿಂದಲೇ ಸಿದ್ಧವಾಗುತ್ತದೆ. ಟ್ಯಾಲೋದಿಂದ ಅನೇಕ ಸಾಬೂನು, ಡಿಟರ್ಜೆಂಟ್, ಇಯರ್ ಡ್ರಾಪ್,

ಐಡ್ರಾಪ್ಸ್, ಕಾಫ್ ಸಿರಪ್, ಹೇರ್ ಕಂಡೀಷನರ್, ಶಾಂಪೂ ಎಲ್ಲವುಗಳನ್ನು ತಯಾರಿಸಲು ಗ್ಲಿಸರೀನ್‌ನ್ನು ಮೂಲವಸ್ತುವಾಗಿ ಬಳಸುತ್ತಾರೆ.[೨೩]

ದನಗಳ ಅಂಗಾಂಶಗಳಿಂದ ತಯಾರಿಸಿದ **'ಕೊಲಾಜೆನ್'** ದ್ರವ್ಯಕ್ಕೆ ಬಹಳ ಬೇಡಿಕೆ ಇದೆ. ಇದು ಹಿರಿಯರ ಮೂತ್ರ ವಿಸರ್ಜನೆಯ ತೊಂದರೆಗೆ, ನಂಜು ನಿರೋಧಕ ಬ್ಯಾಂಡೇಜುಗಳ ತಯಾರಿಕೆಗೆ ಬಳಸುತ್ತಾರೆ. ಸೌಂದರ್ಯ ಚಿಕಿತ್ಸಕರು ಆಳವಾದ ಮಾನವನ ಗಾಯಗಳನ್ನು ಮುಚ್ಚಲು ಕೋಲಾಜೆನ್ ತುಂಬುತ್ತಾರೆ. **ಜೆಲ್ಲಿ, ಜಾಮ್,** ಹಾಗೂ ಬಹಳಷ್ಟು ಸೌಂದರ್ಯ ವರ್ಧಕಗಳ ತಯಾರಿಕೆಯಲ್ಲಿ ಈ ಪದಾರ್ಥ ಬಳಸುತ್ತಾರೆ. ಕಸಾಯಿಖಾನೆಯ ಉಳಿಕೆ, ಕಚಡಾ ವಸ್ತುಗಳನ್ನು ಶಾಖೋತ್ಪನ್ನ ವಿದ್ಯುತ್ ಘಟಕಗಳಲ್ಲಿ ಇಂಧನವಾಗಿ ಉರಿಸುವ ಹೊಸ ಸಂಪ್ರದಾಯ ಆರಂಭವಾಗಿದೆ. ಈ ವಿದ್ಯುತ್ ಘಟಕದ ಉಳಿಕೆ ಹೊಲಗದ್ದಗಳಿಗೆ ಹಾಗೂ ಮನೆ ಕಟ್ಟುವ ಇಟ್ಟಿಗೆಗಳಾಗಿ ಪರಿವರ್ತನೆಯಾಗುತ್ತದೆ. ಅಂಗಡಿಯ ಸಿಹಿ ತಿಂಡಿಗಳ ಮೇಲೆ ಹಾಕುವ ಬೆಳ್ಳಿ ಪದರಗಳನ್ನು(VARAKH)ನ್ನು ದನದ ಕರುಳಿನ ಚರ್ಮದಿಂದ ಮಾಡಿರುವ ಹಾಳೆಗಳ ಮಧ್ಯದಲ್ಲಿ ಲೋಹದ ತುಂಡುಗಳನ್ನು ಜಬ್ಬಿ ಮಾಡುತ್ತಾರೆ. ಈ ಕ್ರಿಯೆಗೆ ಹೆಚ್ಚು ಸಣ್ಣ ಕರುಗಳನ್ನು ಬಳಸುತ್ತಾರೆ. ಒಂದು ಸಮೀಕ್ಷೆಯ ಪ್ರಕಾರ ಭಾರತದಲ್ಲಿ ಒಂದು ವರ್ಷಕ್ಕೆ **೨೭೫** ಟನ್ **(೨,೭೫೦೦೦)** ಬೆಳ್ಳಿಯನ್ನು ಪದರಗಳನ್ನಾಗಿ ತಟ್ಟಲಾಗುತ್ತಿದ್ದು, ಇದಕ್ಕೆ **೫,೧೬೦೦೦** ಹಸುಗಳ ಕರುಳುಗಳನ್ನು ಹಾಗೂ **೧೭೨೦೦** ಕರುಗಳ ಕರುಳುಗಳನ್ನು ಉಪಯೋಗಿಸಲಾಗುತ್ತಿದೆ. ಮಾನವನ ಹಲ್ಲು ಶುಚಿಗೊಳಿಸಲು ಬಳಸುವ ಪೇಸ್ಟ್ ತಯಾರಿಸಲು ಬಳಸುವ **'ಡೈ ಕ್ಯಾಲ್ಸಿಯಂ ಫಾಸ್ಫೇಟ್'** ದನಗಳ ಮೂಳೆಯನ್ನು ಚೆನ್ನಾಗಿ ಕುದಿಸಿ ಪಡೆಯುವ ತ್ಯಾಜ್ಯವಾಗಿದೆ. ಲಕ್ಷಾಂತರ ಸಾವಿರ ಕೋಟಿ ರೂಪಾಯಿಗಳ ಉದ್ಯಮವಾಗಿರುವ ಚರ್ಮದ ಉತ್ಪನ್ನಗಳಾದ ಬೂಟು, ಬೆಲ್ಟ್, ಬ್ರೀಫ್‌ಕೇಸ್, ಸೋಫಾ ಕವರ್, ಕಾರಿನ ಸೀಟ್ ಎಲ್ಲಕ್ಕೂ ಗೋವಿನ ಚರ್ಮಕ್ಕೆ ವಿಶೇಷ ಬೇಡಿಕೆ ಇದೆ. ಇಲ್ಲೊಂದು ಸತ್ಯ ಭಯಾನಕ ಪ್ರಕ್ರಿಯೆಯನ್ನು ವಿವರಿಸುತ್ತದೆ. ಎಂದರೆ ಚರ್ಮ ಮೃದುವಾಗಿದ್ದಷ್ಟು ಅದರ ಬೆಲೆ ಹೆಚ್ಚುತ್ತದೆ. ಆದ್ದರಿಂದ ಅತಿ ಆಸೆಯ ಮಾನವ ಆ ಜೀವಂತ ಗೋವುಗಳ ಮೇಲೆಯೇ ೨೦೦೦ ಡಿಗ್ರಿಯಷ್ಟು ಬೆಚ್ಚನೆಯ ಬಿಸಿ ನೀರನ್ನು ಸುರಿದು ಜೀವಂತವಾಗಿಯೇ ಅವುಗಳ ಚರ್ಮ ಸುಲಿಯಲಾಗುತ್ತದೆ. ಎಂಬುದು ಗೋಮಾತೆ, ಭಾರತೀಯರ ಆರಾಧ್ಯ ದೈವದ ಸ್ಥಾನ ಪಡೆದ ದನಗಳ ಆಧುನಿಕ ಉಪಯೋಗಗಳು. ಲಾಭವೇ ಪ್ರಧಾನವಾದ ಉಧ್ಯಮ ದೃಷ್ಟಿ ಗೋವುಗಳ ದೈವತ್ವವನ್ನು ನಿರಾಕರಿಸಿದವು. ವೈಜ್ಞಾನಿಕ ದೃಷ್ಟಿಯಲ್ಲಿ ಹೊಸ ಉತ್ಪನ್ನಗಳ ಉಪಯೋಗಗಳು ಜನಪ್ರೀಯವಾದಂತೆ ಗೋವುಗಳನ್ನು ವಧಿಸುವ ಆಧುನಿಕ ಕಸಾಯಿಖಾನೆಗಳೂ ಹೆಚ್ಚು ಹೆಚ್ಚು ಕಾರ್ಯ ಪ್ರೌವೃತ್ತವಾದವು.[೨೪]

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಗೋವು ಇದ್ದರೂ ಹಣ ಸತ್ತರೂ ಹಣ ಎಂಬ ತತ್ವ ಗೋವುಗಳ ಪಾಲನೆಯಲ್ಲಿ ಅನೇಕ ಬದಲಾವಣೆಗೆ ಕಾರಣವಾಗಿದೆ. ಗೋವು ಮಾನವನ ಜೊತೆಯಾಗಿ, ಆಹಾರವಾಗಿ, ಅವನ ಸಾಮಗ್ರಿಗಳನ್ನು ಸಾಗಿಸಲು ಜೊತೆಯಾಗಿ, ಅನಂತರ ಕಂಡುಕೊಂಡ ಗಾಡಿಯನ್ನು, ನೇಗಿಲನ್ನು, ಯಂತ್ರಗಳನ್ನು ಎಳೆಯುವ ಶಕ್ತಿಯಾದವು. ಕೃಷಿಕಾರನ ಜೊತೆಗಾರನಾಗಿ, ತನ್ನ ಉತ್ಪನ್ನಗಳಿಂದ ಮನೆ ಮಂದಿಗೆಲ್ಲಾ ಹಾಲು, ಮೊಸರು, ತುಪ್ಪ, ಬೆಣ್ಣೆಗಳಿಂದ ಆಹಾರವಾಗಿ, ರಕ್ತ ಸಂಬಂಧವಾಗಿ, ತನ್ನ ಇರುವಿಕೆಯಿಂದಲೇ ಶ್ರೀಮಂತಿಕೆ ಸಂಕೇತವಾಗಿವೆ. ವಿನಿಮಯದ ಜೀವಧನವಾಗಿ, ರೈತನ, ರಾಜನ, ಗ್ರಾಮದ, ನಾಡಿನ ಹೆಮ್ಮೆಯ ಸಂಕೇತಗಳಾಗಿ ಆ ನಾಡಿನ ಲಕ್ಷ್ಮಿ ಸ್ವರೂಪವಾಗಿ, ವೈರುಧ್ಯವೆಂಬಂತೆ ಯಾಗ ಸಂದರ್ಭದಲ್ಲಿ ಆಹಾರವಾಗಿ ಬಳಕೆಯಾಗಿ ಆಹಾರ ಸಂಬಂಧವನ್ನು ಬೆಳೆಸಿಕೊಂಡಿತು. ತನ್ನ ಉಪಯುಕ್ತತೆಯ ಕಾರಣದಿಂದಲೇ ದೇವರಾಗಿ ದೈವತ್ವ ಪಡೆಯಿತು. ಈ ಎಲ್ಲಾ ಆಧುನಿಕ ಶೋಧನೆಯ ಉಪಯೋಗಗಳು ಇತ್ತೀಚಿನವಾಗಿವೆ. ಆದರೆ ಶತಶತಮಾನಗಳು ಮಾಂಸಾಹಾರದ ಸ್ಥಾನದಿಂದ ಗೋವನ್ನು ಬದಿಗಿರಿಸಿ, ಅವುಗಳಿಗೆ ಕೊಲ್ಲಬಾರದು ಎಂಬ ಕಾರಣಕ್ಕೆ ದೈವತ್ವವನ್ನು ಆರೋಪಿಸಿದ ಕಾಲ ಸರಿದು ಆಧುನಿಕ ಯುಗದಲ್ಲಿ ನಿಂತಿದ್ದೇವೆ. ಇಲ್ಲಿ ಗೋವು ರಾಜಕೀಯ, ಧಾರ್ಮಿಕ, ಸಂಘರ್ಷಗಳ ಮೂಲವಾಗಿ ತನ್ನ ರಕ್ತ, ಚರ್ಮ, ಮೂಳೆ, ದೇಹದ ಅಂಗಾಂಗಗಳು, ರಫ್ತು ಉಧ್ಯಮಕ್ಕೆ ಕಚ್ಚಾ ಪದಾರ್ಥಗಳಾಗಿ ಮಾತ್ರ ಬಳಕೆಯಗುತ್ತಿವೆ. ಆದರೆ ಪ್ರಾಚೀನ ಕಾಲದಲ್ಲಿ ಆ ದನಗಳ ದೈವತ್ವವನ್ನು, ಜೀವಧನದ ಗೌರವವನ್ನು ನೀಡಿದ ಮಾನವ, ದನಗಳನ್ನು ಮನೆಯ, ಗ್ರಾಮದ ರಾಜ್ಯದ ಗೌರವದ ಪ್ರತಿಕವಾಗಿಯೇ ದೈವದ ಸ್ವರೂಪದಲ್ಲೇ ನೋಡಿದ್ದಾನೆ.

ಆ ದೈವವನ್ನು ರಕ್ಷಿಸುವುದು ಗಂಡಿನ ಆದ್ಯ ಕರ್ತವ್ಯಗಳಲ್ಲಿ ಒಂದೆನಿಸಿದ್ದು. ಅಂತಹ ಸಂದರ್ಭದಲ್ಲಿ ವೀರನಿಗೆ ಪ್ರಾಣಕ್ಕಿಂತ ಮಾನವೇ ಮುಖ್ಯ ಎಂಬ ವೀರ ಪರಂಪರೆಯೊಂದರ ನಿರ್ಮಾಣಕ್ಕೆ, ಸಾವಿರಾರು ಯುದ್ಧಗಳಿಗೆ ಈ ಗೋವುಗಳು ಸಾಕ್ಷಿಯಾಗಿವೆ. ಕೃಷಿ ಹೊರತಾಗಿಯೂ, ಹಲವು ಉದ್ಯೋಗಗಳು ಆರಂಭವಾದಂತೆ ಭಾರದ ಬಹುದೊಡ್ಡ ಕೃಷಿ ಮಾರುಕಟ್ಟೆಗಳನ್ನು ಆಕ್ರಮಿಸಲು ಹಾಗೂ ಹಸಿರು ಕ್ರಾಂತಿ, ಕ್ಷೀರ ಕ್ರಾಂತಿಗಳು ಗೋವುಗಳ ಔಷಧೀಯ ಗುಣಗಳನ್ನು ಮರೆಮಾಚಿ ಅವು ಕೊಡುವ ಹಾಲನ್ನೇ ಮುಖ್ಯ ಮಾನದಂಡ ಆಗಿಸಿಕೊಂಡವು. ಹಾಗೂ ಕೃಷಿಗೆ ಗೋವಿನ ಸಗಣಿಯ ಗೊಬ್ಬರದ ಹೊರತಾಗಿಯೂ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳ ಬಳಕೆಯನ್ನು ಅನಿವಾರ್ಯವಾಗಿಸಿದವು. ಸಗಣಿಯ ಉರುವಲಿಗಿಂತ ಗೋಬರ್ ಗ್ಯಾಸ್ ಶ್ರೇಷ್ಠವೆಂದು ಸಬ್ಸಿಡಿ ನೀಡಿ ಗೋಬರ್ ಗ್ಯಾಸ್ ಬಳಸುವುದು ಶ್ರೇಷ್ಠತೆಯ ಸಂಕೇತ ಎಂದು ಬಿಂಬಿಸಿ ರೈತರನ್ನು ಗೋಬರ್ ಗ್ಯಾಸ್ ಬಳಕೆಯನ್ನು ಕಲಿಸಿ ಕೆಲವೇ ದಿನಗಳಲ್ಲಿ ಪೆಟ್ರೋಲಿಯಂ ಗ್ಯಾಸ್ ಬಳಕೆ ಕಲಿಸಿದ್ದು, ದನಗಳ ನೇಗಿಲ ಬಳಕೆಗಿಂತ ಟ್ರ್ಯಾಕ್ಟರ್ ಬಳಕೆ ಹೆಚ್ಚು ಸುಲಭ ಎಂಬುದನ್ನು ಬಿಂಬಿಸಿದವು. ಗೋವುಗಳು ರೈತನಿಂದ ದೂರವಾಗಿ, ಕಸಾಯಿಖಾನೆಯ ಉಪಯೋಗಕ್ಕೆ ಹೊರಟವು.

ಸಹಸ್ರಾರು ಕೋಟಿ ಔಷಧಿಯ ಗುಣದ ಗೋವುಗಳನ್ನು ಸಾಯಿಸಿ, ಲಕ್ಷರೂಪಾಯಿಗಳನ್ನು ಲಾಭಗಳಿಸಿದರೆ, ಕೋಟ್ಯಾಂತರ ಸಾವಿರ ಬೆಲೆಯ ಔಷಧಿಗಳನ್ನು ಸೌಂದರ್ಯ ವರ್ಧಕಗಳನ್ನು ಆಮದು ಮಾಡಿಕೊಳ್ಳುವ ಮೂಲಕ ನಷ್ಟ ಅನುಭವಿಸುತ್ತಿರುವುದು ಇಂದಿನ ಸತ್ಯವಾಗಿದೆ. ರೈತನ ಶ್ರೀಮಂತಿಕೆ, ಆರ್ಥಿಕ ಮೂಲದ ಸಂಕೇತವಾಗಿ ಜೀವಧನ ಎನಿಸಿದ್ದ ಗೋವುಗಳನ್ನು ತನ್ನಿಂದ ದೂರ ಮಾಡಿಕೊಂಡ ಕೃಷಿಕ ಇಂದು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿರುವುದನ್ನು ಗಮನಿಸಿದರೆ, ನಾವು ಗೋವುಗಳ ಪಾಲನೆಯತ್ತ ಹಾಗೂ ನಮ್ಮ ಕೃಷಿ ಚಟುವಟಿಕೆಗಳ ನೀತಿಗಳನ್ನು ಪನಃ ಪರಾಮರ್ಶಿಸಬೇಕಿದೆ. ನಮ್ಮ ಇತಿಹಾಸದಲ್ಲಿ ಗೋವುಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರರ ತ್ಯಾಗ, ಬಲಿದಾನಗಳಿಗೆ ಗೌರವ ತಂದುಕೊಡಬೇಕಾದ ಅನಿವಾರ್ಯತೆಯನ್ನು ಈ ಗೋಗ್ರಹಣ ವೀರರ ಶಾಸನಗಳು ನಮ್ಮ ಮುಂದೆ ತಂದು ನಿಲ್ಲಿಸಿವೆ. ಇಡೀ ದೇಶದ ಆರ್ಥಿಕ ಶಕ್ತಿಯನ್ನೇ ಹೆಚ್ಚಿಸ ಬಲ್ಲ ಶಕ್ತಿ ಗೋವುಗಳಿಗಿದೆ, ಎಂಬುದನ್ನು ಈ ಭಾಗದಲ್ಲಿ ಸ್ಪಷ್ಟಪಡಿಸಲಾಗಿದೆ. ಆದರೂ ಅವುಗಳನ್ನು ಕಳೆದುಕೊಳ್ಳುತ್ತಿರುವುದು ಭಾರತದ ಆರ್ಥಿಕತೆಯನ್ನು ದಿವಾಳಿಯೆಡೆಗೆ ಒಯ್ಯುತ್ತಿದೆ. ದನಗಳು ಇಂದೂ ತಮ್ಮ ಜೀವಧನದ ಸ್ಥಾನವನ್ನು ಉಳಿಸಿಕೊಂಡಿವೆ. ಇಂದೂ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಕುಟುಂಬಗಳು ಪಶು ಸಂಗೋಪನೆಯನ್ನು ಮಾಡಿ ಆಧುನಿಕ ಡೈರಿ ವ್ಯವಸ್ಥೆಯ ಭಾಗವಾದ ಗ್ರಾಮೀಣ ಹಾಲಿನ ಸಂಘಗಳಿಗೆ ಪ್ರತಿನಿತ್ಯ ಹಾಲು ಮಾರಿ ತಮ್ಮ ಕುಟುಂಬವನ್ನು ನಡೆಸುತ್ತಿವೆ. ಆದರೂ ಈ ಸತ್ಯವನ್ನು ಮರೆಮಾಚಿ ಮಾನವ ಬುದ್ಧಿವಂತನ ನಾಟಕವಾಡುತ್ತಿದ್ದಾನೆ. ಈ ನಾಟಕ ಬಿಟ್ಟು ಮಾನವ ಈ ಸತ್ಯವನ್ನು ಒಪ್ಪಿಕೊಳ್ಳಬೇಕಿದೆ. ನಮ್ಮ ಗಮನವನ್ನು ಪಶು ಸ್ನೇಹಿ, ನಿಸರ್ಗ ಸ್ನೇಹಿ, ಗೋವುಗಳನ್ನೇ ಪ್ರಧಾನವಾಗಿಸಿಕೊಂಡ ಕೃಷಿಯತ್ತ ಸಾಗಿದಾಗಲೇ ಭಾರತ ಮತ್ತೊಮ್ಮೆ ಆರ್ಥಿಕ ಶಕ್ತಿಯಾಗಲು ಸಾಧ್ಯ.

ಭಾರತದ ನಾಗರೀಕತೆಯ ಹೆಜ್ಜೆಗಳಿಂದಲೂ ಜೊತೆಯಾಗಿರುವ ದನಗಳು ಮಾನವನ ಸರ್ವ ಅಗತ್ಯಗಳನ್ನು ಪೋರೈಸುವ ಕಾಮಧೇನುವಾಗಿ ಗುರುತಿಸಿಕೊಂಡಿದೆ. ರಾಜರ ಆಳ್ವಿಕೆಯ ಕಾಲದಲ್ಲಿ ಗ್ರಾಮ, ರಾಜ್ಯ, ಮಂಡಲಗಳ, ಒಂದು ಸಾಮ್ರಾಜ್ಯದ ಬೆಳವಣಿಗೆಗೆ, ಕೃಷಿ, ಆರ್ಥಿಕ, ಆರೋಗ್ಯಕ್ಕೆ ಶಕ್ತಿಯಾಗಿ ದನಗಳು ಗುರುತಿಸಿಕೊಂಡಿವೆ. ಆ ಶಕ್ತಿಯನ್ನೇ ಕುಂದಿಸುವ ಗೋಗ್ರಹಣದಂಥ ಸನ್ನಿವೇಶಗಳು ಸೃಷ್ಟಿಯಾಗಿ, ಆ ಭೀಕರ ಕದನಗಳಲ್ಲಿ ಹೆಣ್ಣಿನ ಮಾನ, ಪ್ರಾಣ, ಗೋವುಗಳ ರಕ್ಷಣೆಗಾಗಿ ಮಡಿದ ವೀರರಿಗೆ ಅಂದಿನ ಸಮಾಜ ಗೌರವಿಸಿದೆ. ಪ್ರಾಣವನ್ನೇ ತೃಣ ಸ್ವರೂಪವೆಂದು ವೀರತನದಲ್ಲಿ ಬದುಕಿದ, ನಮ್ಮ ಪ್ರಾಚೀನ ವೀರ ಪರಂಪರೆಯನ್ನು ಸಾರುವ ವೀರಗಲ್ಲುಗಳ ಸಮೂಹದಿಂದ ಗೋಗ್ರಹಣ ಶಾಸನಗಳನ್ನು ಬೇರ್ಪಡಿಸಿ, ಪ್ರತ್ಯೇಕಿಸಿ ಗೋಗ್ರಹಣ ಸನ್ನಿವೇಶಗಳನ್ನೇ ಪ್ರಧಾನ ಭೂಮಿಕೆಯಲ್ಲಿ ನೋಡುವ ಪ್ರಯತ್ನ ಇದಾಗಿದೆ. ಗೋಗ್ರಹಣದ ವಿಭೀನ್ನ ಆಯಾಮಗಳನ್ನು ಗುರುತಿಸುವ, ಗೌರವಿಸುವ ಹೊಣೆ ನಮ್ಮೆಲ್ಲರದಾಗಿದೆ.

**ಅಡಿ ಟಿಪ್ಪಣಿಗಳು**

೧. ಪ್ರಾಚೀನ ಭಾರತದಲ್ಲಿ ಬೇಸಾಯ, ಪು.೯೫,

೨. ಪ್ರಾಚೀನ ಭಾರತದ ಇತಿಹಾಸ, ಪು.೬೬

೩. ಗೋವು ಗೋಮಾತೆ ಗೋಹತ್ಯಾ ನಿಷೇಧ ಕಾನೂನು, ಪು.೫

೪. ಪ್ರಾಚೀನ ಭಾರತದಲ್ಲಿ ಬೇಸಾಯ, ಪು.೬೩

೫. ಋಷಿಮುನಿಗಳ ಕೃಷಿ, ಪು.೧೭೪

೬. ಗೋವು ಪವಿತ್ರ ಎಂಬ ಮಿಥ್ಯ, ಪು.೩೧

೭. ಬರ ಅಂದ್ರ ಎಲ್ಲರಿಗೂ ಇಷ್ಟ, ಪು.೩೩

೮. ಪ್ರಾಚೀನ ಭಾರತದಲ್ಲಿ ಬೇಸಾಯ, ಪು.೨೨೪

೯. ಗೋವು ಪವಿತ್ರ ಎಂಬ ಮಿಥ್ಯೆ, ಪು.೨೨

೧೦. ಪ್ರಾಚೀನ ಭಾರತದಲ್ಲಿ ಬೇಸಾಯ, ಪು.೨೨೭

೧೧. ಅದೇ, ಪು.೩೪

೧೨. ಅದೇ, ಪು.೨೪

೧೩. ಅದೇ, ಪು.೨೬

೧೪. ಅದೇ, ಪು.೬೭

೧೫. ಪ್ರಾಚೀನ ಭಾರತದಲ್ಲಿ ಬೇಸಾಯ, ಪು.೨೩೭

೧೬. ಕಾಮಧೇನು ಭಾಗ ೩, ಪು.೬೧

೧೭. ಅದೇ, ಪು.೫೪

೧೮. ದಮಿತ್ ಆಫ್ ಹೋಲಿ ಕೌ., ಪು.ಸಂ.೧೫

೧೯. ಕಾಮಧೇನು ೩ ಪು.೪೬

೨೦. ಪುಣ್ಯಕೋಟಿ, ಪು.೫೨

೨೧. ಅದೇ, ಪು.೫೬

೨೨. ಗೋವಿನ ಸುತ್ತ ಮುಗಿಯದ ಹುತ್ತ, ಪು.೧೦೪

೨೩. ಅದೇ, ಪು.೭

೨೪. ಕಾಮಧೇನು ೨, ಪು.೧೭೨,

## ಅಧ್ಯಾಯ: ಎಂಟು

# ಸಮಾರೋಪ

"ಗೋಗ್ರಹಣ- ಒಂದು ಅಧ್ಯಯನ" ಎಂಬ ಶೀರ್ಷಿಕೆ ಅಡಿಯಲ್ಲಿ ಕೈಗೊಂಡಿರುವ ಈ ಸಂಶೋಧನಾ ಪ್ರಬಂಧದವು ಶಿವಮೊಗ್ಗ ಜಿಲ್ಲೆಯ ಶಾಸನಗಳನ್ನು ಆಧರಿಸಿ ಹಾಗೂ ಸಾಹಿತ್ಯ ಕೃತಿಗಳು, ಜನಪದ, ಕೃಷಿಕ್ಷೇತ್ರಗಳನ್ನು ಅನುಲಕ್ಷಿಸಿ ಕೈಗೊಂಡಿರುವ ಸಂಶೋಧನೆಯಾಗಿದೆ. ತುರುಗೊಳ್ ಶಾಸನಗಳ ಸಾಹಿತ್ಯದ ಹಾಗೂ ಶಾಸನಶಿಲ್ಪದ ವಿಸ್ತೃತ ಅಧ್ಯಯನದ ದೃಷ್ಟಿಯಿಂದ ತುರುಗೊಳ್ ಶಾಸನಗಳು ಇಲ್ಲಿ ಮೊದಲಬಾರಿಗೆ ಅಧ್ಯಯನಕ್ಕೆ ಒಳಪಟ್ಟಿರುವುದು ವಿಶೇಷವಾಗಿದೆ. ಅಧ್ಯಯನಕ್ಕೆ ಒಂದು ಪ್ರಾದೇಶಿಕ ಚೌಕಟ್ಟು ಇರಲೆಂಬ ಕಾರಣದಿಂದ ಶಿವಮೊಗ್ಗ ಜಿಲ್ಲೆಯ ಶಾಸನಗಳನ್ನು ಮಾತ್ರ ಇಲ್ಲಿ ಅನುಲಕ್ಷಿಸಲಾಗಿದೆ. ಈ ಸಂಶೋಧನೆಯ ಮುಖಾಂತರ ತುರುಗೊಳ್ ಶಾಸನಗಳ ಮಹತ್ವವನ್ನು ಒಂದು ಕೊಡುಗೆಯ ರೂಪದಲ್ಲಿ ಆತ್ಮ ಸಂತೋಷದಿಂದ ಸಂಶೋಧನೆಯ ಕಾರ್ಯವನ್ನು ಪೂರ್ಣಗೊಳಿಸಿದ್ದೇನೆ. ಈ ನನ್ನ ಮಹಾಪ್ರಬಂಧದ ಸಂಶೋಧನೆಯ ಫಲಿತಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

### ತುರುಗೊಳ್ ಶಾಸನಗಳ ಮೊದಲ ವಿವರವಾದ ಅಧ್ಯಯನ

ಕರ್ನಾಟಕದಲ್ಲಿ ಇದೂವರೆಗೂ ಸುಮಾರು ೩೫ ಸಾವಿರ ಶಾಸನಗಳ ಪ್ರಕಟಣೆಯಾಗಿದೆ. ಈ ಶಾಸನಗಳಲ್ಲಿ ಹೆಚ್ಚುಭಾಗ ವೀರಗಲ್ಲುಗಳಿವೆ. ವೀರಗಲ್ಲುಗಳ ಪರಂಪರೆಯಲ್ಲಿ ತುರುಗೊಳ್ ಶಾಸನಗಳು ಅತ್ಯಂತ ಮಹತ್ವದ ಪಾತ್ರವನ್ನು ನಿರ್ವಹಿಸುತ್ತವೆ. ಇವುಗಳನ್ನು ವೀರಗಲ್ಲುಗಳ ಪರಂಪರೆಯ ಗುಂಪಿನಿಂದ ಪ್ರತ್ಯೇಕಿಸಿ ಗಮನಿಸಿದ ಸಂಶೋಧನೆಗಳಲ್ಲಿ ಇದೇ ಪ್ರಥಮ ಪ್ರಯತ್ನವಾಗಿದೆ. ಇಲ್ಲಿಯವರೆಗೆ ಗೋಗ್ರಹಣವೆಂದರೆ ಮಹಾಭಾರತದ ಉತ್ತರ ಗೋಗ್ರಹಣ ದಕ್ಷಿಣ ಗೋಗ್ರಹಣ ಎಂಬುದು ಮಾತ್ರವೇ ಎಂಬ ನಂಬಿಕೆಯನ್ನು ಈ ಅಧ್ಯಯನ ಬದಲಾಯಿಸಿದೆ. ಹಳ್ಳಿ ಹಳ್ಳಿಗಳಲ್ಲಿ ಸಾವಿರಾರು ಗೋಗ್ರಹಣ ಕದನಗಳು ನಡೆದಿವೆ. ಯುದ್ಧದ ಮಾದರಿಯಲ್ಲಿ

ಅಥವಾ ಯುದ್ಧದ ಒಂದು ಅಂಗವಾಗಿ ಗೋಗ್ರಹಣಗಳು ನಡೆದಿವೆ. ಯುದ್ಧದಲ್ಲಿ ಮಡಿದ ವೀರರಿಗೆ ಹಾಕಿಸುವ ಶಾಸನವೇ ವೀರಗಲ್ಲು ಎಂಬ ಪರಿಮಿತ ಪರಿಭಾಷೆಯಲ್ಲಿ ಮಾತ್ರ ಅಧ್ಯಯನ ನಡೆಸದೆ ಯುದ್ಧಕ್ಕೆ ಕಾರಣವಾದ ಅಂಶಗಳನ್ನು ಮತ್ತು ಅದರ ಪರಿಣಾಮವನ್ನು ಸಾಮಾಜಿಕ, ಆರ್ಥಿಕ, ರಾಜಕೀಯ ಹಿನ್ನೆಲೆಯಲ್ಲಿ ಹಾಗೂ ಸ್ವಾಭಿಮಾನದ ನೆಲೆಯಲ್ಲಿ ಎಳೆ ಎಳೆಯಾಗಿ ಗಂಭೀರವಾಗಿ ಗಮನಿಸಿದ ಮೊದಲ ಅಧ್ಯಯನ ಇದಾಗಿದೆ.

**ತುರುಗೊಳ್ ಶಾಸನ ಸಾಹಿತ್ಯದ ವಿವರವಾದ ಅಧ್ಯಯನ**

ಈ ವರೆಗಿನ ಸಂಶೋಧನೆಗಳಲ್ಲಿ ಬೇರೆ ಬೇರೆ ಶಾಸನಗಳ ಅಧ್ಯಯನವನ್ನು ನಡೆಸಿದ್ದು ಅವುಗಳ ಪಾಠವನ್ನು ಇಡಿಯಾಗಿ ವಿಮರ್ಶಿಸುವ ಪ್ರಯತ್ನವನ್ನು ಮಾಡಿದ್ದಾರೆ. ಆದರೆ ಈ ಸಂಶೋಧನೆಯಲ್ಲಿ ತುರುಗೊಳ್ ಶಾಸನಸಾಹಿತ್ಯವನ್ನು ವಿವರವಾಗಿ ಅಧ್ಯಯನ ನಡೆಸಲಾಗಿದೆ. ಮೊದಲ ಬಾರಿಗೆ ಇಲ್ಲಿ ಶಿವಮೊಗ್ಗ ಜಿಲ್ಲೆಯ ತುರುಗೊಳ್ ಶಾಸನಗಳಲ್ಲಿರುವ ಸಾಮಾಜಿಕ ಮೌಲ್ಯ ಹಾಗೂ ಯುದ್ಧದ ಪರಿಣಾಮಗಳನ್ನು ಅವುಗಳ ಸಾಹಿತ್ಯವನ್ನು ಅಧ್ಯಯನ ಮಾಡುವ ಮೂಲಕ ಕಟ್ಟಿಕೊಡಲಾಗಿದೆ. ತುರುಗೊಳ್ ಶಾಸನಗಳ ವಿಭಿನ್ನ ಆಯಾಮಗಳನ್ನು ವಿವರವಾಗಿ ಅಧ್ಯಯನ ಮಾಡಲಾಗಿದೆ.

**ತುರುಗೊಳ್ ಶಾಸನಶಿಲ್ಪದ ವಿವರವಾದ ಅಧ್ಯಯನ**

ಶಾಸನಗಳ ಶಿಲ್ಪದ ದೃಷ್ಟಿಯಿಂದ ಶಿವಮೊಗ್ಗ ಜಿಲ್ಲೆಯ ತುರುಗೊಳ್ ಶಾಸನಗಳನ್ನು ವಿಶೇಷವಾಗಿ ಅಭ್ಯಸಿಸಲಾಗಿದೆ. ಶಾಸನಶಿಲ್ಪದ ರಚನೆಯಲ್ಲಿ ವೀರನ ಚಿತ್ರಣ, ಯುದ್ಧ ಭೂಮಿಯ ಚಿತ್ರಣ, ಆಯುಧಗಳು, ಅಲಂಕಾರ, ಕೇಶಾಲಂಕಾರ, ವರ್ಣನೆ, ಅತೀ ಕಡಿಮೆ ಜಾಗದಲ್ಲಿ ಇಡೀ ಯುದ್ಧಭೂಮಿಯ ಭೀಕರತೆಯನ್ನು ಚಿತ್ರಿಸಲಾಗಿದೆ. ತುರುಗಾಳಗದ ಸಮಯದಲ್ಲಿ ಆಕ್ರಮಣಕ್ಕೆ ಒಳಗಾಗುವ ಹೆಣ್ಣುಮಕ್ಕಳ ಮತ್ತು ದನಗಳ ಸ್ಥಿತಿಯನ್ನು ಶಾಸನಶಿಲ್ಪಗಳನ್ನು ಆಧರಿಸಿ ವಿವರವಾಗಿ ಗಮನಿಸಿರುವುದು ಈ ಸಂಶೋಧನೆಯ ಇನ್ನೊಂದು ವಿಶೇಷ. ಈ ಹಿಂದಿನ ಅಧ್ಯಯನಗಳಲ್ಲಿ ತುರುಗೊಳ್ ಶಾಸನಗಳನ್ನು ಹಾಗೂ ಶಾಸನಶಿಲ್ಪವನ್ನು ವಿಶೇಷ ಆಕರವಾಗಿ ಬಳಸಿಕೊಂಡಿಲ್ಲ. ಈ ಅಧ್ಯಯನ ಆ ಕೊರತೆಯನ್ನು ನೀಗಿಸಿದೆ.

**ಪ್ರಾಚೀನ ಗೋ ಸಂಸ್ಕೃತಿಯ ಅಧ್ಯಯನ**

ಜನಮಾನಸದಲ್ಲಿ ಇಷ್ಟೊಂದು ಪ್ರಾಮುಖ್ಯತೆ ಪಡೆದ ಗೋವುಗಳ ಬಗೆಗಿನ ಕಾಳಜಿಯ ಬೇರುಗಳನ್ನು ಪ್ರಾಚೀನ ಕಾಲದಿಂದಲೇ ಕಾಣಬಹುದು. ಪ್ರಾಚೀನ ಗೋ ಸಂಸ್ಕೃತಿಯನ್ನು ವಿವರವಾಗಿ ಗಮನಿಸಿದಾಗ ಗೋವುಗಳು ಮಾನವನೊಂದಿಗೆ ಆರಂಭದ ಕಾಲದಲ್ಲಿ ಆಹಾರದ

ಕಾರಣಕ್ಕಾಗಿ ಆನಂತರ ಭೂಮಿ ಉಳುಮೆಗೆ ಬಳಕೆಯಾಗಿ ಮಾನವ ಸ್ನೇಹಿ ಸಂಬಂಧವನ್ನು ಹೊಂದಿತು. ಆನಂತರ ದಿನಗಳಲ್ಲಿ ಗೋವುಗಳು ನೀಡುವ ಕ್ಷೀರ ಸಂಬಂಧಿ ಉತ್ಪನ್ನಗಳಿಂದ ವಾಣಿಜ್ಯ ಬಳಕೆಯಲ್ಲಿ ಹೇಗೆಲ್ಲ ಗುರುತಿಸಿಕೊಂಡು ಜೀವಧನದ ಸ್ಥಾನವನ್ನು ಪಡೆಯಿತು ಎಂಬುದನ್ನು ಹೊಸ ದೃಷ್ಟಿಯಿಂದ ನನ್ನ ಅಧ್ಯಯನದಲ್ಲಿ ಗಮನಿಸಲಾಗಿದೆ. ಶಿಲಾಯುಗದ ಕಾಲದಿಂದ ಇಲ್ಲಿಯವರೆಗೆ ಮಾನವನ ಜೀವನದಲ್ಲಿ ಗೋವುಗಳ ಪಾತ್ರವನ್ನು ಕುರಿತು ಅಧ್ಯಯನ ನಡೆಸಿದಾಗ ಪಶುಗಳು ಕೇವಲ ವ್ಯವಸಾಯಕ್ಕಾಗಿ ಅಥವಾ ಆಹಾರಕ್ಕಾಗಿ ಮಾತ್ರ ಬಳಕೆಯಾಗದೆ ವಿಭಿನ್ನ ಆಯಾಮಗಳಲ್ಲಿ ಗಮನಿಸಿದಾಗ ಗೋವುಗಳನ್ನು ಬಿಟ್ಟು ಮಾನವನ ಇತಿಹಾಸವನ್ನು ಗಮನಿಸಲು ಸಾಧ್ಯವೇ ಇಲ್ಲ ಎಂಬಷ್ಟರ ಮಟ್ಟಿಗೆ ಗೋವುಗಳು ಪ್ರಾಮುಖ್ಯತೆ ಪಡೆದಿರುವುದನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಜನಪದರಲ್ಲಿ ಗೋವುಗಳ ಪ್ರಾಮುಖ್ಯತೆಯ ಅಧ್ಯಯನ**

ಗ್ರಾಮೀಣ ಪ್ರದೇಶದ ಜನರ ದೃಷ್ಟಿಯಲ್ಲಿ ಗೋವುಗಳು ಪೂಜನೀಯವಾಗಿ ಸ್ಥಾನಪಡೆದು ಅವರ ಮನೆಯ ದೈವತ್ವವನ್ನು, ಮಗನ ಸ್ಥಾನವನ್ನು ತುಂಬಿವೆ. ಹಾಗೆ ಗಮನಿಸಿದಾಗ ವ್ಯವಸಾಯದ ಕೇಂದ್ರವಾಗಿರುವ ಉಳುಮೆ ಮಾಡುವ ಅನೇಕ ಹಂತಗಳಲ್ಲಿ ಗೋವು ಬಳಕೆಯಾಗಿ, ಬಿತ್ತುವುದರಿಂದ ಆರಂಭಿಸಿ ಸುಗ್ಗಿಗೆ ಕೊಯ್ಲನ್ನು ಪೂರ್ಣಗೊಳಿಸಿ ಮನೆಗೆ ತಂದು ಹಾಕುವವರೆಗೆ ಗೋವುಗಳು ಕೃಷಿಕನ ಮಿತ್ರನಾಗಿವೆ. ಪ್ರಾಚೀನ ನೀರಾವರಿ ಪದ್ಧತಿಗಳಲ್ಲೂ ಏತದ ಕಾರ್ಯಕ್ಕೆ ಗೋವು ಜೊತೆಯಾಗಿ ಭೂಮಿಯನ್ನು ಹಸಿರಾಗಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ಗೋವುಗಳ ಪ್ರತಿಯೊಂದು ತ್ಯಾಜ್ಯಗಳೂ ಲಕ್ಷ್ಮಿಯ ಸ್ವರೂಪವಾಗಿ ಹೇಗೆ ಪೂಜಿತವಾಗಿವೆ ಮತ್ತು ಅವರ ಸಂಭ್ರಮಗಳಲ್ಲಿ ಹೇಗೆ ಪ್ರಾಮುಖ್ಯತೆಗಳಿಸಿವೆ ಎಂಬುದನ್ನು ವಿವರವಾಗಿ ಮೊದಲಬಾರಿಗೆ ಇಲ್ಲಿ ಪರಿಶೀಲನೆ ಗೊಳಪಡಿಸಲಾಗಿದೆ.

**ಆಧುನಿಕ ಕಾಲದಲ್ಲಿ ಗೋ ಸಂಸ್ಕೃತಿಯ ಪರಿವರ್ತನೆ**

ಪ್ರಾಚೀನ ಕಾಲದಿಂದ ಇಂದಿನವರೆಗೆ ದನಗಳು ಉಪಯುಕ್ತತೆಯ ನೆಲೆಯಲ್ಲಿ ಅತ್ಯಂತ ಮುಖ್ಯವಾದ ಪ್ರಾಣಿಗಳಾಗಿ ಮಾನವನ ಬದುಕಿನ ಸಂಗಾತಿಗಳಾಗಿವೆ. ಬ್ರಿಟೀಷರ ಆಗಮನದ ನಂತರ ಆಹಾರ ಸಂಸ್ಕೃತಿಯಲ್ಲಿಯೂ ವ್ಯಾಪಕವಾಗಿ ಬೆರೆತುಕೊಂಡ ಗೋವುಗಳನ್ನು ಒಂದು ಧಾರ್ಮಿಕ ವಿಷಯವನ್ನಾಗಿ ಪರಿವರ್ತಿಸಲಾಯಿತು. ಬ್ರಿಟೀಷರ ಅನೇಕ ನೀತಿಗಳ ಪರಿಣಾಮಗಳು ಕೈಗಾರಿಕಾ ಕ್ರಾಂತಿಯ ಸಂದರ್ಭಕ್ಕೆ ಭಾವನಾತ್ಮಕ ಸಂಬಂಧದ ಪ್ರಾಮುಖ್ಯತೆಗಳನ್ನು ಬದಿಗಿಟ್ಟು ಕೇವಲ ವಾಣಿಜ್ಯ ಬಳಕೆಯ ಸಂಕೇತವಾಗಿ ಪರಿವರ್ತಿಸಲಾಯಿತು. ಇನ್ನೂ ಮುಂದುವರೆದು

ಧಾರ್ಮಿಕ ಸಂಘರ್ಷದ ಸಂಕೇತವಾಗಿ ಮಾಡಲಾಯಿತು. ಭಾರತದ ಕೃಷಿ ಪರಂಪರೆಗೆ ನೀಡಿದ ಹೊಡೆತ ಹಾಗೂ ಆಧುನಿಕ ಕಂಪನಿಗಳು ದನಗಳನ್ನು ಯಾವೆಲ್ಲ ರೀತಿಯಲ್ಲಿ ಬಳಸಿ ಕೊಂಡಿವೆ ಎಂಬುದನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಈ ಕ್ಷೇತ್ರದಲ್ಲಿ ಇನ್ನೂ ಮಾಡಬಹುದಾದ ಕಾರ್ಯಗಳು**

೧. ಶಿವಮೊಗ್ಗ ಜಿಲ್ಲೆಯಲ್ಲಿ ಇನ್ನೂ ಮಲೆನಾಡಿನ ಕಾಡಿನಲ್ಲಿ ಅಡಗಿರಬಹುದಾದ ಅಪ್ರಕಟಿತವಾದ ತುರುಗೊಳ್ ಶಾಸನಗಳನ್ನು ಸಂಗ್ರಹಿಸಿ ಅಧ್ಯಯನ ನಡೆಸಬಹುದು.

೨. ತುರುಗೊಳ್ ಶಾಸನಗಳನ್ನು ರಕ್ಷಣೆಮಾಡಿ ಅವುಗಳ ಪರಂಪರೆಯ ಬಗ್ಗೆ ಮುಂದಿನ ಜನಾಂಗಕ್ಕೆ ತಿಳಿಯುವಹಾಗೆ ಮಾಡಬೇಕು.

೩. ಇಂದಿಗೂ ಕೆಲವು ಜಿಲ್ಲೆಗಳಲ್ಲಿ ಉಲ್ಲೇಖವಾಗಿರುವ ಶಾಸಗಳನ್ನು ಗಮನಿಸಿ ಕರ್ನಾಟಕದ ಸಮಗ್ರ ತುರುಗೊಳ್ ಶಾಸನಗಳ ಅಧ್ಯಯನ ನಡೆಸಲು ಅವಕಾಶವಿದೆ.

೪. ಗೋವು ಆಹಾರ ಸಂಸ್ಕೃತಿಯಾಗಿ ಬೆಳದು ಬಂದ ರೀತಿಯನು ಐತಿಹಾಸಿಕವಾಗಿ ಅಭ್ಯಸಿಸಲು ಅವಕಾಶಗಳಿವೆ.

೫. ತುರುಗೊಳ್ ಕದನಗಳು ಕುಟುಂಬಗಳ ಮೇಲೆ, ಗ್ರಾಮಗಳ ಮೇಲೆ ಬೀರುತ್ತಿದ್ದ ಪರಿಣಾಮಗಳನ್ನು ವಿವರವಾಗಿ ಅಧ್ಯಯನ ಮಾಡಲು ಅವಕಾಶಗಳಿವೆ.

೬. ಒಟ್ಟಾರೆಯಾಗಿ ಮೊದಲಿಗೆ ತುರುಗೊಳ್ ಶಾಸನಗಳ ಸಾಹಿತ್ಯ ಮತ್ತು ಶಿಲ್ಪಗಳನ್ನು ವಿವರವಾಗಿ ಮತ್ತು ತೌಲನಿಕವಾಗಿ ಅಧ್ಯಯನವನ್ನು ಮಾಡುವ ಮೂಲಕ ನಮ್ಮ ಗ್ರಾಮೀಣ ಜನರ ಮುಗ್ಧತೆ ಮತ್ತು ಅವರ ಭಾವನಾತ್ಮಕ ಜಗತ್ತನ್ನು ತೆರೆದಿಡುವ ಪ್ರಯತ್ನವನ್ನು ಇಲ್ಲಿ ಕೈಗೊಳ್ಳಲಾಗಿದೆ. ಈ ಮೂಲಕ ನಮ್ಮ ಸಮಾಜ ಮೂಕ ಪ್ರಾಣಿಗಳಿಗೆ ತೋರುತ್ತಿದ್ದ ಗೌರವ ಮತ್ತು ಪ್ರೀತಿಯ ರೂಪಗಳನ್ನು ಗೌರವಿಸಲಾಗಿದೆ. ಪಶುಗಳು ಜನರಿಗೆ ಹೇಗೆ ಆರ್ಥಿಕವಾಗಿ ಬಲವಾಗಿದ್ದವು, ಆ ಮೂಲಕ ಅವು ಹೇಗೆ ಪೂಜನೀಯವಾಗಿದ್ದವು ಎಂಬುದನ್ನು ಇಲ್ಲಿ ಮುಖ್ಯವಾಗಿ ಪರಿಗಣಿಸಲಾಗಿದೆ. ಕನ್ನಡ ಸಾಹಿತ್ಯದಲ್ಲಿ ತುರುಗೊಳ್ ಶಾಸನಗಳ ಸಾಹಿತ್ಯವೂ ಕೂಡ ಸುಂದರವಾದ ಮತ್ತು ಪ್ರತಿಭಾಪೂರ್ಣವಾದ ಗುಣಗಳಿಂದ ಕೂಡಿದೆಯೆಂಬುದನ್ನು ಇಲ್ಲಿ ಸಾಧಿಸಿ ತೋರಿಸಲಾಗಿದೆ. ಶಾಸನಶಿಲ್ಪವೂ ಕೂಡ ತನ್ನ ಸೌಂದರ್ಯದ ಗುಣಗಳಿಂದ ಅತ್ಯುತ್ತಮ ವಿನ್ಯಾಸದಿಂದ ಕೂಡಿರುವುದನ್ನು ಸಾಕ್ಷಿಯ ಸಮೇತ ಇಲ್ಲಿ ಪ್ರತಿಪಾದಿಸಲಾಗಿದೆ.

೭. ಗ್ರಾಮಗಳಲ್ಲಿ ಬೀಸುತ್ತಿರುವ ನಗರೀಕರಣದ ಪ್ರಭಾವದಿಂದ ನಮ್ಮ ಪರಂಪರೆಯ ಕೊಂಡಿಗಳಾದ, ನಮ್ಮ ಪೂರ್ವಿಕರ ಮೌಲ್ಯಗಳಿಗೆ ಸಾಕ್ಷಿಗಳಾದ, ನಮ್ಮ ಜನರ ರೀತಿ ನೀತಿಗಳನ್ನು ಪ್ರದರ್ಶಿಸುತ್ತಿರುವ ಶಾಸನಗಳನ್ನು ಮತ್ತು ಅವುಗಳ ಶಿಲ್ಪಗಳನ್ನು ತುರ್ತಾಗಿ ರಕ್ಷಿಸಬೇಕಾಗಿದೆ. ಶಾಸನಗಳಲ್ಲಿ ಅಡಕವಾಗಿರುವ ವಿಷಯಗಳಿಂದ ಇಂದಿನ ಅನೇಕ ಸಾಮಾಜಿಕ ಸಮಸ್ಯೆಗಳಿಗೆ ಏನಾದರೂ ಪರಿಹಾರಗಳು ದೊರೆಯುತ್ತವೆಯೇ ಎಂದು ನೋಡಬೇಕಾಗಿದೆ.

# ಅನುಬಂಧಗಳು

೧. ವೃತ್ತಪತ್ರಿಕೆಗಳ ವರದಿ ಕುರಿತ ಚರ್ಚೆ

೨. ಕೋಷ್ಟಕಗಳು

೩. ಗ್ರಂಥಸೂಚಿ

೪. ನಕ್ಷೆಗಳು

೫. ಛಾಯಾಚಿತ್ರಗಳು

ಅನುಬಂಧ: ಒಂದು

## ಗೊಹತ್ಯಾ ನಿಷೇಧದ ಬಗ್ಗೆ ಪತ್ರಿಕಾ ಮಾಧ್ಯಮಗಳ ವರದಿ ಕುರಿತ ಚರ್ಚೆ

ಭಾರತೀಯ ಕೃಷಿ ಕೇತ್ರದಲ್ಲಿ ಗೋವುಗಳ ಪಾತ್ರ ಹೆಚ್ಚಾಗಿದೆ. ಗೋವುಗಳನ್ನು ಧಾರ್ಮಿಕ ಹಿನ್ನೆಲೆಯಿಂದ ನೋಡುವಂತೆ ಮಾಡಿದ ಬ್ರಿಟೀಷರ ಹಾಗೂ ಪಾಶ್ಚಾತ್ಯ ರಾಷ್ಟ್ರಗಳ ಹುನ್ನಾರಗಳ ಸಂಚು ಇಂದು ಸಮಾಜದ ಹಿತವನ್ನು ಹಾಳುಮಾಡುತ್ತಿವೆ. ಪಾಶ್ಚಾತ್ಯ ಕಂಪನಿಗಳು ಕೃಷಿ ಕಾರ್ಯಗಳಿಗೆ ಪ್ರಾಚೀನ ಕಾಲದಿಂದಲೂ ಬಳಕೆಯಾಗುತ್ತಿದ್ದ ಗೋವುಗಳ ಸ್ಥಾನವನ್ನು ಟ್ಯಾಕ್ಟರ್, ಪವರ್ ಟಿಲ್ಲರ್, ಮತ್ತು ಆಧುನಿಕ ಯಂತ್ರಗಳು ತುಂಬುವಂತೆ ಮಾಡಿದರು. ಇದರಿಂದ ಗೋವುಗಳ ಮೇಲಿನ ಕೃಷಿ ಚಟುವಟಿಕೆಗಳ ಅವಲಂಬನೆ ಕಡಿಮೆಯಾಯಿತು. ಆಹಾರ, ರಕ್ತ, ಚರ್ಮ, ಮತ್ತು ವಾಣಿಜ್ಯ ಉದ್ದೇಶಗಳ ಅವಲಂಬನೆ ಬೆಳೆಯಿತು. ಆಳುವ ವರ್ಗದವರಿಗೂ ಗೋವುಗಳು ಓಟ್ ಬ್ಯಾಂಕ್‌ಲಾಬಿಗೆ ಮತ್ತು ಗೋಸಂಬಂಧಿ ಉತ್ಪನ್ನಗಳ ತಯಾರಿಸುವ ಕಂಪನಿಗಳ ಲಾಭಾಂಶಗಳ ಪಾಲು ಇವರಿಗೂ ದೊರೆತದ್ದರಿಂದ ವ್ಯವಸ್ಥೆ ಮೂಕ ಪ್ರೇಕ್ಷಕವಾಗಿ, ಇಂದು ಗೋಹತ್ಯೆ ಧಾರ್ಮಿಕ ಸಂಘರ್ಷಕ್ಕೆ ಕಾರಣವಾಗುವಂತೆ ಒಂದು ವರ್ಗ ನೋಡಿಕೊಂಡಿತು. ಇದರಿಂದಾಗಿ ಸಮಾಜದಲ್ಲಿ ಅಶಾಂತಿ ಹೆಚ್ಚಲು ಕಾರಣವಾಯಿತು. ನಮ್ಮ ದೇಶದ ಅಗತ್ಯಕ್ಕಿಂತ ಹೊರ ದೇಶಗಳ ಅಗತ್ಯವನ್ನು ಪೋರೈಸಲು ಹೆಚ್ಚು ಗೋವುಗಳ ಹತ್ಯೆ ನಡೆಸಲಾರಂಭಿಸಿದರು. ಇದರಿಂದ ಸಮಾಜದಲ್ಲಿಯೂ ಗೋವುಗಳನ್ನು ಸಾಕುವುದೇ ಕಷ್ಟ ಎಂಬಂತಾಗಿ ಅಪಾರ ಗೋಸಂಪತ್ತು ಅವನತಿಯ ಹಾದಿ ಹಿಡಿಯಿತು. ೮೦–೯೦–ಗೋವುಗಳಿದ್ದ ರೈತರ ಮನೆಯಲ್ಲಿಯೂ ಇಂದು ೩–೪ ಹಸುಗಳ ಸಂಖ್ಯೆಗೆ ಸೀಮಿತವಾಗಿವೆ ಎಂಬುದು ಗೋಸಂತತಿಯ ಅವನತಿಯ ವೇಗ ತಿಳಿಸುತ್ತಿದೆ. ೧೦,೦೦೦ ದಿಂದ ೧೨,೦೦೦ ರೂಗಳಿಗೆ ಸಿಗುತ್ತಿದ್ದ ಉತ್ತಮ ಹಾಲಿನ ತಳಿಗಳು ಇಂದು ೪೫,೦೦೦–೧,೦೦೦೦೦ ರೂಪಾಯಿಗಳ ದರಕ್ಕೆ ಬಿಕರಿಯಾಗುತ್ತಿರುವುದು, ಗೋ ಸಂತತಿಯ ಕೊರತೆಯನ್ನು ಎತ್ತಿ ತೋರಿಸುತ್ತಿದೆ.

ಗೋವುಗಳ ಪಾಲನೆಯಲ್ಲಿ ಬರುವ ಗೋಮಯ(ಸೆಗಣಿ)ನೆಲದ ಆರೋಗ್ಯವನ್ನು, ಬೆಳೆಯ ಆರೋಗ್ಯವನ್ನು ಹೆಚ್ಚಿಸುವುದರೊಂದಿಗೆ ಇಳುವರಿಯನ್ನೂ ಹೆಚ್ಚಿಸುತ್ತಿತ್ತು. ಇದು ಕೃಷಿ ಚಟುವಟಿಕೆಗಳಲ್ಲಿ ಹೆಚ್ಚು ಕರ್ಚು ಮಾಡದೆ ಲಾಭ ಪಡೆಯಲು ಸಹಾಯಕವಾಗಿತ್ತು. ಆದರೆ ಗೋವುಗಳು ಕಡಿಮೆ ಆಗಿ ಕೊಟ್ಟಿಗೆ ಗೋಬ್ಬರದ ಕೊರತೆ ಉಂಟಾಗಿ ಅನಿವಾರ್ಯವಾಗಿ ಮತ್ತು ಉದ್ದೇಶ ಪೂರ್ವಕ ರಾಸಾಯನಿಕ ಗೋಬ್ಬರ ಬಳಸತೊಡಗಿದರು. ಕೊಟ್ಟಿಗೆ ಗೋಬ್ಬರದ ಸ್ಥಾನವನ್ನು ರಾಸಾಯನಿಕ ಔಷಧಿಗಳು ಮತ್ತು ಗೊಬ್ಬರಗಳು ತುಂಬಿದವು. ಇದರಿಂದ ರೈತನ ಭೂಮಿಯ ಮತ್ತು ಬೆಳೆಯ ಆರೋಗ್ಯ ಹಾಳಾಗತೊಡಗಿತು. ಮತ್ತೆ ಮತ್ತೆ ರಾಸಾಯನಿಕ ಗೊಬ್ಬರ ಹಾಗೂ ಕ್ರಿಮಿನಾಶಕಗಳನ್ನು ಬಳಸುವ ವ್ಯವಸ್ಥೆಗೆ ರೈತ ಅನಿವಾರ್ಯವಾಗಿ ಹೊಂದಿಕೊಂಡ. ಇಂದು ಈ ರಾಸಾಯನಿಕಗಳ ಹೆಚ್ಚು ಬಳಕೆಯಿಂದ ನೆಲ ಬರಡಾಗಿ ಬೆಳೆ ಕಾಣದೆ ರೈತ ಸಾಲದ ಸುಳಿಗೆ ಸಿಲುಕಿದ್ದಾನೆ. ಭಾರತೀಯ ಕೃಷಿ ಪರಂಪರೆಯಲ್ಲಿ ಗೋವುಗಳು ತುಂಬಿದ ಸ್ಥಾನವನ್ನು ಇತರೆ ಪ್ರಾಣಿಗಳಾದ ಕುರಿ, ಆಡು, ಕೋಳಿ, ತುಂಬಲಿಲ್ಲ. ಆದ್ದರಿಂದಲೇ ಈ ಕುರಿ, ಆಡು, ಕೋಳಿಗಳು ಕೇವಲ ಆಹಾರ ಸಂಸ್ಕೃತಿಯ ಭಾಗವಾಗಿ ಮಾತ್ರ ಗುರುತಿಸಿಕೊಂಡವು. ಏಕೆಂದರೆ ಇವು ಎಂದಿದ್ದದರೂ ಕೊಂದು ತಿನ್ನುವುದಕ್ಕಾಗಿಯೇ ಸಾಕುತ್ತಿದ್ದರಿಂದ ಇವುಗಳ ಮೇಲೆ ಹೆಚ್ಚಿನ ಅವಲಂಭನೆಯನ್ನು, ಭಾವನಾತ್ಮಕ ಸಂಬಂಧವನ್ನು ಹೊಂದಲಿಲ್ಲ. ಆದರೆ ಹಸುಗಳ ಹಾಲು ತೆಳು ಎಂಬಕಾರಣಕ್ಕೆ ಹೆಚ್ಚಿನ ಮಹತ್ವ ಪಡೆದು ಆ ಹಾಲನ್ನು ಕುಡಿದೋ ಅಥವಾ ಮಾರಿಯೋ ಮನೆತನಗಳು, ಮಾನವನ ಸಂತಾನಗಳು ಬೆಳೆದದ್ದರಿಂದ ಗೋವುಗಳು ಭಾವನಾತ್ಮಕ ಸಂಬಂಧವನ್ನು ಬೆಳೆಸಿಕೊಂಡವು.

ಆದರೆ ಇಂದು ಗೋವುಗಳು ಪ್ರಧಾನವಾಗಿ ಮಾಂಸಾಹಾರದ ಅಗತ್ಯತೆಯನ್ನು, ಚರ್ಮ, ಮೂಳೆ, ಹಾಗೂ ಅದರ ದೇಹದ ಅಂಗಾಂಗಗಳ ಉಪಯುಕ್ತತೆಯ ಕಾರಣಕ್ಕಾಗಿ ವಾಣಿಜ್ಯ ಉದ್ದೇಶಕ್ಕೆ ಬಳಕೆಯಾಗುತ್ತಿವೆ. ಇದು ಸಾಮಾಜಿಕವಾಗಿ ಹಾಗೂ ಕೃಷಿ ಕ್ಷೇತ್ರದ ದೃಷ್ಟಿಯಿಂದ ಆತಂಕಕಾರಿಯಾಗಿದೆ. ಅಲ್ಲದೆ ಗೋಮಾಂಸಗಳ ರಫ್ತು ಮಾಡುವ ಕಾರ್ಖಾನೆಗಳ ಲಾಭಿಗೆ ನಮ್ಮ ಅನೇಕ ಸ್ವದೇಶಿ ತಳಿಗಳು ನಾಶಹೊಂದಿರುವುದು ಕಂಡುಬರುತ್ತದೆ.

ಈ ಎಲ್ಲಾ ಅಂಶಗಳನ್ನೇ ಗಮನಿಸಿ ಕೃಷಿ ಕ್ಷೇತ್ರಕ್ಕೆ ಗೋವುಗಳು ಅನಿವಾರ್ಯ ಎಂದು ಗೋಹತ್ಯಾ ನಿಷೇಧದ ಕಾನೂನುಗಳನ್ನು ರೂಪಿಸುವ ಹಕ್ಕು ಯಾವುದೇ ರಾಜ್ಯ ಸರ್ಕಾರಕ್ಕೆ ಇದೆ ಎಂದು **"Directive principles Of state police"48**ನೇ ಸಂವಿಧಾನದ ವಿಧಿ ಅವಕಾಶ ಮಾಡಿಕೊಡುತ್ತದೆ. ಈ ಕಾನೂನಿನ ಅನೇಕ ಅಂಶಗಳನ್ನು ಮುಂದುವರೆಸಿ ಕರ್ನಾಟಕದಲ್ಲಿ **"The Karnataka prevention of cow slaughter and cattle preservation act**

**1964"**ಎಂಬ ಕಾನೂನನ್ನು ಜಾರಿಗೆ ತಂದರೂ ಅದನ್ನು ಅನುಷ್ಠಾನಕ್ಕೆ ತರುವಲ್ಲಿ ರಾಜಕೀಯ ಪಕ್ಷಗಳು ನಿರಾಸಕ್ತಿ ತೋರಿದವು. ನಿಷೇಧ ಆದರೂ ರಾಜ್ಯ ಸರ್ಕಾರಗಳು ಆ ಕಾನೂನುಗಳನ್ನು ಕಾಗದ ಪತ್ರದಲ್ಲಿ ಮಾತ್ರ ಉಳಿಸಿದವೇ ಹೊರತು ಅನುಷ್ಠಾನಗೊಳಿಸುವ ಆಸಕ್ತಿ ತೋರಿಸಲೇ ಇಲ್ಲ. ತೋರಿಸಿದ್ದರೆ ಕಸಾಯಿಕಾನೆಗಳು ಇಷ್ಟು ಪ್ರಮಾಣದಲ್ಲಿ ಬೆಳೆಯುತ್ತಲೂ ಇರುತ್ತಿರಲಿಲ್ಲ. ಹೊಸ ಕಾನೂನುಗಳ ಅಗತ್ಯವೂ ಇರುತ್ತಿರಲಿಲ್ಲ.[೧] ವಿಜಯವಾಣಿ ಪತ್ರಿಕೆಯಲ್ಲಿ ಗೋವುಗಳ ಉಪಯುಕ್ತತೆಯ ಕುರಿತು ವಿವರಣೆಗಳನ್ನು ನೀಡಿದ್ದಾರೆ. ರೈತರಿಗೆ ಉಪಯುಕ್ತವಾದ ಕಾಮಧೇನುಗಳ ಕಾಪಾಡಲು ಈ ಪರಿಯ ಕೋಲಾಹಲ ಬೇಕೇ? ಎಂದು ಕೇಳುತ್ತಲೇ ಗೋವಿನ ಉಪಯೋಗ ಗಗಳನ್ನು ತಿಳಿಸಿದೆ.

೧. ಕೃಷಿ ಚಟುವಟಿಕೆಗಳಲ್ಲಿ ೮೪ ದಶಲಕ್ಷ ಜಾನುವಾರುಗಳು ರೈತರಿಗೆ ಇಂದಿಗೂ ಸಹಯಕವಾಗಿವೆ.

೨. ಒಂದು ಸಮೀಕ್ಷೆಯ ಪ್ರಕಾರ ಒಂದು ವರ್ಷದಲ್ಲಿ ರೈಲ್ವೆ ಮನುಷ್ಯರನ್ನು ಮತ್ತು ಸರಕುಗಳನ್ನು ಸಾಗಿಸುವುದಕ್ಕಿಂತ ಐದು ಪಟ್ಟು ಹೆಚ್ಚು ತೂಕವನ್ನು ಇಂದಿಗೂ ಜಾನುವಾರುಗಳೇ ಸಾಗಿಸುತ್ತಿವೆ.

೩. ಭಾರತೀಯ ಗೋತಳಿಗಳ ಹಾಲು ಭರಪೂರ ಪೋಷಕಾಂಶಗಳಿಂದ ಕೂಡಿದೆ.

೪. ಸಗಣಿಯಿಂದ ಬಯೋಗ್ಯಾಸ್ ಮತ್ತು ವಿದ್ಯುತ್ತನ್ನು ಉತ್ಪಾದಿಸಬಹುದು. ಮತ್ತು ಈ ಗೊಬ್ಬರದ ಸ್ಲರಿಯನ್ನು ಒಳ್ಳೆಯ ಗೊಬ್ಬರವಾಗಿ ಪರಿವರ್ತಿಸಬಹುದು. ನನ್ನ ಅಭಿಪ್ರಾಯ ವೇನೆಂದರೆ ಒಂದು ವೇಳೆ ಈ ಗೋಬರ್ ಗ್ಯಾಸನ್ನು ಇಂದು ಸಿಲೆಂಡರ್ ತುಂಬಿಕೊಂಡು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಕೊಂಡೊಯ್ಯುವ ತಂತ್ರಜ್ಞಾನ ರೈತರಿಗೆ ದೊರೆತರೆ ಇನ್ನಷ್ಟು ಉಪಯುಕ್ತವಾಗುತ್ತದೆ ಎಂಬುದು ಉಲ್ಲೇಖನೀಯ. ಈ ಎಲ್ಲಾ ಕಾರಣಗಳು ರೈತನಿಗೆ ಜಾನುವಾರುಗಳು ರೈತನಿಗೆ ಎಷ್ಟು ಉಪಯುಕ್ತ ಎಂಬುದನ್ನು ತಿಳಿಸುತ್ತವೆ.[೨]

ಇತ್ತೀಚೆಗೆ ಕೇಂದ್ರ ಸರ್ಕಾರ ದಿನಾಂಕ ೨೬.೫.೨೦೧೭ರಂದು ಆದೇಶ ಹೊರಡಿಸಿ, ಕೊಲ್ಲುವ ಉದ್ದೇಶಕ್ಕಾಗಿ ಪ್ರಾಣಿಗಳ ಮಾರುಕಟ್ಟೆಯಲ್ಲಿ ಜಾನುವಾರುಗಳನ್ನು ಮಾರಾಟ ಮಾಡುವುದರ ಮೇಲೆ ನಿಷೇಧ ಹೇರಿದ್ದಾರೆ. ಈ ಆದೇಶದನ್ವಯ ಜಾನುವಾರುಗಳನ್ನು ಕೃಷಿ ಉದ್ಧೇಶಕ್ಕೆ ಮಾತ್ರ ಕರೀದಿಸಬಹುದಾಗಿದೆ. ಈ ನಿರ್ಧಾರವು ಮಾಂಸ ಉಧ್ಯಮದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ ಎಂದು ಹೇಳಲಾಗುತ್ತಿದೆ. ೨೦೧೫-೧೬ನೇ ಸಾಲಿನಲ್ಲಿ ೫೦,೦೦೦ ಕೋಟಿಗಳಿಗೂ ಹೆಚ್ಚಿನ ಮಾಂಸವನ್ನು ರಫ್ತು ಮಾಡಿರುವುದು ವಾಣಿಜ್ಯ ಉದ್ದೇಶವೇ ಹೊರತು ನಮ್ಮ ದೇಶದ ಆಹಾರದ ಅಗತ್ಯತೆನ್ನು ಪೋರೈಸಲು ಅಲ್ಲ ಎಂಬುದನ್ನು ಸ್ಪಷ್ಟವಾಗಿ ಗಮನಿಸಬೇಕಿದೆ.

ಈ ವಾಣಿಜ್ಯ ಬಳಕೆಯ ಮಾಂಸ ರಫ್ತು ಉಧ್ಯಮದ ಪಾಲುದಾರರಾಗಿರುವ ಜಾನುವಾರು ದಲ್ಲಾಳಿಗಳು ಹಳ್ಳಿ ಹಳ್ಳಿಗಳಲ್ಲಿ ವ್ಯಾಪಿಸಿದ್ದಾರೆ. ಒಂದು ಹಸುವನ್ನು ಕಡಿಮೆ ಹಣಕ್ಕೆ ಕೊಂಡು ಮತ್ತೊಂದು ಹಸುವಿಗೆ ಹೆಚ್ಚು ಕೊಡುವುದಾಗಿ, ವಾಹನಕ್ಕೆ ದನಗಳು ಕಡಿಮೆ ಆಗಿವೆ ಆದ್ದರಿಂದ ಹೆಚ್ಚು ಹಣ ಕೊಡುತ್ತಿರುವುದಾಗಿ ನಂಬಿಸಿ ರೈತರು ಮಾರಬೇಕೆಂದು ಅಂದುಕೊಂಡದ್ದಕ್ಕಿಂತ ಹೆಚ್ಚು ಹಸುಗಳನ್ನು ಮಾರುವಂತೆ ಓಲೈಸುತ್ತಾರೆ. ಆ ಸಂದರ್ಭದಲ್ಲಿ ಹಣದ ಅಗತ್ಯವೂ ಇದ್ದುದರಿಂದ ರೈತನು ಮಾರಲು ಮುಂದಾಗುತ್ತಾನೆ. ಇದು ಗೋ ಸಂತತಿ ತೀವ್ರವಾಗಿ ಇಳಿಮುಖವಾಗಲು ಕಾರಣವಾಗಿದೆ. ಈ ನಿಟ್ಟಿನಲ್ಲಿ ಪ್ರಾಣಿಗಳ ಮೇಲಿನ ಕ್ರೌರ್ಯ ತಡೆ (ಜಾನುವರು ಮಾರುಕಟ್ಟೆಗಳ ನಿಯಂತ್ರಣ) ನಿಯಮ ೨೦೧೭ ನ್ನು ದಿನಾಂಕ ೨೩.೫.೨೦೧೭ ರಂದು ಅಂತಿಮಗೊಳಿಸಿ ಕೇಂದ್ರ ಪರಿಸರ ಸಚಿವಾಲಯ ಗೆಜಟ್ ಅಧಿಸೂಚನೆ ಹೊರಡಿಸಿದೆ.

**ಇದರ ಮುಖ್ಯ ಅಂಶಗಳನ್ನು ಅಂದಿನ ಅನೇಕ ಪತ್ರಿಕೆಗಳ ಸಾರವನ್ನು ಗಮನಿಸಿ ಹೇಳುವುದಾದರೆ**

೧. ಮಾರುಕಟ್ಟೆಗಳಲ್ಲಿ ಜಾನುವಾರುಗಳನ್ನು ಹತ್ಯೆ\ಮಾಂಸದ ಉದ್ದೇಶಕ್ಕೆ ಮಾರುವಂತಿಲ್ಲ.

೨. ಕೃಷಿ ಭೂಮಿಯ ಒಡೆತನ ಹೊಂದಿರುವವರಿಗೆ ಕೃಷಿ ಉದ್ದೇಶಕ್ಕಾಗಿ ಮಾರಾಟ ಮಾಡಬಹುದು.

೩. ಮಾರಾಟ ಮಾಡಿದ ಬಗ್ಗೆ ಚಿತ್ರಸಹಿತ ಸ್ಥಳಿಯ ಕಂದಾಯ ಇಲಾಖೆ, ಪಶು ವೈದ್ಯರು, ಮಾರುಕಟ್ಟೆ ಸಮೀತಿ ಮತ್ತು ಕರೀದಿದಾರರಿಗೆ ದಾಖಲೆ ಸಲ್ಲಿಸಬೇಕು. ಮತ್ತು ವಾಹನಗಳಲ್ಲಿ ಸುರಕ್ಷಿತ ಜಾನವಾರುಗಳ ಸಾಗಾಟವನ್ನು ಪಶು ನಿರೀಕ್ಷಕರು ಖಚಿತಪಡಿಸಬೇಕು.

ಎಂಬ ನಿಯಮಗಳನ್ನು ಆದೇಶವು ಒಳಗೊಂಡಿದ್ದು ಅನೇಕ ಪರ-ವಿರೋಧ ಚರ್ಚೆಗೆ ಕಾರಣವಾಗಿರುವುದನ್ನು ಗಮನಿಸುತ್ತಿದ್ದೇವೆ.

ಸುಪ್ರೀಂ ಕೋರ್ಟ್ ಆದೇಶಾನುಸಾರ ಜಾನುವಾರು ವ್ಯಾಪಾರ ನಿಯಂತ್ರಿಸುವುದು ರಾಜ್ಯಗಳಿಗೆ ಸಂಬಂಧಿಸಿದ ವಿಷಯ. ಆದರೆ ಪ್ರಾಣಿ ಕಲ್ಯಾಣ ವಿಷಯ ಕೇಂದ್ರಕ್ಕೆ ಸಂಬಂಧಿಸಿರುತ್ತದೆ. ಹೀಗಾಗಿ ೧೯೬೦ರ ಪ್ರಾಣಿ ಕ್ರೂರತ್ವ ತಡೆ ಕಾಯ್ದೆಯ ಪ್ರಕಾರ ಪ್ರಾಣಿ ಕಲ್ಯಾಣಕ್ಕೆ ಸಂಬಂಧಿಸಿದಂತೆ ನಿರ್ದೇಶನಗಳನ್ನು ಹೊರಡಿಸಲು ಕೇಂದ್ರಕ್ಕೆ ಅವಕಾಶವಿದೆ. ಈ ಪ್ರಕಾರ ಪ್ರಾಣಿ ಕಲ್ಯಾಣ ಕಾಯ್ದೆಯನ್ವಯ ಕೇಂದ್ರ ಪರಿಸರ ಸಚಿವಾಲಯ ನಿಯಮಗಳನ್ನು ಪ್ರಕಟಿಸಿದ್ದು ಅದರ ಜಾರಿಯ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿದೆ.[೩]

ಗೋಹತ್ಯೆ ನಿಷೇಧದ ಪರ-ವಿರೋಧ ಚರ್ಚೆಗಳು ರಾಷ್ಟ್ರಾದ್ಯಂತ ನಡೆದಿರುವಾಗಲೇ ಮಾಂಸಕ್ಕಾಗಿ ಜಾನುವಾರು ಹತ್ಯೆಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ಅಧಿಸೂಚನೆಯನ್ನು ವಿರೋಧಿಸಿ ಕೇರಳದ ಕೊಣ್ಣೂರಿನಲ್ಲಿ ಯುವ ಕಾಂಗ್ರೆಸ್ ಕಾರ್ಯಕರ್ತರು ಸಾರ್ವಜನಿಕ

ಸ್ಥಳದಲ್ಲಿ ಜಾನುವಾರುಗಳನ್ನು ಹತ್ಯೆಮಾಡಿ ಪ್ರತಿಭಟಿಸಿದ್ದು, ಸಾರ್ವಜನಿಕವಾಗಿ ಟೀಕೆಗೆ ಗುರಿಯಾಯಿತು. ಇದು ಕ್ರೌರ್ಯದ ಪರಾಕಾಷ್ಟೆ ಎಂದು ರಾಜ್ಯ ಕಾಂಗ್ರೆಸ್ ಘಟಕದ ಅಧ್ಯಕ್ಷ **ಕುಮ್ಮನಮ್ ರಾಜಶೇಖರನ್** ಅಭಿಪ್ರಾಯ ಪಟ್ಟರು.

ಪ್ರಜಾವಾಣಿ ಸಂಪಾದಕೀಯದ ವರದಿ ಈ ಘಟನೆ ಆರ್ಥಿಕತೆಗೆ ಹೊಡೆತ ಎಂದು ಮಾಂಸ ಮತ್ತು ಚರ್ಮದ ಉದ್ಯಮವನ್ನು ದೃಷಿಯಲ್ಲಿಟ್ಟುಕೊಂಡು ಬರೆಯುತ್ತಾರೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಕೃಷಿ ಚಟುವಟಿಕೆಯಲ್ಲಿ ವಯಸ್ಸಾದ ದನಗಳ ಪಾಲನೆ ನಷ್ಟವನ್ನು ಉಂಟು ಮಾಡುತ್ತದೆ. ಎನ್ನುತ್ತ ರೈತರಿಗೆ ಇದು ತೊಂದರೆಯಾಗುತ್ತದೆ ಹಾಗೂ ಈ ಕಾನೂನು ಅಧಿಕಾರ ಶಾಹಿಗಳಲ್ಲಿ ಬ್ರಷ್ಟಾಚಾರ ಹೆಚ್ಚಾಗಲು ಕಾರಣವಾಗುತ್ತದೆ, ಎಂದು ಆತಂಕ ವ್ಯಕ್ತಪಡಿಸಿದೆ. ಈ ಸಂಗತಿಗಳನ್ನು ಭಾವನಾತ್ಮಕವಾಗಿ ಆಲೋಚಿಸುವ ಬದಲು ವ್ಯವಹಾರಿಕವಾಗಿ ಸರಿಯಾದ ತೀರ್ಮಾನ ತೆಗೆದುಕೊಳ್ಳಬೇಕಿದೆ ಎಂದಿದ್ದಾರೆ. ಆದರೆ ಮಾಂಸ ರಪ್ತು ಮಾಡುವ ಉದ್ದೇಶವನ್ನು ಕೈಬಿಟ್ಟರೆ ಕೃಷಿ ಚಟುವಟಿಕೆ ಬಳಸುವ ರಾಸಾಯನಿಕ ಕ್ರಿಮಿನಾಶಕ ಹಾಗೂ ರಾಸಾಯನಿಕ ಗೊಬ್ಬರಗಳ ವಿನಿಮಯವನ್ನು ಕಡಿಮೆ ಮಾಡಿ ಕೊಂಡರೆ ಭಾರತ ಹೆಚ್ಚು ಜನರಿಗೆ ಉದ್ಯೋಗವನ್ನು, ಆರ್ಥಿಕವಾಗಿ ಲಾಭವನ್ನು ಪಡೆಯಬಹುದು. ಸ್ಥಳೀಯರ ಮಾಂಸದ ಅಗತ್ಯವನ್ನು ನೀಗಿಸುವಲ್ಲಿ ಹಾಗೂ ಔಷಧಗಳನ್ನು, ಕೃಷಿ ಸಂಬಂಧಿ ಗೊಬ್ಬರ, ಕ್ರಿಮಿನಾಶಕಗಳನ್ನು ನಮಗೆ ಪಾಶ್ಚಾತ್ಯರಿಂದ ತರಿಸಿಕೊಳ್ಳಬೇಕಾದ ಅಗತ್ಯಬೀಳುವುದಿಲ್ಲ.[೪]

ಮೇಲಿನ ಅಂಶಗಳನ್ನು ಗಮನಿಸಿದರೆ "ಗೋವುಗಳನ್ನು ಭಾವನಾತ್ಮಕಗೊಳಿಸದೆ ವ್ಯವಹಾರಿಕ ವಾಗಿ ತೀರ್ಮಾನ ಕೈಗೊಳ್ಳಬೇಕು. ಅಂದರೆ ಗೋಹತ್ಯೆ ನಿಷೇಧ ಸರಿಯಾದ ಕ್ರಮವಲ್ಲ ಎಂದು ಸಂಪಾದಕೀಯದಲ್ಲಿ ನೇರವಾಗಿ ಉಲ್ಲೇಖಿಸದೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದ್ದಾರೆ.

ದಿನಾಂಕ **೨-ಜೂನ್ ೨೦೧೮ರ ಪ್ರಜಾವಾಣಿ** ಪತ್ರಿಕೆಯಲ್ಲಿ ನಾಗೇಶ್ ಹೆಗಡೆ ಅವರ ಗೋಸಂಬಂಧಿ ಲೇಕನ ಪ್ರಕಟವಾಗಿದೆ. ಆದರೆ ಈ ಲೇಖನ ಮೊದಲೇ ಪ್ರಕಟವಾಗಿದ್ದರಿಂದ ಆ ಲೇಖನದ  ಉಲ್ಲೇಖಿತ ಅಂಶಗಳನ್ನು ನನ್ನ ಸಂಶೋಧನೆಯಲ್ಲಿ ಗೋವು ಮತ್ತು ವಾಣಿಜ್ಯ ಸಂಬಂಧ ಭಾಗದಲ್ಲಿ ಚರ್ಚಿಸಿದ್ದೇನೆ.

**ದಿನಾಂಕ ೩-ಜೂನ್** ೨೦೧೮ರ ಪ್ರಜಾವಾಣಿ ಪತ್ರಿಕೆಯಲ್ಲಿ **"ಜಾನುವಾರು ಹತ್ಯೆಗೆ ಕಡಿವಾಣ ಪರ-ವಿರೋಧದ ರಾಜಕಾರಣ"** ಎಂಬ ಶೀರ್ಷಿಕೆಯ ಅಡಿಯಲ್ಲಿ ಎ.ಎಸ್.ನಾರಾಯಣ ರಾವ್ ಬರೆದಿರುವ ಲೇಖನ ಪ್ರಕಟವಾಗಿತ್ತು. ಈ ಲೇಖನದ ಶೀರ್ಷಿಕೆಯೇ ಗೋಹತ್ಯಾ ನಿಷೇಧ ಕಾನೂನನ್ನು ರಾಜಕೀಯ ಪ್ರೇರಿತವಾಗಿ ನೋಡುತ್ತಿದೆ ಎಂಬುದನ್ನು ಸಮರ್ಥಿಸಿದೆ. ವಾಣಿಜ್ಯ ವ್ಯವಹಾರದಲ್ಲಿ ಅಧಿಕ ಲಾಭ ತಂದು ಕೊಡುತ್ತಿರುವ ಗೋಹತ್ಯೆ ೨೦೧೫-೧೬ ನೇ ಸಾಲಿನಲ್ಲಿ

ದನಗಳ ಚರ್ಮ ಮಾರಾಟದಿಂದ ೧೧೩ ಕೋಟಿ, ಮಾಂಸದ ಮಾರಾಟದಿಂದ ೪,೦೫೪ ಕೋಟಿ ಲಾಭಗಳಿಸಿದೆ, ಎಂಬ ಉಲ್ಲೇಖವು ಮಾಂಸದ ದೃಷ್ಟಿಯಿಂದ ಮತ್ತು ಅರ್ಥ ವ್ಯವಸ್ಥೆಯ ಭಾಗವಾಗಿ ಗೋವು ಹೇಗೆಲ್ಲಾ ಬಳಕೆಯಾಗಿದೆ ಎಂಬುದನ್ನು ವಿವರಿಸುತ್ತದೆ.

ಮಾಂಸ ಮತ್ತು ತೊಗಲು ಉದ್ಯಮ ಅರ್ಥ ವ್ಯವಸ್ಥೆಗೆ ನೀಡುತ್ತಿರುವ ಕಾಣಿಕೆಯನ್ನು ಕಡೆಗಣಿಸಲು ಸಾಧ್ಯವೇ ಇಲ್ಲ. ಚರ್ಮೋತ್ಪನ್ನ ರಫ್ತು ಮಂಡಳಿಯ ಅಂಕಿ ಅಂಶಗಳ ಪ್ರಕಾರ ತೊಗಲು ಉಧ್ಯಮ ೨೫ ಲಕ್ಷ ಜನಕ್ಕೆ ಉದ್ಯೋಗ ನೀಡಿದೆ. ಇವರಲ್ಲಿ ದಲಿತರೇ ಹೆಚ್ಚು. ೨೦೧೨ರ ಜಾನುವಾರು ಗಣತಿಯ ಪ್ರಕಾರ ದೇಶದಲ್ಲಿ ೧೨.೨೯ ಕೋಟಿ ಆಕಳುಗಳು ಇದ್ದವು. ಇದು ೨೦೧೭ರ ಗಣತಿಗೆ ಹೋಲಿಸಿದರೆ ಶೇ.೬.೫೨ ರಷ್ಟು ಜಾಸ್ತಿ. ದೇಶದ ಮಾಂಸ ಉದ್ಯಮದ ವಾರ್ಷಿಕ ವಹಿವಾಟು ಸುಮಾರು ೧ ಲಕ್ಷ ಕೋಟಿ. ಇದರಲ್ಲಿ ೩೦,೦೦೦ ಕೋಟಿ ಮೌಲ್ಯದ ಮಾಂಸ ರಫ್ತಾಗುತ್ತದೆ. ಹಿಂದುಗಳಿಗೆ ಗೋವು ಪೂಜನೀಯ. ತಾಯಿ ಸಮಾನ. ಗೋಹತ್ಯಾ ನಿಷೇಧ ನಮ್ಮ ಸಂವಿಧಾನದಲ್ಲಿಯೇ ಇದೆ. ಆದ್ದರಿಂದ ಸರ್ಕಾರದ ಆದೇಶ ಸರಿ ಎನ್ನುವುದು ಗೋ ಹತ್ಯಾ ನಿಷೇಧದ ಕಾನೂನಿನ ಬಗ್ಗೆ ಪರವಾಗಿರುವವರ ವಾದ. ಆದರೆ ಬಿ.ಜೆ.ಪಿಯೇತರ ರಾಜ್ಯ ಸರ್ಕಾರಗಳ ಪೈಕಿ ಪಶ್ಚಿಮ ಬಂಗಾಳ ಮತ್ತು ಕೇರಳಗಳು ಈ ಅಧಿಸೂಚನೆಗೆ ವಿರೋಧವನ್ನು ವ್ಯಕ್ತಪಡಿಸಿವೆ.

ದಿನಾಂಕ ೪-೬-೨೦೧೭ರ ಎಕನಾಮಿಕ್ಸ್ ಟೈಮ್ಸ್ ಪತ್ರಿಕೆಯ ವರದಿ ಒಂದರಲ್ಲಿ "ಈ ಕ್ರಮ ಚರ್ಮ ಉದ್ಯಮಕ್ಕೆ ಅಮೇರಿಕಾದ ಚರ್ಮ ಉದ್ಯಮವನ್ನು ಆಶ್ರಯಿಸಬೇಕಾದ ಅನಿವಾರ್ಯತೆಯನ್ನು ತಂದೊಡ್ಡಲಿದೆ. ಎಂದಿದ್ದಾರೆ. ಹಾಗೂ ಇಂದಿನ ಸರ್ಕಾರ ಗೋಹತ್ಯಾ ನಿಷೇಧ ಕಾಯ್ದೆಯ ಮುಕ್ತ ಸಲಹೆಯ ಅಧಿಸೂಚನೆ ಹೊರಡಿಸಿದ್ದು, ಈ ಚರ್ಚೆಯನ್ನು ಒಂದು ಪ್ರತಿಷ್ಠೆಯಾಗಿ ಚರ್ಚಿಸದೆ ಒಂದು ಆದೇಶದಂತೆ ಸ್ವೀಕರಿಸಿ ಎಂದಿದೆ.

ಈ ಕಾನೂನಿನ ಬಗ್ಗೆ ಪರಿಸರ ಮಂತ್ರಿ **ಹರ್ಷವರ್ಧನ್** ಹೇಳುವಂತೆ "ಇದರ ಉದ್ದೇಶ ಯಾವುದೇ ಸಮುದಾಯದ ಆಹಾರ ಪದ್ಧತಿ ಅಥವಾ ಗೋಮಾಂಸ ಉದ್ಯಮಕ್ಕೆ ಹಾನಿ ಅಥವಾ ದಕ್ಕೆ ಮಾಡುವಂಥದ್ದಲ್ಲ. ಸರ್ಕಾರಕ್ಕೆ ಇದೊಂದು ಪ್ರತಿಷ್ಠೆಯ ಚರ್ಚೆಯಲ್ಲ. ಬಂದ ಸಲಹೆಗಳನ್ನು ಪರಿಶೀಲಿಸಲಿದೆ.೩೮ **ಎಕನಾಮಿಕ್ಸ ಟೈಮ್ಸ್** ೪-೬-೨೦೧೭

"ಆಹಾರದ ಆಯ್ಕೆಯ ಹಕ್ಕಿನ ಹರಣ, ಒಕ್ಕೂಟ ವ್ಯವಸ್ಥೆಯ ಮೇಲೆ ಪ್ರಹಾರ ಎಂದು ಕೇರಳ ಮುಖ್ಯಮಂತ್ರಿ **"ಪಿಣರಾಯಿ ವಿಜಯನ್"** ಹೇಳಿದ್ದು ವಿವಿಧ ರಾಜ್ಯದ ಮುಖ್ಯಮಂತ್ರಿಗಳನ್ನು ಈ ಹೋರಾಟದಲ್ಲಿ ಭಾಗವಹಿಸುವಂತೆ ಕರೆನೀಡಿದ್ದಾರೆ. ಹಾಗೂ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಮಮತಾ ಬ್ಯಾನರ್ಜಿ ಹೇಳುವಂತೆ " ಜಾನುವಾರುಗಳ ರಕ್ಷಣೆ ರಾಜ್ಯಗಳ ವ್ಯಾಪ್ತಿಯ ವಿಷಯ,

ಅದರಲ್ಲಿ ಕೈ ಹಾಕುವ ಅಧಿಕಾರ ಕೇಂದ್ರಕ್ಕೆ ಇಲ್ಲ ಎಂದಿದ್ದಾರೆ. ಕರ್ನಾಟಕ, ಪುದುಚೆರಿ, ಮತ್ತು ತೆಲಂಗಾಣ ಸರ್ಕಾರಗಳು ಸಹ ಅಧಿಸೂಚನೆ ಜಾರಿಗೆ ಮನಸ್ಸು ಮಾಡಿಲ್ಲ. ಆದರೆ ಬಿ.ಜೆ.ಪಿ. ಅಧಿಕಾರದ ರಾಜ್ಯಗಳು ಪುಳಕಿತಗೊಂಡಿವೆ.

ಈ ವೇಳೆಗೆ ಈ ಕಾನೂನಿನ ಬಗ್ಗೆ ಮದ್ರಾಸ್ ಹೈಕೋರ್ಟ್‌ನ ಮಧುರೆ ಪೀಠ ಕೇಂದ್ರದ ಅಧಿಸೂಚನೆಗೆ ನಾಲ್ಕು ವಾರಗಳ ತಡೆಕೊಟ್ಟಿದೆ. ಆದರೆ ಇಂಥದ್ದೇ ಕೋರಿಕೆಯನ್ನು ಕೇರಳ ಹೈ ಕೋರ್ಟ್ ತಳ್ಳಿ ಹಾಕಿದೆ. ರಾಜಸ್ತಾನ ಹೈ ಕೋರ್ಟ್ ಮಾತ್ರ, ಗೋಹತ್ಯೆ ಮಾಡುವವರಿಗೆ ಜೀವಾವಧಿ ಶಿಕ್ಷೆ ವಿಧಿಸಬೇಕು ಎಂದು ಹೇಳಿದೆ. ಇದರ ನಡುವೆ ಕೇಂದ್ರದ ಆದೇಶ ವಿರೋಧಿಸುವ ಉನ್ಮಾದದಲ್ಲಿ ಕೇರಳದಲ್ಲಿ ಯುವ ಕಾಂಗ್ರೆಸ್‌ನ ಕೆಲ ಪದಾಧಿಕಾರಿಗಳು ಹಸುಗಳನ್ನು ಸಾರ್ವಜನಿಕವಾಗಿಯೇ ಕತ್ತರಿಸಿ ಅನಾಗರೀಕತೆ ಪ್ರದರ್ಶಿಸಿದರು. ಆದರೆ ಅದನ್ನು ಖಂಡಿಸುವ ಧ್ವನಿ ದೊಡ್ಡದಾಗಿ ಕೇಳಿ ಬರಲೇ ಇಲ್ಲ.

ಒಟ್ಟಾರೆಯಾಗಿ ಇಡೀ ವಿಷಯದಲ್ಲಿ ವಸ್ತುನಿಷ್ಠ ಆಲೋಚನೆ ಹಿಂದೆ ಸರಿದಿದೆ, ಪಕ್ಕಾ ರಾಜಕಾರಣದ ಲೇಪನ ಅಂಟಿಕೊಂಡಿದೆ. ಈ ಘಟನೆಗಳನ್ನು ಭಾವನಾತ್ಮಕ ದೃಷ್ಟಿಗಿಂತ ವ್ಯವಹಾರಿಕ ದೃಷ್ಟಿಯಲ್ಲಿ ನೋಡಬೇಕೆಂಬುದು ಅನೇಕರ ವಾದವಾಗಿದೆ.[೫]

ಈ ಭಾವನಾತ್ಮಕತೆ ದಿಢೀರನೆ ಬೆಳೆದಿದ್ದಲ್ಲ. ಶತ ಶತಮಾನಗಳಿಂದ ರೈತನಿಗೆ ಆರ್ಥಿಕ ಶಕ್ತಿಯನ್ನು ತುಂಬಿದ್ದರಿಂದ ಆತ ಗೋವುಗಳನ್ನು ಲಕ್ಷ್ಮೀ ಸ್ವರೂಪದಲ್ಲಿ ನೋಡಿದ. ಹುಟ್ಟಿದ ಮಗುವಿಗೆ ತಾಯಿಯ ಎದೆ ಹಾಲು ಕಡಿಮೆ ಆದಾಗ, ಆ ಕೊರತೆಯನ್ನು ಹಾಲು ಕೊಟ್ಟು ನೀಗಿಸಿದ (ಎಮ್ಮೆಯ ಹಾಲು ಹುಟ್ಟಿದ ಮಕ್ಕಳಿಗೆ ದಪ್ಪ, ಹಾಗೂ ಅಧಿಕ ಕೊಬ್ಬಿನ ಅಂಶದ ಕಾರಣಕ್ಕೆ ಜೀರ್ಣವಾಗಲು ತಡವಾಗುತ್ತದೆ, ಎಂಬ ಕಾರಣಕ್ಕೆ ಕೊಡುವುದಿಲ್ಲ) ಹಸುಗಳನ್ನು ತಾಯಿಯ ಸ್ಥಾನ ನೀಡಿ ಗೌರವಿಸಿದ. ಗೋತ್ಯಾಜ್ಯಗಳನ್ನು ಭೂಮಿಗೆ ಹಾಕಿ ಬೆಳೆ ಬೆಳೆದಾಗ ಸಂಭ್ರಮಿಸಿದ. ತನ್ನ ಕೃಷಿ ಚಟುವಟಿಕೆಗಲ್ಲಿ ಲಾಭ ತರಲು ಕಾರಣವಾದ ಮತ್ತು ಹಗಲು ರಾತ್ರಿ ದುಡಿದ ಎತ್ತುಗಳಿಗೆ ಮಗನ ಸ್ಥಾನ ನೀಡಿದ. ಈ ಭಾವನಾತ್ಮಕ ಸಂಬಂಧದ ನಾಶವನ್ನು ಇಷ್ಟು ಬೇಗದಲ್ಲಿ ಬಿಟ್ಟುಕೊಡಲು ಸಾಧ್ಯವೇ? ಸಾಧ್ಯವಿಲ್ಲ ಎಂದು ನಂಬಿದ ಬಹುಸಂಖ್ಯಾತ ಜನರು ಇಂದು ಗೋಹತ್ಯಾ ನಿಷೇಧವನ್ನು ಸಮರ್ಥಿಸುತ್ತಿರುವಂತೆ ತೋರುತ್ತಿದೆ.

ದನಗಳು ಕೃಷಿ ಮತ್ತು ಆರ್ಥಿಕ ಮೂಲವಾದ್ದರಿಂದ "ಜೀವಧನ"ದ ಪ್ರಾಮುಖ್ಯತೆಯನ್ನು ಪಡೆದು ಸಹಸ್ರಾರು ಯುದ್ಧಗಳಿಗೂ ಕಾರಣವಾಗಿವೆ. ಆ ಇತಿಹಾಸದ ಪುಟಗಳನ್ನು ಈ ಸಂದರ್ಭದಲ್ಲೂ ಯಾರೂ ಉಲ್ಲೇಖಿಸುತ್ತಿಲ್ಲ. ಇವುಗಳ ಬಗ್ಗೆ ಸಹಸ್ರಾರು ವೀರಗಲ್ಲುಗಳು ಸಾಕ್ಷಿಯನ್ನೊದಗಿಸುತ್ತಿವೆ. ಮೊದಲಿನಿಂದಲೂ ದನಗಳು ಹತ್ಯೆ ಮಾಡಿ ತಿನ್ನುವ, ಮಾಂಸಕ್ಕಾಗಿಯೇ

ಸಾಕುವ ಪ್ರಾಣಿಗಳ ಗುಂಪಿನಲ್ಲಿ ಗುರುತಿಸಿಕೊಳ್ಳಲೇ ಇಲ್ಲ. ಅವುಗಳನ್ನು ಕಡಿಯಬಾರದೆಂದು ಧಾರ್ಮಿಕ ಪ್ರಭಾವಗಳನ್ನು, ಪವಾಡಗಳನ್ನು, ಆರೋಪಿಸಿದ್ದರಿಂದ ಗೋವು ಪವಿತ್ರವಾಗುತ್ತಾ ಸಾಗಿತು. ಆದರೆ ಕುರಿ, ಆಡು, ಕೋಳಿ ಎಂದೂ ಭೂಮಿ ಉಳಲು, ಸಾರಿಗೆಗೆ ಬಳಸಲು ಸಾಧ್ಯವೇ ಇಲ್ಲದ್ದರಿಂದ ಅವು ಮಾಂಸಾಹಾರದ ಪಟ್ಟಿಯಲ್ಲೇ ಗಟ್ಟಿ ಸ್ಥಾನ ಪಡೆದವು. ಈ ಪ್ರಾಣಿಗಳನ್ನು ಕೊಯ್ದು ತಿನ್ನಲೆಂದೇ ಸಾಕುವುದು ಹೆಚ್ಚಾಗಿರುವುದರಿಂದ ನಮಗೆ ಇವುಗಳ ಬಗ್ಗೆ ಯಾವುದೇ ಭಾವನಾತ್ಮಕ ಸಂಬಂಧ (ಚಿಕ್ಕ ವಯಸ್ಸಿನ ಮಕ್ಕಳನ್ನು ಹೊರತುಪಡಿಸಿ)ಬೆಳೆಯಲಿಲ್ಲ.

ಭಾರತಕ್ಕೆ ಇಸ್ಲಾಂ ಆಗಮನ ಅನೇಕ ಬದಲಾವಣೆಗೆ ಕಾರಣವಾಯಿತು. ಹಾಗೂ ಒಂಟೆ ಅವರ ಮಾಂಸಾಹಾರದ ಭಾಗವಾಗಿತ್ತು. ಆದರೆ ಭಾರತಲ್ಲಿ ಒಂಟೆಗಳು ಅವರ ಆಹಾರದ ಅಗತ್ಯತೆಯನ್ನು ಈಡೇರಿಸುವಷ್ಟು ಸಂಖ್ಯೆಯಲ್ಲಿ ಇಲ್ಲದ ಕಾರಣ ತನ್ನ ಮಾಂಸಾಹಾರಿ ಸೈನಿಕರಿಗೆ ಒಂಟೆಗಳ ಬದಲು ದನಗಳನ್ನೇ ಆಹಾರವಾಗಿ ಉಪಯೋಗಿಸತೊಡಗಿದರು. ಅವರು ದನದ ಮಾಂಸಾಹಾರವನ್ನು ಇಷ್ಟ ಪಡತೊಡಗಿದರು. ಈ ಘಟನೆಗಳು ನಿರಂತರವಾಗಿ ಸಾಗಿದಾಗ ಹಿಂದು-ಮುಸ್ಲಿಂರ ಪ್ರದಾನ ಭಿನ್ನತೆಯಾಗಿ, ಆಹಾರ ಸಂಸ್ಕೃತಿಯ ಪದ್ಧತಿಗಳ ಬಿರುಕಿಗೂ ಕಾರಣವಾಯಿತು. ಈ ಭಾವನಾತ್ಮಕತೆಯ ಅಂಶವನ್ನು ಬ್ರಿಟೀಷರು ರಾಜಕೀಯ ಉದ್ದೇಶಕ್ಕೆ ಬಳಸಿಕೊಂಡು ಸಂಘರ್ಷದ ಬೀಜ ಬಿತ್ತಿದ್ದು, ಇಂದು ಅದೇ ಸಂಘರ್ಷದ ಬೀಜ ಮರವಾಗಿ ಹುಲುಸಾಗಿ ಬೆಳೆದು ಫಲಕೊಡುತ್ತಿದೆ.

**ಈ ಗೋಹತ್ಯಾ ನಿಷೇಧದ ಬಗ್ಗೆ ಅನೇಕ ಮುಖಂಡರು ತಮ್ಮ ಅಭಿಪ್ರಾಯಗಳನ್ನು ಹಂಚಿ ಕೊಂಡಿದ್ದಾರೆ. ಅವುಗಳನ್ನು ಗಮನಿಸುವುದಾದರೆ**

೧. ಮುಸ್ಲಿಂ ಆಹಾರದ ಬಗ್ಗೆ ಮಾತನಾಡಲಾಗುವುದಿಲ್ಲ. ಈ ವಿಚಾರ ಸಂಸತ್‌ನಲ್ಲಿ ಚರ್ಚೆಯಾಗಬೇಕು. ವಿದೇಶದಿಂದ ಮಾಂಸ ಅಮದಾಗುತ್ತದೆ. ಅದನ್ನು ತಡೆಯಲು ಹೇಗೆ ಸಾಧ್ಯ. ಗೊಡ್ಡು ಹಸುವನ್ನು ಸಾಕುವ ವ್ಯವಸ್ಥೆ ಮಾಡಬೇಕಿದೆ.[೬]

೨. ಭಾರತೀಯ ಸಂಸ್ಕೃತಿಯನ್ನು ವಿಶ್ವದ ಎಲ್ಲಾ ದೇಶಗಳೂ ಗೌರವಿಸುತ್ತಿರುವ ವೇಳೆ ಗೋ ಹತ್ಯಾ ನಿಷೇದದ ಬಗ್ಗೆ ಕಾನೂನು ತಂದಿರುವುದು ಅತ್ಯಂತ ಸ್ವಾಗತಾರ್ಹ.[೭]

೩. ಗೋವಿನಲ್ಲಿ ಮೂವತ್ಮೂರು ಸಾವಿರ ಕೋಟಿ ದೇವರನ್ನು ಕಾಣುವ ದೇಶವಿದು. ಸಾರ್ವಜನಿಕರ ಅಭಿಪ್ರಾಯದ ಮೇರೆಗೆ-ಗೋಹತ್ಯೆ ನಿಷೇಧಿಸುವುದು ಒಳ್ಳೆಯದು.[೮]

೪. ಪ್ರಧಾನಿ ಮೋದಿ ಕೈಗೊಂಡಿರುವ ಕ್ರಮ ಐತಿಹಾಸಿಕವಾಗಿದೆ. ದೇಶದ ಜನರು ಇದನ್ನ ಸ್ವಾಗತಿಸಿದ್ದಾರೆ. ಹಲವು ರಾಜ್ಯಗಳಲ್ಲಿ ಗೋಹತ್ಯೆ ನಿಷೇಧ ಕಾಯ್ದೆ ಯಶಸ್ವಿಯಾಗಿ ಜಾರಿಯಾಗಿದೆ. ಗೋಹತ್ಯಾ ನಿಷೇಧ ಕಾಯ್ದೆ ಗಾಂಧೀಜಿಯ ಕನಸಾಗಿತ್ತು.[೯]

